ಭಾರತ ದರ್ಶನ ಪ್ರಕಾಶನ

# ಶ್ರೀಮದ್ಭಾಗವತ

(ಮೂಲದೊಡನೆ ಸರಳ ಕನ್ನಡಾನುವಾದ)

ಜನ್ಮಾದ್ಯಸ್ಯ ಯತೋಽನ್ವಯಾದಿತರತ-
ಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ
ಮುಹ್ಯನ್ತಿ ಯತ್ಸೂರಯಃ ।
ತೇಜೋವಾರಿಮೃದಾಂ ಯಥಾ ವಿನಿಮಯೋ
ಯತ್ರ ತ್ರಿಸರ್ಗೋಽಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ
ಸತ್ಯಂ ಪರಂ ಧೀಮಹಿ ॥

**ಸಂಪುಟ 1**

*ಮುದ್ರಕರು:*
**ಭಾರತ ದರ್ಶನ ಮುದ್ರಣಾಲಯ**
**163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,**
**ಬೆಂಗಳೂರು – 560 028**
**ದೂರವಾಣಿ: 080-26765381**

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ|| ವಿದ್ವಾನ್ ರಾಮೇಶ್ವರಾವಧಾನೀ**



**ಸಂಪಾದಕ ಮಂಡಲಿ:**

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ಪರಮಾತ್ಮನ ದಯೆಯಿಂದಲೂ, ಶ್ರೀಗುರುಭಗವಂತನ ದಿವ್ಯಾನುಗ್ರಹ ದಿಂದಲೂ, ಸತ್ಪುರುಷರ ಸಹಕಾರ-ಸದಾಶಯಗಳಿಂದಲೂ ಶ್ರೀಮದ್ಭಾಗ ವತದ ಪ್ರಥಮಕುಸುಮವನ್ನು ಭಗವಂತನ ಪಾದಾರವಿಂದಗಳಲ್ಲಿ ಸಮರ್ಪಿಸಿ ಪ್ರಸಾದರೂಪವಾದ ಈ ದಿವ್ಯಪುಸ್ತಕವನ್ನು ಪ್ರಿಯವಾಚಕರ ಅಂಜಲಿಪುಟ ಗಳಲ್ಲಿಡುತ್ತಿದ್ದೇವೆ.

ಪರಮಾತ್ಮನ ಕೃಪೆಯಿಂದಲೂ, ಮುಕ್ಕೋಟಿ ಕನ್ನಡಿಗರ ಸಹಕಾರ-ಸದಾಶಯಗಳಿಂದಲೂ ಮೂರನೆಯ ಮೇರುಕೃತಿಯಾದ ಈ ಶ್ರೀಮದ್ಭಾಗ ವತವೂ ನಿರ್ವಿಘ್ನವಾಗಿ ಪೂರ್ಣಗೊಳ್ಳುವುದೆಂಬ ಭರವಸೆಯಿಂದಿರುತ್ತೇವೆ. ನಮ್ಮ ರಾಮಾಯಣ ಮತ್ತು ಮಹಾಭಾರತಗಳ ಗ್ರಾಹಕರು ಮನಸ್ಸುಮಾಡಿ ಶ್ರೀಮದ್ಭಾಗವತದ ಪೂರ್ಣಮಾಲೆಗೂ ಗ್ರಾಹಕರಾದರೆ ಗ್ರಂಥವನ್ನು ಪೂರ್ಣ ಗೊಳಿಸಲು ಹೆಚ್ಚು ತ್ರಾಸವಾಗುವುದಿಲ್ಲ. ಪರಮಾತ್ಮನ ಪ್ರೇರಣೆಯಿಂದ ಅವರೆಲ್ಲರೂ ಈ ಮಾಲೆಗೂ ಗ್ರಾಹಕರಾಗಬೇಕು.

ರಾಮಾಯಣದ ಮಹಾಮಂಗಳವಾದನಂತರ (ಹನ್ನೊಂದನೆಯ ಸಂಪುಟದ ಪ್ರಕಾಶನವಾದನಂತರ) ರಾಮಾಯಣದ ಒಂದು ಮತ್ತು ನಾಲ್ಕ ನೆಯ ಸಂಪುಟಗಳನ್ನೂ, ಮಹಾಭಾರತದ ಇಪ್ಪತ್ತೊಂಬತ್ತನೆಯ ಸಂಪುಟ ವನ್ನೂ ಪುನರ್ಮುದ್ರಣಮಾಡಿ ಹೊರತಂದಿರುತ್ತೇವೆ. ಇಪ್ಪತ್ತೊಂಬತ್ತನೆಯ ಪುನರ್ಮುದ್ರಣದಿಂದಾಗಿ ಸುಮಾರು ಐದು ನೂರು ಮಂದಿ ಗ್ರಾಹಕರಿಗೆ ಮಹಾಭಾರತದ ಮಾಲೆಯು ಪೂರ್ಣವಾದಂತಾಗಿದೆ. ಆದರೂ ಇಂದು ನಾವು ಮಹಾಭಾರತದಲ್ಲಿ ಹನ್ನೊಂದು ಸಂಪುಟಗಳನ್ನೂ–ರಾಮಾಯಣ ದಲ್ಲಿ ಎರಡು ಸಂಪುಟಗಳನ್ನೂ ಪುನರ್ಮುದ್ರಣಮಾಡಬೇಕಾಗಿದೆ. ಮಹಾ ಭಾರತದ ನಾಲ್ಕಾರು ಸಂಪುಟಗಳು ಮುಗಿಯುವುದರಲ್ಲಿವೆ. ಪುನರ್ಮು ದ್ರಣದ ಕಾರ್ಯ ಎಂದಿಗೆ ಮುಗಿದೀತು?–ಎಂದು ನಾವು ಒಮ್ಮೊಮ್ಮೆ ಯೋಚಿಸುವಂತಾಗುತ್ತದೆ. ಮುಗಿಯದಿದ್ದರೆ ಬೇಡ ; ಹಲವಾರು ವರ್ಷಗಳ ವರೆಗೆ ನಡೆದುಕೊಂಡು ಹೋಗಲಿ. ನಮ್ಮ ಕನ್ನಡಿಗರೆಲ್ಲರೂ ಈ

ಮಾಲೆಗಳಿಂದ ತಮ್ಮ ಮನೆಯನ್ನು ಅಲಂಕರಿಸಿಕೊಳ್ಳಲಿ–ಎಂಬುದೇ ನಮ್ಮ ಧ್ಯೇಯ ಮತ್ತು ಆಶಯ. ಆದರೆ ಅದಕ್ಕೆ ಸಾಮರ್ಥ್ಯವನ್ನು ಪರಮಾತ್ಮನು ದಯಪಾಲಿಸಬೇಕು. ಈ ಹಿಂದೆ ಐದು ಟನ್ ಕಾಗದಕ್ಕೆ ಕೊಡಬೇಕಾಗಿದ್ದ ಹಣವನ್ನು ಈಗ ಎರಡು ಟನ್ ಕಾಗದಕ್ಕೇ ಕೊಡಬೇಕಾಗಿದೆ. ಸಾಮಾನ್ಯವಾಗಿ ಎಲ್ಲ ಕಚ್ಚಾಪದಾರ್ಥಗಳ ಬೆಲೆಗಳೂ 1986ಕ್ಕೆ ಹೋಲಿಸಿದರೆ ಎರಡು ಪಟ್ಟು ಹೆಚ್ಚಾಗಿದೆ. ಇಂತಹ ಆರ್ಥಿಕ ಬಿಕ್ಕಟ್ಟನ್ನು ಎದುರಿಸಬೇಕಾದರೆ ಪರಮಾತ್ಮನ ದಯೆಯಿರಬೇಕು ; ಧಾರ್ಮಿಕಬುದ್ಧಿಯಿರುವ ಆಢ್ಯರು ಸಹಕಾರ ನೀಡಬೇಕು; ಗ್ರಾಹಕರ ಸಂಖ್ಯೆಯೂ ಹೆಚ್ಚಬೇಕು. ಇದಕ್ಕಾಗಿ ನಾವೆಲ್ಲರೂ ಶ್ರಮಿಸೋಣ. ಈ ಮಹಾಗ್ರಂಥಗಳನ್ನು ನಾವು ನಮ್ಮ ಶ್ರೇಯಸ್ಸಿಗಾಗಿ ಉಳಿಸಿಕೊಳ್ಳಬೇಕಾಗಿದೆ; ಬೆಳೆಸಬೇಕಾಗಿದೆ. ನಾಗರಿಕತೆಯ ಹೆಸರಿನಲ್ಲಿ ಅನೀತಿಯು ಸಮಾಜದಲ್ಲಿ ತಾಂಡವವಾಡುತ್ತಿದೆ. ಇಂತಹ ಗ್ರಂಥಗಳು ಎಳೆಯರ ಮನಸ್ಸಿನಲ್ಲಿ ಸ್ವಲ್ಪವಾದರೂ ನೀತಿಯನ್ನು ತುಂಬಬಲ್ಲುವು.

ಶ್ರೀಮದ್ಭಾಗವತವು ಭಕ್ತಿಪ್ರಧಾನವಾದ ಗ್ರಂಥ. ಚೈತನ್ಯಪಂಥದವರು ಇದನ್ನು ವೇದಕ್ಕೆ ಸಮನಾಗಿ ಅಥವಾ ವೇದಕ್ಕಿಂತಲೂ ಮಿಗಿಲಾಗಿ ಕಾಣುತ್ತಾರೆ. 'ಭಾಗವತಪಂಥ' ಎಂಬ ಪಂಗಡವೂ ಇದೆ. ಕೃಷ್ಣಪಂಥದವರು ಭಾಗವತವನ್ನೇ ಪರಮಶ್ರೇಷ್ಠವಾದ ಗ್ರಂಥವನ್ನಾಗಿ ಭಾವಿಸಿ ಲಕ್ಷ-ಲಕ್ಷ ಸಂಖ್ಯೆಯಲ್ಲಿ ಇದರ ಪ್ರತಿಗಳನ್ನು ಪ್ರಪಂಚದ ಹಲವಾರು ಭಾಷೆಗಳಲ್ಲಿ ಮುದ್ರಿಸಿ ಪ್ರಚಾರಮಾಡುತ್ತಿದ್ದಾರೆ. ಇಂದು ವಿಶ್ವದಲ್ಲಿ ಕೃಷ್ಣಪಂಥದವರು ಇಲ್ಲದ ಸ್ಥಳವೇ ಇಲ್ಲವೆನ್ನಬಹುದು. ಪಾಶ್ಚಾತ್ಯರು ಈ ಗ್ರಂಥದಲ್ಲಿಟ್ಟಿರುವ ಶ್ರದ್ಧಾ-ಭಕ್ತಿಗಳನ್ನು ನೋಡಿದರೆ ನಾವು ನಾಚಬೇಕಾಗಿದೆ. ಪರಕೀಯರಿಗೂ ಗ್ರಂಥರತ್ನವಾಗಿರುವ ಈ ಭಾಗವತಮಹಾಪುರಾಣವನ್ನು ಕನ್ನಡಿಗರಿಗೆ ಹಂಚಲು ಪ್ರಾರಂಭಿಸಿದ್ದೇವೆ. ಕನ್ನಡಬಾಂಧವರು ಶ್ರದ್ಧಾ-ಭಕ್ತಿಗಳಿಂದ ಈ ಗ್ರಂಥವನ್ನು ಪುರಸ್ಕರಿಸುವರೆಂದು ಭಾವಿಸಿದ್ದೇವೆ.

ದಿನಾಂಕ 27-4-91ರ ಶನಿವಾರ, ವೇದಘೋಷವಾದನಂತರ ಶ್ರೀಮದ್ರಾಮಾಯಣದ 11ನೆಯ ಸಂಪುಟದ ಪ್ರಕಾಶನ. ಈ ಪ್ರಕಾಶನ ಪರಮಪೂಜ್ಯ ಶ್ರೀರಂಗಪ್ರಿಯಮಹಾದೇಶಿಕರವರಿಂದ ನೆರವೇರಿತು.

ಅನಂತರ ಪರಮಹಂಸಪರಿವ್ರಾಜಕಾಚಾರ್ಯ ಶ್ರೀಮಜ್ಜಗದ್ಗುರು ಶ್ರೀ ಶಂಕರಾಚಾರ್ಯ ಶ್ರೀ ಶ್ರೀ ರಾಘವೇಂದ್ರಭಾರತೀಸ್ವಾಮಿಗಳವರು, ರಾಮಚಂದ್ರಾಪುರಮಠ–ಇವರು ಕಳುಹಿಸಿಕೊಟ್ಟಿದ್ದ ಸುವರ್ಣಮಂತ್ರಾಕ್ಷತೆ ಯನ್ನು ಸಂಪಾದಕಮಂಡಲಿಯ ವಿದ್ವಾಂಸರಿಗೆ ಪೂಜ್ಯ ಶ್ರೀ ಶ್ರೀ ರಂಗಪ್ರಿಯ ಮಹಾದೇಶಿಕರು ಆಶೀರ್ವಾದಮಾಡಿ ಅನುಗ್ರಹಿಸಿದರು.

ಶ್ರೀಮದ್ಭಾಗವತವು ಭಕ್ತಿಪ್ರಧಾನವಾದ ಗ್ರಂಥಮಾತ್ರವಲ್ಲದೇ ಪರಮ ಹಂಸಸಂಹಿತೆ. ಹೆಜ್ಜೆ-ಹೆಜ್ಜೆಗೂ ಆಧ್ಯಾತ್ಮಿಕ ವಿಷಯಗಳು ತುಂಬಿ ತುಳುಕು ತ್ತವೆ. ಇಂತಹ ಆಧ್ಯಾತ್ಮಿಕ ಮಹಾಗ್ರಂಥವನ್ನು ಭಾಷಾಂತರಿಸಬೇಕಾದರೆ ಆಧ್ಯಾತ್ಮಜ್ಞಾನದಲ್ಲಿ ಉಚ್ಚಸ್ಥಾನವನ್ನು ಪಡೆದಿರುವವರೇ ಸಮರ್ಥರು. ನಮ್ಮೆಲ್ಲರ ಸೌಭಾಗ್ಯವಶದಿಂದ ನಮ್ಮ ಸಂಸ್ಥೆಯ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀರಂಗಪ್ರಿಯ ಯತಿವರೇಣ್ಯರು ಭಾಷಾಂತರಕಾರ್ಯವನ್ನು ವಹಿಸಿ ಕೊಂಡು ಅನುಗ್ರಹಿಸಿರುತ್ತಾರೆ. ಹಿಂದಿನಂತೆಯೇ ನಮ್ಮ ಸಂಪಾದಕ ಮಂಡಲಿಯ ವಿದ್ವಾಂಸರು ಒಟ್ಟಾಗಿ ಸೇರಿ ಗ್ರಂಥವನ್ನು ಸಂಪಾದಿಸಿಕೊಡು ತ್ತಿದ್ದಾರೆ. ಇಂತಹ ಮಹಾಪುರುಷರಿಗೆ ನಮ್ಮ ಅನಂತಾನಂತ ನಮಸ್ಕಾರಗಳು. ಶ್ರೀಮದ್ಭಾಗವತಪ್ರಕಾಶನಕ್ಕೆ ಧನಸಹಾಯಮಾಡಿರುವ ಹಲವಾರು ಮಹನೀ ಯರಿಗೆ ಅನಂತಾನಂತ ವಂದನೆಗಳು. ಮಹಾಭಾರತ-ರಾಮಾಯಣ- ಭಾಗವತಗಳನ್ನು ಶಾಲೆಗಳಿಗೆ ದಾನಮಾಡಿರುವ ಮಹನೀಯರಿಗೂ ಕೃತಜ್ಞತಾ ಪೂರ್ವಕವಾದ ವಂದನೆಗಳನ್ನೂ ಅರ್ಪಿಸುತ್ತೇವೆ.

ನಿಃಸ್ವಾರ್ಥತೆಯಿಂದ ಪ್ರಚಾರಮಾಡುತ್ತಿರುವ ಗೆಳೆಯರ ಬಗೆಗೆ ಎಷ್ಟು ಬರೆದರೂ ಅಲ್ಪವೇ ಆಗುತ್ತದೆ. ಅವರೇ ನಮ್ಮ ಸಂಸ್ಥೆಗೆ ಆಧಾರಸ್ತಂಭ ಗಳೆನ್ನಬಹುದು. ಮುಂದೆಯೂ ಅವರು ಈ ಮಹಾಗ್ರಂಥಗಳನ್ನು ಮನೆ-ಮನೆಗೂ ತಲುಪಿಸುತ್ತಾ ನಮ್ಮ ಸತ್ಸಂಕಲ್ಪವನ್ನು ಈಡೇರಿಸುವರೆಂಬ ಭರವಸೆಯಿಂದಿರುತ್ತೇವೆ. ಪರಮಾತ್ಮನು ಸಕಲರಿಗೂ ಆಯುರಾರೋಗ್ಯ- ಐಶ್ವರ್ಯ-ಸುಖ-ಶಾಂತಿಗಳನ್ನೀಯಲಿ ಎಂದು ಪ್ರಾರ್ಥಿಸುವೆವು.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು-ಸಮಸ್ತಸನ್ಮಙ್ಗಲಾನಿ ಭವನ್ತು

—ಪ್ರಕಾಶಕರು.

ಶ್ರೀರಂಗಸದ್ಗುರವೇ ನಮಃ
ಓಂ ನಮೋ ಭಗವತೇ ವಾಸುದೇವಾಯ

# ಭೂಮಿಕೆ

ಶ್ರೀಗುರುದೇವತಾನುಗ್ರಹದಿಂದ ಕನ್ನಡಭಾವಾನುವಾದ ಸಹಿತವಾದ ಸಮಗ್ರ ಶ್ರೀಮನ್ಮಹಾಭಾರತ ಮತ್ತು ಶ್ರೀಮದ್ರಾಮಾಯಣ ಮಹಾಪುಷ್ಪಗಳನ್ನು ಪರಮಪುರುಷನಿಗೂ, ಸಹೃದಯಜನತೆಗೂ ಸಮರ್ಪಣೆಮಾಡಿ ಅವಭೃಥಸ್ನಾನಮಾಡಿದ ಭಾರತ ದರ್ಶನ ಸಂಸ್ಥೆಯು ಅದೇ ಅನುಗ್ರಹದ ಆಸರೆಯಿಂದ ಈ ಅನುವಾದಾಲಂಕೃತವಾದ ಶ್ರೀಮದ್ಭಾಗವತವನ್ನು ಸಮರ್ಪಣೆಮಾಡುತ್ತಿದೆ. ಆ ಭಾಗವತ ಮಹಾಪುಷ್ಪದ ಮೊದಲನೆಯ ಎರಡು ದಳಗಳು ಈ ಪ್ರಥಮ ಸಂಪುಟವನ್ನು ಅಲಂಕರಿಸಿವೆ.

ಈ ರಾಮಾಯಣ-ಮಹಾಭಾರತ-ಭಾಗವತಗ್ರಂಥಗಳು ಒಂದಕ್ಕೊಂದು ಹೊಂದಿಕೆಯಾಗಿ ತಮ್ಮ ರಮಣೀಯವಾದ ಸಾಂಗತ್ಯದಿಂದ ನಮ್ಮ ಸಂಸ್ಕೃತಿಯ ಒಳ-ಹೊರ ರೂಪಗಳನ್ನು ತಮ್ಮ ವಿಶಿಷ್ಟವಾದ ವರ್ಣಕಾಂತಿಗಳಿಂದ ಪ್ರಕಾಶಪಡಿಸುತ್ತಿರುವ ಮಣಿದರ್ಪಣಗಳಾಗಿವೆ. ತ್ರಿಕಾಲಸಂಧ್ಯಾವಂದನೆ ಮತ್ತು ದೇವತಾಪೂಜೆಗಳನ್ನು ಮಾಡುವಂತೆ ಭಕ್ತಿ-ಶ್ರದ್ಧೆಗಳಿಂದಲೂ, ಆದರ-ಅಭಿಮಾನಗಳಿಂದಲೂ ಈ ಮೂರು ಮಹಾಗ್ರಂಥಗಳನ್ನೂ ಅನುಸಂಧಾನ ಮಾಡುವ ಪದ್ಧತಿ ನಮ್ಮಲ್ಲಿ ಅನೂಚಾನವಾಗಿ ನಡೆದುಬಂದಿದೆ. "ಸದ್ಬುದ್ಧಿಯಿಂದ ಕೂಡಿದ ಸುಕೃತಿಗಳು ಪ್ರಾತಃಕಾಲದಲ್ಲಿ ಶ್ರೀಭಾರತ ಸಂಹಿತೆಯ ಸುಧೆಯನ್ನೂ, ಮಧ್ಯಾಹ್ನದಲ್ಲಿ ಶ್ರೀಮದ್ರಾಮಾ ಯಣಕಾವ್ಯದ ಮಕರಂದವನ್ನೂ ಮತ್ತು ರಾತ್ರಿಯಲ್ಲಿ ಶ್ರೀಮದ್ಭಾಗವತಕಥಾ ಮೃತವನ್ನೂ ಆಸ್ವಾದನೆ ಮಾಡುತ್ತಾ ತಮ್ಮ ಕಾಲದ ಸದ್ವಿನಿಯೋಗಮಾಡುವರು"–ಎಂಬ ಅಭಿಪ್ರಾಯವುಳ್ಳ ಶ್ಲೋಕವೊಂದು ನಮ್ಮಲ್ಲಿ ಪ್ರಸಿದ್ಧವಾಗಿದೆ.

**ಪ್ರಾತರ್ದ್ಯೂತಪ್ರಸಂಗೇನ ಮಧ್ಯಾಹ್ನೇ ಸ್ತ್ರೀಪ್ರಸಂಗತಃ ।**
**ರಾತ್ರೌ ಚೋರಪ್ರಸಂಗೇನ ಕಾಲೋ ಗಚ್ಛತಿ ಧೀಮತಾಮ್ ॥** *

ಹೀಗೆ ಇವು ಮೂರು ರಸಮಯಸಾರಸ್ವತಗಳಾಗಿ ಸರ್ವಪುರುಷಾರ್ಥ ಪ್ರದೀಪಗಳಾಗಿದ್ದರೂ ಮೊದಲನೆಯ ಎರಡು ವೇದಸರಸ್ವತಿಯಂತೆಯೂ

---

* ಕೇವಲ ವಿಷಯಾಸಕ್ತ – ಇಂದ್ರಿಯಬುದ್ಧಿಯುಳ್ಳವರು ಪ್ರಾತಃಕಾಲವನ್ನು

ಮತ್ತು ಕಡೆಯದು ಉಪನಿಷದ್ಭಾರತಿಯಂತೆಯೂ ನಮ್ಮ ಆಸ್ವಾದನೆ-ಉಜ್ಜೀವನಗಳಿಗೆ ಕಾರಣವಾಗಿವೆ. ರಾಮಾಯಣ-ಭಾರತಗಳು ಕಾವ್ಯ-ಆಖ್ಯಾನ-ಇತಿಹಾಸಗಳ ಸೊಬಗಿನಿಂದ ಕಂಗೊಳಿಸುತ್ತಿವೆ ಮತ್ತು ತ್ರಿವರ್ಗದೊಡನೆ ಮುಕ್ತಿಯ ಸಂದೇಶವನ್ನೂ ಸಾರುತ್ತಿವೆ. ಶ್ರೀಮದ್ಭಾಗವತವಾದರೋ ಪುರಾಣ ಮತ್ತು ಕಾವ್ಯಕಂಚುಕವನ್ನು ಧರಿಸಿರುವ ಭಕ್ತಿ-ಜ್ಞಾನ-ವೈರಾಗ್ಯಸಮೇತಳಾದ ಮುಕ್ತಿದೇವಿಯ ಶಬ್ದರೂಪವಾದ ಶರೀರವೇ ಆಗಿದೆ. ಈ ಮೂರು ದಿವ್ಯ ವಾಹಿನಿಗಳ ತ್ರಿವೇಣೀಸಂಗಮದಲ್ಲಿ ಅವಗಾಹನೆಮಾಡುವವರು ಶುದ್ಧವಾದ ಅಭ್ಯುದಯ, ಆನಂದ, ಅಮೃತತ್ವ ಮತ್ತು ಶಾಂತಿ-ಸಮೃದ್ಧಿಗಳ ಸಿದ್ಧಿಯನ್ನು ಪಡೆದು ಕೃತಕೃತ್ಯರಾಗುತ್ತಾರೆ. ಅಂತಹ ಸುಕೃತಿಸಾಧಕರಾದ ಆಸಕ್ತರಿಂದ ಈ ಗ್ರಂಥರತ್ನವು ಶ್ರೀವ್ಯಾಸ-ವಾಸುದೇವರ ಪ್ರಸಾದವಾಗಿ ಸ್ವೀಕೃತವಾಗಲಿ– ಎಂದು ನಾವು ನಾರಾಯಣಸ್ಮರಣೆಮಾಡುತ್ತೇವೆ.

## ಶ್ರೀಮದ್ಭಾಗವತದ ಸ್ಥಾನ-ಮಾನಗಳು

ಭಾರತೀಯರ ಸಾಹಿತ್ಯದಲ್ಲಿ ಶ್ರೀಮದ್ಭಾಗವತದ ಸ್ಥಾನ ಅನುಪಮವಾದುದು. ಅದು ಭಕ್ತಿಶಾಸ್ತ್ರದ ಸಾರಸರ್ವಸ್ವವಾಗಿ ಸಂಸ್ಕೃತಸಾಹಿತ್ಯದ ಅನರ್ಘರತ್ನವೂ ಆಗಿದೆ. ಮಹರ್ಷಿಗಳು ಗ್ರಂಥದ ಆರಂಭದಲ್ಲಿ ಸಾರಿರುವಂತೆ ಅದು ನಿಗಮಕಲ್ಪತರುವಿನಿಂದ ಭೂಮಿಗೆ ಜಾರಿಬಂದಿರುವ ಅಮೃತಮಯವಾದ ಫಲ. ವೇದವು ಸರ್ವಪುರುಷಾರ್ಥಗಳಿಗೂ ಉಪಾಯವಾದ ಕಲ್ಪವೃಕ್ಷವೇನೋ ಹೌದು. ಆದರೆ ಸ್ವರ್ಗ-ವೈಕುಂಠಧಾಮಗಳಿಗೆ ಹತ್ತಿ ಅದರಿಂದ ಫಲಗಳನ್ನು ದೊರಕಿಸಿಕೊಳ್ಳುವ ಶಕ್ತಿ ನಮಗಿಲ್ಲ. ಅದಕ್ಕಾಗಿ ದೇವರ್ಷಿ ನಾರದರು ಅದನ್ನು ಅಲ್ಲಿಂದ ತಂದು ವೇದವ್ಯಾಸರ ಕೈಗೆ ಕೊಟ್ಟರು. ವ್ಯಾಸರು ಅದನ್ನು ತಮ್ಮ ಜ್ಞಾನಪುತ್ರನೂ, ಔರಸಪುತ್ರನೂ ಆದ ಅಮರಜೀವೀ ಶುಕಮುನಿಯೆಂಬ ಅರಗಿಳಿಯ ಬಾಯಲ್ಲಿಟ್ಟರು. ಆ ದಿವ್ಯಶುಕವು ಅದನ್ನು ಆಸ್ವಾದಿಸಿ ಭೂಮಿಗೆ ಬೀಳಿಸಿತು. ಆ ಗಿಳಿಯು ಕಚ್ಚಿದ ರಸ-ಫಲವು ಭೂಮಿಗೆ ಜಾರಿದರೂ ಒಡೆಯದೇ ರಸಪೂರ್ಣವಾಗಿಯೇ ಧರೆಗೆ ಇಳಿದಿದೆ. ಸಿಪ್ಪೆ-ಚಿಪ್ಪುಗಳಿಲ್ಲದೇ ಕೇವಲ ರಸರೂಪದಲ್ಲಿಯೇ ಇರುವ ಹಣ್ಣು ಅದು. ರಸವೇ ಆಗಿದ್ದರೂ

---

ಕಳ್ಳತನದಿಂದಲೂ ಕಳೆಯುತ್ತಾರೆ-ಎಂಬುದು ಈ ಶ್ಲೋಕಕ್ಕೆ ತೋರಿಬರುವ ಅರ್ಥ. ಉದ್ದಿಷ್ಟವಾದ ಪ್ರಾಮಾಣಿಕವಾದ ಅಭಿಪ್ರಾಯವನ್ನು ಮೇಲೆ ಕೊಟ್ಟಿದೆ.

ಘನರೂಪವಾಗಿದೆ. ಹಾಗೆಯೇ ಘನವಾಗಿದ್ದರೂ ರಸರೂಪವಾಗಿದೆ. ಸೋರಿ ಹೋಗದಿರಲೆಂದು ಘನಾಕೃತಿ, ಆಸ್ವಾದನೀಯವೇ ಆಗಿರಲೆಂದು ರಸಾಕೃತಿ. ಹೀಗೆ ರಸ-ಘನಗಳೆರಡೂ ಸೇರಿರುವ ಅದ್ಭುತವಾದ ಅಮೃತಫಲ.

ಅದು ಪುರಾಣದ ಆಕಾರದಲ್ಲಿರುವ ಸಾಹಿತ್ಯ. ಧರ್ಮದ ಪ್ರಮಾಣಗಳಲ್ಲಿ ಪುರಾಣದ ಸ್ಥಾನ ಮೂರನೆಯದು. ಶ್ರುತಿ, ಸ್ಮೃತಿ ಮತ್ತು ಅನಂತರ ಇತಿಹಾಸ-ಪುರಾಣಗಳು ಎಂದು ಪ್ರಮಾಣಗ್ರಂಥಗಳಲ್ಲಿ ಅವರೋಹಣ ಕ್ರಮ. ಇದರ ಪ್ರಕಾರ ಶ್ರೀಮದ್ಭಾಗವತವು ಪ್ರಮಾಣಗಳಲ್ಲಿ ಮೂರನೆಯದೇ ಆಗಿದ್ದರೂ ತನ್ನ ಅನ್ಯಾದೃಶಮಹಿಮೆಯಿಂದ ಉಪನಿಷತ್ತು, ಗೀತೆ ಮತ್ತು ಬ್ರಹ್ಮಸೂತ್ರಗಳಂತೆ ಪ್ರಥಮಸ್ಥಾನದಲ್ಲೇ ಸಂಭಾವಿಸಲ್ಪಡುವ ಅಗ್ಗಳಿಕೆಯ ಶಾಸ್ತ್ರ–ಎಂದು ಭಕ್ತಿದಾರ್ಶನಿಕರು ಸಾರುತ್ತಾರೆ. ಅಷ್ಟೇ ಅಲ್ಲ; ಅದು ವೇದವ್ಯಾಸರ ಸಮಾಧಿಭಾಷೆ–ಎಂದು ಶ್ರೀವಲ್ಲಭಾಚಾರ್ಯರು ಘೋಷಣೆ ಮಾಡುತ್ತಾರೆ. ಇದರ ಪ್ರಧಾನ ಆಧಾರದ ಮೇಲೆಯೇ ತಮ್ಮ ಆಧ್ಯಾತ್ಮಿಕ ಸಿದ್ಧಾಂತಗಳನ್ನು ಶ್ರೀವಲ್ಲಭಾಚಾರ್ಯರು, ಶ್ರೀಚೈತನ್ಯಮಹಾಪ್ರಭುಗಳು ಮೊದಲಾದ ಮಹಾತ್ಮರು ನಿಲ್ಲಿಸಿರುತ್ತಾರೆ. ಇಷ್ಟು ಅಧಿಕಸಂಖ್ಯೆಯ ವ್ಯಾಖ್ಯಾನ-ಟೀಕೆಗಳಿಂದ ಸಂಭಾವಿತವಾಗಿರುವ ಹಿರಿಮೆ ಬೇರಾವ ಪುರಾಣ ಗ್ರಂಥಕ್ಕೂ ಇಲ್ಲ. ಅತ್ಯಧಿಕಸಂಖ್ಯೆಯ ವ್ಯಾಖ್ಯಾನಗಳಿಂದ ಭೂಷಿತವಾಗಿರುವ ಗ್ರಂಥಗಳಲ್ಲಿ ಶ್ರೀಭಗವದ್ಗೀತೆಗೆ ಎರಡನೆಯದು ಶ್ರೀಮದ್ಭಾಗವತವೊಂದೇ. ವಿಶುದ್ಧಾದ್ವೈತ, ವಿಶಿಷ್ಟಾದ್ವೈತ, ಶುದ್ಧಾದ್ವೈತ, ದ್ವೈತ, ದ್ವೈತಾದ್ವೈತ ಮುಂತಾದ ನಾನಾವೇದಾಂತಶಾಖೆಗಳ ಆಚಾರ್ಯರಿಂದ ವ್ಯಾಖ್ಯಾನರೂಪವಾದ ಕಾಣಿಕೆಯನ್ನು ಕೈಗೊಂಡಿರುವ ಶಾಸ್ತ್ರಸಾರ್ವಭೌಮ. ಈ ಶ್ರೀಮದ್ಭಾಗವತ. ಅದ್ವೈತಾಚಾರ್ಯರೂ, ಭಕ್ತಸತ್ತಮರೂ ಆದ ಶ್ರೀಧರ ಸ್ವಾಮಿಗಳ "ಭಾಗವತಭಾವಾರ್ಥದೀಪಿಕೆ", ವಿಶಿಷ್ಟಾದ್ವೈತಸಂಪ್ರದಾಯದ ಸುದರ್ಶನ ಸೂರಿಗಳ "ಶುಕಪಕ್ಷೀಯ", ವೀರರಾಘವಾಚಾರ್ಯರ "ಭಾಗವತಚಂದ್ರ ಚಂದ್ರಿಕಾ" ಮತ್ತು ವೆಂಕಟಕೃಷ್ಣಮಾಚಾರ್ಯರ "ಭಾಗವತಚಂದ್ರಿಕಾ", ದ್ವೈತಮತಸ್ಥಾಪಕರಾದ ಶ್ರೀಮದಾನಂದತೀರ್ಥ ಭಗವತ್ಪಾದರ "ಭಾಗವತ ತಾತ್ಪರ್ಯನಿರ್ಣಯ", ಶ್ರೀವಿಜಯಧ್ವಜರ "ಪದರತ್ನಾವಳೀ", ನಿಂಬಾರ್ಕಮತದ ಶ್ರೀಶುಕದೇವಾಚಾರ್ಯರ "ಸಿದ್ಧಾಂತಪ್ರದೀಪ" ಶುದ್ಧಾ

ದ್ವೈತಸಂಪ್ರದಾಯದ ಪ್ರತಿಷ್ಠಾಪನಚಾರ್ಯರಾದ ಶ್ರೀವಲ್ಲಭಾಚಾರ್ಯರ "ಸುಬೋಧಿನೀ", ಶ್ರೀ ಗಿರಿಧರಾಚಾರ್ಯರ "ಆಧ್ಯಾತ್ಮಿಕವ್ಯಾಖ್ಯಾನ", ಶ್ರೀ ಚೈತನ್ಯಮತೀಯರಾದ ಜೀವಗೋಸ್ವಾಮಿಗಳ "ಸಂದರ್ಭ", ಶ್ರೀವಿಶ್ವನಾಥಚಕ್ರವರ್ತಿಗಳ "ಸಾರಾರ್ಥದರ್ಶಿನೀ" ಮತ್ತು ಶ್ರೀಹರಿಯ "ಹರಿಭಕ್ತಿರಸಾಯನ"–ಇವುಗಳನ್ನು ಇಲ್ಲಿ ಉದಾಹರಿಸಬಹುದು. ಪುರಾಣವಾದರೂ ಪಾಂಡಿತ್ಯದ ಪರಮಾವಧಿಯ ಗ್ರಂಥವಾಗಿ "**ವಿದ್ಯಾ ಭಾಗವತಾವಧಿಃ**"– ಎಂಬ ಪ್ರಸಿದ್ಧಿಗೆ ಕಾರಣವಾಗಿದೆ. ವಿದ್ಯಾವಂತರನ್ನು ಪರೀಕ್ಷೆ ಮಾಡಬೇಕಾದರೆ ಅದಕ್ಕೆ ಶ್ರೀಮದ್ಭಾಗವತವೇ ಒರೆಗಲ್ಲು. "**ವಿದ್ಯಾವತಾಂ ಭಾಗವತೇ ಪರೀಕ್ಷಾ**" – ಎಂಬ ಮಾತು ಅಂತೆಯೇ ವಿಶ್ರುತವಾಗಿದೆ. ಭಗವದ್ರಸದಿಂದ ಪರಿಪೂರ್ಣವಾಗಿ "**ಸ್ವಾದು ಸ್ವಾದು ಪದೇ ಪದೇ**"– ಎಂಬ ಅನುಭವವಾಣಿಗೆ ಆಶ್ರಯವಾಗಿರುವ ಅಸದೃಶಗ್ರಂಥವೂ ಆಗಿದೆ.

ಇದರ ಅನುಸಂಧಾನದಿಂದ ಲೌಕಿಕವಾದ ಅನೇಕಲಾಭಗಳು ಉಂಟಾಗುತ್ತವೆಯೆಂದು ಸಾರುವ ಫಲಶ್ರುತಿಯು ಉಂಟು. ಉದಾಹರಣೆಗೆ : ಇದರಲ್ಲಿ ಬರುವ ನಾರಾಯಣಕವಚ ಅನುಸಂಧಾನದಿಂದ ವಿಘ್ನಗಳ ನಾಶ, ವಿಜಯ-ಆರೋಗ್ಯ-ಐಶ್ವರ್ಯಗಳ ಪ್ರಾಪ್ತಿ, ಗೋಪಿಕಾಕನ್ಯೆಯರೂ ಶ್ರೀರುಕ್ಮಿಣೀದೇವಿಯೂ ಕಾತ್ಯಾಯಿನೀದೇವಿಯಲ್ಲಿ ಮಾಡುವ ಪ್ರಾರ್ಥನೆ ಮತ್ತು ಶ್ರೀರುಕ್ಮಿಣೀದೇವಿಯು ಶ್ರೀಕೃಷ್ಣನಿಗೆ ಕಳುಹಿಸುವ ಸಂದೇಶ–ಇವುಗಳನ್ನು ಅನುಸಂಧಾನಮಾಡುವುದರಿಂದ ಕನ್ಯೆಯರಿಗೆ ಶೀಘ್ರವಾಗಿ ವಿವಾಹ ಪ್ರಾಪ್ತಿ, ಪುಂಸವನವ್ರತದಿಂದ ಉತ್ತಮಸಂತಾನ ಪ್ರಾಪ್ತಿ ಮತ್ತು ಸಮಸ್ತ ಕಾಮನೆಗಳ ಪೂರ್ತಿ, "ಗಜೇಂದ್ರಸ್ತವನ"ದಿಂದ ಋಣಮುಕ್ತಿ, ಶತ್ರುಮುಕ್ತಿ ಮತ್ತು ದೌರ್ಭಾಗ್ಯಪರಿಹಾರ, "ಪಯೋವ್ರತ"ದಿಂದ ಇಷ್ಟವಾದ ಸಂತಾನಪ್ರಾಪ್ತಿ ಮತ್ತು "ಭಾಗವತಸಪ್ತಾಹಶ್ರವಣಪಾರಾಯಣ"ಗಳ ಫಲವಾಗಿ ಪ್ರೇತಯೋನಿಯಿಂದ ಬಿಡುಗಡೆ–ಇತ್ಯಾದಿ ಫಲಗಳನ್ನು ಶ್ರೀಮದ್ಭಾಗವತಶಾಸ್ತ್ರಗಳು ಘೋಷಣೆಮಾಡುತ್ತವೆ. ಇದು ಅನೇಕರ ಪ್ರಯೋಗಗಳಿಂದಲೂ ಜೀವನದಲ್ಲಿ ಸಿದ್ಧವಾಗಿರುವ ಸತ್ಯ. ಇಷ್ಟೆಲ್ಲಾ ಇದ್ದರೂ ಶ್ರೀಮದ್ಭಾಗವತದ ಶ್ರವಣ, ಪಾರಾಯಣ ಮತ್ತು ಪೂಜೆಗಳ ಪ್ರಧಾನ ಫಲ ಭಕ್ತಿ-ಜ್ಞಾನ-ವೈರಾಗ್ಯಗಳು. ಮುಕ್ತಿಯು ಭಕ್ತಿಯ ದಾಸಿ

ಯಾಗಿ ತಾನಾಗಿಯೇ ಬರುವಳೆಂದು ಪುರಾಣವು ಸಾರುತ್ತದೆ. "ಮುಕ್ತಿಂ ದಾಸೀಂ ದದೌ ತುಭ್ಯಂ" ಸಾಧನಭಕ್ತಿ ಮತ್ತು ಸಾಧ್ಯಭಕ್ತಿ–ಈ ಎರಡನ್ನೂ ಕರುಣಿಸುವ ಕಾಮಧೇನು ಇದು. ಅಷ್ಟೇಕೆ? ಶ್ರೀಕೃಷ್ಣ ಪರಮಾತ್ಮನ ಶಬ್ದರೂಪವಾದ ಶರೀರವೇ ಶ್ರೀಮದ್ಭಾಗವತ. ಆ ಶ್ರೀಕೃಷ್ಣ ಪರಮಾತ್ಮನು ಪರಂಧಾಮವನ್ನು ಸೇರಿಕೊಳ್ಳುವಾಗ ತನ್ನ ಪ್ರತಿನಿಧಿಯನ್ನಾಗಿ ಭಕ್ತೋತ್ತಮ ಉದ್ಧವನಿಗೆ ಅನುಗ್ರಹಿಸಿದ ಅಪೂರ್ವಪ್ರಸಾದವೂ ಇದಾಗಿದೆ.

**ಸ್ವಕೀಯಂ ಯದ್ಭವೇತ್ತೇಜಃ ತಚ್ಚ ಭಾಗವತೇಽದಧಾತ್ ।**
**ತಿರೋಧಾಯ ಪ್ರವಿಷ್ಟೋಽಯಂ ಶ್ರೀಮದ್ಭಾಗವತಾರ್ಣವಮ್ ॥**
**ತೇನೇಯಂ ವಾಙ್ಮಯೀ ಮೂರ್ತಿಃ ಪ್ರತ್ಯಕ್ಷಾವರ್ತತೇ ಹರೇಃ ।**
**ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ॥**

ಇದರ ಅಪಾರ ಮಹಿಮೆಯನ್ನು ಈ ಪುರಾಣವು ಮಾತ್ರವಲ್ಲದೇ ಪದ್ಮಪುರಾಣ, ಮತ್ಸ್ಯಪುರಾಣ ಮುಂತಾದ ಮಹಾಪುರಾಣಗಳೂ ಘೋಷಣೆ ಮಾಡುತ್ತವೆ. ಕೆಲವು ಧರ್ಮಗ್ರಂಥಗಳು ಸಾರ್ವಭೌಮನ ಆಜ್ಞೆಯಂತೆ ನಮಗೆ ಧರ್ಮವನ್ನು ಬೋಧಿಸುತ್ತವೆ. ಉದಾಹರಣೆಗೆ: ಶ್ರುತಿ-ಸ್ಮೃತಿಗಳು. ಕೆಲವು ಗ್ರಂಥಗಳು ಸ್ನೇಹಿತನಂತೆ ನಮಗೆ ಧರ್ಮದ ಜಾಗೃತಿ ಯನ್ನುಂಟುಮಾಡುತ್ತವೆ. ಉದಾಹರಣೆಗೆ : ಪುರಾಣಗಳು. ಕಾವ್ಯಗಳು ಪ್ರಿಯತಮೆಯಂತೆ ಮಧುರವಾದ ಮಾರ್ಗದಿಂದ ತಿಳುವಳಿಕೆ ನೀಡುತ್ತವೆ. ಇವುಗಳನ್ನು ಕ್ರಮವಾಗಿ ಪ್ರಭುಸಮ್ಮಿತ, ಮಿತ್ರಸಮ್ಮಿತ ಮತ್ತು ಕಾಂತಾ ಸಮ್ಮಿತ–ಎಂದು ಕರೆಯುತ್ತಾರೆ. ಈ ಮೂರು ರೀತಿಗಳಿಂದಲೂ ನಮಗೆ ಉಪದೇಶನೀಡಿ ನಮ್ಮನ್ನು ಉದ್ಧರಿಸುವ ಅನುಪಮಗ್ರಂಥ ಶ್ರೀಮದ್ಭಾಗವತ.

ಶ್ರೀಮದ್ಭಾಗವತವನ್ನು ಪುರಾಣರತ್ನವೆಂದೂ ಆಧ್ಯಾತ್ಮಿಕಕಾವ್ಯಗಳ ಶಿರೋಮಣಿಯೆಂದೂ, ಪರಮಶ್ರೇಷ್ಠವಾದ ಪರಮಹಂಸಸಂಹಿತೆಯೆಂದೂ ಮನೀಷಿಗಳು ಮಾನ್ಯಮಾಡಿರುತ್ತಾರೆ.

## ಮಹಾಪುರಾಣ

ಪುರಾಣ ಎಂದರೆ "ಹಳೆಯದು, ಜೀರ್ಣವಾದದ್ದು" ಎಂಬ ಅರ್ಥವು ಸಾಮಾನ್ಯವಾಗಿ ಗ್ರಹಿಸಲ್ಪಡುತ್ತದೆ. ಆದರೆ ಪುರಾಣವೆಂದು ಪ್ರಸಿದ್ಧವಾಗಿರುವ ವಾಙ್ಮಯದಲ್ಲಿ ಹಳೆಯ ಕಾಲಕ್ಕೆ ಸಂಬಂಧಪಟ್ಟ ವಿಷಯಗಳು ಮಾತ್ರವಲ್ಲದೇ

ಚಿರಪುರಾತನವಾಗಿ ನಿತ್ಯನೂತನವಾಗಿರುವ ಸತ್ಯದ ಪ್ರತಿಪಾದನೆಯನ್ನೂ ನೋಡುತ್ತೇವೆ. ಜೀವ, ಜಗತ್ತು, ಪರಮಾತ್ಮ ಎಂಬ ತತ್ತ್ವಗಳು, ಪುರುಷಾರ್ಥಗಳು, ಪುಣ್ಯ-ಪಾಪಗಳು, ಲೌಕಿಕ-ವೈದಿಕವ್ಯವಹಾರಗಳು, ವರ್ಣ-ಆಶ್ರಮ-ಆಚಾರಗಳ ವ್ಯವಸ್ಥೆ, ಪ್ರಪಂಚದ ಪರಿಚಯ, ಇಹ-ಪರ ಶ್ರೇಯಸ್ಸಿನ ಮಾರ್ಗಗಳು–ಮುಂತಾದ ಮುಖ್ಯವಿಷಯಗಳನ್ನು ಚರಿತ್ರೆ, ಕಥೆ, ದೃಷ್ಟಾಂತ, ನಿದರ್ಶನ ಮುಂತಾದವುಗಳ ಮೂಲಕ ಹೃದಯಂಗಮವಾಗಿ ಬೋಧಿಸುವ ಭವ್ಯಸಾಹಿತ್ಯ ಇದು. ಇದನ್ನು ಧರ್ಮದ ಮತ್ತು ವಿದ್ಯೆಗಳ ಹದಿನಾಲ್ಕು ಸ್ಥಾನಗಳಲ್ಲಿ ಯಾಜ್ಞವಲ್ಕ್ಯರು ಲೆಕ್ಕಿಸುತ್ತಾರೆ.

**ಪುರಾಣನ್ಯಾಯಮೀಮಾಂಸಾಧರ್ಮಶಾಸ್ತ್ರಾಙ್ಗಮಿಶ್ರಿತಾಃ ।**
**ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚಚತುರ್ದಶ ॥**

ವೇದಗಳೆಲ್ಲವೂ ಪುರಾಣಗಳಲ್ಲಿ ನೆಲೆಗೊಂಡಿವೆ. ವೇದಾರ್ಥಕ್ಕಿಂತಲೂ ಪುರಾಣಾರ್ಥವು ಮುಖ್ಯ. ಇತಿಹಾಸ-ಪುರಾಣಗಳ ಸಹಾಯದಿಂದಲೇ ವೇದಾರ್ಥವನ್ನು ವಿಸ್ತರಿಸಬೇಕು. ಇವುಗಳನ್ನರಿಯದ ಅಲ್ಪಜ್ಞಾನಿಯು ತಮಗೆ ಪೆಟ್ಟುಹಾಕುತ್ತಾನೆಂದು ವೇದಗಳು ಹೆದರುತ್ತವೆ–ಎಂಬ ಹೇಳಿಕೆಗಳನ್ನೂ ಶಾಸ್ತ್ರಗಳು ಹೇಳುತ್ತವೆ.

**ವೇದಾರ್ಥಾದಧಿಕಂ ಮನ್ಯೇ ಪುರಾಣಾರ್ಥಂ ವರಾನನೇ ।**
**ವೇದಾಃ ಪ್ರತಿಷ್ಠಿ ತಾಸ್ಸರ್ವೇ ಪುರಾಣೇ ನಾತ್ರ ಸಂಶಯಃ ॥**

(ನಾರದೀಯ ಪು. II-24-17)

**ಇತಿಹಾಸಪುರಾಣಾಭ್ಯಾಂ ವೇದ ಸಮುಪಬ್ರಂಹಯೇತ್ ।**
**ಬಿಭೇತ್ಯಲ್ಪಶ್ರುತಾದ್ವೇದಃ ಮಾಮಯಂ ಪ್ರಹರಿಷ್ಯತಿ ॥**

(ಮಹಾಭಾರತ I-1-237 ವಾಯು ಪು. 1-201)

ವೇದಗಳು ಹೇಳುವ ವಿಷಯಗಳನ್ನು ಅದಕ್ಕಿಂತಲೂ ಸರಳವಾದ ಮತ್ತು ಹೃದ್ಯವಾದ ರೀತಿಯಲ್ಲಿ ಮನವರಿಕೆಮಾಡಿಕೊಡುವುದರಿಂದಲೂ ಅಧಿಕವಾದ ವಿಷಯವ್ಯಾಪ್ತಿಯನ್ನು ಹೊಂದಿರುವುದರಿಂದಲೂ, ಸರ್ವವರ್ಣ-ಸರ್ವಜಾತಿಗಳ ಜನರೂ ಅಧಿಕರಿಸಬಹುದಾದ ಸುಬೋಧಸಾಹಿತ್ಯವಾಗಿರುವುದರಿಂದಲೂ ಪುರಾಣಗಳಿಗೆ ಈ ಅಗ್ಗಳಿಕೆ. "ಹಿಂದಿನ ಸಮಾಚಾರ"–"ಪುರಾಣಂ ಪುರಾವೃತ್ತಂ" (ನೀಲಕಂಠೀಯ), "ಸರ್ವಪ್ರಥಮವಾಗಿ ಜ್ಞಾನಪ್ರಕಾಶವನ್ನು

ಉಂಟುಮಾಡಿದ ಸಾಹಿತ್ಯ'–"**ಯಸ್ಮಾತ್ಪುರಾಹ್ಯನಕ್ತೀದಂ ಪುರಾಣಂ ತೇನ ತತ್ಸ್ಮೃತಂ**'' (ಬ್ರಹ್ಮಾಂಡಪುರಾಣ), "**ಪುರಾ ನವಂ ಭವತಿ**'' (ನಿರುಕ್ತಿ ) ಎಂಬ ಎರಡೂ ಅರ್ಥಗಳು ಈ ಸಾಹಿತ್ಯಕ್ಕೆ ಹೊಂದಿಕೆಯಾಗುತ್ತವೆ. "**ಋಚಃ ಸಾಮಾನಿ ಛಂದಾಂಸಿ ಪುರಾಣಂ ಯಜುಷಾ ಸಹ**'' (ಅಥರ್ವ. 11-7-24) "**ಸೋಯಮಿತಿ ಕಿಂಚಿತ್ಪುರಾಣಮಾಚಕ್ಷೀತ**" (ಶತಪಥ ಬ್ರಾ. 13-4-3-13) "**ಇತಿಹಾಸಪುರಾಣಂ ಪಂಚಮಂ ವೇದಾನಾಂ ವೇದಂ**'' (ಛಾಂದೋಗ್ಯ ಉ. 7-1-2) ಮುಂತಾದ ವೈದಿಕಸಾಹಿತ್ಯದಲ್ಲಿಯೂ ಪುರಾಣವೆಂಬ ವಾಙ್ಮಯದ ಉಲ್ಲೇಖವಿದೆ. ಅದಕ್ಕೆ "ಸೃಷ್ಟಿಪ್ರಕ್ರಿಯೆಯಿಂದ ಕೂಡಿದ ವೃತ್ತಾಂತ" ಎಂದು ಅರ್ಥ ಹೇಳುತ್ತಾರೆ. "ಐದನೇಯ ವೇದ"–"**ಪುರಾಣಂ ಪಂಚಮೋ ವೇದ ಇತಿ ಬ್ರಹ್ಮಾನುಶಾಸನಂ**'' (ಛಾಂದೋಗ್ಯ. 7-1-2) "ವೇದ ಸಮ್ಮಿತ್ರವಾದ ವಾಙ್ಮಯ" ಎಂದು ಮೊದಲಾಗಿಯೂ ಇದರ ಸಂಭಾವನೆಯನ್ನು ನೋಡುತ್ತೇವೆ. ಅಂತೂ ಸನಾತನಧರ್ಮವನ್ನು ಅರಿಯುವವರಿಗೆ ಅನಿವಾರ್ಯವಾಗಿ ಬೇಕಾಗಿರುವ ಸಾಹಿತ್ಯ ಈ ಪುರಾಣ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಪುರಾಣ ಮತ್ತು ಇತಿಹಾಸಶಬ್ದ ಗಳನ್ನು ಸಮಾನಾರ್ಥಕವಾಗಿ ಬಳಸಿರುವುದೂ ಉಂಟು. "ತಥ್ಯವಾದ ಕಥಾನಕ ಅಥವಾ ಆಖ್ಯಾನ" (ಇತಿ ಹ ಆಸ) ಎಂಬ ಅರ್ಥದಲ್ಲಿ ಇತಿಹಾಸವನ್ನು ಪ್ರತ್ಯೇಕವಾಗಿ ಪರಿಗಣಿಸುವುದೂ ಉಂಟು. ಪುರಾಣಗಳನ್ನು ಹದಿನೆಂಟು ಮಹಾಪುರಾಣಗಳು ಮತ್ತು ಅವುಗಳಿಗೆ ಸಹಾಯಕವಾಗಿರುವ ಹದಿನೆಂಟು ಉಪಪುರಾಣಗಳೆಂದು ವಿಂಗಡಿಸಿ ಇವೆಲ್ಲಕ್ಕೂ ಪರಾಶರ ಪುತ್ರರಾದ ವ್ಯಾಸರು ಕರ್ತೃಗಳೆಂದು ಹೇಳಿರುವುದೂ ಉಂಟು. "**ಅಷ್ಟಾದಶ ಪುರಾಣಾನಾಂ ಕರ್ತಾ ಸತ್ಯವತೀಸುತಃ**'' ಹದಿನೆಂಟು ಮಹಾಪುರಾಣಗಳ ಶ್ಲೋಕಸಂಖ್ಯೆ ನಾಲ್ಕು ಲಕ್ಷ. ಇವುಗಳಿಗೆ ಪರಿಶಿಷ್ಟದಂತಿರುವ ಉಪಪುರಾಣ ಗಳಲ್ಲಿಯೂ ಇಷ್ಟೇ ಅಧಿಕಸಂಖ್ಯೆಯ ಶ್ಲೋಕಗಳನ್ನು ನೋಡುತ್ತೇವೆ. ಮಹಾ ಭಾರತ-ಹರಿವಂಶಗಳನ್ನೂ ಪುರಾಣಗಳೆಂದು ಕರೆಯುವುದುಂಟು. ಹೀಗೆ ಪರಿಮಾಣ ಮತ್ತು ವಿಷಯವಿಸ್ತಾರಗಳಲ್ಲಿ ಪ್ರಪಂಚದಲ್ಲೇ ಅದ್ವಿತೀಯವಾಗಿ ರುವ ವಾಙ್ಮಯ ಪುರಾಣಗಳು. ಇಡೀ ಪುರಾಣಸಾಹಿತ್ಯಕ್ಕೆ ವೇದವ್ಯಾಸರು

ಮುಖ್ಯಾರ್ಥದಲ್ಲಿ "ಕರ್ತಾ" ಆಗಿರದಿದ್ದರೂ ಅವುಗಳ "ಸಂಸ್ಕರ್ತಾ" "ಪರಿಷ್ಕರ್ತಾ ಆಗಿದ್ದಿರಬಹುದೆಂದು ನಂಬುವುದರಲ್ಲಿ ಯಾವ ತೊಂದರೆಯೂ ಇಲ್ಲ. ವಿಷ್ಣುಪುರಾಣಕ್ಕೆ ಕರ್ತೃವು ವೇದವ್ಯಾಸರ ತೀರ್ಥರೂಪರಾದ ಪರಾಶರ ಮುನಿಗಳು ಎಂದು ಆ ಪುರಾಣವೇ ಹೇಳುತ್ತದೆ. ಎಲ್ಲ ಪುರಾಣಗಳ ಸಾರವೆಂದು ಊಹಿಸಲಾಗಿರುವ 'ಪುರಾಣಸಂಹಿತಾ' ಎಂಬ ಹೆಸರನ್ನು ಕೇಳುತ್ತೇವೆ.

ಬೃಹತ್ತು-ಮಹತ್ತುಗಳಲ್ಲಿ ಅದ್ವಿತೀಯವಾಗಿರುವ ಈ ಪುರಾಣ ವಾಙ್ಮಯದಲ್ಲಿ ಶ್ರೀಮದ್ಭಾಗವತವನ್ನು ಅಷ್ಟಾದಶ ಮಹಾಪುರಾಣಗಳಲ್ಲಿ ಐದನೆಯದನ್ನಾಗಿ ಲೆಕ್ಕಿಸುತ್ತದೆ ಮಹಾಪುರಾಣವೇ ಆಗಿರುವ ವಿಷ್ಣುಪುರಾಣ.

**ಅಷ್ಟಾದಶ ಪುರಾಣಾನಿ ಪುರಾಣಜ್ಞಾಃ ಪ್ರಚಕ್ಷತೇ ।**
**ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ।**

(III-6-20)

ಪುರಾಣಕ್ಕೆ ಐದು ಲಕ್ಷಣಗಳಿರಬೇಕೆಂದು ಅದೇ ಪುರಾಣವೂ ಮತ್ತು ನಾಮಲಿಂಗಾನುಶಾಸನವೂ ಸಾರುತ್ತವೆ.

**ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।**
**ಸರ್ವೇಷ್ವೇತೇಷು ಕಥ್ಯನ್ತೇ ವಂಶಾನುಚರಿತಂ ಚ ಯತ್ ॥**

**(ವಿಷ್ಣುಪುರಾಣ)**

**ವಂಶಾನುಚರಿತಂ ಚೇತಿ ಪುರಾಣಂ ಪಞ್ಚಲಕ್ಷಣಮ್ ।** (ಅಮರಕೋಶ)

ಸರ್ಗ ಎಂದರೆ : ಕಾರಣಸೃಷ್ಟಿ. ಪ್ರತಿಸರ್ಗ ಎಂದರೆ : ಕಾರ್ಯಸೃಷ್ಟಿ ಮತ್ತು ಲಯ. ವಂಶವೆಂದರೆ ದೇವತೆಗಳ ಮತ್ತು ಪಿತೃದೇವತೆಗಳ ವಂಶಾವಳಿ. ಮನ್ವಂತರಶಬ್ದವು ಸ್ವಾಯಂಭುವಮನುವೇ ಮುಂತಾದ ಮನುಗಳ ಅಧಿಕಾರ-ಆಡಳಿತಗಳ ಕಾಲ. ವಂಶಾನುಚರಿತವೆಂದರೆ ಸೂರ್ಯವಂಶ-ಚಂದ್ರವಂಶ ಮುಂತಾದ ರಾಜವಂಶಗಳಲ್ಲಿ ಉತ್ಪನ್ನರಾದ (ಉತ್ಪನ್ನರಾಗುವ) ರಾಜರ ಸಂಕ್ಷಿಪ್ತವರ್ಣನೆ. ಶ್ರೀಮದ್ಭಾಗವತದಲ್ಲಿ ಈ ಐದು* ಲಕ್ಷಣಗಳೂ ಸಮಗ್ರವಾಗಿವೆ. ಇವುಗಳಲ್ಲದೇ ಭೂಗೋಳ-ಖಗೋಳಗಳ ವರ್ಣನೆಯೂ ಇಲ್ಲಿ ನಿರೂಪಿತವಾಗಿದೆ. ಆದರೆ ಭೂಗೋಳ-ಖಗೋಳಗಳ ಜ್ಞಾನಕ್ಕಾಗಿಯೇ

---

* ಇವುಗಳಲ್ಲದೇ 'ಸ್ಥಾನ' 'ಪೋಷಣ', 'ಊತಿ' ಮುಂತಾದ ವಿಶೇಷಲಕ್ಷಣಗಳೂ ಶ್ರೀಮದ್ಭಾಗವತಕ್ಕೆ ಹೊಂದಿಕೆಯಾಗುತ್ತದೆ. (II-10-1-7)

ಓದುವ ಪ್ರಮಾಣಗ್ರಂಥವಲ್ಲ ಭಾಗವತ. ಪರಿವರ್ತನಶೀಲವಾಗಿರುವ ಈ ಜಗತ್ತಿನಲ್ಲಿ ಯಾವುದೋ ಕಾಲವಿಶೇಷದಲ್ಲಿ ಬರೆದ ಭೂಗೋಳವರ್ಣನೆಗೆ ಸಾರ್ವಕಾಲಿಕಸತ್ಯದ ಮಾನ್ಯತೆ ಭೌತಿಕವಾಗಿ ಏಕೆ ಬರಬೇಕು? ಸ್ಥೂಲ ದೃಷ್ಟಿಗೆ ಕಣ್ಣಿಗೆ ಕಾಣುವ ಜಗತ್ತನ್ನು ನಾವು ಈಗ ಓದುತ್ತಿರುವ ಭೂಗೋಳ-ಖಗೋಳಶಾಸ್ತ್ರಗಳು ಹೇಳುತ್ತವೆ. ಮಹರ್ಷಿಗಳು ಯೋಗಶಕ್ತಿ ಯಿಂದ ಪ್ರತ್ಯಕ್ಷವಾಗುವ ಸೂಕ್ಷ್ಮಲೋಕಗಳನ್ನು ವರ್ಣಿಸುತ್ತಾರೆ. ಅದರ ಹಿನ್ನೆಲೆಯಲ್ಲಿ ಭೌತಿಕಭೂಗೋಳವನ್ನು ಕೆಲವು ಕಡೆ ಆಲಂಕಾರಿಕವಾಗಿ ಬಳಸಿಕೊಂಡಿರುವುದೂ ಉಂಟು. ಆದುದರಿಂದ ಭಾಗವತದ ಭೂಗೋಳ-ಖಗೋಳವರ್ಣನೆಗಳ ಸಾಮ್ಯವನ್ನು ಆಧುನಿಕವಿಜ್ಞಾನ ಮತ್ತು ಪ್ರಪಂಚ ಪರಿಚಯದ ವರ್ಣನೆಗಳಲ್ಲಿ ನೋಡಲು ಹೋಗುವುದು ಉಚಿತವಲ್ಲ. ಭಾಗವತಕ್ಕೆ ಸ್ಥೂಲಪ್ರಪಂಚದ ಮತ್ತು ಸೃಷ್ಟ್ಯಾದಿಗಳನ್ನೂ ವರ್ಣಿಸುವುದರಲ್ಲಿ ತಾತ್ಪರ್ಯವಿಲ್ಲ. ಭಗವಂತನ ಧ್ಯಾನ ಮತ್ತು ಮಹಿಮೆಗಳ ಪರಿಚಯ ಕ್ಕಾಗಿಯೇ ಅವು ಅಂಗವಾಗಿ ಬಂದಿವೆಯೆಂದು ತಿಳಿಯಬೇಕು. ಸೃಷ್ಟಿಯೇ ಮುಂತಾದ ಒಂಬತ್ತು ಲಕ್ಷಣಗಳನ್ನು ಹೇಳಿರುವುದಕ್ಕೆ ಹತ್ತನೆಯದಾದ 'ಆಶ್ರಯ'ವೆಂಬ ಪರಬ್ರಹ್ಮ ಪರಮಾತ್ಮನನ್ನು ಅರಿಯುವುದರಲ್ಲಿಯೇ ಪರಮತಾತ್ಪರ್ಯವೆಂದು ಶ್ರೀಮದ್ಭಾಗವತನೇ ಪ್ರತಿಜ್ಞೆಮಾಡುತ್ತದೆ ಯಲ್ಲವೇ? **"ದಶಮಸ್ಯ ವಿಶುದ್ಧ್ಯರ್ಥಂ ನವಾನಾಮಿಹ ಕೀರ್ತನಮ್"** (II-10-2) **"ಕಥ್ಯತೇ ಭಗವಾನ್ವಿಷ್ಣುರಶೇಷ್ವೇವ ಸತ್ತಮ"** (III-6-27) ಎಂದು ವಿಷ್ಣುಪುರಾಣವೂ ಇದನ್ನು ಸಮರ್ಥಿಸುತ್ತದೆ. ರಾಜರ್ಷಿ-ಮಹರ್ಷಿ ಗಳ ಕಥೆಗಳಿಗೂ ಇದೇ ತಾತ್ಪರ್ಯ.

ಶ್ರೀಮದ್ಭಾಗವತವು ಮಹಾಪುರಾಣಗಳಲ್ಲಿಯೂ "ಸಾತ್ತ್ವಿಕ ಪುರಾಣ" ಎಂಬ ವರ್ಗಕ್ಕೆ ಸೇರುತ್ತದೆ. "ಯಾವ ಪುರಾಣಗಳಲ್ಲಿ (ಸತ್ತ್ವಗುಣಕ್ಕೆ ಅಧಿಷ್ಠಾತೃವಾದ) ವಿಷ್ಣುವಿನ ಮಹಾತ್ಮ್ಯವನ್ನು ಹೆಚ್ಚಾಗಿ ಹೇಳು ತ್ತವೆಯೋ–ಅವುಗಳಿಗೆ ಸಾತ್ತ್ವಿಕಪುರಾಣಗಳೆಂದು ನಾಮಧೇಯ" ಎಂದು ಮತ್ಸ್ಯಪುರಾಣವು ಹೇಳುತ್ತದೆ.

**"ಸಾತ್ತ್ವಿಕೇಷು ಪುರಾಣೇಷು ಮಾಹಾತ್ಮ್ಯಮಧಿಕಂ ಹರೇಃ"**

(ಮತ್ಸ್ಯ, 53/67)

ಸಾತ್ತ್ವಿಕಕಲ್ಪಕ್ಕೆ ಸೇರಿದ ಪುರಾಣವಾದ್ದರಿಂದ ಇದಕ್ಕೆ ಸಾತ್ತ್ವಿಕ ಪುರಾಣವೆಂದು ಹೆಸರು–ಎಂಬ ವಿವರಣೆಯೂ ಇದೆ. ಮತ್ತೊಂದು ಮುಖ್ಯ ವಾದ ಅರ್ಥದಲ್ಲಿ ಇದು ಸಾತ್ತ್ವಿಕಪುರಾಣ. ಅದೇನೆಂದರೆ : ಇತರ ದೇವತೆ ಗಳನ್ನು ತೆಗಳದೆಯೇ ಪರಾದೇವತೆಯಾದ ಪರಮಾತ್ಮ-ಶ್ರೀಮನ್ನಾರಾಯಣ ನನ್ನು ಕೊಂಡಾಡುವ ಸಾತ್ತ್ವಿಕಮನೋಧರ್ಮದವರು ಸಂತೋಷದಿಂದ ಆದರಿಸಬಹುದಾದ ಪುರಾಣ ಇದು. ಕಥಾಭಾಗದಲ್ಲಿ ಮತ್ತು ತತ್ತ್ವನಿರೂಪಣೆ ಯಲ್ಲಿ ತನಗೆ ಆದರ್ಶದಂತಿರುವ ವಿಷ್ಣುಪುರಾಣದಂತೆಯೇ ಈ ಪುರಾಣವೂ ನಾರಾಯಣನೇ ಪರಬ್ರಹ್ಮ, ಪರತತ್ತ್ವ, ಪರಂಜ್ಯೋತಿ, ಪರಮೋತ್ತಮ, ದೇವತಾಸಾರ್ವಭೌಮ–ಎಂಬ ಅಭಿಪ್ರಾಯವನ್ನು ನಮ್ಮ ಮನಸ್ಸಿನಲ್ಲಿ ಮುದ್ರಿಸುತ್ತದೆ. ಆದರೆ ಬ್ರಹ್ಮ ಮತ್ತು ರುದ್ರರನ್ನೂ ಪರಮಾತ್ಮನ ರೂಪಗಳೆಂದೇ ಘೋಷಿಸುತ್ತದೆ. "ಸ್ಥಿತ್ಯಾದಯೇ ಹರಿವಿರಿಂಚಿ–ಹರೇತಿ ಸಂಜ್ಞಾಃ" (I-2-24) ಅನೇಕ ಕಡೆಗಳಲ್ಲಿ ಮಹಾದೇವನ ಮಾಹಾತ್ಮ್ಯವನ್ನು ಅತ್ಯಂತಭಾವಪೂರ್ಣವಾಗಿಯೇ ವರ್ಣಿಸುತ್ತದೆ. ಉದಾಹರಣೆಗೆ : ದಕ್ಷ ಯಜ್ಞದನಂತರ ದೇವತೆಗಳನ್ನು ಅನುಗ್ರಹಿಸುವ ದಕ್ಷಿಣಾಮೂರ್ತಿಯ ಸ್ವರೂಪ, ರೂಪ, ಗುಣ, ವೈಭವ, ಸಂಭಾಷಣೆಗಳು–ಚಿತ್ರಕೇತುವಿನ ಉಪಾಖ್ಯಾನದಲ್ಲಿ ಅಪಚಾರಮಾಡುವ ಚಿತ್ರಕೇತುವಿನ ಬಗೆಗೆ ಭಗವಂತನಾದ ಆ ಮಹಾದೇವನ ವರ್ತನೆ–ಕ್ಷೀರಸಮುದ್ರಮಥನಕಾಲದಲ್ಲಿ ಪ್ರಕಟವಾಗುವ ಆತನ ಅನ್ಯಾದೃಶವಾದ ಯೋಗಶಕ್ತಿ ಮತ್ತು ಲೋಕಕಾರುಣ್ಯ–ಮುಂತಾದ ಪ್ರಸಂಗಗಳನ್ನು ಇಲ್ಲಿ ಗಮನಿಸಬಹುದು. ತನಗೆ ಇಷ್ಟವಾಗಿರುವ ಪರಾದೇವತೆ ಯನ್ನು ಕೊಂಡಾಡುವ ಉತ್ಸಾಹದ ಭರದಲ್ಲಿ ಆ ಪರಮಾತ್ಮನ ಮೂರ್ತ್ಯಂತರವೇ ಆಗಿರುವ ಇತರ ಮಹಾದೇವತೆಗಳ ಬಗೆಗೆ ಕ್ಷುಲ್ಲಕವಾದ ಮಾತುಗಳನ್ನಾಡುವ ರೀತಿ-ನೀತಿಗಳು ಈ ಪುರಾಣರತ್ನದಲ್ಲಿ ಕಂಡುಬರು ವುದಿಲ್ಲ. ಇಂತಹ ವಿಷಯಗಳಲ್ಲಿ ಶ್ರೀಮದ್ಭಾಗವತವು ಪುರಾಣಗಳಲ್ಲೇ ಅನ್ಯಾದೃಶವಾದ ಪುರಾಣ.

## ಆಧ್ಯಾತ್ಮಿಕಮಹಾಕಾವ್ಯ

ಶ್ರೀಮದ್ಭಾಗವತದಲ್ಲಿ ವರ್ಣಿತವಾಗಿರುವ ಅನೇಕ ಉಪಾಖ್ಯಾನ, ಇತಿಹಾಸ ಮತ್ತು ಆಧ್ಯಾತ್ಮಿಕತತ್ತ್ವಗಳು ಇತರ ಅನೇಕಪುರಾಣಗಳಲ್ಲಿಯೂ ನಿರೂಪಿತವಾಗಿದ್ದರೂ ಕಾವ್ಯಗುಣಸಂಪತ್ತಿನಲ್ಲಿ ಶ್ರೀಮದ್ಭಾಗವತಕ್ಕೆ ಬೇರಾವ

ಪುರಾಣವೂ ಸಾಟಿಯಾಗಲಾರದು. ಶ್ರೀಮದ್ರಾಮಾಯಣವು ಪುರಾ ವೃತ್ತವಾದ ಆಖ್ಯಾನವಾಗಿರುವಂತೆಯೇ-ಆದಿಕಾವ್ಯವೂ, ಅನುಪಮಕಾವ್ಯವೂ ಆಗಿಲ್ಲವೇ? ಹಾಗೆಯೇ ಶ್ರೀಮದ್ಭಾಗವತವೂ ಲಕ್ಷಣಸಂಪನ್ನವಾದ ಪುರಾಣ ವಾಗಿರುವಂತೆಯೇ–ನಿರುಪಮವಾದ ದಾರ್ಶನಿಕಕಾವ್ಯವೂ ಆಗಿದೆಯೆಂಬು ದನ್ನು ಗಮನಿಸಬೇಕು. ಸಾಂಪ್ರದಾಯಿಕವಾಗಿ ಕಾವ್ಯದಲ್ಲಿರಬೇಕಾದ "ನಗರಾರ್ಣವಶೈಲರ್ತುವರ್ಣನೆ" ಮುಂತಾದ ಹದಿನೆಂಟು ವರ್ಣನೆಗಳೂ ಅದರಲ್ಲಿ ಕಂಗೊಳಿಸುತ್ತಿವೆ ; ಕಾವ್ಯದ ಸ್ವಾಭಾವಿಕ ಅಂಗಗಳಾಗಿ ಸಮುಚಿತ ಸ್ಥಾನಗಳಲ್ಲಿ ಬೆಳಗುತ್ತಿವೆ. ಎಲ್ಲಕ್ಕೂ ಮಿಗಿಲಾಗಿ ಯದುಕುಲಮಹೋದಧಿ ಯಲ್ಲಿ ಕ್ರೀಡಿಸಿದ ಪರಮಾನಂದಮಯಚಿನ್ಮೂರ್ತಿ–ಶ್ರೀಕೃಷ್ಣಪರಮಾತ್ಮನು ನಮ್ಮ ಮನೋಮಹೋದಧಿಯಲ್ಲಿ ಸದಾ ವಿಹರಿಸುತ್ತಿರುವಂತೆ ಆತನ ದಿವ್ಯ ವ್ಯಕ್ತಿತ್ವವನ್ನು ಚಿತ್ರಿಸಿರುವುದರಲ್ಲಿ ಈ ಭಾಗವತದ ಅದ್ವಿತೀಯತೆಯನ್ನು ನಾವು ನೋಡುತ್ತೇವೆ. ಹತ್ತನೆಯ ಸ್ಕಂಧದ ಇಪ್ಪತ್ತನೆಯ ಅಧ್ಯಾಯದಲ್ಲಿ ಬರುವ ಇಡೀ ಋತುವರ್ಣನೆಯು ಎಣೆಯಿಲ್ಲದ ಆಧ್ಯಾತ್ಮಿಕಕಾವ್ಯಗುಣ ಸಂಪತ್ತಿನ ಗಣಿಯಾಗಿದೆ. ಉದಾಹರಣೆಗೆ : 'ಧಾರಾಕಾರವಾದ ಜಡಿಮಳೆಯು ಹೊಡೆಯುತ್ತಿದ್ದರೂ ಗಿರಿಗಳು ವ್ಯಥೆಪಡಲಿಲ್ಲ. ವ್ಯಸನಗಳ ಏಟುಗಳಿಗೆ ಎಷ್ಟೇ ಸಿಲುಕಿದರೂ ಭಗವಂತನ ಅನನ್ಯಭಕ್ತರು ವ್ಯಥೆಗೆ ಒಳಗಾಗುವುದಿಲ್ಲವಷ್ಟೇ!'

**ಗಿರಯೋ ವರ್ಷಧಾರಾಭಿರ್ಹನ್ಯಮಾನಾ ನ ವಿವ್ಯಥುಃ ।**
**ಅಭಿಭೂಯಮಾನಾ ವ್ಯಸನೈರ್ಯಥಾಧೋಕ್ಷಜಚೇತಸಃ ॥೧೫॥**

"ಶಾಂತರಾದ ಮುನಿಗಳು ಸರ್ವಕಾಮನೆಗಳನ್ನೂ ತ್ಯಾಗಮಾಡಿದ್ದರಿಂದ ದೋಷಮುಕ್ತರಾಗಿ ಬೆಳಗುವಂತೆ ಆ ಶರತ್ಕಾಲದಲ್ಲಿ ಮೋಡಗಳು ತಮ್ಮ ಸರ್ವಸ್ವವನ್ನೂ ಕಳೆದುಕೊಂಡಿದ್ದರಿಂದ ಶುಭ್ರಕಾಂತಿಯಿಂದ ಬೆಳಗತೊಡ ಗಿದುವು."

**ಸರ್ವಸ್ವಂ ಜಲದಾ ಹಿತ್ವಾ ವಿರೇಜುಃ ಶುಭ್ರವರ್ಚಸಃ ।**
**ಯಥಾ ತ್ಯಕ್ತೈಷಣಾಃ ಶಾನ್ತಾಃ ಮುನಯೋ ಮುಕ್ತಕಿಲ್ಬಿಷಾಃ ॥**

ಇಲ್ಲಿ ಉಪಮೆಯ ಅನ್ಯಾದೃಶಸೌಂದರ್ಯ ಮತ್ತು ಆಧ್ಯಾತ್ಮಿಕತತ್ತ್ವ ಚಿಂತನೆಗಳನ್ನು ಮಾತ್ರವಲ್ಲದೇ–ಮುಂಬರುವ ಯೋಗಪುರುಷ ಶ್ರೀಕೃಷ್ಣನ ಶುದ್ಧವಾದ ರಾಸಕ್ರೀಡೆಯೆಂಬ ಆತ್ಮಕ್ರೀಡೆಗೆ ಎಂತಹ ಶುದ್ಧವಾದ ಹಿನ್ನೆಲೆ ಯನ್ನು ಋಷಿಕವಿಗಳೂ ಒದಗಿಸಿದ್ದಾರೆ!

ನಲವತ್ತಮೂರನೆಯ ಅಧ್ಯಾಯದಲ್ಲಿ ಮಲ್ಲರಂಗಕ್ಕೆ ಅಣ್ಣನೊಡನೆ ಬಂದ ಮಾಧವನ ವರ್ಣನೆಯನ್ನು ನೋಡಿ! "ರಂಗನಾಥನು ಅಗ್ರಜ ಸಹಿತನಾಗಿ ರಂಗಕ್ಕೆ ಬಂದನು. ಮಲ್ಲರಿಗೆ ಮಹಾವಜ್ರ, ನರರಿಗೆಲ್ಲಾ ನರವರ, ಸ್ತ್ರೀಯರಿಗೆ ಮೂರ್ತಿಮತ್ತಾದ ಮನ್ಮಥ, ಗೋವಳರಿಗೆ ನೆಚ್ಚಿನ ನಂಟ, ದುಷ್ಟಭೂಪತಿಗಳಿಗೆ ತಕ್ಕ ಶಿಕ್ಷಕ, ತಂದೆ-ತಾಯಿಗಳಿಗೆ ಮುದ್ದು ಮಗು, ಭೋಜಪತಿ ಕಂಸನಿಗೆ ಮೃತ್ಯು, ಅಜ್ಞಾನಿಗಳ ದೃಷ್ಟಿಗೆ ಸ್ಥೂಲವಾದ ವಿರಾಜ, ಯೋಗಿಗಳಿಗೆ ಪರತತ್ತ್ವ ಮತ್ತು ವೃಷ್ಣಿಗಳಿಗೆ ಪರದೇವತೆಯೆಂದು ಪ್ರಸಿದ್ಧನಾದ ಮಧುಸೂದನ."

**"ಮಲ್ಲಾನಾಮಶನಿರ್ನೃಣಾಂ ನರವರಃ ಸ್ತ್ರೀಣಾಂ ಸ್ಮರೋ ಮೂರ್ತಿಮಾನ್ ಗೋಪಾನಾಂ ಸ್ವಜನೋಽಸತಾಂ ಕ್ಷಿತಿಭುಜಾಂ ಶಾಸ್ತಾ ಸ್ವಪಿತ್ರೋಃ ಶಿಶುಃ । ಮೃತ್ಯುರ್ಭೋಜಪತೇಃ ವಿರಾಡವಿದುಷಾಂ ತತ್ತ್ವಂ ಪರಂ ಯೋಗಿನಾಂ ವೃಷ್ಣೀನಾಂ ಪರದೇವತೇತಿ ವಿದಿತೋ ರಙ್ಗಂ ಗತಃ ಸಾಗ್ರಜಃ॥"**

ಇಂತಹ ಉದಾಹರಣೆಗಳು ನೂರಾರು ಈ ಕಾವ್ಯರತ್ನದಲ್ಲಿ.

ಶ್ರೀಕೃಷ್ಣ-ಗೋಪೀರಾಸಕ್ರೀಡೆಯನ್ನು ಕುರಿತು ಕುಚೋದ್ಯಮಾಡುವ ಇಂದ್ರಿಯಜೀವಿಗಳಿಗೆ ಶುಕಮಹರ್ಷಿಗಳೇ ತಕ್ಕ ಉತ್ತರ ಕೊಟ್ಟಿದ್ದಾರೆ. ಆ ದಿವ್ಯಕ್ರೀಡೆಯಲ್ಲಿ ಶ್ರೀಕೃಷ್ಣನ ಸೌರತವು ಆತ್ಮೈಕನಿಷ್ಠವಾಗಿತ್ತು. **"ಆತ್ಮನ್ಯವರುದ್ಧಸೌರತ"** ಗೋಪಿಕಾಬಾಲಕಿಯರು **"ನ ಖಲು ಗೋಪಿಕಾ ನಂದನೋ ಭವಾನ್ ಅಖಿಲದೇಹಿನಾಮನ್ತರಾತ್ಮದೃಕ್"** – ಎಂಬಂತೆ "ಆಗ ಶ್ರೀಕೃಷ್ಣನನ್ನು ಎಲ್ಲ ಜೀವಿಗಳ ಸ್ವಾಮೀ ಅಂತರ್ಯಾಮೀ" ಎಂದು ಅರಿತಿದ್ದರು. ಇದಲ್ಲದೇ ಶ್ರೀಕೃಷ್ಣನು ಅಗ್ನಿಸ್ವರೂಪಿ, ಆತನಲ್ಲಿ ಯಾವುದನ್ನು ಸಮರ್ಪಿಸಿದರೂ ಇದು ಅಗ್ನಿರೂಪವನ್ನೇ ಹೊಂದುತ್ತದೆ. ಆತನು ನಿತ್ಯ-ಶುದ್ಧ-ನಿರಂಜನ-ವಿಶ್ವರೂಪೀ–ಎಂಬುದನ್ನೂ ಚೆನ್ನಾಗಿ ಪ್ರಮಾಣಿಸುತ್ತಾರೆ. ಶುಕಮುನಿಗಳು. ಗೋಪೀಗೀತ, ಯುಗ್ಮಗೀತ, ಶ್ರುತಿಗೀತ–ಮುಂತಾದವುಗಳ ಗೀತಮಾಧುರ್ಯ – ತತ್ತ್ವಗಾಂಭೀರ್ಯಗಳು ಪ್ರಸಿದ್ಧವೇ ಆಗಿವೆ. ಶ್ರೀನೃಸಿಂಹದೇವರು ರೌದ್ರರಸವನ್ನು ಸುರಿಸುತ್ತಿರುವ ವಾತಾವರಣ

ದಲ್ಲೂ ಬ್ರಹ್ಮದೇವರನ್ನು ಕುರಿತು "ಓ ಪದ್ಮಜ! ಇನ್ನು ಮುಂದೆ ನೀನು ಕ್ರೂರಪ್ರಕೃತಿಗಳಾದ ಅಸುರರಿಗೆ ಇಂತಹ ವರವನ್ನು ಕೊಡಬಾರದು. ಅದು ಸರ್ಪಗಳಿಗೆ ಅಮೃತವನ್ನೆರೆದಂತಾಗುವುದು." (VII 10-30) ಎಂದು ಬ್ರಹ್ಮದೇವರಿಗೆ ನೀಡುವ ಎಚ್ಚರಿಕೆಯ ಮಾತು ತಿಳಿಹಾಸ್ಯದಿಂದಲೂ ರಮಣೀಯವಾಗಿದೆ. ಶೃಗಾಲವಾಸುದೇವನ ಕೃತ್ರಿಮವಾಸುದೇವವೇಷ ಮತ್ತು ಶ್ರೀಕೃಷ್ಣನು ಆತನಿಗೆ ಕಳುಹಿಸುವ ಸಂದೇಶಗಳು ಹಾಸ್ಯದ ಹೊನಲನ್ನು ಹರಿಸುತ್ತವೆ. ಪಾಪಿಷ್ಠತಮನಾಗಿದ್ದರೂ ಭಗವನ್ನಾಮಬಲದಿಂದ ಭವವನ್ನು ದಾಟಿದ ಅಜಾಮಿಳನ ಕಥೆ, ಬಾಲಕ ಭಕ್ತವರೇಣ್ಯರಾದ ಧ್ರುವ-ಪ್ರಹ್ಲಾದರ ಕಥೆ, ಅಸುರರಾಗಿದ್ದರೂ ಅಸುರತ್ವವನ್ನು ಗೆದ್ದು ದೇವತೆಗಳನ್ನೂ ನಾಚಿಸಿದ ಬಲಿ-ವೃತರ ಕಥೆ, ದರಿದ್ರತಮನಾಗಿದ್ದರೂ ಲಕ್ಷ್ಮೀಪತಿಯಿಂದ ತನ್ನ ಮಿತ್ರನೆಂದು ಸಂಭಾವಿಸಲ್ಪಟ್ಟ ಕುಚೇಲನ ಕಥೆ, ತಾನು ಹಸಿದಿದ್ದರೂ ದುಃಖಸಂತಪ್ತರಾದ ಎಲ್ಲ ಜೀವಿಗಳ ಶೋಕನಾಶನವೇ ತಾನು ಬೇಡುವ ಏಕಮಾತ್ರವರ—ಎಂದು ಪ್ರಾರ್ಥನೆ ಮಾಡಿದ ರಂತಿದೇವನ ಕಥೆ—ಈ ಯಾವುದನ್ನೂ ಮರೆಯಲಾಗುವುದಿಲ್ಲ. ಪುರಂಜನೋಪಾಖ್ಯಾನದಂತಹ ಮಹಾರೂಪಕ ಕಥೆಯು ವಿಶ್ವಸಾಹಿತ್ಯದಲ್ಲೇ ಅತಿದುರ್ಲಭ.

ಪುರಾಣದಲ್ಲಿ ಪ್ರಧಾನತಮವಾಗಿ ವರ್ಣನೀಯವಾಗಿರುವುದು ಶ್ರೀಕೃಷ್ಣಾವತಾರದ ಕಥೆ. ಆದರೂ ಶ್ರೀಕಪಿಲ, ಶ್ರೀನೃಸಿಂಹ, ಶ್ರೀವರಾಹ—ಮುಂತಾದ ಇತರ ಅವತಾರಗಳ ಕಥೆಗಳೂ ಭಕ್ತರಿಗೆ ಅತ್ಯಂತ ಆಪ್ಯಾಯಮಾನವಾಗುವಂತೆ ವರ್ಣಿತವಾಗಿವೆ. ಮುಂದಿನ ಕವಿಗಳು ಮತ್ತು ಭಕ್ತರು ನೃಸಿಂಹಾವತಾರವನ್ನು ಕುರಿತು ವರ್ಣಿಸುವಾಗ ಅವರಿಗೆ ಶ್ರೀಮದ್ಭಾಗವತವು ವರ್ಣಿಸುವ ನೃಸಿಂಹವತಾರಚರಿತ್ರವೇ ಸ್ಫೂರ್ತಿದಾಯಕವಾಗಿರುವುದು ಕಂಡುಬರುತ್ತದೆ. ನಾಯಕನಾದ ಶ್ರೀಕೃಷ್ಣನು ದೇವದೇವನಾಗಿ ದೇವ-ಮಾನವನಾಗಿ, ಮಾನವ-ದೇವನಾಗಿ, ದಿವಿ-ಭುವಿಗಳ ಸಂಗಮದೇವನಾಗಿ ಅದ್ಭುತವಾದ ವೈವಿಧ್ಯಗಳಿಂದ ವರ್ಣಿತನಾಗಿದ್ದಾನೆ. ದಶಮಸ್ಕಂಧದ ಪೂರ್ವಾರ್ಧದಲ್ಲಿ ಬರುವ ಶ್ರೀಕೃಷ್ಣನ ಬಾಲ್ಯ ಮತ್ತು ಪೌಗಂಡಾವಸ್ಥೆಗಳ ದಿವ್ಯಲೀಲೆಗಳು—ಯೋಗೇಶ್ವರನಾದ ಆತನ ಅಧಿಕಾರಕ್ಕೆ ಮಾತ್ರ ಸೇರಿದ್ದರೂ—ಉತ್ತರಾರ್ಧದಲ್ಲಿ ರೂಪಿತವಾಗಿರುವ ಆತನ ಚರಿತ್ರವು ನರಶ್ರೇಷ್ಠರ ಆದರ್ಶಕ್ಕೆ

ಅನುಗ್ರಹಮಾಡುತ್ತದೆ. ಆತನು ದೇವರ್ಷಿನಾರದರಿಗೆ ಹೇಳುವ ಈ ಪ್ರಮಾಣಭೂತವಾದ ಮಾತುಗಳು ಆ ಭವ್ಯಚರಿತ್ರಕ್ಕೆ ಕೈಗನ್ನಡಿಯಾಗಿದೆ :

**ಬ್ರಹ್ಮನ್ ಧರ್ಮಸ್ಯ ವಕ್ತಾಹಂ ಕರ್ತಾ ತದನುಮೋದಿತಾ ।**
**ತಚ್ಛಿಕ್ಷಯನ್ ಲೋಕಮಿಮಂ ಆಸ್ಥಿತಃ ಪುತ್ರ ಮಾ ಖಿದಃ ॥**

(X-69-40)

"ಓ ಬ್ರಹ್ಮರ್ಷಿಯೇ! ಮಗು ನಾರದ! ಖೇದಗೊಳ್ಳಬೇಡ. ನಾನು ಧರ್ಮವನ್ನು ಹೇಳುವವನು, ಆಚರಿಸುವವನು, ಅನುಮೋದಿಸುವವನು ಮತ್ತು ಧರ್ಮಶಿಕ್ಷಣವನ್ನು ನೀಡುವುದಕ್ಕಾಗಿಯೇ ಈ ಲೋಕಕ್ಕೆ ಬಂದಿರುವವನು."

ವೇದಾಂತಸೂತ್ರಕಾರರು ಹೇಳುವ '**ಓಂ ಧರ್ಮಸ್ಯ ಸೇತುಃ ಓಂ**' ಎಂಬ ಸೂತ್ರಾರ್ಥವೇ ಇಲ್ಲಿ ಚಿತ್ರಿತವಾಗಿರುವುದು ಗಮನೀಯ.

ಈ ರಸಮಯಕಾವ್ಯದಲ್ಲಿ ಆತನು ಶೃಂಗಾರಾದಿ ನವರಸಗಳಿಗೂ ಕೇಂದ್ರವಾಗಿದ್ದಾನೆ. ಹತ್ತನೆಯ ಮತ್ತು ಹನ್ನೊಂದನೆಯ ಸ್ಕಂಧಗಳಲ್ಲಿ ಧ್ಯಾನಮಗ್ನನಾಗಿರುವ ಶ್ರೀಕೃಷ್ಣನ ಶ್ರೀಮೂರ್ತಿಯ ವರ್ಣನೆಯು ಶಾಂತ ರಸಕ್ಕೆ ಪರಮಾಶ್ರಯವಾಗಿದೆ. ಎಲ್ಲ ರಸಗಳಿಗಿಂತಲೂ ಅತಿಶಯವಾದ ರಸವು 'ಭಕ್ತಿರಸ' ಎಂದು ಭಕ್ತಿಶಾಸ್ತ್ರಗಳು ನಿರೂಪಣೆ ಮಾಡುತ್ತರೆ. ಈ ನಿರೂಪಣೆಗೆ ಸ್ಫೂರ್ತಿಯ ಚಿಲುಮೆ ಶ್ರೀಮದ್ಭಾಗವತವು ಪ್ರತಿಪಾದಿಸುವ ನವವಿಧವಾದ ಭಕ್ತಿಗಳ ದರ್ಶನ. ಭಾಗವತವು ಭಕ್ತಿಗೀತೆಗಳ ಸಮುದ್ರ. ಇದರಲ್ಲಿ ಬರುವ ನಾನಾಕಥೆಗಳು–ತತ್ವ ಮತ್ತು ಭಕ್ತಿಸೋತ್ರಗಳಿಗೆ ಹಿನ್ನೆಲೆ ಮಾತ್ರವೇ. ಗ್ರಂಥವು ಸುಭಾಷಿತರತ್ನಗಳ ಭಾಂಡಾಗಾರವೂ ಆಗಿದೆ. ಪಾತ್ರಗಳ ಮನೋವಿಶ್ಲೇಷಣ ದೃಷ್ಟಿಯಿಂದಲೂ ಇದು ಉತ್ತಮವಾದ ಖಾವ್ಯ. ಇದನ್ನು ನಾಯಕ ಪ್ರತಿನಾಯಕರಲ್ಲಿ ಮಾತ್ರವಲ್ಲದೇ ಸಾಧಾರಣ ಪಾತ್ರಗಳಲ್ಲಿ ಗಮನಿಸಬಹುದು. ಬಲರಾಮದೇವರ ಚರಿತ್ರೆಯು ಹಾಲಿನಲ್ಲಿ ಸಕ್ಕರೆ ಸೇರಿದಂತೆ ಶ್ರೀಕೃಷ್ಣನ ಚರಿತ್ರೆಯಲ್ಲಿ ಒಂದಾಗಿ ಕಲೆತಿದೆ.

ಇಂತಹ ಅಧ್ಯಾತ್ಮ ಕಾವ್ಯರತ್ನವು–ಮುಂದೆ ಕಂಸವಧ, ಬಲಿಬಂಧ, ಕೃಷ್ಣ ಕರ್ಣಾಮೃತ, ಗೀತಗೋವಿಂದ, ಯಾದವಾಭ್ಯುದಯ, ರುಕ್ಮಿಣೀಶ ವಿಜಯ, ಶಿಶುಪಾಲವಧ, ಭಾಗವತಚಂಪೂ, ನೃಸಿಂಹಚಂಪೂ–ಮುಂತಾದ ನೂರಾರು

ಕಾವ್ಯಗಳಿಗೂ, ಸಂತಶ್ರೇಷ್ಠರಾದ ಆಳ್ವಾರರುಗಳ, ಆಚಾರ್ಯರ ಮತ್ತು ಹರಿದಾಸರ ಸ್ತೋತ್ರಸಾಹಿತ್ಯಕ್ಕೂ, ಶ್ರೀಮದ್ಭಾಗವತದ ಭಾಷಾನುವಾದ ಗಳಿಗೂ ಅಕ್ಷಯವಾದ ಆಕರವಾಗಿರುವುದು ಆಶ್ಚರ್ಯಕರವೇನೂ ಅಲ್ಲ.

ಭಾಗವತದಲ್ಲಿ ಅಪಾಣಿನೀಯಪ್ರಯೋಗಗಳು ಪುಷ್ಕಳವಾಗಿವೆ. ಆದರೆ ಪುರಾತನವಾದ ಆರ್ಷಗ್ರಂಥಗಳಲ್ಲಿ ಸಹಜವಾಗಿರುವ ಈ ವಿಷಯವು ಅದರ ಗೌರವಕ್ಕೆ ಕುಂದು ತರುವುದಿಲ್ಲ. ಗ್ರಂಥದಲ್ಲಿ ನಾವು ಕಾಣುವ 'ನಾರಿಕೇಳ ಪಾಕ', 'ಆರಭಟೀವೃತ್ತಿ'ಗಳೂ, ವೈದಿಕಛಂದಸ್ಸು ಮತ್ತು ಶಬ್ದಗಳ ಪ್ರಯೋಗಗಳೂ ಅದು ಪ್ರತಿಪಾದಿಸುವ ವಿಷಯಗಳ ಘನತೆ-ಗಾಂಭೀರ್ಯ ಗಳಿಗೆ ಅನುಗುಣವೇ ಆಗಿವೆ. "The Krishna legend has to sound vedic because it was vedic. There is a similar basing back to the most ancient sources to make the old foundation support the new edifice... The high sounding language gave approprivate notice of its vedic orthodoxy" ಎಂದು ಪ್ರೊಫೆಸರ್ ಬೂಟೆನೆನ್‌ರವರು ಇದನ್ನು ಗಮನಿಸಿರುವುದು ಉಚಿತವಾಗಿದೆ.

## ಪಾರಮಹಂಸ್ಯಸಂಹಿತೆ

ಶ್ರೀಮದ್ಭಾಗವತವು ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಹೇಳುತ್ತದೆ. ಧರ್ಮಾರ್ಥ-ಕಾಮಪ್ರಧಾನವಾದ ಗೃಹ ಸ್ಥಾಶ್ರಮದ ಮಹಿಮೆಯನ್ನೂ ಅನೇಕ ಕಡೆ ನಿರೂಪಿಸುತ್ತದೆ. ಗೃಹಸ್ಥಾಶ್ರಮ ದಲ್ಲಿದ್ದುಕೊಂಡೇ ಭಗವದ್ಭಕ್ತಿ-ಜ್ಞಾನಗಳ ಬಲದಿಂದ ಮುಕ್ತಿಯನ್ನು ಪಡೆದ ಮಹಾತ್ಮರನೇಕರ ಕಥೆಗಳನ್ನು ಹೇಳುತ್ತದೆ. ಮೊದಲಿಗೆ ಕಥಾನಾಯಕನಾದ ಶ್ರೀಕೃಷ್ಣಪರಮಾತ್ಮನೇ ಅವ್ಯಾಕೃತಗೃಹಸ್ಥ. ತನ್ನ ಅವತಾರಲೀಲೆಯಲ್ಲಿ ಅನೇಕ ಮಡದಿಯರೊಡನೆ ಗೃಹಸ್ಥಧರ್ಮದಲ್ಲಿದ್ದರೂ ಆತನು **"ಯೋಗರತೋ ವಾ ಭೋಗರತೋ ವಾ.... ಯಸ್ಯ ಬ್ರಹ್ಮಣಿ ರಮತೇ ಚಿತ್ತಂ ನಂದತಿ ನಂದತಿ ನಂದತ್ಯೇವ"**–ಎಂಬಂತೆ ಹೇಗೆ ನಿರ್ಲಿಪ್ತನಾದ ಮಹಾಯೋಗಿ ಯಾಗಿದ್ದನೆಂಬುದು ಇಲ್ಲಿ ಮುದ್ರಿತವಾಗಿದೆ. ಗೃಹಸ್ಥರ ಪವಿತ್ರವಾದ ಸದ್ಧರ್ಮಗಳನ್ನು ಆಚರಿಸಿ ಬೋಧಿಸಿದ ಯೋಗೀಶ್ವರ ಆತ. **"ಇತ್ಯಾಚರನ್ತಂ**

**ಸದ್ಧರ್ಮಾನ್ ಪಾವನಾನ್ ಗೃಹಮೇಧಿನಾಮ್**" (X-89-41) ಪ್ರತಿದಿನವೂ ಬ್ರಾಹ್ಮಮುಹೂರ್ತದಲ್ಲಿಯೇ ಎದ್ದು ಆತನು ದಿನಚರ್ಯೆಯನ್ನು ಪ್ರಾರಂಭಮಾಡುವುದು ಆತ್ಮಧ್ಯಾನದಿಂದ–

**ಬ್ರಾಹ್ಮೇ ಮುಹೂರ್ತ ಉತ್ಥಾಯ ವಾರ್ಯುಪಸ್ಪೃಶ್ಯ ಮಾಧವಃ I**
**ದಧ್ಯೌ ಪ್ರಸನ್ನಕರಣಃ ಆತ್ಮಾನು ತಮಸಃ ಪರಮ್ II** (X-70-4)

ಅನಂತರ ಸ್ನಾನ, ಸಂಧ್ಯಾವಂದನ, ಹೋಮ, ತರ್ಪಣ, ದಾನ, ಮಂಗಲಾಲಂಕರಣ, ಸುಧರ್ಮಾಸಭೆಯಲ್ಲಿ ಮಂತ್ರಾಲೋಚನೆ, ಸಂಗೀತ ಕಲೆಗಳ ಸೇವನೆ, ಪುಣ್ಯಕಥಾಶ್ರವಣ–ಇತ್ಯಾದಿಗಳು ಆತನ ಆಹ್ನಿಕದಲ್ಲಿ ಸೇರು ತ್ತಿದ್ದುವು. ದೇವರ್ಷಿ ನಾರದರು ವೀಕ್ಷಿಸುವ ಆ ವಿಶ್ವರೂಪೀ ವಿಶ್ವೇಶ್ವರನ ಗೃಹಚರ್ಯಾವಿಲಾಸವೂ ಅತ್ಯದ್ಭುತವಾಗಿದೆ. ಆತನ ಭಕ್ತಶ್ರೇಷ್ಠರಾದ ಅಂಬರೀಷ-ಉದ್ಧವಾದಿಗಳೂ ಗೃಹಸ್ಥೋತ್ತಮರೇ. ಮಿತ್ರಮಣಿಯಾದ ಆ ಶ್ರೀಭಗವಂತನಿಂದ ಅದ್ಭುತವಾದ ಐಶ್ವರ್ಯವನ್ನು ಪಡೆದ ಕುಚೇಲನೂ ತನ್ನ ಧರ್ಮಪತ್ನಿಯೊಡನೆ 'ಆಸಕ್ತನಾಗಿ ಸುಖವನ್ನನುಭವಿಸುವ' ಸದ್ಗೃಹಸ್ಥನೇ. "**ವಿಷಯಾನ್ ಜಾಯಯಾತ್ಯಕ್ಷ್ಯನ್ ಬುಭುಜೇ ನಾತಿಲಮ್ಪಟಃ**" (X-81-38) ಈ ವರ್ಣನೆಯು ಯಾಜ್ಞವಲ್ಕ್ಯಸ್ಮೃತಿಯು ಹೇಳುವ "**ಶ್ರಾದ್ಧಕೃತ್ ಸತ್ಯವಾದೀ ಚ ಗೃಹಸ್ಥೋಽಪಿ ವಿಮುಚ್ಯತೇ**" – ಎಂಬ ಆದರ್ಶಕ್ಕೆ ಅನುಗುಣವಾಗಿದೆ. ಏಕಾಂತಭಕ್ತನು ಗೃಹಸ್ಥನಾಗಿದ್ದರೂ ಶ್ರೇಷ್ಠನೇ. ಆದರೂ ಶ್ರೀಮದ್ಭಾಗವತಕ್ಕೆ ಪ್ರಿಯವಾದುದು ಸರ್ವಸಂಗ ಪರಿತ್ಯಾಗ ಮತ್ತು ಪರಮವೈರಾಗ್ಯಗಳಿಂದ ಕೂಡಿದ ಐಕಾಂತಿಕಧರ್ಮವೇ. ಶ್ರೀಕೃಷ್ಣಪರಮಾತ್ಮನು '**ಅಕಿಂಚನವಿತ್ತ**'. ಋಷಭದೇವರು, ಜಡಭರತ ನಾರದರು, ದತ್ತಾತ್ರೇಯರು–ಎಲ್ಲರೂ ಪರಮಹಂಸಧರ್ಮವನ್ನೇ ಎತ್ತಿ ಹೇಳುತ್ತಾರೆ. "**ಧರ್ಮಸ್ಯ ಹ್ಯಾಪವರ್ಗ್ಯಸ್ಯ**" ಎಂಬಂತೆ ಧರ್ಮದ ಫಲವು ಮೋಕ್ಷವೇ. "**ಜನಯತ್ಯಾಶು ವೈರಾಗ್ಯಂ ಜ್ಞಾನಂ ಚ ಯದಹೈತುಕಮ್**" ಎಂಬಂತೆ ಭಕ್ತಿಯ ಫಲವೂ ವೈರಾಗ್ಯ ಮತ್ತು ಜ್ಞಾನಗಳೇ.

ಶ್ರೀಮದ್ಭಾಗವತವು ವೇದ, ಉಪನಿಷತ್ತು ಮತ್ತು ಭಗವದ್ಗೀತೆಗಳ ಕಥಾರೂಪವಾದ ಭಾಷ್ಯವೆಂದೂ ಹೇಳಬಹುದು. ಕೆಲವು ಕಡೆಗಳಲ್ಲಿ ಆ

ಮಂತ್ರಗಳ ಸಾಕ್ಷಾದ್ಭಾಷ್ಯಗಳನ್ನೂ ಇಲ್ಲಿ ನೋಡುತ್ತೇವೆ. ಎರಡನೇ ಸ್ಕಂಧವನ್ನು ಅಲಂಕರಿಸಿರುವ 'ಚತುಃಶ್ಲೋಕೀ ಭಾಗವತವು' ವೈದಿಕನಾಸದೀಯ ಸೂಕ್ತ ಮತ್ತು ತೈತ್ತರೀಯಶ್ರುತಿಗಳ ಸಾರವೇ ಆಗಿದೆ. ವಿರಾಟ್‌ಸ್ವರೂಪದ ವರ್ಣನೆಯಲ್ಲಿ ಬೆಳಗುತ್ತಿರುವ ಪುರುಷಸೂಕ್ತಭಾಷ್ಯವು ಸ್ಪಷ್ಟವೇ ಆಗಿದೆ. ಶ್ರೀಕೃಷ್ಣನು ಉದ್ಧವನಿಗೆ ಉಪದೇಶಮಾಡುವ ಭಾಗವತಧರ್ಮ ನಿರೂಪಣೆಯಲ್ಲಿ ಭಗವದ್ಗೀತೆಯ ವಿಭೂತಿಯೋಗವು ಸ್ಪಷ್ಟವಾಗಿಯೇ ಘೋಷಿತವಾಗಿದೆ. ಕುರುಕ್ಷೇತ್ರದಲ್ಲಿ ಶೋಕ-ಮೋಹಗಳ ಮಹೋದಧಿಯಲ್ಲಿ ಮುಳುಗಿದ್ದ ಅರ್ಜುನನಿಗೆ ತಾನು ಉಪದೇಶಮಾಡಿದ್ದು ಈ ಭಾಗವತಧರ್ಮವನ್ನೇ ಎಂದು ಭಗವಂತನೇ ಪ್ರತಿಜ್ಞೆಮಾಡುತ್ತಾನೆ.

**ಸ ತದಾ ಪುರುಷವ್ಯಾಘ್ರೋ ಯುಕ್ತ್ಯಾ ಮೇ ಪ್ರತಿಬೋಧಿತಃ ।**
**ಅಭ್ಯಭಾಷತ ಮಾಮೇವಂ ಯಥಾ ತ್ವಂ ರಣಮೂರ್ಧನಿ ॥**

(XI=16-18)

ಭಗವದ್ಗೀತೆಯಲ್ಲಿ ಹೇಳುವಂತೆಯೇ ಇಲ್ಲಿಯೂ ಮೋಕ್ಷವನ್ನು ಹೊಂದುವುದಕ್ಕೆ ಪ್ರಧಾನವಾಗಿ ಜ್ಞಾನಯೋಗ-ಕರ್ಮಯೋಗ-ಭಕ್ತಿಯೋಗ ಗಳೆಂಬ ಮೂರು ಉಪಾಯಗಳನ್ನು ಭಗವಂತನು ಉಪದೇಶಮಾಡಿದ್ದಾನೆ. **"ಜ್ಞಾನಂ ಕರ್ಮ ಚ ಭಕ್ತಿಶ್ಚ ನೋಪಾಯೋಽನ್ಯೋಽಸ್ತಿ ಕುತ್ರಚಿತ್"** (XI-20-6) ಹೀಗೆ ಉಪನಿಷತ್ತು–ಗೀತೆಗಳ ಪರಮಾರ್ಥವನ್ನು ತಿಳಿಯ ಬಯಸುವವರು ಶ್ರೀಮದ್ಭಾಗವತವನ್ನು ಅನುಸಂಧಾನ ಮಾಡುವುದರಿಂದ ಬಹುಮಟ್ಟಿಗೆ ಕೃತಕೃತ್ಯರಾಗುತ್ತಾರೆ.

## ಅನುಬಂಧಚತುಷ್ಟಯ

ಯಾವುದಾದರೂ ಶಾಸ್ತ್ರಗ್ರಂಥದಲ್ಲಿ ನಮಗೆ ಪ್ರವೃತ್ತಿಯುಂಟಾಗ ಬೇಕಿದ್ದರೆ ಅದಕ್ಕೆ ಸಂಬಂಧಪಟ್ಟ ನಾಲ್ಕು ಮುಖ್ಯವಿಷಯಗಳನ್ನು ಮೊದಲು ಅವಶ್ಯವಾಗಿ ತಿಳಿಯಬೇಕು. ಅವುಗಳಿಗೆ 'ಅನುಬಂಧಚತುಷ್ಟಯ' ಎಂಬುದು ಪಾರಿಭಾಷಿಕವಾದ ಹೆಸರು. ವಿಷಯ, ಪ್ರಯೋಜನ, ಸಂಬಂಧ ಮತ್ತು ಅಧಿಕಾರಿ–ಎಂಬಿವೇ ಆ ನಾಲ್ಕು ಮುಖ್ಯವಿಷಯಗಳು. ಶ್ರೀಮದ್ಭಾಗವತದ ಅನುಬಂಧಚತುಷ್ಟಯ ಯಾವುದು? ಎಂದರೆ : ಆ ಗ್ರಂಥದ ಎರಡನೆಯ ಶ್ಲೋಕದಲ್ಲಿಯೇ ಇದಕ್ಕೆ ಉತ್ತರ ಸಿಕ್ಕುತ್ತದೆ.

**“ಧರ್ಮಃ ಪ್ರೋಜ್ಝಿತ.... ತಾಪತ್ರಯೋನ್ಮೂಲನಮ್’’**

ಈ ಭಾಗವತವು ಫಲಾಭಿಸಂಧಿಯೆಂಬ ಕೈತವದಿಂದ ರಹಿತವಾದ ಪರಮಧರ್ಮವನ್ನು ನಿರೂಪಿಸುತ್ತದೆ. ಅದು ಮಾತ್ಸರ್ಯರಹಿತರಾದ ಸತ್ಪುರುಷರ ಧರ್ಮ ; ಅದೇ ಭಾಗವತಧರ್ಮ (**“ಕಿಂ ವಾ ಭಾಗವತಾ ಧರ್ಮಾನ ಪ್ರಾಯೇಣ ನಿರೂಪಿತಾಃ । ಪ್ರಿಯಾಃ ಪರಮಹಂಸಾನಾಂ ತ ಏವ ಹ್ಯಚ್ಯುತಪ್ರಿಯಾಃ’’**)–ಎಂದು ಕರೆಯಲ್ಪಡುತ್ತದೆ. ಗ್ರಂಥದ ವಸ್ತು ಅಥವಾ ವಿಷಯವು ಪರಬ್ರಹ್ಮಪರಮಾತ್ಮಾ–**ಸತ್–ಚಿತ್–ಆನಂದ** ಸ್ವರೂಪನಾದ ನಾರಾಯಣ **“ವೇದ್ಯಂ ವಾಸ್ತವಮತ್ರ ವಸ್ತು ಶಿವದಂ’’** (ವಾಸ್ತವಂ ಎಂದರೆ ಸತ್‌ಸ್ವರೂಪ, **ವೇದ್ಯಂ** ಎಂದರೆ ಚಿತ್‌ಸ್ವರೂಪ, **ಶಿವದಂ** ಎಂದರೆ ಆನಂದಸ್ವರೂಪ.) **“ಅತ್ರಾನುವರ್ಣ್ಯತೇಽಭೀಕ್ಷ್ಣಂ ವಿಶ್ವಾತ್ಮಾ ಭಗವಾನ್ ಹರಿಃ’’**

ಗ್ರಂಥದ ಪ್ರಯೋಜನ ಮುಬ್ಬಗೆಯ ತಾಪಗಳ ಪರಿಹಾರ. “ತಾಪ-ತ್ರಯೋನ್ಮೂಲನಂ’’ ಎಂಬ ಪದವು ಇದನ್ನು ತಿಳಿಸುತ್ತದೆ. ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕಗಳೆಂಬ ಮೂರು ಬಗೆಯ ತಾಪಗಳ ಪರಿಹಾರ ಈ ಗ್ರಂಥದ ಅನುಸಂಧಾನದಿಂದ ಆಗುತ್ತದೆ. ಈ ದುಃಖತ್ರಯದ ಅಭಾವವೇ ಮೋಕ್ಷ ಎಂದು ಸಾಂಖ್ಯರು ಹೇಳುತ್ತಾರೆ. ಇಲ್ಲಿ “ಶಿವದಂ’’ ಎಂಬ ಪದವೂ ಇರುವುದರಿಂದ ಆನಂದಾನುಭವವನ್ನೂ ಜೊತೆಯಲ್ಲಿ ಸೇರಿಸಿಕೊಳ್ಳಬೇಕು. ಅಲ್ಲಿಗೆ ತಾಪತ್ರಯಪರಿಹಾರವಾಗಿ ಜ್ಞಾನಾನಂದಸ್ವರೂಪವನ್ನು ಪಡೆದುಕೊಳ್ಳುವುದು. ಮುಕ್ತಿಪ್ರಾಪ್ತಿ ಅಥವಾ ಭಗವತ್ಪ್ರಾಪ್ತಿ ಎಂಬುದು ಶ್ರೀಮದ್ಭಾಗವತದ ಪ್ರಯೋಜನ.

ಗ್ರಂಥದ ಅನುಸಂಧಾನಕ್ಕೆ ಅಧಿಕಾರಿಯು ಮಾತ್ಸರ್ಯರಹಿತನಾದ ಸಜ್ಜನ. ಆತನು ವಿರಕ್ತನೂ, ಜಿಜ್ಞಾಸುವೂ, ಮುಮುಕ್ಷುವೂ ಆಗಿರಬೇಕು. ಅಂತಹವನಿಗೂ–ತಿಳಿಯಲ್ಪಡಬೇಕಾದ ವಸ್ತುವಿಗೂ ಇರುವ ಸಂಬಂಧವೇ ಇಲ್ಲಿ ತಿಳಿಯಲ್ಪಡಬೇಕಾದ ಸಂಬಂಧ. ಅದನ್ನು ‘ಬೋದ್ಧ್ರ-ಬೋದ್ಧವ್ಯ ಭಾವ’ ಎಂದು ಕರೆಯಬಹುದು.

## ಕಾಲ ಮತ್ತು ಕರ್ತೃತ್ವ

ಶ್ರೀಮದ್ಭಾಗವತವು ಅಷ್ಟಾದಶ ಮಹಾಪುರಾಣಗಳಲ್ಲಿ ಒಂದು. ಇದನ್ನು

ರಚಿಸಿದವರು ಶ್ರೀಕೃಷ್ಣನ ಸಮಕಾಲಿಕರೇ ಆಗಿದ್ದ ಕೃಷ್ಣದ್ವೈಪಾಯನವ್ಯಾಸರು. ಅವರು ದ್ವಾಪರಯುಗದ ಅಂತ್ಯದಲ್ಲಿ ಶ್ರೀಮನ್ಮಹಾಭಾರತವನ್ನು ಬರೆದನಂತರ ಇದನ್ನು ಬರೆದರು–ಎಂದು ನಮ್ಮ ಸಂಪ್ರದಾಯವು ಹೇಳುತ್ತದೆ. ಅದಕ್ಕೆ ಶ್ರೀಮದ್ಭಾಗವತಾದಿ ಗ್ರಂಥಗಳೂ ಪ್ರಮಾಣವಾಗಿವೆ.*

ಆದರೆ ಆಧುನಿಕ ಇತಿಹಾಸಕಾರರು ಇಷ್ಟು ಪ್ರಾಚೀನಕಾಲವನ್ನು ಈ ಗ್ರಂಥಕ್ಕೆ ಕೊಡಲು ಇಷ್ಟಪಡುವುದಿಲ್ಲ. ಕ್ರಿ.ಶ. 5ನೆಯ ಶತಮಾನದಿಂದ 15ನೆಯ ಶತಮಾನದ ಮಧ್ಯೆ ಯಾವಾಗಲೋ ಯಾರೋ ಇದನ್ನು ರಚಿಸಿ ಇದರ ಕರ್ತೃತ್ವದ ಗೌರವವನ್ನು (ತಮ್ಮ ಔದಾರ್ಯದಿಂದಲೋ, ಗುರು ಭಕ್ತಿಯಿಂದಲೋ ಅಥವಾ ಹೇಗಾದರೂ ಗ್ರಂಥವು ಪ್ರಸಿದ್ಧಿಗೆ ಬರಲಿ ಎಂಬ ಆಸೆಯಿಂದಲೋ) ಕೃಷ್ಣದ್ವೈಪಾಯನವ್ಯಾಸರಿಗೆ ಕೊಟ್ಟಿದ್ದಾರೆ–ಎಂದು ಅವರು ಸಾರುತ್ತಾರೆ. ಇದರಲ್ಲಿ ದಕ್ಷಿಣದ ವೈಷ್ಣವಸಂತರಾದ ಆಳ್ವಾರರುಗಳ ಸೂಚನೆ ಇರುವುದರಿಂದ ಇದನ್ನು ಯಾವನೋ ದಕ್ಷಿಣಭಾರತೀಯ ಕವಿಯು ಬರೆದಿರಬೇಕೆಂದೂ ಅವರಲ್ಲಿ ಕೆಲವರು ಊಹಿಸುತ್ತಾರೆ. ಗ್ರಂಥದ ಕಾಲವು ಏನೇ ಆಗಿದ್ದರೂ, ಕರ್ತೃವು ಯಾರೇ ಆಗಿದ್ದರೂ–ಅದರಲ್ಲಿ ಅಮೂಲ್ಯವಸ್ತು ವಿರುವುದರಿಂದ ನಾವು ಅದನ್ನು ಮಾನ್ಯಮಾಡುತ್ತೇವೆ. ಆದರೂ ಅದು 10ನೆಯ ಶತಮಾನಕ್ಕಿಂತಲೂ ಈಚಿನದು ಎಂದು ಹೇಳುವುದು ಅಸಂಬದ್ಧ ವಾಗುತ್ತದೆ. ಏಕೆಂದರೆ : 1) 10ನೆಯ ಶತಮಾನದಲ್ಲಿದ್ದ ಅಭಿನವಗುಪ್ತನು ತನ್ನ ಭಗವದ್ಗೀತೆಯ ಭಾಷ್ಯದಲ್ಲಿ (ಅಧ್ಯಾಯ XIV-8) 'ಪ್ರಮಾದ' ಎಂಬ ಪದದ ಅರ್ಥವನ್ನು ವಿವರಿಸುವ ಸಂದರ್ಭದಲ್ಲಿ ಈ ಶ್ರೀಮದ್ಭಾಗವತದ ನಾಲ್ಕು ಶ್ಲೋಕಗಳನ್ನು ಉದ್ಧರಿಸಿರುತ್ತಾನೆ. ಶ್ರೀಮದ್ಭಾಗವತವು ಕೊಂಡಾ ಡುವ ಗಜೇಂದ್ರಮೋಕ್ಷದ ಪ್ರಸಂಗವನ್ನೂ ಮತ್ತೊಂದು ಕಡೆ ಉಲ್ಲೇಖಿಸಿರು ತ್ತಾನೆ. 2) 11ನೆಯ ಶತಮಾನದ ಪ್ರಾರಂಭಕಾಲದಲ್ಲಿ ನಮ್ಮ ದೇಶಕ್ಕೆ ಬಂದಿದ್ದ ಆಲ್ಬೆರೋನಿ** ಎಂಬುವನು ತಾನು ವಿಷ್ಣುಪುರಾಣವೇ ಮುಂತಾದ

---

* ಕೆಲವರು –ಭಾಗವತವು ಶುಕಶಾಸ್ತ್ರವೆಂದು ಕರೆಯಲ್ಪಟ್ಟಿರುವುದರಿಂದ–ಅದರ ಕರ್ತೃ ಶುಕಮುನಿಗಳು – ಎಂದು ಹೇಳುತ್ತಾರೆ. ಇದು ಸರಿಯಲ್ಲ. ಶುಕಶಾಸ್ತ್ರವೆಂದರೆ ಶುಕರು ಬೋಧಿಸಿದ ಶಾಸ್ತ್ರ – ಎಂದಷ್ಟೇ ಅರ್ಥ.

** 'Alberni's India' translated by E.C. Sachon part I page 130-131.

ಅಷ್ಟಾದಶಪುರಾಣಗಳ ನಾಮಧೇಯಗಳನ್ನು ಇಲ್ಲಿ ಕೇಳಿದುದಾಗಿಯೂ ಅದರಲ್ಲಿ ವಾಸುದೇವನ ಪರತ್ವವನ್ನು ಹೇಳುವ ಭಾಗವತದ ನಾಮಧೇಯವೂ ಇದ್ದಿತೆಂದೂ ಬರೆದಿರುತ್ತಾನೆ. (ಆದ್ದರಿಂದ ಅದು ಶ್ರೀಮದ್ಭಾಗವತವೇ ಹೊರತು ದೇವೀಭಾಗವತಲ್ಲ ಎಂಬುದು ಪ್ರಮಾಣಿತವಾಗುತ್ತದೆ.)

ಶ್ರೀಮದ್ಭಾಗವತದಲ್ಲಾಗಲೀ, ಹರಿವಂಶದಲ್ಲಾಗಲೀ, ವಿಷ್ಣುಪುರಾಣದಲ್ಲಾಗಲೀ–ರಾಧೆಯ ಹೆಸರು ಕಂಡುಬರುವುದಿಲ್ಲ. ಆರನೆಯ ಶತಮಾನಕ್ಕೆ ಸೇರಿದ ಗಾಥಾಸಪ್ತಶತಿಯಲ್ಲೂ ( ) ಎಂಟನೆಯ ಶತಮಾನಕ್ಕೆ ಸೇರಿದ ಭಟ್ಟನಾರಾಯಣನ ವೇಣೀಸಂಹಾರದಲ್ಲೂ (ಮಂಗಳಶ್ಲೋಕದಲ್ಲಿ), ಒಂಬತ್ತನೆಯ ಶತಮಾನಕ್ಕೆ ಸೇರಿದ ಆನಂದವರ್ಧನನ ಧ್ವನ್ಯಾಲೋಕದಲ್ಲೂ ರಾಧಾದೇವಿಯ ಹೆಸರನ್ನು ಕೇಳುತ್ತೇವೆ. ಶ್ರೀಮದ್ಭಾಗವತವು 'ರಾಧಾ' ಎಂದು ಮುಂದೆ ಪ್ರಸಿದ್ಧಿಗೆ ಬಂದಿರುವ ಕೃಷ್ಣಪ್ರಿಯತಮೆಯಾದ ಗೋಪಿಕಾಮಣಿಯ ನಾಮಧೇಯವನ್ನು ಎಲ್ಲಿಯೂ ಹೇಳಿರುವುದಿಲ್ಲ. ಆದುದರಿಂದ ಅದು ರಾಧೆಯ ಹೆಸರನ್ನು ಹೇಳುವ ಪ್ರಾಚೀನತಮಗ್ರಂಥವಾದ 6ನೆಯ ಶತಮಾನಕ್ಕೆ ಸೇರಿದ ಗಾಥಾಸಪ್ತಶತಿಗಿಂತಲೂ ಹಿಂದಿನದೇ ಆಗಿರಬೇಕು.

ಶ್ರೀಮದ್ಭಾಗವತವು ಯಾವ ಆಳ್ವಾರರುಗಳ ಹೆಸರನ್ನೂ ಎಲ್ಲಿಯೂ ಹೇಳಿಲ್ಲ. ಅಲ್ಲಿ ಉಲ್ಲೇಖಿತವಾಗಿರುವುದು ಕೆಲವು ಭಕ್ತಶ್ರೇಷ್ಠರ ಜಾಗ, ಮಹಾತ್ಮರ ಅವತಾರಕ್ಕೆ ಅನುಕೂಲವಾದ ನದೀ, * ಪರಿಸರಗಳು ಅಷ್ಟೇ.

## ಶ್ರೀಮದ್ಭಾಗವತ ಮತ್ತು ದೇವೀಭಾಗವತಗಳ ಪ್ರಾಮಾಣಿಕತೆ ಮತ್ತು ಕಾಲಾನುಕ್ರಮ

ಮೇಲೆ ಹೇಳಿರುವ ನಮ್ಮ ಸಂಪ್ರದಾಯ ಮತ್ತು ಆಧುನಿಕ ಇತಿಹಾಸಕಾರರ ನಡುವೆ ಇರುವ ವಿವಾದದ ವಿಚಾರ. ಇನ್ನು ನಮ್ಮ ಸಂಪ್ರದಾಯದಲ್ಲೇ ಕೆಲವರು ಎಬ್ಬಿಸಿರುವ ಕೋಲಾಹಲವನ್ನು ಕುರಿತು ಸಂಕ್ಷೇಪವಾಗಿ ವಿಮರ್ಶಿಸಬೇಕಾಗಿದೆ: ದೇವೀಭಾಗವತ ಮತ್ತು ಶ್ರೀಮದ್ಭಾಗವತ–ಇವೆರಡೂ

---

* ಕಾವೇರೀ ಮತ್ತು ತಾಮ್ರಪರ್ಣಿನದಿಗಳ ತೀರಪ್ರದೇಶ. ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ । ಕಾವೇರೀ ಚ ಮಹಾಭಾಗಾ ಪ್ರತೀಚೀ ಚ ಮಹಾನದೀ ॥
ಭಾಗವತ X-5/39-40

ನಮ್ಮ ಸಂಪ್ರದಾಯದಲ್ಲಿ ಮಾನ್ಯವಾಗಿರುವ ಶ್ರೇಷ್ಠಗ್ರಂಥಗಳು. ಇವುಗಳಲ್ಲಿ ಮೊದಲನೆಯದು ದೇವಿಯ ಮಹಾಮಹಿಮೆಯನ್ನು ಸಾರುತ್ತದೆ. ಎರಡನೆ ಯದು ದೇವನಾದ ವಾಸುದೇವನ ಮಹಾಮಹಿಮೆಯನ್ನು ಘೋಷಿಸುತ್ತದೆ. ಒಂದು 'ಶಕ್ತಿ'ಯನ್ನು ಕೊಂಡಾಡಿದರೆ ಮತ್ತೊಂದು 'ಶಕ್ತಿಧರ'ನನ್ನು ಸ್ತುತಿಸುತ್ತದೆ. ಸೂರ್ಯನ ಪ್ರಭೆ ಮತ್ತು ಪ್ರಭಾಕರನಾದ ಸೂರ್ಯ ಇಬ್ಬರೂ ನಮಗೆ ಪೂಜ್ಯರೇ. ಆ ಇಬ್ಬರನ್ನು ಕುರಿತ ಎರಡು ಗ್ರಂಥಗಳೂ ಪುರಾಣಶ್ರೇಷ್ಠಗಳೇ ಎಂಬುದರಲ್ಲಿಯೂ ಸಂಶಯವಿಲ್ಲ. ತತ್ತ್ವ, ಹಿತ ಮತ್ತು ಪುರುಷಾರ್ಥಗಳ ನಿರೂಪಣೆ ಎರಡರಲ್ಲೂ ರಮಣೀಯವಾಗಿದೆ. ಆದರೆ ಈ ಎರಡು ಗ್ರಂಥಗಳಲ್ಲಿ ಯಾವುದು ಮಹಾಪುರಾಣ? ಯಾವುದು ಉಪ ಪುರಾಣ?—ಎಂಬುದರ ಬಗೆಗೆ ತಮ್ಮ ಶಕ್ತಿಯನ್ನು ಬಳಸಿಕೊಂಡು ವೀರಾವೇಶದಿಂದ ಕೆಲವರು ವಾದಯುದ್ಧವನ್ನು ಮಾಡಿದ್ದಾರೆ. ಪ್ರಾಮಾಣಿಕ ವಾದ ಭಾಗವು ಎರಡು ಗ್ರಂಥಗಳಲ್ಲಿಯೂ ಮಾನ್ಯ. ಪ್ರಕ್ಷಿಪ್ತವೆಂದು ಸಿದ್ಧ ವಾಗುವ ಭಾಗವು ಎಲ್ಲಿಯೇ ಇದ್ದರೂ ಅದು ಪ್ರಕೃತವಿಷಯಕ್ಕೆ ಮಾನ್ಯವಾಗು ವುದಿಲ್ಲ—ಎಂದು ನಾವು ಹೇಳುತ್ತೇವೆ.*

ಶ್ರೀಮದ್ಭಾಗವತವು ತುಂಬಾ ಇತ್ತೀಚಿನ ಗ್ರಂಥವೆಂದು ತೋರಿಸಲು ಕೆಲವರು ಇತ್ತೀಚಿನವರು ಹೂಡಿರುವ ವಾದಗಳು ಆಗ್ರಹಪೂರ್ವಕ ಅಥವಾ ಅಜ್ಞಾನಪೂರ್ವಕ ಎಂದು ನಾವು ತಿಳಿಯುತ್ತೇವೆ. ಅವರ ವಾದಗಳನ್ನು ಹೀಗೆ ಪರಿಶೀಲಿಸಬಹುದು.

---

* ಮಹಾಪುರಾಣಗಳ ಮತ್ತು ಉಪಪುರಾಣಗಳ ಪಟ್ಟಿ :

(ಅ) ಮಹಾಪುರಾಣಗಳು :- ಬ್ರಹ್ಮ, ಪದ್ಮ, ವಿಷ್ಣು, ವಾಯು (ಶಿವ), ಭಾಗವತ, ನಾರದೀಯ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ಲಿಂಗ, ವಾರಾಹ, ಸ್ಕಾಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ. (ಒಟ್ಟು ಹದಿನೆಂಟು) ಈ ಹೆಸರುಗಳನ್ನು ನೆನಪಿಸುವ ಚಮತ್ಕಾರದ ಶ್ಲೋಕ :

**ಮದ್ವಯಂ ಭದ್ವಯಂ ಚೈವ ಬ್ರತ್ರಯಂ ವಚತುಷ್ಟಯಮ್ ।**
**ಅನಾಪಲಿಂಗಕೂಸ್ಕಾನಿ ಪುರಾಣಾನಿ ಪ್ರಚಕ್ಷತೇ ॥**

ಮದ್ವಯ : ಮಾರ್ಕಂಡೇಯ, ಮತ್ಸ್ಯ. ಭದ್ವಯ : ಭಾಗವತ, ಭವಿಷ್ಯ. ಬ್ರತ್ರಯ : ಬ್ರಹ್ಮ ಬ್ರಹ್ಮವೈವರ್ತ, ಬ್ರಹ್ಮಾಂಡ, ವ ಚತುಷ್ಟಯ : ವಿಷ್ಣು, ವಾಯು, ವರಾಹ, ವಾಮನ.

ವಾದ :- "ಶ್ರೀಮದ್ಭಾಗವತಪುರಾಣದಿಂದ ಶ್ರೀಶಂಕರಾಚಾರ್ಯ ರಾಗಲೀ ಶ್ರೀರಾಮಾನುಜಾಚಾರ್ಯರಾಗಲೀ ಉದ್ಧರಿಸಿಲ್ಲ. ಅವರು ಪ್ರಮಾಣಭೂತವಾಗಿ ವಿಷ್ಣುಪುರಾಣದಿಂದಲೇ ಉದ್ಧರಿಸಿರುತ್ತಾರೆ. ಆದ್ದರಿಂದ ಶ್ರೀಮದ್ಭಾಗವತವು ಪ್ರಾಮಾಣಿಕಗ್ರಂಥವಲ್ಲ. ದೇವೀಭಾಗವತವೇ ಪ್ರಾಮಾಣಿಕವಾದ ಮಹಾಪುರಾಣ. ಮೇಲ್ಕಂಡ ಆಚಾರ್ಯರ ಕಾಲದಲ್ಲಿ ಶ್ರೀಮದ್ಭಾಗವತಗ್ರಂಥವು ಇರಲೇ ಇಲ್ಲ"–ಎಂಬುದು ಮೊದಲನೆಯ ವಾದ.

ಈ ವಾದವು ಪಂಡಿತರಮಣೀಯವಲ್ಲ. ಏಕೆಂದರೆ : ಮೇಲೆ ಹೇಳಿದ ಆಚಾರ್ಯರು ಶ್ರೀಮದ್ಭಾಗವತದಿಂದ ಉದ್ಧರಿಸಿಲ್ಲವಾದರೂ ಅವರ ಸಂಪ್ರ ದಾಯಗಳಿಗೆ ಸೇರಿದ ಶ್ರೀವಿದ್ಯಾರಣ್ಯಸ್ವಾಮಿಗಳೂ, ಶ್ರೀವೇದಾಂತದೇಶಿಕರೂ ಶ್ರೀಮದ್ಭಾಗವತದಿಂದ ಉದ್ಧರಿಸಿದ್ದಾರೆ. ಶ್ರೀಮಧ್ವಾಚಾರ್ಯರು ಅದನ್ನು ಸಂಭಾವಿಸಿ ತಾತ್ಪರ್ಯನಿರ್ಣಯವೆಂಬ ಗ್ರಂಥವನ್ನೇ ಅದರ ಬಗೆಗೆ ಬರೆದಿದ್ದಾರೆ. ಶ್ರೀವಲ್ಲಭ ಮತ್ತು ಶ್ರೀಚೈತನ್ಯಸಂಪ್ರದಾಯದವರಿಗಂತೂ ಅದು ಗೀತೋಪನಿಷತ್ತುಗಳಂತೆಯೇ ಪರಮಪ್ರಮಾಣವಾಗಿದೆ. ಹೀಗಿರು ವಾಗ ಅದರ ಪ್ರಾಮಾಣಿಕತೆಯನ್ನು ಆಕ್ಷೇಪಿಸುವುದು ಸರಿಯಲ್ಲ.

ಶ್ರೀಶಂಕರಾಚಾರ್ಯರ ಕಾಲದಲ್ಲಿ ಆ ಗ್ರಂಥವು ಇರಲೇ ಇಲ್ಲ.

---

ಅನಾಪಲಿಂಗಕೂಸ್ಕಾನಿ

ಅ : ಅಗ್ನಿ, ನಾ : ನಾರದೀಯ, ಪ : ಪದ್ಮ ಲಿಂ : ಲಿಂಗ, ಗ : ಗರುಡ, ಕೂ : ಕೂರ್ಮ, ಸ್ಕಾ : ಸ್ಕಾಂದ.

(ಅ) ಉಪಪುರಾಣಗಳು : ಆದಿ, ನರಸಿಂಹ, ಕುಮಾರಕೃತಸ್ಕಂದ, ಶಿವಧರ್ಮ, ದುರ್ವಾಸ, ನಾರದ, ಕಪಿಲ, ವಿಷ್ಣುಧರ್ಮ, ಔಶನಸ, ಬ್ರಹ್ಮಾಂಡ, ಕಾಲಿಕಾ, ವರುಣ, ಮಾಹೇಶ್ವರ, ಸಾಂಬ, ಸೌರ, ಪರಾಶರ, ಮಾರೀಚ, ಭಾಸ್ಕರ. (ಒಟ್ಟು ಹದಿನೆಂಟು)

(ಇ) ಔಪಪುರಾಣಗಳು :- ಸನತ್ಕುಮಾರ, ಬೃಹನ್ನಾರದೀಯ, ಆದಿತ್ಯ, ಸೂರ್ಯ, ನಂದಿಕೇಶ್ವರ, ಕೂರ್ಮ, ಭಾಗವತ, ವಸಿಷ್ಠ, ಭಾರ್ಗವ, ಮುದ್ಗಲ, ಕಲ್ಕಿ, ದೇವೀ, ಮಹಾಭಾಗವತ, ಬೃಹದ್ಧರ್ಮ, ಪರಾನಂದ, ವಹ್ನಿ, ಪಶುಪತಿ, ಹರಿವಂಶ. (ಒಟ್ಟು ಹದಿನೆಂಟು)

ಈ ಉಪಪುರಾಣಗಳು ಮತ್ತು ಔಪಪುರಾಣಗಳು ಮಹಾಪುರಾಣಗಳನ್ನೇ ಆಧರಿಸಿ ರಚಿತವಾದ ಗ್ರಂಥಗಳಾಗಿವೆ.

ಎನ್ನುವುದೂ ಸರಿಯಲ್ಲ. ಏಕೆಂದರೆ : ಶ್ರೀಶಂಕರಾಚಾರ್ಯರ ಗುರುವರ್ಯರಾದ ಶ್ರೀಗೌಡಪಾದಾಚಾರ್ಯರು 'ಜಗೃಹೇ ಪೌರುಷಂ ರೂಪಂ ಭಗವಾನ್ಮಹದಾದಿಭಿಃ' – ಎಂಬ ಶ್ರೀಮದ್ಭಾಗವತದ ಶ್ಲೋಕವನ್ನು ಉದ್ಧರಿಸಿದ್ದಾರೆ. (I-3-1) ಆದ್ದರಿಂದ ಆ ಗ್ರಂಥವು ಅವರಿಗಿಂತಲೂ ಹಿಂದೆ ಇತ್ತು ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಶ್ರೀಶಂಕರಾಚಾರ್ಯರು ಸಾಮಾನ್ಯವಾಗಿ ಪುರಾಣಗಳಿಂದ ಉದ್ಧರಿಸಿರುವುದು ತುಂಬಾ ಕಡಿಮೆಯೇ. ಅವರು ದೇವೀಭಾಗವತದಿಂದಲೂ ಯಾವುದೇ ಉದ್ಧರಣವನ್ನು ಕೊಟ್ಟಿರುವುದರಿಂದ ಅವರ ಗ್ರಂಥಗಳನ್ನು ವಿಮರ್ಶಿಸಿದ ಶ್ರೀರಾಮಾನುಜಾಚಾರ್ಯರೂ ಆ ವಿಷ್ಣುಪುರಾಣದಿಂದಲೇ ಉದ್ಧರಣಗಳನ್ನು ನೀಡಿದ್ದಾರೆ.

ವಿಷ್ಣುಪುರಾಣವು ಕಥಾದೃಷ್ಟಿಯಿಂದ ಶ್ರೀಮದ್ಭಾಗವತಕ್ಕೂ ಆಕರವಾಗಿರುವುದರಿಂದ ವಿಷ್ಣುಪುರಾಣದಿಂದ ಉದ್ಧರಣಗಳನ್ನು ನೀಡಿದ ಬಳಿಕ ಶ್ರೀಮದ್ಭಾಗವತದಿಂದ ಬೇರೆ ಪ್ರಮಾಣವಾಕ್ಯಗಳನ್ನು ಉದ್ಧರಿಸುವ ಆವಶ್ಯಕತೆ ಆ ಇಬ್ಬರು ಆಚಾರ್ಯರಿಗೂ ಕಂಡುಬರಲಿಲ್ಲ. ಎಲ್ಲಕ್ಕೂ ಮೇಲೆ ನಾವು ಈಗ ತಾನೇ ಗಮನಿಸಿರುವಂತೆ ಶ್ರೀಶಂಕರಭಗವತ್ಪಾದರ ಗುರುಗಳಾದ ಶ್ರೀಗೌಡಪಾದರೇ ಶ್ರೀಮದ್ಭಾಗವತದಿಂದ ಉದ್ಧರಿಸಿರುವುದರಿಂದ ಅವರ ಪ್ರಾಚೀನತೆಯ ಬಗೆಗಾಗಲೀ ಪ್ರಾಮಾಣಿಕತೆಯ ಬಗೆಗಾಗಲೀ ಶಂಕಿಸುವ ಪ್ರಶ್ನೆಯೇ ಏಳುವುದಿಲ್ಲ.

ವಾದ : 2) ಹೇಮಾದ್ರಿಯೆಂಬ ಗೋಪಾಲದೇವರ ಭಕ್ತನಾದ ರಾಜನೊಬ್ಬನ ಆಸ್ಥಾನಪಂಡಿತನಾಗಿದ್ದ ಬೋಪದೇವನೆಂಬ ಭಗವತ್ಭಕ್ತನು ಈ ಶ್ರೀಮದ್ಭಾಗವತವನ್ನು ರಚಿಸಿದನು. ಅದರ ವೈದುಷ್ಯವನ್ನೂ, ಭಕ್ತಿಸಾರತ್ವವನ್ನೂ ಕಂಡು ಸಂತೋಷಗೊಂಡ ರಾಜನು ಪಂಡಿತ ಬೋಪದೇವನಿಗೆ ಮಹಾ ಸಂಭಾವನೆಯನ್ನು ಮಾಡಿದನು. ಇಷ್ಟೇ ಅಲ್ಲವೇ ಆ ಗ್ರಂಥವು ಪ್ರಖ್ಯಾತಿಗೆ ಬರಲೆಂದು ಅದಕ್ಕೆ ವೇದವ್ಯಾಸರ ಕರ್ತೃತ್ವದ ಅಂಕಿತವನ್ನು ಕೊಟ್ಟು ಅದರ ನೂರಾರು ಪ್ರತಿಗಳನ್ನು ತಯಾರುಮಾಡಿಸಿ, ನಾನಾವ್ಯಾಖ್ಯೆಗಳನ್ನು ಬರೆಯಿಸಿ ಅದಕ್ಕೆ ಇಷ್ಟು ಜನಪ್ರಿಯತೆ ಬರುವಂತೆ ಮಾಡಿದನು.

ಈ ವಾದವು ನಾನಾಕಾರಣಗಳಿಂದ ಅತಿದುರ್ಬಲವಾಗಿ ಬಿದ್ದು ಹೋಗುತ್ತದೆ. ಹೇಮಾದ್ರಿಯು ರಾಜನಲ್ಲ. ಆತನು ದೇವಗಿರಿಯ ಯಾದವ ರಾಜಮಹಾದೇವನ ಮಂತ್ರಿಯಾಗಿದ್ದ (ಕ್ರಿ.ಶ. 1260-1270) ಚತುರ್ವರ್ಗ ಚಿಂತಾಮಣಿ ಮುಂತಾದ ಗ್ರಂಥಗಳನ್ನು ಬರೆದನು. ಆತನು "ಒಂದು ದಿನದೊಳಗೆ ಭಾಗವತಾಧ್ಯಾಯಗಳ ಸಾರವನ್ನು ಯಾರು ರಚಿಸಬಲ್ಲಿರಿ?" ಎಂದು ಆಸ್ಥಾನಪಂಡಿತರಿಗೆ ಸವಾಲು ಹಾಕಿದಾಗ ಬೋಪದೇವನು ಅಷ್ಟು ಸಣ್ಣ ಅವಧಿಯಲ್ಲೇ "ಭಾಗವತಾಧ್ಯಾಯಸಾರ"ವೆಂಬ ಗ್ರಂಥವನ್ನು ರಚಿಸಿಕೊಟ್ಟನು.

**"ಶ್ರೀಮದ್ಭಾಘರಥಾಧ್ಯಾಯಸಾರೋ ಹೃದ್ಯ ನಿರೂಪ್ಯತೇ। ವಿದುಷಾ ಬೋಪದೇವೇನ ಮಂತ್ರಿಹೇಮಾದ್ರಿತುಷ್ಟಯೇ। ಸಾಹಿತ್ಯೇ ತ್ರಯ ಏವ ಭಾಗವತತತ್ಶ್ಲೋಕಾಃ ತ್ರಯಸ್ತಸ್ಯ ತು ॥**

ಅದು ತನ್ನ ರಚನೆಯೆಂದೂ–ಶ್ರೀಮದ್ಭಾಗವತದ ಸಾರವೆಂದೂ ಇಲ್ಲಿ ಆತನೇ ಹೇಳಿದ್ದಾನೆ. ಅವನು ಅನಂತರ ಅದಕ್ಕೆ ವಿಸ್ತಾರವಾಗಿ 'ಭಕ್ತಿ ಮುಕ್ತಾಫಲ', 'ಭಕ್ತಿಲಹರೀ' ಎಂಬ ಗ್ರಂಥಗಳನ್ನೂ ಬರೆದು ಸಂಭಾವಿತ ನಾದನು–ಎಂಬುದೂ ಆ ಗ್ರಂಥಗಳಿಂದಲೂ ಅದರ ಟೀಕೆಗಳಿಂದಲೂ ತಿಳಿದುಬರುವುದು. ಬೋಪದೇವನು ಆ ಗ್ರಂಥದಲ್ಲಿ ವೇದವ್ಯಾಸರನ್ನು ಸ್ತುತಿಸಿ ತಾನು ಅವರ ಗ್ರಂಥರತ್ನವಾದ ಶ್ರೀಮದ್ಭಾಗವತವನ್ನು ಇಪ್ಪತ್ತೆರಡು ಆವರ್ತಿ ಓದಿದುದಾಗಿ ಸಾರಿದ್ದಾನೆ. ಹೀಗಿರುವಾಗ ಇತ್ತೀಚಿನ ಬೋಪ ದೇವನು ತನಗಿಂತಲೂ ಎಷ್ಟೋ ಶತಮಾನಗಳ ಹಿಂದಿನ ಗ್ರಂಥವಾದ ಶ್ರೀಮದ್ಭಾಗವತವನ್ನು ರಚಿಸಲು ಹೇಗೆ ಸಾಧ್ಯ?

ಎಲ್ಲಕ್ಕೂ ಮೇಲೆ ನಾವು ಈ ಹಿಂದೆಯೇ ಗಮನಿಸಿರುವಂತೆ 10ನೆಯ ಶತಮಾನದಲ್ಲಿದ್ದ ಅಭಿನವಗುಪ್ತನು ತನ್ನ ಗೀತಾಭಾಷ್ಯದಲ್ಲಿ ಸ್ಪಷ್ಟವಾಗಿ ಉದ್ಧರಿಸಿರುವ ಶ್ರೀಮದ್ಭಾಗವತವನ್ನು ಹದಿಮೂರನೆಯ ಶತಾಬ್ದಿಯಲ್ಲಿದ್ದ ಬೋಪದೇವನ ರಚನೆಯೆಂದು ಹೇಳುವುದು ಅತ್ಯಂತ ಹಾಸ್ಯಾಸ್ಪದ. ಇದ ಲ್ಲದೇ ಶ್ರೀಮದ್ಭಾಗವತವು ಬೋಪದೇವನ ರಚನೆಯೇ ಆಗಿದ್ದರೆ ಬೋಪ ದೇವನ ಕಾಲಕ್ಕೆ ಹತ್ತಿರದವರಾದ ಶ್ರೀಮಧ್ವಾಚಾರ್ಯರು ಅಂತಹ ಗ್ರಂಥ

ವನ್ನು ಮಹಾಪ್ರಮಾಣವನ್ನಾಗಿ ಹೇಗೆ ಅಂಗೀಕರಿಸುತ್ತಿದ್ದರು? ಎಂಬ ಪ್ರಶ್ನೆಗೂ ಉತ್ತರ ಬರುವುದಿಲ್ಲ.

ವಾದ : 3) ಶ್ರೀಮದ್ಭಾಗವತಕ್ಕೆ ವ್ಯಾಖ್ಯಾನವನ್ನು ಬರೆದಿರುವ ಶ್ರೀಧರಸ್ವಾಮಿಗಳು–ಆ ವ್ಯಾಖ್ಯಾನದಲ್ಲಿ **"ಭಾಗವತಂ ನಾಮ ಅನ್ಯದಿತ್ಯಪಿ ನ ಶಂಕನೀಯಂ"** – "ಭಾಗವತವೆಂಬುದು ಇದಲ್ಲ, ಬೇರೆ ಒಂದು ಗ್ರಂಥ ಎಂದು ಸಂದೇಹಿಸಬಾರದು"–ಎಂದು ಹೇಳಿದ್ದಾರೆ. ಆದ್ದರಿಂದ ಶ್ರೀಮದ್ಭಾಗವತದ ಪ್ರಾಮಾಣ್ಯದ ವಿಷಯದಲ್ಲಿ ಅವರಿಗೇ ಶಂಕೆಯಿತ್ತು ಎಂಬುದು ಸ್ಪಷ್ಟವಾಗುತ್ತಿದೆ. ದೇವೀಭಾಗವತವೇ ಪ್ರಾಮಾಣಿಕಭಾಗವತ ವೆಂಬ ಅಭಿಪ್ರಾಯ ಆಗಿನ ಕಾಲದಲ್ಲಿ ಇದ್ದುದರಿಂದಲೇ ಅವರು ಹಾಗೆ ಶಂಕಿಸಿದ್ದಾರೆ.

ಈ ವಾದವೂ ನಿಸ್ಸಾರವಾದುದು. ಏಕೆಂದರೆ : ಶ್ರೀಧರಸ್ವಾಮಿಗಲು ಮತ್ಸ್ಯಪುರಾಣದ ಪ್ರಾಮಾಣ್ಯವನ್ನು ಉದ್ಧರಿಸಿ ಮೇಲ್ಕಂಡ ಶಂಕೆಯನ್ನು ಪರಿಹರಿಸಲು ಪೂರ್ವಪಕ್ಷವನ್ನಾಗಿ ಅದನ್ನು ಹೇಳಿದ್ದಾರೆಯೇ ಹೊರತು ಅದನ್ನು ತತ್ಕಾಲದ ಸಿದ್ಧಾಂತವೆಂದಾಗಲೀ ತಮ್ಮ ಸಿದ್ಧಾಂತವೆಂದಾಗಲೀ ಹೇಳಿಲ್ಲ.

ವಾದ : 4) ಹದಿನೆಂಟು ಮಹಾಪುರಾಣಗಳೂ ಶ್ರೀವೇದವ್ಯಾಸಕೃತ ವೆಂದು ಪ್ರಸಿದ್ಧವಾಗಿವೆ. **'ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀ ಸುತಃ'** ಆದ್ದರಿಂದ ಅವೆಲ್ಲದರಲ್ಲೂ ಒಂದೇ ಶೈಲಿ ಇರಬೇಕು. ಅದರಂತೆ ಶ್ರೀವಿಷ್ಣುಪುರಾಣ, ಶ್ರೀಸ್ಕಾಂದಪುರಾಣ ಮುಂತಾದವುಗಳಲ್ಲಿ ದ್ರಾಕ್ಷಾಪಾಕ ಮತ್ತು ಕೈತಿಕೀವೃತ್ತಿಯೆಂಬ ಮೃದುಮಧುರವಾದ ಸಾಹಿತ್ಯ-ಪಾಕವೃತ್ತಿಗಳನ್ನು ನೋಡುತ್ತೇವೆ. ಆದರೆ ಶ್ರೀಮದ್ಭಾಗವತದಲ್ಲಿರುವುದು ಅವುಗಳಿಗೆ ವಿರುದ್ಧವಾದ ನಾರಿಕೇಳಪಾಕ ಮತ್ತು ಆರಭಟೀವೃತ್ತಿಗಳು. ಆದುದರಿಂದ ಶ್ರೀಮದ್ಭಾಗವತವು ಶ್ರೀವೇದವ್ಯಾಸರದಲ್ಲ ; ಅನಂತರ ಕಾಲದ ಬೇರೆ ಪಂಡಿತಶ್ರೇಷ್ಠರ ರಚನೆಯಾಗಿರಬೇಕು.

ಇದೂ ದುರ್ಬಲವಾಗಿರುವ ವಾದ. ಏಕೆಂದರೆ : ಹದಿನೆಂಟು ಪುರಾಣ ಗಳೂ ವ್ಯಾಸಕೃತವೆಂಬುದು ಮುಖ್ಯಾರ್ಥದ ಹೇಳಿಕೆಯಲ್ಲ. ಏಕೆಂದರೆ :

ಅಷ್ಟಾದಶ ಮಹಾಪುರಾಣಗಳಲ್ಲಿ ಒಂದಾದ ವಿಷ್ಣುಪುರಾಣದ ಕರ್ತೃ ವ್ಯಾಸರ ತೀರ್ಥರೂಪರಾದ ಪರಾಶರಮುನಿಗಳು ಎಂದು ಆ ಗ್ರಂಥದಲ್ಲೇ ಸ್ಪಷ್ಟವಾಗಿ ಹೇಳಿದೆ. **“ಸೋಽಹಂ ವದಾಮ್ಯಶೇಷಂ ತೇ ಮೈತ್ರೇಯ ಪರಿಪೃಚ್ಛತೇ । ಪುರಾಣಸಂಹಿತಾಂ ಸಮ್ಯಕ್ತಾಂ ನಿಬೋಧ ಯಥಾ ತಥಮ್”** (ವಿಷ್ಣು ಪು. I-1-31) **“ಸನ್ದರ್ಶಯನ್ನಿರಮಿಮೀತ ಪುರಾಣರತ್ನಂ ತಸ್ಮೈ ನಮೋ ಮುನಿವರಾಯ ಪರಾಶರಾಯ”** – ಎಂದು ಇದರ ಕರ್ತೃ ಪರಾಶರರೆಂದು ಶ್ರೀಯಮುನಾಚಾರ್ಯರೂ ಹೇಳುತ್ತಾರೆ. ಆದುದರಿಂದ ವೇದವ್ಯಾಸರಿಗೆ ಹಿಂದೆಯೇ ಪುರಾಣಗಳಿದ್ದುವು. ಅವರು ಆ ಪುರಾಣಗಳನ್ನು ಪರಿಶೀಲಿಸಿ ಸಂಸ್ಕರಿಸಿದ್ದರಿಂದ (‘ಸಂಸ್ಕರ್ತಾ, ಪರಿಷ್ಕರ್ತಾ’ ಆಗಿದ್ದುದರಿಂದ) ಅವರಿಗೆ ಅದರ ಕರ್ತೃತ್ವವು ಗೌಣಾರ್ಥದಲ್ಲಿ ಬಂದಿದೆ. ತಮಗೆ ಹಿಂದೆ ನಾನಾಪುರಾಣಗಳನ್ನು ತಮ್ಮ ಶಿಷ್ಯರ ಮೂಲಕ ಸಂಸ್ಕಾರಮಾಡಿಸಿ ಅದಕ್ಕೆ ಏಕರೂಪತೆ ಬರುವಂತೆ ಮಾಡಿ ಶ್ರೀಮದ್ಭಾಗವತವನ್ನು ತಾವೊಬ್ಬರೇ ರಚಿಸಿದ್ದರಿಂದ ಅದರಲ್ಲಿ ಅವರದೇ ಆದ ಪಾಕ ಮತ್ತು ವೃತ್ತಿಗಳಿವೆಯೆಂದೂ ಹೇಳಲಿಕ್ಕೆ ಬರುತ್ತದೆ. ಇದಲ್ಲದೇ ಒಬ್ಬ ವ್ಯಕ್ತಿಯ ಎಲ್ಲ ಕೃತಿಗಳಲ್ಲಿಯೂ ಒಂದೇ ಶೈಲಿಯಿರಬೇಕೆಂಬ ನಿಯಮವೇನಿಲ್ಲ. ಬೇರೆ-ಬೇರೆ ಮಟ್ಟಗಳ ಅಧಿಕಾರಿಗಳಿಗಾಗಿ ಬರೆದಿದ್ದರಿಂದ ಅಥವಾ ಬೇರೆ-ಬೇರೆ ಕಾಲಗಳಲ್ಲಿ ಬರೆದಿದ್ದರಿಂದ ಒಬ್ಬನೇ ಕವಿಯ ಗ್ರಂಥಗಳಲ್ಲಿ ಭಿನ್ನಭಿನ್ನಶೈಲಿಗಳು ಇರುವ ಸಂಭವವು ಅನೇಕ ಉದಾಹರಣೆಗಳಿಂದ ವ್ಯಕ್ತವಾಗುತ್ತದೆ. ಮಹಾಭಾರತದ ಬೇರೆ-ಬೇರೆ ಭಾಗಗಳಲ್ಲೂ ಮತ್ತು ಪುರಾಣಗಳಲ್ಲೂ ಭಿನ್ನ-ಭಿನ್ನವಾದ ಶೈಲಿಗಳಿರುವುದನ್ನೂ ಗಮನಿಸಬಹುದು.

ವಾದ **:** 5) ಪ್ರೋಷ್ಠಪದಾನಕ್ಷತ್ರದ ಪೂರ್ಣಿಮೆಯಂದು ಭಾಗವತವನ್ನು ಸ್ವರ್ಣಸಿಂಹಾಸನದ ಮೇಲೆ ಬಿಜಯಮಾಡಿಸಿ ಶ್ರೋತ್ರಿಯನಿಗೆ ದಾನ ಮಾಡಿದರೆ ಮೋಕ್ಷವು ದೊರೆಯುತ್ತದೆಯೆಂದು ವತ್ಸ್ಯಪುರಾಣಾದಿಗಳಲ್ಲಿ ಹೇಳಲ್ಪಟ್ಟಿದೆ. **“ಲಿಖಿತ್ವಾ ತಚ್ಚ ಯೋ ದದ್ಯಾತ್ ಹೇಮಸಿಂಹಾಸನಾನ್ವಿತಮ್ । ಪ್ರೋಷ್ಠಪದ್ಯಾಂ ಪೌರ್ಣಮಾಸ್ಯಾಂ ಸ ಯಾತಿ ಪರಮಂ ಪದಮ್”** ಸಿಂಹವು ಶಕ್ತಿದೇವಿಯ ವಾಹನವಾದುದರಿಂದ ಸಿಂಹಪೀಠದ ಮೇಲಿರಿಸಿ ದಾನಮಾಡುವ ಗ್ರಂಥವು ಶಾಕ್ತಗ್ರಂಥವಾದ ದೇವೀಭಾಗವತವೆಂದೇ

ಊಹಿಸಬೇಕು. ವಿಷ್ಣುವಿನ ವಾಹನವಾದರೋ ಗರುಡ. ಆದ್ದರಿಂದ ವೈಷ್ಣವಭಾಗವತವನ್ನು ಗರುಡಪೀಠದ ಮೇಲಿರಿಸಿ ದಾನಮಾಡಬೇಕೇ ಹೊರತು ಸಿಂಹಪೀಠದ ಮೇಲಲ್ಲ. ಪ್ರಕೃತದಲ್ಲಿ ಸಿಂಹಪೀಠದ ಮೇಲೆ ಭಾಗವತವನ್ನು ಇರಿಸಿ ದಾನಮಾಡಲು ಹೇಳಿರುವುದರಿಂ ಮತ್ಸ್ಯಪುರಾಣವು ವಿಷ್ಣುದೇವತಾಕವಾದ ಶ್ರೀಮದ್ಭಾಗವತವನ್ನು ಅಲ್ಲಿ ಹೇಳಿಲ್ಲ.

ಇದೂ ಪ್ರಬಲವಾದ ವಾದವಲ್ಲ. ಏಕೆಂದರೆ : ಇಲ್ಲಿ ಗ್ರಂಥದ ಅಧಿ ಷ್ಠಾತೃದೇವತೆಯ ವಾಹನದ ಪ್ರಶ್ನೆಯೇ ಇಲ್ಲ. ಸಿಂಹಪೀಠವು ಸಾರ್ವಭೌಮ ಯೋಗ್ಯವಾದುದು. ಶ್ರೀಮದ್ಭಾಗವತವು ಪುರಾಣ ಸಾರ್ವಭೌಮವೆನಿಸಿರುವು ದರಿಂದ ಅದನ್ನು ಸಿಂಹಾಸನದ ಮೇಲೆ ಇರಿಸಿ ಪೂಜಿಸಿ ದಾನಮಾಡುವುದೂ ಯುಕ್ತವೇ ಆಗಿದೆ. ವಾಹನದ ಸೂಚನೆಯನ್ನು ಇಟ್ಟುಕೊಂಡರೂ ಅದು ಶ್ರೀಮದ್ಭಾಗವತದ ಸಿಂಹಪೀಠಾರೋಹಣಕ್ಕೆ ವಿರೋಧಿಯಲ್ಲ. ಏಕೆಂದರೆ : ವಿಷ್ಣುವಿಗೂ ನಾನಾವಾಹನಗಳ ಮಧ್ಯೇ ಸಿಂಹವಾಹನವನ್ನು ಶಾಸ್ತ್ರಗಳು ಹೇಳುತ್ತವೆ. **"ಹಂಸೋಮೃಗೇನ್ದ್ರೋ ಹನುಮಾನ್ ಫಣೀನ್ದ್ರಃ ಪಕ್ಷಿರಾಟ್ ತಥಾ"** (ಅತ್ರಿಕಾರಿಕಾ) **"ಅಥ ವಿಷ್ಣೋರ್ವಾಹನಾನಿ ವ್ಯಾಖ್ಯಾಸ್ಯಾಮಃ । ಪ್ರಥಮೇ ಹಂಸೋ ದ್ವಿತೀಯೇ ಸಿಂಹಃ ತೃತೀಯೇ ಹ್ಯಾಂಜನೇಯಶ್ಚತುರ್ಥೇ ಫಣೀನ್ದ್ರಃ ಪಞ್ಚಮೇ ವೈನತೇಯಃ"** (ವೈಖಾಸನ ಭೃಗುಸೂತ್ರ) ಇದಲ್ಲದೇ ಮೇಲೆ ದಾನಕ್ಕೆ ಹೇಳಿರುವ ಪೂರ್ಣಿಮಾತಿಥಿಯು ವಿಷ್ಣುವಿನ ದೀಪೋತ್ಸವಕ್ಕೆ ಪ್ರಶಸ್ತವಾದ ಮಹಾಪರ್ವದಿನವೇ ಆಗಿದೆ. ಆದುದರಿಂದ ಅಂದು ಶ್ರೀಮದ್ಭಾಗವತವನ್ನು ಸಿಂಹಪೀಠದ ಮೇಲೆ ಇಟ್ಟು ಪೂಜಿಸಿ ದಾನಮಾಡುವುದು ಸಮುಚಿತವೇ ಆಗಿದೆ. "ಅದು ದೇವೀಭಾಗವತಕ್ಕೆ ಅನ್ವಯಿಸುತ್ತದೆ ; ಶ್ರೀಮದ್ಭಾಗವತಕ್ಕೆ ಅನ್ವಯಿಸುವುದಿಲ್ಲ"–ಎಂಬುದಕ್ಕೆ ಯಾವ ಆಧಾರವೂ ಇಲ್ಲ.

ವಾದ : 6) ಹಯಗ್ರೀವಬ್ರಹ್ಮವಿದ್ಯೆಯು ಭಾಗವತದ ಒಂದು ಮುಖಲಕ್ಷಣವೆಂದು ಪುರಾಣಗಳು ಹೇಳುತ್ತವೆ. **"ಹಯಗ್ರೀವಬ್ರಹ್ಮ ವಿದ್ಯಾ ಯತ್ರ ವೃತ್ರವಧಸ್ತಥಾ । ಗಾಯತ್ರ್ಯಾ ಚ ಸಮಾರಮ್ಭಃ ತತ್ರ ಭಾಗವತಂ ವಿದುಃ ॥"** ಇಂತಹ ಹಯಗ್ರೀವಬ್ರಹ್ಮವಿದ್ಯೆಯನ್ನು

ದೇವೀಭಾಗವತದಲ್ಲೇ ಪ್ರತಿಪಾದನೆಮಾಡಿರುವುದು. ಭಗವತಿಯ ಅನುಗ್ರಹ ದಿಂದಲೇ ವಿಷ್ಣುವಿಗೆ ಹಯಶಿರಸ್ಸು ಉಂಟಾಯಿತು. ಆ ಹಯಗ್ರೀವಾವ ತಾರದ ಒಂದು ಮುಖ್ಯ ಉದ್ದೇಶ ಅಗಸ್ತ್ಯರಿಗೆ ಶ್ರೀವಿದ್ಯೆಯನ್ನೂ, ಲಲಿತಾಸಹಸ್ರನಾಮಾದಿ ಸ್ತುತಿಗಳನ್ನೂ ಉಪದೇಶಮಾಡುವುದು. ಈ ವಿಶೇಷವೆಲ್ಲಾ ದೇವೀಭಾಗವತದಲ್ಲಿವೆಯೇ ಹೊರತು ಶ್ರೀಮದ್ಭಾಗವತಕ್ಕೆ ಇದು ಹೊಂದುವುದಿಲ್ಲ.

ಇದೂ ಹುರುಳಿಲ್ಲದ ವಾದವಾಗಿದೆ. ಏಕೆಂದರೆ : ಹಯಗ್ರೀವಾವ ತಾರಕ್ಕೆ ಮಹಾಭಾರತದ ಮೋಕ್ಷಧರ್ಮಪರ್ವದಲ್ಲಿ, ಮಧು-ಕೈಟಭಮರ್ದನ ಮತ್ತು ಬ್ರಹ್ಮದೇವರಿಗೆ ವೇದಗಳನ್ನು ಅನುಗ್ರಹಿಸುವಿಕೆ—ಇವುಗಳ ಕಾರಣ ಎಂದು ಸ್ಪಷ್ಟವಾಗಿ ಹೇಳಿದೆ. ಶ್ರೀಮದ್ಭಾಗವತವು ಮಹಾಭಾರತಕಾರರ ರಚನೆಯಾದ್ದರಿಂದ ಈ ಕಥೆಯನ್ನೇ ಅದು ಅನುಸರಿಸುತ್ತದೆ. ಶ್ರೀಮದ್ಭಾಗ ವತದ ಐದನೆಯ ಸ್ಕಂಧದಲ್ಲಿ ಭದ್ರಾಶ್ವವರ್ಷದಲ್ಲಿ ಭದ್ರಶ್ರವನು ಶ್ರೀಹಯಗ್ರೀವದೇವರ ವಿಷಯವಾಗಿ ಜಪಿಸುವ ಹಯಗ್ರೀವಬ್ರಹ್ಮವಿದ್ಯಾ ಮಂತ್ರವು ಸ್ಪಷ್ಟವಾಗಿಯೇ ಘೋಷಿತವಾಗಿದೆ. "**ಓಂ ನಮೋ ಭಗವತೇ ಧರ್ಮಾಯಾತ್ಮವಿಶೋಧನಾಯ ನಮ ಇತಿ**" ಎಂದು ಅದು ಪ್ರಾರಂಭ ವಾಗುತ್ತದೆ. ಇಂತಹ ಮಹಾಭಾರತಸಮ್ಮತವಾದ ಹಯಗ್ರೀವಾವತಾರವನ್ನು ಮಂತ್ರಾರ್ಥದ ಮೂಲಕ ಕೊಂಡಾಡುವ ಶ್ರೀಮದ್ಭಾಗವತವು ಹಯಗ್ರೀವ ಬ್ರಹ್ಮವಿದ್ಯೆಗೆ ಪ್ರತಿಪಾದಕವಲ್ಲವೆಂದು ಹೇಳುವುದು ಸತ್ಯಕ್ಕೆ ಅಪಚಾರ.

ಮತ್ತೊಂದು ಮುಖ್ಯವಿಷಯವನ್ನು ಪೂರ್ವಪಕ್ಷಿಗಳು ಗಮನಿಸಿಯೇ ಇಲ್ಲ. ಅಗಸ್ತ್ಯರಿಗೆ ಲಲಿತಾವಿದ್ಯೆಯನ್ನು ಉಪದೇಶಿಸುವವನು ಶ್ರೀಮನ್ನಾರಾಯಣಾವತಾರನಾದ ವಿದ್ಯಾಮೂರ್ತಿ. ಹಯಗ್ರೀವದೇವರಲ್ಲ. ಆತನ ಅನುಗ್ರಹದಿಂದ ಹುಟ್ಟಿದ, ಆತನ ವಿಭೂತಿಯಾದ ಒಬ್ಬ ಮಹರ್ಷಿ ಎಂಬ ಪುರಾಣದ ಕಥೆಯನ್ನು ಸ್ಮರಿಸಿದರೆ ಎರಡು ಭಾಗವತಗಳಿಗೂ ಯಾವ ವಿರೋಧವೂ ಇಲ್ಲ. ಒಂದು ಹಯಗ್ರೀವಪ್ರೋಕ್ತ ಬ್ರಹ್ಮವಿದ್ಯೆ ; ಮತ್ತೊಂದು ಹಯಗ್ರೀವ ವಿಷಯವಾದ ಬ್ರಹ್ಮವಿದ್ಯೆ. ಎರಡು ಪುರಾಣಗಳೂ ಹಯಗ್ರೀವ ಬ್ರಹ್ಮವಿದ್ಯಾಪ್ರತಿಪಾದಕಗಳೇ ಆಗಿವೆ.

[ii]

ವಾದ : 7) ಅಷ್ಟಾದಶ ಮಹಾಪುರಾಣಗಳು ಮಹಾಭಾರತಕ್ಕೆ ಮೊದಲು ಇದ್ದುವು. ಶ್ರೀಮದ್ಭಾಗವತವನ್ನಾದರೋ ಮಹಾಭಾರತದ ರಚನೆಯನಂತರ ಅದರಿಂದ ತೃಪ್ತಿಹೊಂದದ ವೇದವ್ಯಾಸರು ನಾರದರ ಸಲಹೆಯಂತೆ ರಚಿಸಿದರು–ಎಂದು ಶ್ರೀಮದ್ಭಾಗವತದಲ್ಲೇ ಹೇಳಿದೆ. (I-5-6-7) ಆದುದರಿಂದ ಶ್ರೀಮದ್ಭಾಗವತವು ಇತ್ತೀಚಿನ ಗ್ರಂಥ.

ಈ ವಾದವೂ ಪಾಮರರಮಣೀಯವಾದುದು. ಮಹಾಭಾರತಕ್ಕೆ ಮೊದಲೇ ಅಷ್ಟಾದಶ ಪುರಾಣಗಳೂ ಈಗಿನ ರೂಪದಲ್ಲೇ ಇದ್ದುವು ಎಂಬುದಕ್ಕೆ ಆಧಾರವಿಲ್ಲ. ವೇದಗಳಲ್ಲಿಯೂ ಪುರಾಣಗಳ ಹೆಸರು ಬರುತ್ತದೆ. ಆದರೆ ಅವು ಈಗ ನಾವು ನೋಡುತ್ತಿರುವ ಪುರಾಣ ಗ್ರಂಥಗಳಲ್ಲ. ಪುರಾತನ ಸೃಷ್ಟಿವಿಷಯಕವಾದ "ಅಸದ್ವಾ ಇದಮಗ್ರ ಅಸೀತ್" ಇತ್ಯಾದಿ ವಚನಗಳು ಅಥವಾ ಉರ್ವಶೀ-ಪುರೂರವಸಂವಾದಾದಿಗಳು–ಎಂದು ಭಾಷ್ಯಕಾರರು ಹೇಳಿರುವುದನ್ನು ಗಮನಿಸಬೇಕು.

ಹೇಗೂ ಶ್ರೀಮದ್ಭಾಗವತವು ಇತ್ತೀಚಿನ ಗ್ರಂಥ ಮತ್ತು ಅನಾರ್ಷಗ್ರಂಥ ಎಂದು ಕೆಲವರು ಪ್ರತಿಪಾದಿಸುವುದು ಯುಕ್ತಸಂಗತವಲ್ಲ.

ಶ್ರೀಮದ್ಭಾಗವತ–ದೇವೀಭಾಗವತಗಳಲ್ಲಿ ಯಾವುದು ಪ್ರಾಚೀನ, ಯಾವುದು ಅರ್ವಾಚೀನ?–ಎಂಬುದರ ಬಗೆಗೆ ನಾವು ಯಾವುದನ್ನೂ ಸಿದ್ಧಾಂತ ರೂಪದಲ್ಲಿ ಹೇಳಲಾಗುವುದಿಲ್ಲ. ಪುರಾಣಗಳಲ್ಲಿ ಶ್ರೀಮದ್ಭಾಗವತಕ್ಕೆ ಕೆಲವು ಲಕ್ಷಣಗಳನ್ನು ಹೇಳಿದೆ. ಅವು ಯಾವುವೆಂದರೆ :-

ಗಾಯತ್ರಿಯಿಂದ ಪ್ರಾರಂಭಮಾಡಿ ಧರ್ಮವನ್ನು ವಿಸ್ತರಿಸುವಿಕೆ, ಹಯಗ್ರೀವ ಬ್ರಹ್ಮವಿದ್ಯೆಯನ್ನೂ–ವೃತ್ರಾಸುರ ವಧೆಯನ್ನೂ ನಿರೂಪಣೆ ಮಾಡುವಿಕೆ, ಶ್ಲೋಕಸಂಖ್ಯೆ ಹದಿನೆಂಟು ಸಾವಿರ ಮತ್ತು ಸ್ಕಂಧಗಳ ಸಂಖ್ಯೆ ಹನ್ನೆರಡು–ಇವುಗಳನ್ನು ಹೊಂದಿರುವಿಕೆ. ಈ ಲಕ್ಷಣಗಳು ಎರಡು ಭಾಗವತಗಳಿಗೂ ಸಂಪೂರ್ಣವಾಗಿ ಹೊಂದುತ್ತದೆ. ಸರ್ಗ ( ಕಾರಣ ಸೃಷ್ಟಿ ), ಪ್ರತಿಸರ್ಗ (ಕಾರ್ಯಸೃಷ್ಟಿ ಮತ್ತು ಪ್ರಳಯ), ದೇವತಾ-ಪಿತೃ-ದೇವತಾವಂಶಗಳು, ಮನ್ವಂತರಗಳು, ರಾಜರ್ಷಿಗಳ ವಂಶಾನುಚರಿತೆಗಳಿಂದ ಕೂಡಿರುವಿಕೆ–ಎಂಬ ಐದು ಪುರಾಣಲಕ್ಷಣಗಳು ಎರಡರಲ್ಲೂ ಕಂಡುಬರುತ್ತವೆ. ಇವು

ಗಳಲ್ಲದೇ ಇನ್ನೂ ಕೆಲವು ಲಕ್ಷಣಗಳು ಎರಡರಲ್ಲೂ ಇವೆ. ಇವೆಲ್ಲಕ್ಕೂ ತಾತ್ಪರ್ಯ–ವಾಸುದೇವಪರಬ್ರಹ್ಮನಲ್ಲಿ–ಎಂದು ಶ್ರೀಮದ್ಭಾಗವತವು ಹೇಳುತ್ತದೆ. ಶ್ರೀದೇವಿಯಲ್ಲಿ ತಾತ್ಪರ್ಯ–ಎಂದು ದೇವೀಭಾಗವತವು ಪ್ರತಿಪಾದಿಸುತ್ತದೆ.

ಆದರೆ ಗಮನಾರ್ಹವಾದ ಎರಡು ವಿಷಯಗಳಿವೆ :-

(1) ಶ್ರೀಮದ್ಭಾಗವತದಲ್ಲಿ ರಾಧಾದೇವಿಯ ಹೆಸರು ಬರುವುದಿಲ್ಲ. ದೇವೀಭಾಗವತದಲ್ಲಿ (IX-18) ರಾಧೆಯನ್ನು ಗಂಗೆ ಮತ್ತು ಶ್ರೀಕೃಷ್ಣ ಇವರ ಪುತ್ರಿಯೆಂದು ಹೇಳಿದೆ.

(2) ಶ್ರೀಮದ್ಭಾಗವತವು ಭಗವದ್ಗೀತೆಯನ್ನು ಸ್ತುತಿಸಿ ಭಗವದ್ಗೀತೆಯ ತತ್ತ್ವಾರ್ಥವನ್ನೇ ಭಗವಂತನು ಉದ್ಧವನಿಗೆ ಉಪದೇಶಮಾಡಿರುವುದಾಗಿ ಹೇಳಿದೆ. ದೇವೀಭಾಗವತದಲ್ಲಿ ಭಗವದ್ಗೀತೆಗೂ–ಗೀತಾಭಾಷ್ಯಕಾರರಾದ ಶ್ರೀಶಂಕರಾಚಾರ್ಯ, ಶ್ರೀರಾಮಾನುಜಾಚಾರ್ಯ, ಶ್ರೀಮಧ್ವಚಾರ್ಯ ಮುಂತಾದವರ ಹೇಳಿಕೆಗಳಿಗೂ ವಿರುದ್ಧವಾದ ಹೇಳಿಕೆಗಳು ಬಂದಿವೆ. "ಮಹಾವಿಷ್ಣುವು ಕರ್ಮವಶದಿಂದ ಜನ್ಮತಾಳುತ್ತಾನೆ. ಇಲ್ಲದಿದ್ದರೆ ಮನಃ ಪೂರ್ವಕವಾಗಿ ಗರ್ಭವಾಸಾದಿ ದುಃಖಗಳನ್ನು ಯಾರು ತಾನೇ ಅನುಭವಿಸು ತ್ತಿದ್ದರು?" ಎಂಬ ಅರ್ಥದ ಶ್ಲೋಕಗಳನ್ನು ಅಲ್ಲಿ ನೋಡುತ್ತೇವೆ.

**ಮನ್ದೋಽಪಿ ದುಃಖಗಹನೇ ಗರ್ಭವಾಸೇಽತಿಸಂಕಟೇ ।**
**ನ ಕರೋತಿ ಮತಿಂ ವಿದ್ವಾನ್ ಕಥಂ ಕುರ್ಯಾತ್ಸ ಚಕ್ರಭೃತ್ ॥**
**.... ಕಥಂ ಭಗವಾನ್ವಿಷ್ಣುಃ ಸ್ವವಶಶ್ಚೇಜ್ಜನಾರ್ದನಃ ।**
**ಗರ್ಭವಾಸರುಚಿರ್ಭೂಯಾತ್ ಭವೇತ್ಸ್ವವಶತಾಯದಿ ॥**

(V-1/48-52)

ಭಗವಂತನು ತನ್ನ ಮಾಯೆಯನ್ನು ಮೆಟ್ಟಿ ಅದಕ್ಕೆ ವಶವಾಗದೇ ತನ್ನ ಸಂಕಲ್ಪದಿಂದಲೇ ಅವತರಿಸುವನೆಂದು ಗೀತೆಯು ಪ್ರತಿಜ್ಞೆ ಮಾಡುತ್ತದೆ. **"ಪ್ರಕೃತಿಂ ಸ್ವಾಮಧಿಷ್ಠಾಯ ಸಮ್ಭವಾಮ್ಯಾತ್ಮಮಾಯಯಾ" "ತಾಂ ಪ್ರಕೃತಿಂ ಅಧಿಷ್ಠಾಯ ವಶೀಕೃತ್ಯ ಸಂಭವಾಮಿ ದೇಹವಾನಿವ ಭವಾಮಿ" ( ಶಂಕರಭಾಷ್ಯ ), "ಸ್ವಮೇವ ಸ್ವಭಾವಮಧಿಷ್ಠಾಯ**

ಸ್ವೇನೈವ ರೂಪೇಣ ಸ್ವೇಚ್ಛಯಾ ಸಂಭವಾಮಿ'' (ರಾಮಾನುಜಭಾಷ್ಯ ), ''ಜಾತ ಇವ ಪ್ರತೀಯೇ, ನ ತು ಸ್ವತನ್ತ್ರ ಮಧಿಷ್ಠಾಯ ಇತ್ಯರ್ಥಃ (ಮಧ್ವಭಾಷ್ಯ ), ''ಅಜಾಯಮಾನೋ ಬಹುಧಾ ವಿಜಾಯತೇ'' ''ಯೋ ಜಾತಮಸ್ಯ ಮಹತೋ ಮಹಿಬ್ರವಾತ್'' ಇತ್ಯಾದಿ ಶ್ರುತಿಗಳೂ ಭಗವಂತನು ವಿಕಾರರಹಿತನಾಗಿಯೇ ಅವತರಿಸುತ್ತಾನೆ. ಅವನ ಅವತಾರಗಳು ಮಹತ್ತ್ವಪೂರ್ಣವಾಗಿ ಸ್ತುತಿಸಲ್ಪಡಬೇಕಾದುವುಗಳು–ಎಂದು ಸಾರುತ್ತವೆ. ಇಂತಹ ಶ್ರುತಿ-ಸ್ಮೃತಿಗಳಿಗೆ ವಿರುದ್ಧವಾದ ಅಭಿಪ್ರಾಯವು ದೇವೀಭಾಗವತದಲ್ಲಿ ಹೇಗೆ ಸೇರಿಕೊಂಡಿತು ? ಎಂದರೆ : ಇವು ಪ್ರಕ್ಷಿಪ್ತಗಳಿರಬಹುದು ಅಥವಾ ಮಹಾಮಾಯೆಯ ಮಹಿಮೆಯನ್ನು ಕೊಂಡಾಡುವ ಉತ್ಸಾಹದಲ್ಲಿ ಹೇಳಿರುವ ಅರ್ಥವಾದ-ಅತಿವಾದಗಳ ವಿಚಿತ್ರವೈಖರಿಯಾಗಿರಬೇಕು.

ಇಂತಹ ಒಂದೆರಡು ವಿಷಯಗಳನ್ನು ಬಿಟ್ಟರೆ ದೇವೀಭಾಗವತಕ್ಕೂ ಶ್ರೀಮದ್ಭಾಗವತಕ್ಕೂ ಪರಮಾರ್ಥದಲ್ಲಿ ಯಾವ ಭೇದವೂ ಇಲ್ಲ. ಎರಡೂ ಶ್ರೇಷ್ಠವಾದ ಪುರಾಣಗಳಾದ್ದರಿಂದ ಪಾರಿಭಾಷಿಕವಾಗಲ್ಲದಿದ್ದರೂ ಪಾರಮಾರ್ಥಿಕವಾಗಿ ಎರಡೂ ಮಹಾಪುರಾಣಗಳೇ. ಅವುಗಳಲ್ಲಿ ಯಾವುದಾದರೂ ಒಂದನ್ನು ಉಪಪುರಾಣವೆಂದು ಪಾರಿಭಾಷಿಕವಾಗಿ ಕರೆದರೂ ಅದರ ಮಹಾಮಹಿಮೆಯು ಕುಂದುವುದಿಲ್ಲ.

## ಭಾಗವತಶಬ್ದಾರ್ಥ

ಭಗವಂತನನ್ನು ಅಥವಾ ಭಗವತಿಯನ್ನು ಸದಾ ದೇವತೆಯನ್ನಾಗಿ ಪೂಜಿಸುವ ಭಕ್ತೋತ್ತಮನಿಗೆ ಭಾಗವತ ಎಂದು ಹೆಸರು. **''ಭಗವಾನ್ ಭಗವತೀ ವಾ ದೇವತಾ ಅಸ್ಯ (ಅಣ್)''** (4-2-24) ಎಲ್ಲ ಭೂತಗಳಲ್ಲಿಯೂ ಭಗವಂತನನ್ನೂ–ಭಗವಂತನಲ್ಲಿ ಎಲ್ಲ ಭೂತಗಳನ್ನೂ ನೋಡುವವನೂ, ಆತ್ಮಗುಣಪರಿಪೂರ್ಣನೂ, ಸರ್ವಭೂತಾನುಕಂಪಿಯೂ, ಸದಾಚಾರಸಂಪನ್ನನೂ, ರಾಗದೋಷರಹಿತನೂ ಆಗಿರುವ ಭಗವದ್ಭಕ್ತ–ಎಂದು ಇವನನ್ನು ವಿವರಿಸಬಹುದು. **''ಸರ್ವಭೂತೇಷು ಯಃ ಪಶ್ಯೇತ್ ಭಗವದ್ಭಾವಮಾತ್ಮನಃ । ಭೂತಾನಿ ಭಗವತ್ಯಾತ್ಮನ್ಯೇಷ ಭಾಗವತೋತ್ತಮಃ॥ ''** ( ಭಾಗ 11-2-45 ) **''ಸದಾಚಾರರತಾಃ ಶಿಷ್ಟಾಃ**

**ಸರ್ವಭೂತಾನುಕಮ್ಪಕಾಃ । ಶುಚಯಸ್ತ್ಯಕ್ತರಾಗಾ ಯೇ ಸದಾ ಭಾಗವತಾ ಹಿ ತೇ ॥"** (ಸ್ಕಾಂದ) ಭಗವಂತನಿಗೆ ಅಥವಾ ಭಗವತಿಗೆ ಸಂಬಂಧಪಟ್ಟ ಗ್ರಂಥವಿಶೇಷವೂ "ಭಾಗವತ" ಎನಿಸುತ್ತದೆ. **"ಭಗವತಃ ಇದಂ ಭಗವತ್ಯಾಃ ಇದಂ (ಅಣ್)"** (೪-೩-೧೨೦) ಹಾಗಾದರೆ 'ಭಗವಾನ್' ಎಂದರೆ ಯಾರು? ಎಂದರೆ : **"ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ"** ಎಂಬಂತೆ ಪರಬ್ರಹ್ಮಪರಮಾತ್ಮನೇ ಭಗವಾನ್ ಎಂಬ ಶಬ್ದಕ್ಕೆ ಮುಖ್ಯವಾದ ಅರ್ಥ. (ಆ ಭಗವಂತನ ವಿಭೂತಿಗಳಾಗಿರುವ ಪೂಜ್ಯತಮರಾದ ಮಹಾತ್ಮರನ್ನೂ ಗೌಣಾರ್ಥದಲ್ಲಿ 'ಭಗವಾನ್" ಎಂದು ಕರೆಯುತ್ತಾರೆ.) 'ಭಗ' ಎಂದರೆ ಅಸಾಧಾರಣವಾದ ಮತ್ತು ಸಮಗ್ರವಾದ ಐಶ್ವರ್ಯ, ಯಶಸ್ಸು, ವೀರ್ಯ, ಸಂಪತ್ತು, ಜ್ಞಾನ, ವೈರಾಗ್ಯಗಳು–ಇವುಗಳ ನಿತ್ಯಯೋಗವುಳ್ಳವನು. **(ಭಗಃ ಷಡೈಶ್ವರ್ಯಂ ಅಸ್ತಿ ಅಸ್ಯ (ನಿತ್ಯಯೋಗೇ ಮತುಪ್) 'ಮಸ್ಯ ವಃ')** ಷಡ್ಗುಣೈಶ್ವರ್ಯಸಂಪನ್ನನಾದವನು–ಇಂತಹವನು ಪರಮಾತ್ಮನೊಬ್ಬನೇ.

**ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।**
**ಜ್ಞಾನವೈರಾಗ್ಯಯೋಶ್ಚಾಪಿ ಷಣ್ಣಾಂ ಭಗ ಇತೀರಣಾ ॥**

'ಭಗ' ಎಂಬ ಶಬ್ದಕ್ಕೆ ಶ್ರೀ, ಕಾಮ, ಮಹಾತ್ಮ್ಯ, ವೀರ್ಯ, ಸೂರ್ಯ, ಯೋನಿ–ಮುಂತಾದ ನಾನಾರ್ಥಗಳಿದ್ದರೂ ಭಗವಾನ್ ಎಂಬಲ್ಲಿ ಈ ಷಡ್‌ಗುಣ ಮತ್ತು ಐಶ್ವರ್ಯಗಳಿಗೇ ಭಗಶಬ್ದವು ಅನ್ವಯಿಸುತ್ತದೆ.

**ಉತ್ಪತ್ತಿಂ ಚ ವಿನಾಶಂ ಚ ಭೂತಾನಾಮಾಗತಿಂ ಗತಿಮ್ ।**
**ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥**

ಭೂತಗಳ ಉತ್ಪತ್ತಿ, ವಿನಾಶ, ಗತಾಗತಿ, ವಿದ್ಯೆ ಮತ್ತು ಅವಿದ್ಯೆಗಳನ್ನು ಪೂರ್ಣವಾಗಿ ತಿಳಿದಿರುವ ಸರ್ವಜ್ಞಮೂರ್ತಿಯೇ ಭಗವಂತ–ಎಂದೂ ಭಗವಾನ್ ಎಂಬುದಕ್ಕೆ ಲಕ್ಷಣವನ್ನು ಹೇಳುವುದುಂಟು.

ಹೇಗೂ ಇದು ಪರಮಪುರುಷನಿಗೇ ಮುಖ್ಯವಾಗಿ ಅನ್ವಯಿಸುವುದು. 'ಶಿವಭಾಗವತ' ಎಂದರೆ ಭಗವಂತನಾದ ಶಿವನನ್ನು ಪರಾದೇವತೆಯೆಂದು ಭಜಿಸುವವನು. ಹೀಗೆ ಯಾವ ಉಪಪದವೂ ಇಲ್ಲದ ಭಾಗವತಶಬ್ದವು

ವಾಸುದೇವನಲ್ಲಿ ಏಕಾಂತಭಕ್ತಿಯುಳ್ಳವನನ್ನೂ, ಆತನಿಗೆ ಸಂಬಂಧಪಟ್ಟ ಗ್ರಂಥಾದಿಗಳನ್ನೂ ಪಾರಿಭಾಷಿಕವಾಗಿ ಹೇಳುತ್ತದೆ. **"ತತ್ರ ಭಾಗವತಾ ಮನ್ಯನ್ತೇ ಭಗವಾನೇವೈಕೋ ವಾಸುದೇವೋ ನಿರಞ್ಜನಜ್ಞಾನ ಸ್ವರೂಪಃ ಪರಮಾರ್ಥತತ್ತ್ವಂ"** (ಬ್ರಹ್ಮಸೂತ್ರ ಶಂಕರಭಾಷ್ಯ. II-2-45) ಪರಮಾತ್ಮನಾದ ಈ ವಾಸುದೇವನನ್ನು ವಿಷ್ಣು, ನಾರಾಯಣ, ಕೃಷ್ಣ ಮುಂತಾದ ಹೆಸರುಗಳಿಂದಲೂ ಶಾಸ್ತ್ರಗಳು ಬೋಧಿಸುತ್ತವೆ.

ಕೆಲವರು ಆಧುನಿಕರು 'ಫೇಗಸ್'–'ಭುಜಿಸು' ಎಂಬ ಇಂಡೋ ಆರ್ಯನ್ ಧಾತುವಿನಿಂದ ಭಗಶಬ್ದವು ನಿಷ್ಪನ್ನವಾಗಿದೆ. 'ಬೇಗು' ಎಂಬ ಪುರಾತನ ಆರ್ಯದೇವತಾಶಬ್ದವೂ ಇದರಿಂದಲೇ ಬಂದಿದೆ. ಆದ್ದರಿಂದ **ಭಗವಾನ್**–ಎಂದರೆ ಭುಜಿಸುವ ಧರ್ಮವುಳ್ಳವನು ಎಂದರ್ಥ. ಭಗವೆಂಬ ಇಂದ್ರಿಯದ ದೇವತೆ ಭಗ. ಆತನು ಆದಿತ್ಯವರ್ಗದ ದೇವತೆ, ಆತನೇ ಮೊದಲು ಭಗವಾನ್ ಆಗಿದ್ದ. ಆ ವರ್ಗಕ್ಕೆ ಸೇರಿದ್ದ 'ವಿಷ್ಣು'ವೆಂಬ ದೇವತೆಯೂ ಭಗವಂತನೆನಿಸಿದ. ವಿಷ್ಣು, ನಾರಾಯಣ, ವಾಸುದೇವ– ಇವೆಲ್ಲವೂ ಬೇರೆ-ಬೇರೆ ಕಾಲಗಳ ದೇವತೆಗಳನ್ನು ಹೇಳುತ್ತವೆ. 'ಕೃಷ್ಣ' ಎನ್ನುವವನು ಒಬ್ಬ ಅನಾರ್ಯಪಂಗಡಕ್ಕೆ ಸೇರಿದ ಚಾರಿತ್ರಿಕವ್ಯಕ್ತಿ. ಆತನನ್ನೂ ಮತ್ತು ಮೇಲ್ಕಂಡ ದೇವತೆಗಳನ್ನೂ ಒಂದಾಗಿ ಭಾವಿಸಿ ಭಾಗವತಧರ್ಮ ಪ್ರಾರಂಭವಾಯಿತು–ಎಂದು ಹೇಳುತ್ತಾರೆ.

ವೇದಗಳಲ್ಲಿ 'ಭಗ' ಎಂಬ ದೇವತೆಯಿರುವುದು ನಿಜ. **"ಭಗ ಏವ ಭಗವಾ ಅಸ್ತು ದೇವಾಃ"**, **"ಸುವಾತಿ ಸವಿತಾ ಭಗಃ"** ಇತ್ಯಾದಿ ಪ್ರಯೋಗ ಗಳನ್ನು ನೋಡಬಹುದು. ಆದರೆ ಅಲ್ಲಿಯೂ ಐಶ್ವರ್ಯವುಳ್ಳವನು ಎಂಬರ್ಥವೇ ಗ್ರಹಿಸಲ್ಪಡುತ್ತವೆ. **"ಸ ಹಿ ರತ್ನಾನಿ ದಾಶುಷೇ ಸುವಾತಿ ಸವಿತಾ ಭಗಃ"** ಛಾಂದೋಗ್ಯದಲ್ಲಿ ಅದು ಪೂಜ್ಯಾರ್ಥಕವಾಗಿ ಹೇಳಲ್ಪಟ್ಟಿದೆ. **"ಅಧೀಹಿ ಭಗವ ಇತಿ ಹೋವಾಚ"** (ಛಾಂ. VII-I) ಪ್ರಾಚೀನ ಬೌದ್ಧಗ್ರಂಥಗಳಲ್ಲಿಯೂ ಭಗವಾನ್ ಎಂದರೆ ಇಸ್ಸರಿಯ ( ಐಶ್ವರ್ಯ ), ದಮ್ಮ ( ಧರ್ಮ ) ಯಸ ( ಯಶಸ್ಸು ), ಸಿರಿ ( ಶ್ರೀ ), ಕಾಮ, ಪಯತನ– ಎಂಬ ಷಡ್ಗುಣಗಳಿಂದಮ ಸಂಪನ್ನನಾದವನು–ಭಾಗ್ಯವಂತ ಎಂಬರ್ಥವೇ

ಇದೆ. ಇಂತಹ ಪೂರ್ಣವಾದ ಭಗ (ಭಾಗ್ಯ )ದೊಡನೆ ನಿತ್ಯಯೋಗ ಹೊಂದಿರುವುದೇ ಭಗವಚ್ಛಬ್ದಕ್ಕೆ ಪ್ರವೃತ್ತಿನಿಮಿತ್ತ. ವಿಷ್ಣುವೆಂದರೆ ಸರ್ವ ವ್ಯಾಪಕ ಅಥವಾ ಸರ್ವವನ್ನೂ ಪ್ರವೇಶಿಸಿರುವ ಸರ್ವಾತ್ಮನು. "ಅನ್ತಃ ಪ್ರವಿಷ್ಟಃ ಶಾಸ್ತಾ ಜನನಾಂ". ವಾಸುದೇವಶಬ್ದಕ್ಕೂ 'ವ್ಯಾಪಕ' ಎಂಬರ್ಥವಿದೆ. **"ವಾಸನಾದ್ವಾಸುದೇವಸ್ಯ ವಾಸಿತಂ ತೇ ಜಗತ್ರಯಮ್"** 'ನಾರಾಯಣ'ನನ್ನೂ ಸರ್ವವ್ಯಾಪಕನೆಂದು ಶ್ರುತಿಯು ಹೇಳುತ್ತದೆ. **"ಅನ್ತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ"** ಆದುದರಿಂದ ವಿಷ್ಣು-ವಾಸುದೇವ-ನಾರಾಯಣಶಬ್ದಗಳೆಲ್ಲವೂ ಪರಮಾತ್ಮನೊಬ್ಬನನ್ನೇ ಹೇಳುತ್ತವೆ. ಇಂತಹ ವಾಸುದೇವನ ಅವತಾರವೇ ವಸುದೇವಪುತ್ರನಾದ ಶ್ರೀಕೃಷ್ಣ. ವಾಸುದೇವೋಪಾಸಕರು ಶ್ರೀಕೃಷ್ಣನಿಗಿಂತಲೂ ಹಿಂದೆಯೂ ಇದ್ದರು. "ಪರವಾಸುದೇವನ ಅವತಾರವು ನಿಜವಾಗಿಯೂ ನಾನೇ ; ಶ್ರೀಕೃಷ್ಣನಲ್ಲ" ಎಂದು ಶ್ರೀಕೃಷ್ಣನಿಗೆ ಸವಾಲುಹಾಕಿದ ಶೃಗಾಲವಾಸುದೇವನ ಕಥೆಯನ್ನು ಭಾಗವತದಲ್ಲಿ ಕೇಳುತ್ತೇವೆ. ತೈತ್ತಿರೀಯಶ್ರುತಿಯು ಯಾಜ್ಞಿಕೀ ಉಪನಿಷದ್ಭಾಗದಲ್ಲಿ 'ನಾರಾಯಣ', 'ವಾಸುದೇವ' 'ವಿಷ್ಣು' ಎಂಬ ಶಬ್ದ ಗಳನ್ನು ಪರ್ಯಾಯಗಳನ್ನಾಗಿ ಹೇಳುತ್ತದೆ. **"ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್"** ಆದ್ದರಿಂದ ವಿಷ್ಣು-ವಾಸುದೇವ-ನಾರಾಯಣರು ಬೇರೆ-ಬೇರೆ ಕಾಲದವರು ಎಂಬ ಅಭಿಪ್ರಾಯವು ಪ್ರಮಾಣವಿರುದ್ಧವಾಗಿದೆ. ಆ ಯಾಜ್ಞಿಕೀಉಪನಿಷತ್ತೇ ಈಚಿನದು ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ : ಆಪಸ್ತಂಬಾದಿ ಮಹರ್ಷಿಗಳು ಅದನ್ನು ಪುರಸ್ಕರಿಸಿದ್ದಾರೆ. (ನವಕಾಂಡ ಋತಿತರ್ಪಣದಲ್ಲಿ **"ಯಾಜ್ಞಿಕೀರ್ದೇವತಾ ಉಪನಿಷದಃ"** ಎಂಬುದರ ಹೇಳಿಕೆಯಿದೆ.)

ಆ ಉಪನಿಷತ್ತು ಈಚಿನದು ಎಂಬುದಕ್ಕೆ ಏನು ಪ್ರಮಾಣ? ಎಂದರೆ: ಅದು ನಾರಾಯಣ-ವಾಸುದೇವರನ್ನು ಒಂದಾಗಿ ಹೇಳುವುದು–ಎನ್ನುತ್ತಾರೆ ಚಮತ್ಕಾರಿಗಳಾದ ಈ ಆಧುನಿಕವಿಮರ್ಶಕರು. ನಾರಾಯಣ-ವಾಸುದೇವರು ಈಚಿನವರು ಎಂಬುದಕ್ಕೆ ಏನು ಪ್ರಮಾಣ? ಎಂದರೆ : ಅದು ಈಚಿನ ಉಪನಿಷತ್ತಿನಲ್ಲಿ ಬಂದಿರುವುದು ಎನ್ನುತ್ತಾರೆ. ಹೀಗೆ ಅನ್ಯೋನ್ಯಾಶ್ರಯ

ದಲ್ಲಿ ಕೇಶವನ ಸಂಕೀರ್ತನೆಯಿಂದಲೇ ಚೆನ್ನಾಗಿ ಪಡೆಯಲು ಸಾಧ್ಯವಾಗುತ್ತದೆ.

**ಯತ್ಫಲಂ ನಾಸ್ತಿ ತಪಸಾ ನ ಯೋಗೇನ ಸಮಾಧಿನಾ ।**
**ತತ್ಫಲಂ ಲಭತೇ ಸಮ್ಯಕ್ ಕಲೌ ಕೇಶವಕೀರ್ತನಾತ್ ॥೬೮॥**

ಹೀಗೆ ಕಲಿಯುಗವು ಸಾರಹೀನವಾಗಿದ್ದರೂ ಈ ಒಂದು ದೃಷ್ಟಿಯಿಂದ ಸಾರಯುಕ್ತವೇ ಆಗಿರುವುದರಿಂದ ಈ ಯುಗದಲ್ಲಿ ಹುಟ್ಟಿದ ಜನರಿಗೆ ಸುಖವುಂಟಾಗಲೆಂದು ವಿಷ್ಣುರಾತಮಹಾರಾಜನ್ನು ಕಲಿಪುರುಷನನ್ನು ಕೊಲ್ಲಲಿಲ್ಲ. ಈ ಯುಗದಲ್ಲಿ ಜನರು ಕುಕರ್ಮಗಳಲ್ಲಿ ತೊಡಗಿರುವುದರಿಂದ ಎಲ್ಲ ವಸ್ತು ಗಳ ಸಾರವೂ ಕಳೆದುಹೋಗಿದೆ. ಭೂಮಿಯ ಎಲ್ಲ ಪದಾರ್ಥಗಳೂ ಬೀಜ ರಹಿತವಾದ ಹೊಟ್ಟುಗಳಂತೆ ನಿಸ್ಸಾರವಾಗಿಬಿಟ್ಟಿವೆ. ಬ್ರಾಹ್ಮಣರು ಮನೆ- ಮನೆಗೂ ಹೋಗಿ ಎಲ್ಲ ಜನರಿಗೂ ಭಾಗವತದ ಕಥೆಯನ್ನು ಕೇವಲ ಹೊಟ್ಟೆಹೊರೆಯುವ ಮತ್ತು ಹಣಸಂಪಾದನೆಯ ಆಸೆಯಿಂದ ಹೇಳುತ್ತಿರುವುದರಿಂದ ಕಥೆಯ ಸಾರವು ಹೊರಟುಹೋಯಿತು. ತೀರ್ಥಕ್ಷೇತ್ರಗಳಲ್ಲಿ ಅತಿಘೋರ ಕರ್ಮಗಳನ್ನು ಹೆಚ್ಚು-ಹೆಚ್ಚಾಗಿ ಮಾಡುವ ನಾಸ್ತಿಕರೂ ನರಕಯೋಗ್ಯರೂ ವಾಸಮಾಡುತ್ತಿರುವುದರಿಂದ ತೀರ್ಥಕ್ಷೇತ್ರಗಳಲ್ಲಿ ಸಾರವು ಇಲ್ಲವಾಯಿತು. ಕಾಮ, ಕ್ರೋಧ, ಮಿತಿಮೀರಿದ ಲೋಭ, ದುರಾಸೆ ಇತ್ಯಾದಿಗಳಿಂದ ಸುಡುತ್ತಿರುವ ಹೃದಯವುಳ್ಳ ಕಪಟಿಗಳು ತಪಸ್ವಿಗಳಂತೆ ವೇಷಧರಿಸಿ ಬೂಟಾಟಿಕೆ ಮಾಡುತ್ತಿರುವುದರಿಂದ ತಪಸ್ಸಿನ ಸಾರವು ಕಣ್ಮರೆಯಾಯಿತು. ಕಥಾಕಾಲಕ್ಷೇಪ, ತೀರ್ಥ, ತಪಸ್ಸು ಎಲ್ಲವೂ ಪ್ರಭಾವಹೀನವಾದುವು. ಧ್ಯಾನಕ್ಕೆ ಕುಳಿತವರಿಗೆ ಮನಸ್ಸಿನ ಮೇಲೆ ಹತೋಟಿಯಿಲ್ಲವಾದ್ದರಿಂದ ಅವರು ಲೋಭ, ದಂಭ ಮತ್ತು ಪಾಷಂಡಮತಗಳ ಆಶ್ರಯಪಡೆದರು. ಶಾಸ್ತ್ರಾಭ್ಯಾಸವನ್ನೂ ಮಾಡಲಿಲ್ಲ. ಆದ್ದರಿಂದ ಧ್ಯಾನಯೋಗದ ಸಾರವೂ ಹೊರಟುಹೋಯಿತು.

---

* ವಿಷ್ಣುರಾತಃ = ಪರೀಕ್ಷಿದ್ರಾಜ. ಅಶ್ವತ್ಥಾಮನ ಅಮೋಘವಾದ ಬ್ರಹ್ಮಶಿರೋऽಸ್ತ್ರದ ಆಕ್ರಮಣದಿಂದ ಬಂದ ಮೃತ್ಯುವಿನ ದೆಸೆಯಿಂದ ಶ್ರೀವಿಷ್ಣುವು (ಕೃಷ್ಣಪರಮಾತ್ಮನು) ಈತನನ್ನು ಸಂರಕ್ಷಿಸಿದ್ದರಿಂದ ಈತನಿಗೆ ಈ ಹೆಸರು. ಹಾಗೆಯೇ ಬ್ರಹ್ಮರಾತಃ– ಎಂದರೆ ಶುಕಮಹರ್ಷಿಗಳು. ಪರಬ್ರಹ್ಮಭಾವದಿಂದ ಸಂರಕ್ಷಿತರಾದವರು.

ಪಂಡಿತರೆನಿಸಿಕೊಳ್ಳುವವರು ತಮ್ಮ ಹೆಂಡಿರೊಡನೆ ಕೋಣಗಳಂತೆ ಕ್ರೀಡಿಸುತ್ತಿದ್ದಾರೆ. ಸಂತಾನವನ್ನು ಪಡೆಯುವುದರಲ್ಲಿ ದಕ್ಷರಾಗಿ ಮುಕ್ತಿಸಾಧನೆಯಲ್ಲಿ ಅಸಮರ್ಥರಾಗಿದ್ದಾರೆ. ಸತ್‌ಸಂಪ್ರದಾಯ ಪರಂಪರೆಯಿಂದ ಸಿದ್ಧವಾದ ವೈಷ್ಣವತ್ವವು ಎಲ್ಲಿಯೂ ಕಂಡುಬರುತ್ತಿಲ್ಲ. ಹೀಗೆ ಎಲ್ಲ ಕಡೆಗಳಲ್ಲೂ ಎಲ್ಲ ವಸ್ತುಗಳ ಸಾರವೂ ಲುಪ್ತವಾಗಿಬಿಟ್ಟಿದೆ. ಇದೆಲ್ಲಾ ಯುಗಧರ್ಮವೇ ಆಗಿರುವುದರಿಂದ ಇದರಲ್ಲಿ ಯಾರದೂ ತಪ್ಪಿಲ್ಲ. ಆದ್ದರಿಂದಲೇ ಪುಂಡರೀಕಾಕ್ಷನು ತುಂಬಾ ಹತ್ತಿರದಲ್ಲಿದ್ದರೂ ಇವೆಲ್ಲವನ್ನೂ ಸಹಿಸಿಕೊಳ್ಳುತ್ತಿದ್ದಾನೆ.”

ಸೂತಪುರಾಣಿಕರು ಶೌನಕರಿಗೆ ಹೇಳುತ್ತಾರೆ :

ಶೌನಕರೇ! ದೇವರ್ಷಿಗಳಾದ ನಾರದರ ಈ ಹೇಳಿಕೆಯನ್ನು ಕೇಳಿ ಭಕ್ತಿದೇವಿಗೆ ತುಂಬಾ ವಿಸ್ಮಯವಾಯಿತು. ಅವಳು ನಾರದರೊಡನೆ ಮಾತನ್ನು ಹೇಗೆ ಮುಂದುವರಿಸಿದಳೆಂಬುದನ್ನು ಹೇಳುತ್ತೇನೆ ; ಕೇಳಿರಿ.

ಭಕ್ತಿಯು ಹೀಗೆಂದಳು :

“ದೇವರ್ಷಿಗಳೇ! ತಾವು ಧನ್ಯರು. ನನ್ನ ಭಾಗ್ಯವಶದಿಂದಲೇ ಇಲ್ಲಿಗೆ ದಯಮಾಡಿಸಿದಿರಿ. ಏಕೆಂದರೆ : ಲೋಕದಲ್ಲಿ ಸಾಧುಗಳ ದರ್ಶನವು ಸಮಸ್ತ ಸಿದ್ಧಿಗಳಿಗೂ ಪರಮಕಾರಣವಾಗುವುದು. ತಮ್ಮ ಉಪದೇಶಾಮೃತವನ್ನು ಒಂದೇ ಒಂದು ಬಾರಿ ಕೇಳಿದರೂ ಅದನ್ನು ಧರಿಸಿದ ಕಯಾದುಪುತ್ರ ಪ್ರಹ್ಲಾದನು ಮಾಯೆಯನ್ನು ಜಯಿಸಿದನಲ್ಲವೇ! ತಮ್ಮ ಕರುಣೆಯಿಂದಲೇ ಅಲ್ಲವೇ ಧ್ರುವಕುಮಾರನು ಧ್ರುವವಾದ ಧ್ರುವಸ್ಥಾನವನ್ನು ಪಡೆದದ್ದು! ಇಂತಹ ಸಕಲಕುಶಲ-ಮಂಗಲಗಳಿಗೂ ಪಾತ್ರರಾಗಿರುವ ಬ್ರಹ್ಮಪುತ್ರರಾದ ತಮಗೆ ನಮೋ ನಮಃ!”

ಪದ್ಮಪುರಾಣದ ಉತ್ತರಖಂಡದಲ್ಲಿ ಬರುವ ಭಾಗವತಮಾಹಾತ್ಮ್ಯೆಯಲ್ಲಿ
ಭಕ್ತಿ-ನಾರದಸಮಾಗಮವೆಂಬ ಪ್ರಥಮಾಧ್ಯಾಯವು
ಮುಗಿಯಿತು.

---

# ಅಧ್ಯಾಯ ೨

# ಭಕ್ತಿದೇವಿಯ ದುಃಖವನ್ನು ಹೋಗಲಾಡಿಸಲು ನಾರದರ ಪ್ರಯತ್ನ

ನಾರದರು ಭಕ್ತಿದೇವಿಯನ್ನು ಕುರಿತು ಹೀಗೆಂದರು :

"ದೇವಿ! ಹೀಗೆ ವ್ಯರ್ಥವಾಗಿ ವಿಷಾದಪಡಬೇಡ. ಏಕೆ ಈ ಚಿಂತೆ? ಈ ದುಗುಡ? ಶ್ರೀಕೃಷ್ಣಪರಮಾತ್ಮನ ಅಡಿದಾವರೆಗಳನ್ನು ಸ್ಮರಣೆಮಾಡು. ನಿನ್ನ ದುಃಖವು ದೂರವಾಗುವುದು. ಯಾವನು ಕೌರವರ ಅತ್ಯಾಚಾರದ ದೆಸೆ ಯಿಂದ ದ್ರೌಪದಿಯನ್ನು ಸಂರಕ್ಷಿಸಿದನೋ ಮತ್ತು ಗೋಪಸುಂದರಿಯರನ್ನು ಕಾಪಾಡಿದನೋ ಆ ಶ್ರೀಕೃಷ್ಣನು ಎಲ್ಲಿಯೂ ಹೊರಟುಹೋಗಿಲ್ಲವಲ್ಲಾ! ಮೇಲಾಗಿ ನೀನು ಭಕ್ತಿದೇವಿಯೇ ಆಗಿದ್ದೀಯೆ ; ಆತನಿಗೆ ಪ್ರಿಯಳಾದವಳು. ಪ್ರಾಣಕ್ಕಿಂತಲೂ ಪ್ರಿಯಳಾದವಳು. ನೀನು ಕರೆದೆಯಾದರೆ ಆ ಭಗವಂತನು ನೀಚರ ಮನೆಗಾದರೂ ಹೋಗಿಬಿಡುವನು. *ಸತ್ಯಯುಗ-ತ್ರೇತಾಯುಗ-ದ್ವಾಪರಯುಗಗಳಲ್ಲಿ ಜ್ಞಾನ ಮತ್ತು ವೈರಾಗ್ಯಗಳು ಮುಕ್ತಿಗೆ ಸಾಧನ ಗಳಾಗುತ್ತವೆ. ಆದರೆ ಕಲಿಯುಗದಲ್ಲಿ ಕೇವಲ ಭಕ್ತಿಯೇ ಬ್ರಹ್ಮಸಾಯುಜ್ಯ ಮುಕ್ತಿಯನ್ನು ಉಂಟುಮಾಡುವುದು.

**ಸತ್ಯಾದಿತ್ರಿಯುಗೇ ಬೋಧವೈರಾಗ್ಯೌ ಮುಕ್ತಿಸಾಧಕೌ ।**
**ಕಲೌ ತು ಕೇವಲಾ ಭಕ್ತಿರ್ಬ್ರಹ್ಮಸಾಯುಜ್ಯಕಾರಿಣೀ ॥೪॥**

ಹೀಗೆಂದು ಯೋಚಿಸಿಯೇ ಪರಮಾನಂದಚಿನ್ಮೂರ್ತಿಯಾದ ಶ್ರೀಹರಿಯು, ಶ್ರೀಕೃಷ್ಣವಲ್ಲಭೆಯೂ ಪರಮಸುಂದರಿಯೂ ಆದ ನಿನ್ನನ್ನು ತನ್ನ ಸತ್‌ಸ್ವರೂಪದಿಂದ ಸೃಷ್ಟಿಮಾಡಿದನು. ಒಮ್ಮೆ ನೀನು ಆತನ ಮುಂದೆ ಕೈಜೋಡಿಸಿಕೊಂಡು 'ಸ್ವಾಮಿ! ನನಗೆ ಏನಪ್ಪಣೆ?' ಎಂದು ಕೇಳಿದೆ. ಆಗ ಆತನು 'ನನ್ನ ಭಕ್ತರನ್ನು ಪೋಷಣೆಮಾಡು'–ಎಂದು ನಿನಗೆ ಆಜ್ಞಾಪಿಸಿದನು. ನೀನು ಆ ಆಣತಿಯನ್ನು ಶಿರಸಾವಹಿಸಿದೆ. ಶ್ರೀಹರಿಯು ನಿನ್ನಲ್ಲಿ ತುಂಬಾ ಪ್ರಸನ್ನನಾಗಿ ನಿನಗೆ ಮುಕ್ತಿಯನ್ನು ದಾಸಿಯನ್ನಾಗಿಯೂ ಈ

---

* ಸತ್ಯಯುಗ = ಕೃತಯುಗ.

ಜ್ಞಾನ-ವೈರಾಗ್ಯಗಳನ್ನು ಪುತ್ರರನ್ನಾಗಿಯೂ ಕೊಟ್ಟು ಅನುಗ್ರಹಮಾಡಿದನು. ಅಂತೆಯೇ ನೀನು ನಿನ್ನ ನಿಜಸ್ವರೂಪದಿಂದ ವೈಕುಂಠಧಾಮದಲ್ಲಿ ಭಕ್ತರನ್ನು ಪೋಷಿಸುತ್ತಿದ್ದೀಯೆ. ಭೂಮಿಯಲ್ಲಿ ಭಕ್ತರನ್ನು ಪೋಷಿಸುವುದಕ್ಕಾಗಿಯೇ ನೀನು ನಿನ್ನ ಛಾಯೆಯ ರೂಪವನ್ನು ಧರಿಸಿಕೊಂಡಿದ್ದೀಯೆ. ಮುಕ್ತಿ, ಜ್ಞಾನ ಮತ್ತು ವಿರಕ್ತಿಗಳನ್ನು ಜೊತೆಯಲ್ಲಿ ಕರೆದುಕೊಂಡು ಭೂಮಿಗೆ ಇಳಿದು ಬಂದು ಕೃತಯುಗದಿಂದ ದ್ವಾಪರಯುಗದವರೆಗೆ ತುಂಬಾ ಆನಂದದಿಂದ ಇರುತ್ತಿದ್ದೆ. ಆದರೆ ಕಲಿಯುಗವು ಬಂದಾಗ ನಿನ್ನ ದಾಸಿಯಾದ ಮುಕ್ತಿಯು ಪಾಷಂಡ* ರೋಗದಿಂದ ಪೀಡಿತಳಾಗಿ ಕ್ಷೀಣಿಸತೊಡಗಿ, ನಿನ್ನ ಆಜ್ಞೆಯಂತೆ ಒಡನೆಯೇ ವೈಕುಂಠಕ್ಕೆ ಹೊರಟುಹೋದಳು ; ನೀನು ಸ್ಮರಣೆ ಮಾಡಿದರೆ ಈ ಲೋಕಕ್ಕೂ ಮತ್ತೆ ಹಿಂದಿರುಗುತ್ತಾಳೆ. ಆದರೆ ಈ ಜ್ಞಾನ-ವೈರಾಗ್ಯಗಳೆರಡನ್ನೂ ಪುತ್ರರೆಂದು ಭಾವಿಸಿ ನಿನ್ನ ಜೊತೆಯಲ್ಲಿಯೇ ಇರಿಸಿಕೊಂಡಿದ್ದೀಯೆ. ಆದರೆ ಕಲಿಯುಗದಲ್ಲಿ ಜನರು ಇವರನ್ನು ಉಪೇಕ್ಷೆಮಾಡುವುದರಿಂದ ನಿನ್ನ ಈ ಪುತ್ರರು ದುರ್ಬಲರಾಗಿ ಕಳೆಗುಂದಿ ವೃದ್ಧರಾಗಿಬಿಟ್ಟಿದ್ದಾರೆ. ಆದರೂ ನೀನು ಚಿಂತೆಪಡಬೇಡ. ಇವರು ಮತ್ತೆ ಜೀವಿತರಾಗಿ ಹೊಸತನವನ್ನು ಪಡೆಯುವ ಉಪಾಯವನ್ನು ನಾನು ಚಿಂತಿಸುತ್ತೇನೆ. ಎಲೌ ಸುಮುಖಿಯೇ! ಕಲಿಗೆ ಸಮಾನವಾದ ಬೇರೊಂದು ಯುಗವಿಲ್ಲ. ಈ ಯುಗದಲ್ಲಿ ನಾನು ನಿನ್ನನ್ನು ಮನೆ-ಮನೆಗಳಲ್ಲೂ ಪ್ರತಿಮನುಷ್ಯರಲ್ಲೂ ನೆಲೆಸುವಂತೆ ಮಾಡುತ್ತೇನೆ. ಇದೋ ನೋಡು, ಇತರ ಎಲ್ಲ ಧರ್ಮಗಳನ್ನೂ ಬದಿಯಲ್ಲಿಟ್ಟು ಭಕ್ತಿಪೂರ್ವಕವಾಗಿ ಮಹೋತ್ಸವಗಳನ್ನೇ ಮುಂದಿಟ್ಟುಕೊಂಡು ನಿನ್ನ ಪ್ರಚಾರವನ್ನು ಮಾಡದೇ ಇದ್ದರೆ ನಾನು ಶ್ರೀಹರಿಯ ದಾಸನೇ ಅಲ್ಲ. ಈ ಯುಗದಲ್ಲಿ ನಿನ್ನೊಡನೆ ಯಾರು ಕೂಡಿರುತ್ತಾರೆಯೋ ಆ ಜೀವರು ಪಾಪಿಗಳಾಗಿದ್ದರೂ ಭಯರಹಿತವಾದ ಶ್ರೀಕೃಷ್ಣಧಾಮಕ್ಕೆ ನಿರ್ಭಯರಾಗಿ ಹೋಗುತ್ತಾರೆ. ಪ್ರೇಮರೂಪಿಣಿಯಾದ ಭಕ್ತಿಯು ಯಾರ ಚಿತ್ತದಲ್ಲಿ ಸದಾ ನೆಲೆಸಿರುವುದೋ–ಪರಿಶುದ್ಧಚಿತ್ತರಾದ ಆ ಸುಕೃತಿಗಳು ಕನಸಿನಲ್ಲೂ ಯಮರಾಜನನ್ನು ನೋಡುವುದಿಲ್ಲ. ಪ್ರೇತಗಳಾಗಲೀ, ಪಿಶಾಚಗಳಾಗಲೀ, ರಾಕ್ಷಸರಾಗಲೀ, ಅಸುರರಾಗಲೀ–ಯಾರೂ ಭಕ್ತಿಯುತವಾದ ಮನಸ್ಸುಳ್ಳ

---

* ಪಾಷಂಡ = ಮೋಸದ ಧರ್ಮ, ಧರ್ಮದ ಸೋಗನ್ನು ಧರಿಸಿದ ಅಧರ್ಮ.

ಮಹಾತ್ಮರನ್ನು ಮುಟ್ಟುವುದಕ್ಕೂ ಸಮರ್ಥರಾಗುವುದಿಲ್ಲ. ಶ್ರೀಭಗವಂತನನ್ನು ತಪಸ್ಸಿನಿಂದಾಗಲೀ, ವೇದಾಧ್ಯಯನದಿಂದಾಗಲೀ, ಜ್ಞಾನದಿಂದಾಗಲೀ, ಕರ್ಮದಿಂದಾಗಲೀ ಯಾವುದರಿಂದಲೂ ವಶಪಡಿಸಿಕೊಳ್ಳಲಾಗುವುದಿಲ್ಲ. ಆದರೆ ಕೇವಲ ಭಕ್ತಿಯಿಂದಲೇ ವಶಪಡಿಸಿಕೊಳ್ಳಬಹುದು. ಇದಕ್ಕೆ ಗೋಪಿಕಾಸ್ತ್ರೀಯರೇ ಪ್ರಮಾಣ. ಮನುಷ್ಯರಿಗೆ ಸಾವಿರಾರು ಜನ್ಮಗಳ ಪುಣ್ಯಗಳ ಪ್ರಭಾವವಿದ್ದರೆ ಮಾತ್ರ ಭಕ್ತಿಯಲ್ಲಿ ಪ್ರೀತಿಯುಂಟಾಗುತ್ತದೆ. ಕಲಿಯುಗದಲ್ಲಿ ಭಕ್ತಿಯೇ ಸಾರಿಷ್ಠವಾದ ಸಾಧನ. ಭಕ್ತಿಯಿಂದ ಶ್ರೀಕೃಷ್ಣನೇ ಕಣ್ಣುಗಳ ಮುಂದೆ ಕಾಣಿಸಿಕೊಳ್ಳುತ್ತಾನೆ. ಭಕ್ತಿಗೆ ಯಾರು ದ್ರೋಹಮಾಡುತ್ತಾರೋ ಅವರು ಮೂರು ಲೋಕಗಳಲ್ಲೂ ದುಃಖಕ್ಕೆ ಸಿಲುಕಿಕೊಳ್ಳುತ್ತಾರೆ. ಹಿಂದೆ ಭಕ್ತರನ್ನು ತಿರಸ್ಕರಿಸಿದ್ದಕ್ಕಾಗಿ ದುರ್ವಾಸಮಹರ್ಷಿಯೂ ದುಃಖಕ್ಕೆ ಈಡಾಗಲಿಲ್ಲವೇ? ವ್ರತಗಳೂ ಬೇಡ. ತೀರ್ಥಯಾತ್ರೆಗಳೂ ಬೇಕಿಲ್ಲ. ಯೋಗಗಳೂ ಬೇಡ. ಯಜ್ಞಗಳನ್ನೂ ಸಾಕುಮಾಡಿರಿ. ಜ್ಞಾನಕಥಾಚರ್ಚೆಗಳಾದರೂ ಏಕೆ? ಇವು ಯಾವುವೂ ಬೇಕಿಲ್ಲ ; ಭಕ್ತಿಯೊಂದೇ ಮುಕ್ತಿಯನ್ನು ಕೊಡುವುದು."

**ಅಲಂ ವ್ರತೈರಲಂ ತೀರ್ಥೈರಲಂ ಯೋಗೈರಲಂ ಮಖೈಃ ।**
**ಅಲಂ ಜ್ಞಾನಕಥಾಲಾಪೈರ್ಭಕ್ತಿರೇಕೈವ ಮುಕ್ತಿದಾ ॥೨೧॥**

ಸೂತಪುರಾಣಿಕರು ಶೌನಕಾದಿಗಳಿಗೆ ಹೇಳುತ್ತಾರೆ :

"ಹೀಗೆ ಶ್ರೀ ನಾರದಮಹರ್ಷಿಗಳು ನಿರ್ಣಯಿಸಿ ಹೇಳಿದ ತನ್ನ ಮಾಹಾತ್ಮ್ಯವನ್ನು ಕೇಳಿ ಸರ್ವಾಂಗಗಳಲ್ಲಿಯೂ ಪುಷ್ಟಿಗೊಂಡ ಭಕ್ತಿ ದೇವಿಯು ನಾರದರನ್ನು ಅಭಿನಂದಿಸಿ ಹೀಗೆ ಪ್ರಾರ್ಥಿಸಿದಳು :

"ನಾರದರೇ! ನೀವು ಧನ್ಯರು! ಅತಿಧನ್ಯರು! ನನ್ನಲ್ಲಿ ನಿಮಗೆ ಎಷ್ಟು ನಿಶ್ಚಲವಾದ ಪ್ರೀತಿ! ನಾನು ನಿಮ್ಮನ್ನು ಎಂದಿಗೂ ಬಿಡದೇ ನಿಮ್ಮ ಹೃದಯದಲ್ಲಿ ನೆಲೆಸಿರುತ್ತೇನೆ. ಓ ಸಾಧುಶ್ರೇಷ್ಠರೇ! ಕರುಣಾಳುಗಳಾದ ನೀವು ಕ್ಷಣಕಾಲದಲ್ಲೇ ನನ್ನ ಪೀಡೆಯನ್ನು ಹೋಗಲಾಡಿಸಿದಿರಿ. ಆದರೆ ಈ ಪುತ್ರರಿಗೆ ಪ್ರಜ್ಞೆ ಬಂದಿಲ್ಲವಲ್ಲಾ! ಅವರನ್ನು ಎಚ್ಚರಪಡಿಸಿರಿ. ಅವರಿಗೆ ಚೈತನ್ಯ ಬರುವಂತೆ ಮಾಡಿರಿ."

ಸೂತರು ಕಥೆಯನ್ನು ಮುಂದುವರಿಸುತ್ತಾರೆ :

"ಆಕೆಯ ಆ ಮಾತುಗಳನ್ನು ಕೇಳಿ ನಾರದರಿಗೆ ತುಂಬಾ ಕರುಣೆ ಯುಂಟಾಯಿತು. ಅವರು ಕೈತುದಿಯಿಂದ ಮುಟ್ಟಿ ಅಲ್ಲಾಡಿಸುತ್ತಾ ಆ ಜ್ಞಾನ-ವೈರಾಗ್ಯಗಳನ್ನು ಎಚ್ಚರಪಡಿಸತೊಡಗಿದರು. ಮತ್ತೆ ಅವರ ಕಿವಿದೆರೆ ಗಳಲ್ಲಿ ತಮ್ಮ ಬಾಯನ್ನಿಟ್ಟು ಉಚ್ಚಸ್ವರದಿಂದ "ಓ ಜ್ಞಾನವೇ! ಎಚ್ಚರಗೊಳ್ಳು; ಎಚ್ಚರಗೊಳ್ಳಯ್ಯಾ ಓ ವೈರಾಗ್ಯ!" ಎಂದು ಹೇಳತೊಡಗಿದರು. ಮತ್ತೆ ವೇದ ಮತ್ತು ಉಪನಿಷತ್ತುಗಳ ಧ್ವನಿಗಳಿಂದಲೂ ಶ್ರೀಭಗವದ್ಗೀತೆಯ ಪಾರಾಯಣ ಗಳಿಂದಲೂ ಬಲವಂತವಾಗಿ ಎಚ್ಚರಗೊಳಿಸಲು ಪ್ರಯತ್ನಿಸಿದಾಗ ಅವರು ಹೇಗು ಹೇಗೋ ಎದ್ದರು. ಆದರೆ ಆಲಸ್ಯದಿಂದ ಆಕಳಿಸುತ್ತಾ ಕಣ್ಣು ತೆರೆದು ನೋಡಲಾರದೇ ಹೋದರು. ಅವರ ಕೂದಲುಗಳು ಬಕಪಕ್ಷಿಯಂತೆ ಬೆಳ್ಳಗಾಗಿಬಿಟ್ಟಿದ್ದುವು. ಅಂಗಗಳು ಸಾಮಾನ್ಯವಾಗಿ ಒಣಗಿದ ಕಟ್ಟಿಗೆಯಂತೆ ಆಗಿಬಿಟ್ಟಿದ್ದುವು. ಹಸಿವು-ಬಾಯಾರಿಕೆಗಳಿಂದ ಕ್ಷೀಣಿಸಿ ದುರ್ಬಲರಾದ ಅವರು ಮತ್ತೆ ನಿದ್ರಿಸತೊಡಗಿದ್ದನ್ನು ಕಂಡು ನಾರದರು ತುಂಬಾ ಚಿಂತಾಕುಲರಾದರು. ಏನು ಮಾಡಬೇಕೆಂಬುದೇ ಅವರಿಗೆ ತೋಚಲಿಲ್ಲ. 'ಅಯ್ಯೋ! ಇವರ ಈ ನಿದ್ರೆಯನ್ನು ಹೇಗೆ ಹೋಗಿಸುವುದು? ಅದ ಕ್ಕಿಂತಲೂ ದೊಡ್ಡದಾಗಿ ಇವರ ವೃದ್ಧತ್ವವನ್ನು ಹೇಗೆ ತಾನೇ ಕಳೆಯುವುದು?'–ಎಂದು ಚಿಂತಿಸುತ್ತಾ ಅವರು ಶ್ರೀಗೋವಿಂದನನ್ನು ಸ್ಮರಿಸತೊಡಗಿದರು. ಆಗ ಹೀಗೆ ಆಕಾಶವಾಣಿಯೊಂದು ಕೇಳಿಸಿತು : "ಕಳವಳಪಡಬೇಡಿ ಮಹರ್ಷಿಗಳೇ! ನಿಮ್ಮ ಪ್ರಯತ್ನವು ಖಂಡಿತವಾಗಿಯೂ ಈಡೇರುವುದು. ಇದರಲ್ಲಿ ಸಂಶಯವಿಲ್ಲ. ಆದರೆ ಇದಕ್ಕೋಸ್ಕರ ನೀವು ಒಂದು ಸತ್ಕರ್ಮ ವನ್ನು ಆಚರಿಸಬೇಕಾಗುವುದು. ಓ ದೇವರ್ಷಿಗಳೇ! ಆ ಕರ್ಮವು ಯಾವುದೆಂಬುದನ್ನು ಸಂತಶಿರೋಮಣಿಗಳು ನಿಮಗೆ ತಿಳಿಸುತ್ತಾರೆ. ಆ ಸತ್ಕರ್ಮವನ್ನು ಆಚರಿಸಿದ ಕ್ಷಣದಲ್ಲಿಯೇ ಇವರ ಮುಪ್ಪೂ-ನಿದ್ರೆಯೂ ಹೊರಟು ಹೋಗುವುವು ಮತ್ತು ಭಕ್ತಿಯು ಎಲ್ಲೆಡೆಯಲ್ಲೂ ಹರಡುವುದು." ಈ ಆಕಾಶವಾಣಿಯು ಅಲ್ಲಿ ಎಲ್ಲರಿಗೂ ಸ್ಪಷ್ಟವಾಗಿ ಕೇಳಿಸಿತು. ನಾರದಮಹರ್ಷಿಗಳಿಗೆ ಇದರಿಂದ ತುಂಬಾ ಆಶ್ಚರ್ಯವಾಯಿತು. ಅದರ ಆಶಯವೇನೆಂಬುದು ತಿಳಿಯಲಿಲ್ಲವಲ್ಲಾ! ಎಂದು ಅವರು ಅಚ್ಚರಿಗೊಂಡು ಹೀಗೆಂದರು :

“ಈ ಆಕಾಶವಾಣಿಯೂ ಗುಪ್ತವಾದ ಅಭಿಪ್ರಾಯವನ್ನೇ ಹೇಳಿಬಿಟ್ಟಿದೆ! ಈ ಜ್ಞಾನ-ವೈರಾಗ್ಯರ ಕಾರ್ಯವು ಸಿದ್ಧಿಸಲು ಮಾಡಬೇಕಾದ ಸಾಧನವಾದರೂ ಏನು? ಅದನ್ನು ಹೇಳುವಂತಹ ಸಂತರು ಎಲ್ಲಿರುತ್ತಾರೆ? ಅವರು ಆ ಸಾಧನವನ್ನು ಹೇಗೆ ತಿಳಿಸುತ್ತಾರೆ? ಈ ಆಕಾಶವಾಣಿಯು ಹೇಳಿದ್ದಕ್ಕೆ ಅನುಗುಣವಾಗಿ ನಾನು ಮಾಡತಕ್ಕದ್ದಾದರೂ ಏನು?”

ಸೂತಪುರಾಣಿಕರು ಶೌನಕರಿಗೆ ಕಥೆಯನ್ನು ಮುಂದುವರಿಸಿ ಹೇಳುತ್ತಾರೆ:

“ನಾರದಮುನಿಗಳು ಆ ಇಬ್ಬರನ್ನೂ ಅಲ್ಲಿಯೇ ಬಿಟ್ಟು ಅಲ್ಲಿಂದ ಹೊರಟರು. ಪ್ರತಿಯೊಂದು ತೀರ್ಥಕ್ಷೇತ್ರಕ್ಕೂ ಹೋಗುತ್ತಾ ದಾರಿಯಲ್ಲಿ ಮುನೀಶ್ವರರನ್ನು ಆ ಸಾಧನ ಯಾವುದೆಂದು ಪ್ರಶ್ನಿಸಿದರು. ಆ ವೃತ್ತಾಂತವನ್ನು ಎಲ್ಲ ಮುನಿಗಳೂ ಕೇಳಿದರೂ ನಿಶ್ಚಿತವಾದ ಉತ್ತರವನ್ನು ಯಾರೂ ಕೊಡ ಲಾರದೇ ಹೋದರು. ಕೆಲವರು ಅದು ಅಸಾಧ್ಯವೆಂದು ಹೇಳಿದರು. ಅದನ್ನು ತಿಳಿಯುವುದು ತುಂಬಾ ಕಷ್ಟವೆಂದು ಮತ್ತೆ ಕೆಲವರು ತಿಳಿಸಿದರು. ಇನ್ನು ಕೆಲವರು ಉತ್ತರಕೊಡಲಾರದೇ ಮೌನವನ್ನು ತಾಳಿದರು. ಉಳಿದವರು ತಮಗೆ ಅವಮಾನವಾಗುವುದೆಂಬ ಭಯದಿಂದ ಓಡಿಹೋದರು. ಮೂರು ಲೋಕಗಳಲ್ಲೂ ಆಶ್ಚರ್ಯಕರವಾದ ಹಾಹಾಕಾರವುಂಟಾಯಿತು. ವೇದ-ವೇದಾಂತಗಳ ಘೋಷಗಳಿಂದ ಮತ್ತು ಗೀತಾಪಾಠಗಳಿಂದ ಬೋಧಿಸ ಲ್ಪಟ್ಟರೂ ಆ ಭಕ್ತಿ-ಜ್ಞಾನ-ವೈರಾಗ್ಯಗಳೆಂಬ ಮೂವರೂ ಏಳಲಿಲ್ಲವಂತೆ. ಇನ್ನು ಬೇರೆ ಯಾವ ಉಪಾಯವೂ ಇರಲಿಕ್ಕೆ ಶಕ್ಯವಿಲ್ಲವೆಂದು ಜನರು ಕಿವಿ ಗಳಲ್ಲಿ ಪಿಸುಮಾತನ್ನಾಡತೊಡಗಿದರು. ಯೋಗಿಗಳಾದ ನಾರದರಿಗೂ ತಿಳಿ ಯದೇ ಹೋದ ವಿಷಯವನ್ನು ಇತರ ಮನುಷ್ಯರು ತಿಳಿಸಲು ಹೇಗೆ ಸಾಧ್ಯ ವಾದೀತು? ಹೀಗೆ ಯಾವ ಋಷಿಗಳನ್ನು ಕೇಳಿದರೂ ಉತ್ತರವು ದುಸ್ಸಾಧ್ಯ ವೆಂದೇ ಎಲ್ಲರೂ ತಮ್ಮ ನಿರ್ಣಯವನ್ನು ತಿಳಿಸಿದರು. ಅನಂತರ ನಾರದರು ಚಿಂತೆಯಿಂದ ವ್ಯಾಕುಲರಾಗಿ ಬದರೀಕ್ಷೇತ್ರಕ್ಕೆ ಹೋದರು. ಅಲ್ಲಿ ಆ ಮಹೋ ಪಾಯವನ್ನು ತಿಳಿದುಕೊಳ್ಳಲು ತಪಸ್ಸನ್ನು ಮಾಡುವುದಾಗಿ ನಿಶ್ಚಯಮಾಡಿ ದರು. ಅದೇ ಸಮಯದಲ್ಲಿ ಅವರಿಗೆ ಸನಕಾದಿಮುನೀಶ್ವರರು ಮುಂದುಗಡೆ

ಗೋಚರಿಸಿದರು. ಕೋಟಿಸೂರ್ಯರಂತೆ ತೇಜಸ್ಸಿನಿಂದ ಬೆಳಗುತ್ತಿದ್ದ ಆ ಮುನಿಶ್ರೇಷ್ಠರನ್ನು ಕಂಡು ನಾರದರು ಅವರಲ್ಲಿ ಹೀಗೆ ಬಿನ್ನೈಸಿದರು :

"ಎಲೈ ಬ್ರಹ್ಮಕುಮಾರರೇ! ನನ್ನ ಪರಮಭಾಗ್ಯದಿಂದ ಈಗ ನಿಮ್ಮ ದರ್ಶನವಾಯಿತು. ಮಹಾತ್ಮರೇ! ನನ್ನ ಮೇಲೆ ಕರುಣೆಯಿಟ್ಟು ಶೀಘ್ರವಾಗಿ ನನಗೆ ಆ ಸಾಧನವನ್ನು ತಿಳಿಸಿರಿ. ನೀವೆಲ್ಲರೂ ಮಹಾಯೋಗಿಗಳು, ಮಹಾ ಬುದ್ಧಿಶಾಲಿಗಳು ಮತ್ತು ಬಹುಶ್ರುತವಿದ್ವಾಂಸರು. ನೋಡುವುದಕ್ಕೆ ಐದು ವರ್ಷದ ಬಾಲಕರಂತೆ ಕಂಡರೂ ಹಿಂದೆ ಹುಟ್ಟಿದ ಅತಿಪುರಾತನರಿಗಿಂತಲೂ ಹಿಂದೆ ಹುಟ್ಟಿದವರು; ಸದಾ ವೈಕುಂಠಧಾಮದಲ್ಲಿ ಇರುತ್ತಾ ನಾರಾಯಣನ ಕೀರ್ತನೆಯಲ್ಲಿ ತತ್ಪರರಾಗಿರುವವರು. ಭಗವಂತನ ಲೀಲಾಮೃತರಸವನ್ನು ಆಸ್ವಾದನೆಮಾಡುತ್ತಾ ಸದಾ ಅದರಲ್ಲಿಯೇ ದಿವ್ಯವಾದ ಹುಚ್ಚೇರಿದವರು. ಭಗವತ್ಕಥೆಯೊಂದನ್ನೇ ಜೀವನಾಧಾರವನ್ನಾಗಿ ಹೊಂದಿರುವವರು. 'ಶ್ರೀಹರಿಯೇ ನಮಗೆ ಶರಣ್ಯನು' ಎಂಬ ಮಾತೇ ಸದಾ ನಿಮ್ಮ ಬಾಯಿಂದ ಬರುತ್ತಿರುತ್ತದೆ. ಆದ್ದರಿಂದ ಕಾಲನಿಂದ ಪ್ರೇರಿತವಾದ ಮುಪ್ಪು ನಿಮ್ಮನ್ನು ಬಾಧೆಪಡಿಸುತ್ತಿಲ್ಲ. ಹಿಂದೆ ನಿಮ್ಮ ಹುಬ್ಬಿನಾಟಮಾತ್ರದಿಂದಲೇ ಶ್ರೀಹರಿಯ ದ್ವಾರಪಾಲಕರಾದ ಜಯ-ವಿಜಯರು ಒಡನೆಯೇ ಭೂಮಿಗೆ ಬಿದ್ದುಬಿಟ್ಟರು. ಮತ್ತೆ ನಿಮ್ಮ ಕರುಣೆಯಿಂದಲೇ ವೈಕುಂಠಪುರಿಗೆ ಪುನಃ ಏರಿದರು. ಇಂತಹ ನಿಮ್ಮ ದರ್ಶನವಾಯಿತಲ್ಲ, ಎಂತಹ ಭಾಗ್ಯಯೋಗ ನನ್ನದು! ದಯಾಪರರಾದ ನೀವು ದೀನನಾದ ನನ್ನಲ್ಲಿ ಅನುಗ್ರಹಮಾಡಬೇಕು. ಅಶರೀರವಾಣಿಯು ನುಡಿದ ಆ ಸಾಧನವು ಯಾವುದೆಂಬುದನ್ನು ಹೇಳೋಣವಾಗಲಿ. ಅದನ್ನು ಹೇಗೆ ಅನುಷ್ಠಾನಮಾಡಬೇಕು–ಎಂಬುದನ್ನೂ ವಿಸ್ತಾರವಾಗಿ ತಿಳಿಸಿರಿ. ಭಕ್ತಿ-ಜ್ಞಾನ-ವೈರಾಗ್ಯಗಳಿಗೆ ಸುಖ-ಶಾಂತಿಗಳು ಹೇಗೆ ಉಂಟಾಗುತ್ತವೆ? ಯಾವ ರೀತಿಯಲ್ಲಿ ಅವುಗಳನ್ನು ಎಲ್ಲ ವರ್ಗಗಳಲ್ಲೂ ಪ್ರೇಮಪೂರ್ವಕವಾಗಿ ಪ್ರಯತ್ನದಿಂದ ನೆಲೆಗೊಳಿಸಬಹುದು ಎಂಬುದನ್ನೂ ತಿಳಿಸಿರಿ."

ಅವರಿಗೆ ಸನಕಾದಿಕುಮಾರರು ಹೀಗೆ ಉತ್ತರ ನೀಡಿದರು :

"ಓ ದೇವರ್ಷಿಯೇ! ಚಿಂತೆಪಡಬೇಡ. ಮನಸ್ಸಿಗೆ ಹರ್ಷವನ್ನು ತಂದುಕೋ. ಅವರ ಉದ್ಧಾರಕ್ಕೆ ಒಂದು ಸುಖಸಾಧ್ಯವಾದ ಉಪಾಯವು

ಹಿಂದಿನಿಂದಲೂ ಇದೆ. ಎಂತಹ ಧನ್ಯನು ನೀನು! ವಿರಕ್ತರ ಶಿರೋಮಣಿ. ಶ್ರೀಕೃಷ್ಣನ ದಾಸರಿಗೆ ಯಾವಾಗಲೂ ಮುಂದಾಳಾಗಿರುವೆ. ಯೋಗಭಾಸ್ಕರನು ನೀನು. ಶ್ರೀಕೃಷ್ಣಭಕ್ತನಾದ ನೀನು ಭಕ್ತಿಯ ಕಾರ್ಯವನ್ನು ಅನುವರ್ತಿಸು ತ್ತಿರುವುದರಲ್ಲಿ ಆಶ್ಚರ್ಯವೇನಿಲ್ಲ. ಬಹುಮಂದಿ ಋಷಿಗಳು ಲೋಕದಲ್ಲಿ ನಾನಾಮಾರ್ಗಗಳನ್ನು ಪ್ರಕಟಿಸಿದ್ದಾರೆ. ಆದರೆ ಅವೆಲ್ಲವೂ ಸಾಮಾನ್ಯವಾಗಿ ಸ್ವರ್ಗಫಲವನ್ನೇ ಕೊಡತಕ್ಕುವು. ಅವುಗಳನ್ನು ಅನುಸರಿಸುವುದೂ ಶ್ರಮಸಾಧ್ಯ. ಆದರೆ ವೈಕುಂಠಧಾಮವನ್ನು ಕೊಡುವ ಮಾರ್ಗವೊಂದುಂಟು. ಅದು ರಹಸ್ಯವೇ ಆಗಿದೆ. ಅದನ್ನು ಉಪದೇಶಮಾಡುವ ಮನುಷ್ಯನು ಸಾಮಾನ್ಯವಾಗಿ ಭಾಗ್ಯವಶದಿಂದಲೇ ದೊರೆಯಬೇಕು. ಆಕಾಶವಾಣಿಯು ನಿನಗೆ ನಿರ್ದೇಶಮಾಡಿದ ಸತ್ಕರ್ಮವು ಯಾವುದೆಂಬುದನ್ನು ಈಗ ಹೇಳುತ್ತೇವೆ ; ಕೇಳು : ಸ್ಥಿರವೂ, ಪ್ರಸನ್ನವೂ ಆದ ಚಿತ್ತದಿಂದ ಕೇಳುವವ ನಾಗು. ನಾರದ! ದ್ರವ್ಯಯಜ್ಞಗಳೂ, ತಪೋಯಜ್ಞಗಳೂ, *ಯೋಗಯಜ್ಞ ಗಳೂ ಮತ್ತು ಹಾಗೆಯೇ ಬೇರೆ ಸ್ವಾಧ್ಯಾಯಜ್ಞಾನಯಜ್ಞಗಳೂ ಉಂಟು. ಅವೆಲ್ಲವೂ ಸ್ವರ್ಗಾದಿಗಳನ್ನು ಕೊಡುವ ಕರ್ಮಗಳನ್ನೇ ಸಂಕೇತಿಸುತ್ತವೆ. ಜ್ಞಾನಿಗಳು ಜ್ಞಾನಯಜ್ಞವನ್ನೇ ಮುಕ್ತಿದಾಯಕವಾದ ಸತ್ಕರ್ಮವೆಂದು ಸೂಚಿಸುತ್ತಾರೆ. ಶುಕರೇ ಮುಂತಾದ ಮಹಾತ್ಮರು ಗಾನಮಾಡಿರುವ ಶ್ರೀಮದ್ಭಾಗವತದ ಪಾರಾಯಣವೇ ಆ ಸತ್ಕರ್ಮ. ಆ ಶ್ರೀಮದ್ಭಾಗವತದ ಘೋಷವನ್ನು ಕೇಳಿದರೆ ಭಕ್ತಿ-ಜ್ಞಾನ-ವೈರಾಗ್ಯಗಳಿಗೆ ಮಹಾಬಲವು ಬರು

---

* ಇಲ್ಲಿ ತಪೋಯಜ್ಞ– ಯೋಗಯಜ್ಞಗಳೆಂದರೆ ಅಣಿಮಾದಿ ಅಷ್ಟಸಿದ್ಧಿಗಳನ್ನು ಕೊಡುವ ತಪಸ್ಸು-ಯೋಗಗಳು. ಸ್ವಾಧ್ಯಾಯಜ್ಞಾನಯಜ್ಞ ಎಂದರೆ ಕರ್ಮಕಾಂಡದ ಅಧ್ಯಯನದಿಂದ ಉಂಟಾಗುವ ಪವಿತ್ರಜ್ಞಾನವನ್ನುಂಟುಮಾಡುವ ಯಜ್ಞ. ಶ್ರೀಮದ್ಭಾಗವತ ಪಾರಾಯಣವು ಆಧ್ಯಾತ್ಮಜ್ಞಾನಯಜ್ಞವಾದ್ದರಿಂದ ಇವುಗಳೆಲ್ಲಕ್ಕಿಂತಲೂ ಶ್ರೇಷ್ಠವಾದುದು.

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥
ಶ್ರೇಯಾನ್ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥

[ಹೋಲಿಸಿ : ಶ್ರೀಗೀತಾ ಅಧ್ಯಾಯ 4-ಶ್ಲೋಕ 28 ಮತ್ತು 33]

ತ್ತದೆ. ಜ್ಞಾನ-ವೈರಾಗ್ಯಗಳ ಕಷ್ಟವು ತೊಲಗಿ ಭಕ್ತಿದೇವಿಗೆ ಸಂತೋಷ ವುಂಟಾಗುತ್ತದೆ. ಸಿಂಹಗರ್ಜನೆಯನ್ನು ಕೇಳಿದೊಡನೆಯೇ ತೋಳಗಳು ಓಡಿ ಹೋಗುವಂತೆ—ಈ ಶ್ರೀಮದ್ಭಾಗವತದ ಧ್ವನಿಯನ್ನು ಕೇಳಿದೊಡನೆಯೇ ಎಲ್ಲ ಕಲಿದೋಷಗಳೂ ಪಲಾಯನಮಾಡುತ್ತವೆ. ಅನಂತರ ಪ್ರೇಮರಸವನ್ನು ಹರಿಸುವ ಭಕ್ತಿಯು ಜ್ಞಾನ-ವೈರಾಗ್ಯಸಹಿತವಾಗಿ ಪ್ರತಿಮನೆಯಲ್ಲೂ ಪ್ರತಿ ಮನುಷ್ಯನ ಹೃದಯದಲ್ಲೂ ನಲಿದಾಡುವುದು."

ಸನಕಾದಿಗಳು ಹೀಗೆನ್ನಲು ನಾರದರು ಅವರನ್ನು ಪುನಃ ಪ್ರಶ್ನಿಸಿದರು :

"ಭಕ್ತಿ-ಜ್ಞಾನ-ವೈರಾಗ್ಯಗಳೆಂಬ ಆ ಮೂವರು ವೇದ-ವೇದಾಂತ ಘೋಷಗಳನ್ನೂ, ಗೀತಾಪಾಠಗಳನ್ನೂ ಕೇಳಿಸಲ್ಪಟ್ಟರೂ ಏಳಲಿಲ್ಲ. ಹಾಗಿರು ವಾಗ ಶ್ರೀಮದ್ಭಾಗವತವನ್ನು ಕೇಳಿಸಲ್ಪಟ್ಟರೆ ಮಾತ್ರ ಹೇಗೆ ಎಚ್ಚರಗೊಳ್ಳು ತ್ತಾರೆ? ಶ್ರೀಮದ್ಭಾಗವತದಲ್ಲಿ ಪ್ರತಿಶ್ಲೋಕದಲ್ಲೂ ಪ್ರತಿಯೊಂದು ಪದದಲ್ಲೂ ಇರುವುದೂ ವೇದಾರ್ಥವೇ ಅಲ್ಲವೇ? ಶರಣಾಗತವತ್ಸಲರೂ ಅಮೋಘ ವಾದ ದರ್ಶನವುಳ್ಳವರೂ ಆಗಿರುವ ತಾವು ಈ ಸಂಶಯವನ್ನು ಒಡನೆಯೇ ಪರಿಹರಿಸಬೇಕು. ದಯೆಯಿಟ್ಟು ಈ ವಿಷಯದಲ್ಲಿ ತಡಮಾಡಬೇಡಿರಿ."

ಸನಕಾದಿಕುಮಾರರು ಅವರಿಗೆ ಹೀಗೆ ಉತ್ತರ ಕೊಟ್ಟರು :

"ಶ್ರೀಮದ್ಭಾಗವತದ ಕಥೆಯು ವೇದ ಮತ್ತು ಉಪನಿಷತ್ತುಗಳ ಸಾರದಿಂದಲೇ ಆಗಿದೆ. ಆದ್ದರಿಂದ ಅವುಗಳಿಂದ ಬೇರೆಯಾಗಿ ಅವುಗಳ ಫಲರೂಪವಾಗಿರುವುದರಿಂದ ಇದು ಅವುಗಳಿಗಿಂತಲೂ ಅತ್ಯುತ್ತಮವಾಗಿದೆ. ಉದಾಹರಣೆಗೆ ಒಂದು ವೃಕ್ಷದಲ್ಲಿ ರಸವು ಅದರ ಬೇರಿನಿಂದ ಕೊಂಬೆಗಳ ತುದಿಯವರೆಗೂ ವ್ಯಾಪಿಸಿರುತ್ತದೆ. ಆದರೆ ಆ ಸ್ಥಿತಿಯಲ್ಲಿ ಆ ರಸವನ್ನು ಆಸ್ವಾದಿಸಲಾಗುವುದಿಲ್ಲ. ಅದೇ ಅವುಗಳಿಂದ ಬೇರೆಯಾಗಿ ಹಣ್ಣಿನ ರೂಪದಲ್ಲಿ ಬಂದರೆ ಪ್ರಪಂಚದಲ್ಲಿ ಎಲ್ಲರಿಗೂ ಪ್ರಿಯವಾಗುತ್ತದೆ. ಹಾಲಿ ನಲ್ಲಿ ತುಪ್ಪವು ವ್ಯಾಪಿಸಿರುತ್ತದೆ. ಆದರೆ ಆ ವ್ಯಾಪಿಸಿರುವ ತುಪ್ಪವನ್ನು ಹಾಗೆಯೇ ಸವಿಯಲಾಗುವುದಿಲ್ಲ. ಆ ಹಾಲಿನಿಂದ ಬೇರ್ಪಟ್ಟು ತುಪ್ಪದ ರೂಪವನ್ನು ತಾಳಿದಾಗಲೇ ಆ ಗವ್ಯಪದಾರ್ಥವು ದೇವತೆಗಳಿಗೆ ರಸದೂಟದ

ಸವಿಯಾಗುತ್ತದೆ. ಕಬ್ಬಿನ ಜಲ್ಲೆಯಲ್ಲಿ ಸಕ್ಕರೆಯು ಅಕ್ಕ-ಪಕ್ಕಗಳ ಭಾಗದಲ್ಲೂ ಮಧ್ಯಭಾಗದಲ್ಲೂ ವ್ಯಾಪಿಸಿರುತ್ತದೆ. ಆದರೆ ಅದರಿಂದ ಬೇರ್ಪಟ್ಟು ಸಕ್ಕರೆಯ ರೂಪದಲ್ಲಿ ಬಂದಾಗಲೇ ಅದು ಸವಿಯಲು ಅತ್ಯಂತ ಯೋಗ್ಯವಾಗುತ್ತದೆಯಲ್ಲವೇ? ಹಾಗೆಯೇ ವೇದೋಪನಿಷತ್ತುಗಳ ಸಾರವಾದ ಶ್ರೀಮದ್ಭಾಗವತವೂ.

**ಆಮೂಲಾಗ್ರಂ ರಸಸ್ತಿಷ್ಠನ್ನಾಸ್ತೇ ನ ಸ್ವಾದ್ಯತೇ ಯಥಾ ।**
**ಸ ಭೂಯಃ ಸಂಪೃಥಗ್ಭೂತಃ ಫಲೇ ವಿಶ್ವಮನೋಹರಃ ॥೬೮॥**

**ಯಥಾ ದುಗ್ಧೇ ಸ್ಥಿತಂ ಸರ್ಪಿರ್ನ ಸ್ವಾದಾಯೋಪಕಲ್ಪತೇ ।**
**ಪೃಥಗ್ಭೂತಂ ಹಿ ತದ್ಗವ್ಯಂ ದೇವಾನಾಂ ರಸವರ್ಧನಮ್ ॥೬೯॥**

**ಇಕ್ಷೂಣಾಮಪಿ ಮಧ್ಯಾನ್ತಂ ಶರ್ಕರಾ ವ್ಯಾಪ್ಯ ತಿಷ್ಠತಿ ।**
**ಪೃಥಗ್ಭೂತಾ ಚ ಸಾ ಮಿಷ್ಟಾ ತಥಾ ಭಾಗವತೀ ಕಥಾ ॥೭೦॥**

ಈ ಭಾಗವತವೆಂಬ ಪುರಾಣರತ್ನವು ವೇದಕ್ಕೆ ಸಮವಾದುದು. ಭಕ್ತಿ-ಜ್ಞಾನ-ವೈರಾಗ್ಯಗಳನ್ನು ಸ್ಥಾಪನೆಮಾಡುವುದಕ್ಕಾಗಿ ಶ್ರೀ ವ್ಯಾಸಮುನಿಗಳಿಂದ ಪ್ರಕಾಶಿತವಾದುದು. ಹಿಂದೆ ವೇದ-ವೇದಾಂತಗಳಲ್ಲಿ ಪಾರಂಗತರಾಗಿ ಶ್ರೀ ಭಗವದ್ಗೀತೆಗೆ ತಾವೇ ಕರ್ತೃಗಳಾಗಿದ್ದರೂ ಶ್ರೀ ವೇದವ್ಯಾಸರು ಸಂತಾಪ ಭರಿತರಾಗಿ ಅಜ್ಞಾನಸಮುದ್ರದಲ್ಲಿ ಮುಳುಗುಹಾಕುತ್ತಿದ್ದಾಗ ನೀನು ಅವರಿಗೆ ನಾಲ್ಕು ಶ್ಲೋಕಗಳಿಂದ ಶ್ರೀಮದ್ಭಾಗವತವನ್ನು ಉಪದೇಶಮಾಡಿದೆ. ಅದನ್ನು ಕೇಳಿದೊಡನೆಯೇ ಅವರ ಚಿಂತೆಯು ತೊಲಗಿತು. ಹಾಗಿದ್ದರೂ ನಿನಗೆ ಈ ಬಗೆಗೆ ಆಶ್ಚರ್ಯವೇಕೆ ಉಂಟಾಯಿತು? ನಮ್ಮನ್ನು ಏಕೆ ಆ ಬಗೆಗೆ ಪ್ರಶ್ನೆ ಮಾಡಿದೆ? ನೀನು ಆ ಭಕ್ತಿ-ಜ್ಞಾನ-ವೈರಾಗ್ಯಗಳಿಗೆ ಶೋಕ-ದುಃಖಗಳನ್ನು ಹೋಗಲಾಡಿಸುವ ಶ್ರೀಮದ್ಭಾಗವತದ ಶ್ರವಣಮಾಡಿಸಬೇಕು.”

ಆಗ ಕೃತಜ್ಞತೆ ತುಂಬಿದ ಹೃದಯದಿಂದ ನಾರದರು ಮುನಿಗಳನ್ನು ಹೀಗೆ ಸ್ತುತಿಸಿದರು.

“ಎಲೈ ಮಹಾನುಭಾವರೇ! ನಿಮ್ಮ ದರ್ಶನವು ತತ್ಕ್ಷಣದಲ್ಲಿಯೇ ಜೀವಗಳ ಎಲ್ಲ ಪಾಪಗಳನ್ನೂ ತೊಡೆದುಹಾಕುತ್ತದೆ. ಸಂಸಾರದುಃಖವೆಂಬ ಕಾಳ್ಗಿಚ್ಚಿನಲ್ಲಿ ಬೆಂದವರಿಗೆ ಒಡನೆಯೇ ಶಾಂತಿಯ ಶ್ರೇಯಸ್ಸನ್ನುಂಟು

ಮಾಡುತ್ತದೆ. ಆದಿಶೇಷನ ಸಾವಿರ ಬಾಯಿಗಳಿಂದಲೂ ಗಾನಮಾಡಲ್ಪಡುತ್ತಿರುವ ಭಗವತ್ಕಥಾಮೃತವೊಂದನ್ನೇ ಪಾನಮಾಡುತ್ತಿರುವಿರಿ. ಪ್ರೇಮ ಭಕ್ತಿಯು ಪ್ರಕಾಶಗೊಳ್ಳುವುದಕ್ಕಾಗಿ ಅಂತಹ ನಿಮ್ಮನ್ನು ನಾನು ಶರಣು ಹೊಂದುತ್ತೇನೆ. ಯಾವಾಗ ಮನುಷ್ಯನು ಬಹಳ ಜನ್ಮಗಳಲ್ಲಿ ಸಂಪಾದನೆ ಮಾಡಿದ ಪುಣ್ಯವು ಕೂಡಿಬಂದು ಸತ್ಪುರುಷರ ಸಹವಾಸದ ಭಾಗ್ಯವನ್ನು ಪಡೆಯುತ್ತಾನೋ-ಆಗ ಅವನ ಅಜ್ಞಾನಜನಿತವಾದ ಮೋಹ ಮತ್ತು ಮದಗಳೆಂಬ ಕತ್ತಲೆಯು ತೊಲಗುತ್ತದೆ. ಆಗ ಅವನಿಗೆ ವಿವೇಕೋದಯ ವಾಗುತ್ತದೆ.

ಪದ್ಮಪುರಾಣದ ಉತ್ತರಖಂಡದಲ್ಲಿ ಬರುವ ಭಾಗವತಮಾಹಾತ್ಮ್ಯೆಯಲ್ಲಿ
'ಕುಮಾರ-ನಾರದರ ಸಂವಾದ'ವೆಂಬ ಎರಡನೆಯ ಅಧ್ಯಾಯವು*
ಮುಗಿಯಿತು.

## ಅಧ್ಯಾಯ ೩
## ಭಕ್ತಿದೇವಿಯ ಕಷ್ಟದ ನಿವೃತ್ತಿ

ನಾರದಮಹರ್ಷಿಗಳು ಸನಕಾದಿ ಮುನಿಗಳನ್ನು ಹೀಗೆ ಕೇಳಿದರು :

"ಎಲೈ ಮಹಾತ್ಮರೇ! ಈಗ ನಾನು ಭಕ್ತಿ-ಜ್ಞಾನ-ವೈರಾಗ್ಯಗಳನ್ನು ನೆಲೆಗೊಳಿಸುವುದಕ್ಕಾಗಿ ಪ್ರಯತ್ನಮಾಡುತ್ತಾ, ಶ್ರೀ ಶುಕಮಹರ್ಷಿಗಳು

---

* ಈ ಒಂದನೆಯ ಮತ್ತು ಎರಡನೆಯ ಅಧ್ಯಾಯಗಳಲ್ಲಿ ಶ್ರೀಮದ್ಭಾಗವತವನ್ನು ಸರ್ವೋತ್ತಮವಾದ ಶಾಸ್ತ್ರವೆಂದು ಸ್ತುತಿಸಿದೆ. ಉಳಿದ ಎಲ್ಲ ಶಾಸ್ತ್ರಗಳೂ ಇದಕ್ಕಿಂತಲೂ ಲಘುವೆಂದು ಸತ್ಯಲೋಕದಲ್ಲಿ ಬ್ರಹ್ಮದೇವರು ತಕ್ಕಡಿಯಲ್ಲಿ ತೂಗಿ ನಿರ್ಧರಿಸಿದರೆಂದು ಸಾರಿದೆ. ಇದು ವೇದ-ವೇದಾಂತಗಳ ಪರಮಸಾರವಾಗಿರುವುದರಿಂದ ಆ ವೇದ-ವೇದಾಂತಗಳಿಗಿಂತಲೂ ಮಿಗಿಲಾದುದೆಂದು ಘೋಷಣೆಮಾಡಿದೆ. ಇಲ್ಲಿ ವೇದ-ವೇದಾಂತಗಳ ಮತ್ತು ಇತರ ಶಾಸ್ತ್ರಗಳ ನಿಂದೆಯನ್ನು ಪುರಾಣಕಾರರು ಮಾಡಿದ್ದಾರೆಂದು ಅಪಾರ್ಥಮಾಡಬಾರದು. ಇದು ಶಾಸ್ತ್ರಕಾರರಿಗೆ ಪರಿಚಿತವಾಗಿರುವ 'ಅರ್ಥವಾದ', ಸ್ತುತಿರೂಪವಾದ ಅರ್ಥವಾದ. ಇದಕ್ಕೆ ಭಾಗವತದ ಪ್ರಶಸ್ತಿಯಲ್ಲಿ ತಾತ್ಪರ್ಯವೇ ಹೊರತು ಉಳಿದ ಶಾಸ್ತ್ರಗಳ ನಿಂದೆಯಲ್ಲಿ ತಾತ್ಪರ್ಯವಿಲ್ಲ. ಇದನ್ನು 'ನ ಹಿ ನಿಂದಾನ್ಯಾಯ'ವೆಂದು ಕರೆಯುತ್ತಾರೆ. ವೇದಗಳಲ್ಲಿ ಉದಿತಹೋಮದ ನಿಂದೆಗೆ ಅನುದಿತಹೋಮದ ಪ್ರಶಸ್ತಿಯಲ್ಲಿ ತಾತ್ಪರ್ಯ. ಅನುದಿತಹೋಮದ ನಿಂದೆಗೆ ಉದಿತಹೋಮದ ಹೊಗಳಿಕೆಯಲ್ಲಿ ತಾತ್ಪರ್ಯ.

ಸಂಕೀರ್ತನೆಮಾಡಿದ ಶ್ರೀಮದ್ಭಾಗವತಶಾಸ್ತ್ರಪಾರಾಯಣದ ಮೂಲಕವಾಗಿ ಜ್ಞಾನಯಜ್ಞವನ್ನು ಆಚರಿಸುತ್ತೇನೆ. ನಾನು ಈ ಯಜ್ಞವನ್ನು ಯಾವ ಜಾಗದಲ್ಲಿ ಆಚರಿಸಬೇಕೆಂಬುದನ್ನು ತಿಳಿಸಿರಿ. ವೇದಪಾರಂಗತರಾದ ನೀವು ಶುಕಶಾಸ್ತ್ರವಾದ ಶ್ರೀಮದ್ಭಾಗವತದ ಮಹಿಮೆಯನ್ನು ಇನ್ನೂ ವಿಶದವಾಗಿ ತಿಳಿಯಪಡಿಸಿರಿ. ಈ ಶ್ರೀಮದ್ಭಾಗವತಕಥೆಯನ್ನು ಎಷ್ಟು ದಿವಸಗಳಲ್ಲಿ ಕೀರ್ತನಪಾರಾಯಣಮಾಡಬೇಕು? ಮತ್ತು ಅದರ ಶ್ರವಣವನ್ನು ಹೇಗೆ ಮಾಡಬೇಕು? ಈ ಎಲ್ಲ ವಿಧಿಗಳನ್ನೂ ನನಗೆ ಕೃಪೆಯಿಟ್ಟು ತಿಳಿಸಿಕೊಡಿರಿ."

ಅದಕ್ಕೆ ಸನಕಾದಿ ಕುಮಾರರು ಹೀಗೆ ಉತ್ತರ ಕೊಟ್ಟರು :

"ಓ ನಾರದ! ನೀನು ವಿನಯಶೀಲ ಮತ್ತು ವಿವೇಕಿ. ಆದ್ದರಿಂದ ನಿನಗೆ ಎಲ್ಲವನ್ನೂ ಹೇಳುತ್ತೇವೆ ; ಕೇಳು. ಗಂಗಾದ್ವಾರ (ಹರಿದ್ವಾರ)ದ ಬಳಿ 'ಆನಂದ' ಎಂಬ ಒಂದು ಘಟ್ಟವಿದೆ. ಅದು ನಾನಾಋಷಿಗಣಗಳಿಂದಲೂ, ದೇವತೆಗಳಿಂದಲೂ ಮತ್ತು ಸಿದ್ಧರಿಂದಲೂ ಸೇವಿತವಾದುದು. ಬಗೆ-ಬಗೆಯ ಗಿಡ-ಮರ-ಬಳ್ಳಿಗಳಿಂದ ನಿಬಿಡವಾಗಿ ಹೊಸದಾಗಿ ಮೃದುವಾಗಿರುವ ಮರಳಿನ ವಿಸ್ತಾರದಿಂದ ಕೂಡಿದೆ. ಸುಂದರವಾದ ಜಾಗ. ಏಕಾಂತಪ್ರದೇಶದಲ್ಲಿದೆ. ಸುವರ್ಣದ ಕಮಲಪುಷ್ಪಗಳ ಪರಿಮಳದಿಂದ ಘಮಘಮಿಸುತ್ತಿದೆ. ಅದರ ಸಮೀಪದಲ್ಲಿ ವಾಸಿಸುವ ಸಿಂಹ-ಆನೆ ಮುಂತಾದ ಜಾತಿವೈರದ ಪ್ರಾಣಿಗಳ

---

ಇದು 'ಮಿತ್ರಸಮ್ಮಿತ' (ಸ್ನೇಹಿತನ ಹಿತವಚನಕ್ಕೆ ಸಮಾನ)ವಾಗಿರುವುದರಿಂದ ಶಾಸ್ತ್ರಗಳಿಗಿಂತಲೂ ಸುಲಭವಾಗಿ ಮತ್ತು ರಮಣೀಯವಾಗಿ ಧರ್ಮವನ್ನು ಮನವರಿಕೆ ಮಾಡಿಕೊಡುತ್ತದೆ. ಇದನ್ನು ಕೇಳಲು ಶ್ರದ್ಧಾಳುಗಳಾದ ಸರ್ವರಿಗೂ ಅಧಿಕಾರವುಂಟು. ಇತರ ಪುರುಷಾರ್ಥಗಳ ಕಥೆಗಳೊಡನೆ ಬೆರಕೆಮಾಡದೆ ಶುದ್ಧವಾದ ಮೋಕ್ಷಧರ್ಮ ವನ್ನೇ ಪ್ರಧಾನವಾಗಿ ಪ್ರತಿಪಾದನೆಮಾಡುತ್ತದೆ. ವೇದಪಾರಾಯಣದಲ್ಲಿರುವಂತೆ ಅಕ್ಷರ-ಪದ-ಸ್ವರಗಳಲ್ಲಿ ವ್ಯತ್ಯಾಸವಾದರೆ ಅನಿಷ್ಟಫಲವುಂಟಾಗುತ್ತದೆಯೆಂಬ ಭಯವು ಇದರ ಕೀರ್ತನ-ಶ್ರವಣಗಳಲ್ಲಿ ಇರುವುದಿಲ್ಲ. ಪ್ರತಿಶ್ಲೋಕದಲ್ಲೂ ಅಬದ್ಧವಿದ್ದರೂ ಭಗವಂತನ ಕೀರ್ತನೆಯು ಪಾಪಪರಿಹಾರಕವೆಂದು ಇಲ್ಲಿ ಪ್ರತಿಜ್ಞೆಯಿದೆ. 'ಸ ವಾಗ್ವಿಸರ್ಗೋ ಜನತಾಘವಿಪ್ಲವೋ ಯಸ್ಮಿನ್ ಪ್ರತಿಶ್ಲೋಕಮಬದ್ಧವತ್ಯಪಿ'

ಈ ದೃಷ್ಟಿಗಳಿಂದ ಇದು ವೇದ-ವೇದಾಂತಗಳಿಗಿಂತಲೂ ಶ್ರೇಷ್ಠವೆಂದು ಇಲ್ಲಿ ಮಹರ್ಷಿಗಳು ಸಾರುತ್ತಾರೆ. ಇದು ವೇದ-ವೇದಾಂತಸಾರವೆಂದು ಹೇಳಿರುವುದರಿಂದ ಇದರ ಹೊಗಳಿಕೆಯು ವೇದ-ವೇದಾಂತಗಳ ಹೊಗಳಿಕೆಯೇ ಆಗುತ್ತದೆ.

ಮನಸ್ಸಿನಲ್ಲೂ ವೈರಭಾವವು ಇಲ್ಲ. ಆ ಸ್ಥಳದಲ್ಲಿ ನೀನು ಯಾವ ವಿಶೇಷ ಪ್ರಯತ್ನವೂ ಇಲ್ಲದೇ ಈ ಜ್ಞಾನಯಜ್ಞವನ್ನು ಆಚರಿಸಬಹುದು. ನೀನು ಅಲ್ಲಿ ನಡೆಸುವ ಕಥಾಸಂಕೀರ್ತನೆಯಲ್ಲಿ ವಿಶೇಷವಾದ ರಸವು ಒಸರುವುದು. ಭಕ್ತಿದೇವಿಯು ತನ್ನ ಮುಂದೆ ಬಿದ್ದಿರುವ ದುರ್ಬಲರಾಗಿ ಜರಾಜೀರ್ಣದೇಹವುಳ್ಳ ತನ್ನ ಇಬ್ಬರು ಪುತ್ರರನ್ನೂ ಕರೆದುಕೊಂಡು ಬರುವಳು. ಶ್ರೀಮದ್ಭಾಗವತದ ಕಥಾಕಾಲಕ್ಷೇಪವು ಎಲ್ಲಿ ನಡೆಯು ವುದೋ–ಅಲ್ಲಿಗೆ ಈ ಭಕ್ತಿ ಮುಂತಾದವರು ತಾವೇ ಬಂದು ಸೇರುವರು. ಅಲ್ಲಿ ಶ್ರೀಮದ್ಭಾಗವತದ ಕಥೆಯನ್ನು ಕಿವಿಯಲ್ಲಿ ಆಲಿಸಿ ಅವರು ಮೂವರೂ ತರುಣರಾಗುವರು.”

ಸೂತಪುರಾಣಿಕರು ಹೇಳುತ್ತಾರೆ :

“ಹೀಗೆ ಹೇಳಿ ಆ ಸನಕಾದಿಕುಮಾರರು ಕಥಾಮೃತವನ್ನು ಪಾನ ಮಾಡುವುದಕ್ಕಾಗಿ ಒಡನೆಯೇ ನಾರದರೊಡನೆ ಗಂಗಾತೀರಕ್ಕೆ ಬಂದರು. ಅವರು ಆ ತೀರಕ್ಕೆ ಬರಲು ಭೂಲೋಕದಲ್ಲಿ, ದೇವಲೋಕದಲ್ಲಿ ಮತ್ತು ಬ್ರಹ್ಮಲೋಕದಲ್ಲಿ ಎಲ್ಲೆಲ್ಲಿಯೂ ಈ ಕಥಾಶ್ರವಣದ ಬಗೆಗೆ ಕೋಲಾಹಲವು ಹರಡಿತು. ಭಗವತ್ಕಥಾರಸಿಕರಾದ ವಿಷ್ಣುಭಕ್ತರೆಲ್ಲರೂ ಆ ಶ್ರೀಮದ್ಭಾಗವತ ಕಥಾಮೃತಪಾನಕ್ಕಾಗಿ ಎಲ್ಲರಿಗಿಂತಲೂ ಮೊದಲು ಅಲ್ಲಿಗೆ ಓಡೋಡಿ ಬಂದರು. ಭೃಗು, ವಸಿಷ್ಠ, ಚ್ಯವನ, ಗೌತಮ, ಮೇಧಾತಿಥಿ, ದೇವಲ, ದೇವರಾತ, ಪರಶುರಾಮ, ವಿಶ್ವಾಮಿತ್ರ, ಶಾಕಲ, ಮಾರ್ಕಂಡೇಯ, ದತ್ತಾತ್ರೇಯ, ಪಿಪ್ಪ ಲಾದ, ಯೋಗೇಶ್ವರರಾದ ವ್ಯಾಸ-ಪರಾಶರಮಹರ್ಷಿಗಳು, ಛಾಯಾಶುಕ, ಜಾಜಲಿ ಮತ್ತು ಜಹ್ನು ಮುಂತಾದ ಎಲ್ಲ ಮುನಿಪತಿಗಳೂ ತಮ್ಮ ಪುತ್ರ- ಶಿಷ್ಯ-ಪತ್ನೀಸಮೇತರಾಗಿ ಬಹಳ ಪ್ರೇಮದಿಂದ ಅಲ್ಲಿಗೆ ಬಂದರು. ಇದಲ್ಲದೇ ವೇದ, ಉಪನಿಷತ್ತು, ಮಂತ್ರ, ತಂತ್ರ, ಹದಿನೆಂಟು ಪುರಾಣಗಳೂ ಮತ್ತು ಆರು ಶಾಸ್ತ್ರಗಳೂ ಮೈದಳೆದು ಅಲ್ಲಿ ಉಪಸ್ಥಿತವಾದುವು. ಗಂಗೆಯೇ ಮುಂತಾದ ಪುಣ್ಯನದಿಗಳೂ, ಪುಷ್ಕರವೇ ಮುಂತಾದ ಪುಣ್ಯಸರೋವರಗಳೂ, ಕುರುಕ್ಷೇತ್ರವೇ ಮುಂತಾದ ಸಮಸ್ತಕ್ಷೇತ್ರಗಳೂ, ಸಮಸ್ತದಿಕ್ಕುಗಳೂ, ದಂಡಕವೇ ಮುಂತಾದ ಅರಣ್ಯಗಳೂ, ಹಿಮಾಲಯವೇ ಮೊದಲಾದ ಪರ್ವತಗಳೂ ಮತ್ತು ದೇವತೆಗಳೂ, ಗಂಧರ್ವರೂ, ದಾನವರೂ ಅಲ್ಲಿಗೆ

ಹೋದರು. ತಮ್ಮ ಗೌರವದಿಂದ ಬರಲಿಕ್ಕೆ ಆಗದವರನ್ನು ಒಡಂಬಡಿಸಿ ಭೃಗುಮಹರ್ಷಿಗಳು ಅಲ್ಲಿಗೆ ಕರೆತಂದರು.

ಶ್ರೀಕೃಷ್ಣಪರಾಯಣರಾದ ಸನಕಾದಿಮುನಿಗಳು ಕಥಾಶ್ರವಣಮಾಡಿಸಲು ದೀಕ್ಷಿತರಾಗಿ ನಾರದರು ಸಮರ್ಪಿಸಿದ ಶ್ರೇಷ್ಠವಾದ ಆಸನವನ್ನು ಅಲಂಕರಿಸಿದರು. ಶ್ರೋತೃಗಳೆಲ್ಲರೂ ಅವರಿಗೆ ನಮಸ್ಕಾರಮಾಡಿದರು. ಶ್ರೋತೃಗಳಲ್ಲಿ ವೈಷ್ಣವರೂ, ವಿರಕ್ತರೂ, ಸಂನ್ಯಾಸಿಗಳೂ ಮತ್ತು ಬ್ರಹ್ಮಚಾರಿಗಳೂ ಮುಂಭಾಗದಲ್ಲಿ ಮಂಡಿಸಿದರು ಮತ್ತು ಅವರೆಲ್ಲರ ಮುಂದೆ ನಾರದರು ವಿರಾಜಿಸಿದರು. ಒಂದು ಭಾಗದಲ್ಲಿ ಋಷಿಗಳೂ ಮತ್ತೊಂದು ಭಾಗದಲ್ಲಿ ದೇವತೆಗಳೂ, ಒಂದು ಕಡೆ ವೇದ, ಉಪನಿಷತ್ತು ಮುಂತಾದುವೂ, ಇನ್ನೊಂದು ಕಡೆ ತೀರ್ಥಗಳೂ, ಮತ್ತೊಂದು ಕಡೆ ಸ್ತ್ರೀಯರೂ ಕುಳಿತು ಬೆಳಗಿದರು. ಎಲ್ಲ ಕಡೆಗಳಲ್ಲೂ 'ಜಯ ಜಯ' 'ನಮೋ ನಮಃ' ಎಂಬ ಶಬ್ದ ಮತ್ತು ಶಂಖಶಬ್ದಗಳು ಕೇಳಿಸತೊಡಗಿದುವು. ಅರಿಸಿನ ಚೂರ್ಣ, ಅರಳು ಮತ್ತು ಪುಷ್ಪಗಳ ಮಳೆಗರೆಯಿತು. ಕೆಲವು ದೇವಶ್ರೇಷ್ಠರು ವಿಮಾನಗಳನ್ನೇರಿ, ಅಲ್ಲಿ ಕುಳಿತಿದ್ದ ಎಲ್ಲರ ಮೇಲೂ ಕಲ್ಪವೃಕ್ಷದ ಪುಷ್ಪಗಳನ್ನೆರಚಿದರು.

ಸೂತಪುರಾಣಿಕರು ಹೇಳುತ್ತಾರೆ :

ಹೀಗೆ ಪೂಜಾನಂತರ ಸರ್ವರೂ ಏಕಾಗ್ರಚಿತ್ತರಾಗಿದ್ದಾಗ ಸನಕಾದಿ ಮುನಿಗಳು ಮಹಾತ್ಮರಾದ ನಾರದರಿಗೆ ಸ್ಪಷ್ಟವಾಗಿ ಶ್ರೀಮದ್ಭಾಗವತದ ಮಾಹಾತ್ಮ್ಯವನ್ನು ಕುರಿತು ಪ್ರವಚನಮಾಡಲು ಉಪಕ್ರಮಿಸಿದರು :

"ನಾರದ! ಈಗ ನಾವು ನಿನಗೆ ಶುಕಶಾಸ್ತ್ರ ಶ್ರೀಮದ್ಭಾಗವತದ ಮಾಹಾತ್ಮ್ಯವನ್ನು ವರ್ಣಿಸುತ್ತೇವೆ. ಇದರ ಶ್ರವಣಮಾತ್ರದಿಂದಲೇ ಮುಕ್ತಿಯು ಕೈಗೆ ಸಿಕ್ಕುತ್ತದೆ. ಶ್ರೀಮದ್ಭಾಗವತಕಥೆಯನ್ನು ಸದಾ ಸೇವಿಸ ಬೇಕು, ಸರ್ವದಾ ಸೇವಿಸಬೇಕು. ಇದರ ಶ್ರವಣಮಾತ್ರದಿಂದ ಶ್ರೀಹರಿಯು ಹೃದಯದಲ್ಲಿ ಬಂದು ನೆಲೆಸುತ್ತಾನೆ. ಹದಿನೆಂಟು ಸಾವಿರ ಶ್ಲೋಕಗಳಿಂದಲೂ ಹನ್ನೆರಡು ಸ್ಕಂಧಗಳಿಂದಲೂ ಕೂಡಿದ ಗ್ರಂಥವಿದು. ಪರೀಕ್ಷಿದ್ರಾಜ ಮತ್ತು

ಶುಕಮಹರ್ಷಿಗಳ ಸಂಭಾಷಣೆಯ ರೂಪದಲ್ಲಿ ಬೆಳಗುತ್ತಿದೆ. ಇಂತಹ ಭಾಗವತಶಾಸ್ತ್ರವನ್ನು ಕೇಳುವವನಾಗು. ಈ ಶುಕಶಾಸ್ತ್ರದ ಕಥೆಯು ಒಂದು ಕ್ಷಣಕಾಲವಾದರೂ ಎಲ್ಲಿಯವರೆಗೆ ಕಿವಿಗೆ ಬೀಳುವುದಿಲ್ಲವೋ–ಅಲ್ಲಿಯವರೆಗೆ ಜೀವಗಳು ಅಜ್ಞಾನದಿಂದ ಈ ಸಂಸಾರಚಕ್ರದಲ್ಲಿ ಅಲೆದಾಡುತ್ತಿರುತ್ತವೆ. ಬಹುಶಾಸ್ತ್ರಗಳನ್ನೂ ಪುರಾಣಗಳನ್ನೂ* ಕೇಳಿ ಏನು ಪ್ರಯೋಜನ? ಅದರಿಂದ ಗೊಂದಲವೇ ಹೆಚ್ಚಾಗುತ್ತದೆ. 'ಇದೋ! ಮುಕ್ತಿಯನ್ನು ಕೊಡುತ್ತೇನೆ'–ಎಂದು ಭರವಸೆಯಿಂದ ಗರ್ಜಿಸುವುದು ಈ ಭಾಗವತಶಾಸ್ತ್ರವೊಂದೇ. ಯಾರ ಮನೆಯಲ್ಲಿ ಪ್ರತಿನಿತ್ಯವೂ ಶ್ರೀಮದ್ಭಾಗವತದ ಕಥೆಯ ಕೀರ್ತನ-ಪಾರಾಯಣಗಳು ನಡೆಯುತ್ತವೆಯೋ–ಆ ಮನೆಯು ತೀರ್ಥ ಕ್ಷೇತ್ರಕ್ಕೆ ಸಮಾನವಾಗಿ ಬಿಡುತ್ತದೆ. ಅಲ್ಲಿ ವಾಸಮಾಡುವವರ ಪಾಪಗಳೆಲ್ಲವೂ ನಾಶಹೊಂದುತ್ತವೆ. ಸಾವಿರಾರು ಅಶ್ವಮೇಧಯಜ್ಞಗಳು ಮತ್ತು ನೂರಾರು ವಾಜಪೇಯಯಜ್ಞಗಳು ಈ ಶುಕಶಾಸ್ತ್ರಕಥೆಯ ಹದಿನಾರನೇ ಒಂದು ಭಾಗಕ್ಕೂ ಸಾಟಿಯಾಗಲಾರವು. ಎಲೈ ತಪೋಧನನೇ! ಮನುಷ್ಯರು ಈ ಶ್ರೀಮದ್ಭಾಗವತಕಥೆಯನ್ನು ಎಲ್ಲಿಯವರೆಗೆ ಶ್ರವಣಮಾಡುವುದಿಲ್ಲವೋ ಅಲ್ಲಿಯವರೆಗೆ ಮಾತ್ರವೇ ಈ ದೇಹದಲ್ಲಿ ಪಾಪವು ಇರುವುದು. ಶುಕಶಾಸ್ತ್ರದ ಕಥೆಯಷ್ಟು ಫಲವನ್ನು ಕೊಡುವ ಶಕ್ತಿ ಗಂಗೆ, ಗಯೆ, ಪ್ರಯಾಗ, ಪುಷ್ಕರ, ಕಾಶಿಗಳಿಗೂ ಎಲ್ಲಿಂದ ಬಂತು?

ಪರಮಗತಿಯನ್ನು ಪಡೆಯುವ ಇಷ್ಟವೇನಾದರೂ ಇದ್ದರೆ ಪ್ರತಿದಿನವೂ ಶ್ರೀಮದ್ಭಾಗವತದ ಶ್ಲೋಕದ ಅರ್ಧಭಾಗವನ್ನಾಗಲೀ, ಕಾಲುಭಾಗವನ್ನಾಗಲೀ ನಿಯಮಪೂರ್ವಕವಾಗಿ ತನ್ನ ಬಾಯಿಂದಲೇ ಪಾರಾಯಣಮಾಡಬೇಕು. ಜ್ಞಾನಿಗಳ ದೃಷ್ಟಿಯಿಂದ ಓಂಕಾರ, ಗಾಯತ್ರಿ, ಪುರುಷಸೂಕ್ತ ಮೂರು ವೇದಗಳು, ಶ್ರೀಮದ್ಭಾಗವತ, 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರಮಹಾಮಂತ್ರ, ದ್ವಾದಶಾತ್ಮಕನಾದ ಸೂರ್ಯಭಗವಂತ,

---

* ನಾನಾಶಾಸ್ತ್ರ-ಪುರಾಣಗಳನ್ನು ಕೇಳಿದಾಗ ಅವುಗಳಲ್ಲಿ ಸಾಮಾನ್ಯದೃಷ್ಟಿಗೆ ಪರಸ್ಪರ ವಿರೋಧಿಗಳಂತೆ ಕಂಡುಬರುವ ನಾನಾ ಅಭಿಪ್ರಾಯಗಳನ್ನು ನೋಡಿ ಭ್ರಮೆಯೇ ಹೆಚ್ಚಾಗುತ್ತದೆ. ಇದೇ ಸಿದ್ಧಾಂತವೆಂಬ ನಿಷ್ಕರ್ಷೆಗೆ ಬರದೇ ಮನಸ್ಸಿನಲ್ಲಿ ಗೊಂದಲವೇ ಹೆಚ್ಚಾಗುತ್ತದೆ.

ಪ್ರಯಾಗತೀರ್ಥ, ಸಂವತ್ಸರರೂಪವಾದ ಕಾಲ, ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರು, ಅಗ್ನಿಹೋತ್ರ, ಗೋಮಾತೆ, ದ್ವಾದಶೀತಿಥಿ, ತುಲಸೀ, ವಸಂತ ಋತು ಮತ್ತು ಶ್ರೀಭಗವಂತನಾದ ಪುರುಷೋತ್ತಮ–ಇವರಲ್ಲಿ ವಾಸ್ತವಿಕವಾದ ಯಾವ ವ್ಯತ್ಯಾಸವೂ ಇಲ್ಲ. ಯಾವನು ಶ್ರೀಮದ್ಭಾಗವತಶಾಸ್ತ್ರವನ್ನು ಅರ್ಥಜ್ಞಾನಸಹಿತವಾಗಿ ಸದಾ ಪಾರಾಯಣಮಾಡುತ್ತಾನೋ ಅವನ ಕೋಟಿ-ಕೋಟಿ ಜನ್ಮಗಳ ಪಾಪಗಳೂ ಧ್ವಂಸವಾಗುತ್ತವೆ ಎಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಇದರ ಅರ್ಧಶ್ಲೋಕವನ್ನಾಗಲೀ ಶ್ಲೋಕದ ಒಂದು ಪಾದವನ್ನಾಗಲೀ ಪ್ರತಿನಿತ್ಯ ಪಾರಾಯಣಮಾಡುವವನು ರಾಜಸೂಯ- ಅಶ್ವ ಮೇಧ ಯಜ್ಞಗಳ ಪುಣ್ಯವನ್ನು ಪಡೆಯುತ್ತಾನೆ. ಪ್ರತಿನಿತ್ಯ ಭಾಗವತಪಾರಾ ಯಣಮಾಡುವುದು, ಹರಿಧ್ಯಾನ ಮಾಡುವುದು, ತುಲಸಿಗೆ ನೀರೆರೆಯುವುದು ಮತ್ತು ಗೋಸೇವೆ ಮಾಡುವುದು–ಇವು ನಾಲ್ಕೂ ಸಮಾನಗಳು. ಪ್ರಾಣಪ್ರಯಾಣದ ಕೊನೇಸಮಯದಲ್ಲಿ ಈ ಶುಕಶಾಸ್ತ್ರದ ವಾಣಿಯನ್ನು ಯಾವನಾದರೂ ಕೇಳಿದರೆ ಅವನಲ್ಲಿ ಸ್ವಾಮಿ ಶ್ರೀಗೋವಿಂದನು ಪ್ರಸನ್ನನಾಗಿ ಆತನಿಗೆ ವೈಕುಂಠಧಾಮವನ್ನೇ ಕೊಡುವನು. ಈ ಶಾಸ್ತ್ರಸಾರ್ವಭೌಮ ಶ್ರೀಮದ್ಭಾಗವತವನ್ನು ಸಿಂಹಾಸನದ ಮೇಲೆ ಇರಿಸಿ ವಿಷ್ಣುಭಕ್ತನಿಗೆ ದಾನ ಮಾಡುವವನು ನಿಶ್ಚಯವಾಗಿಯೂ ಶ್ರೀವಿಷ್ಣುಸಾಯುಜ್ಯವನ್ನು ಪಡೆಯು ತ್ತಾನೆ. ಯಾವ ನೀಚಪುರುಷನು ತನ್ನ ಇಡೀ ಜೀವಮಾನದಲ್ಲಿ ಏಕಾಗ್ರಚಿತ್ತ ದಿಂದ ಶ್ರೀಮದ್ಭಾಗವತಕಥಾಮೃತವನ್ನು ಸ್ವಲ್ಪವಾದರೂ ಪಾನಮಾಡುವು ದಿಲ್ಲವೋ–ಅಂತಹವನ ಹುಟ್ಟು ಶ್ವಪಚನ ಹುಟ್ಟಿನಂತೆ, ಕತ್ತೆಯ ಹುಟ್ಟಿನಂತೆ ವ್ಯರ್ಥವಷ್ಟೇ! ಹೆತ್ತಹೊಟ್ಟೆಗೆ ಪ್ರಸವದ ಪೀಡೆಯನ್ನು ತಂದದ್ದಷ್ಟೇ ಪ್ರಯೋಜನ. 'ಈ ಶುಕಶಾಸ್ತ್ರದ ಕಥೆಯ ಪ್ರವಚನವನ್ನು ಕಿಂಚಿತ್ತೂ ಕೇಳ ದವನು ಬದುಕಿದ್ದರೂ ಹೆಣಕ್ಕೆ ಸಮನಾಗಿರುವ ಪಾಪಾತ್ಮನೇ ಸರಿ! ಪಶು ಸಮಾನನೂ ಭೂಮಿಗೆ ಭಾರವೂ ಆಗಿರುವ ಅಂತಹ ಮನುಷ್ಯನಿಗೆ ಧಿಕ್ಕಾರವು!'–ಎಂದು ದೇವಪ್ರಧಾನರಾದ ಇಂದ್ರಾದಿಗಳು ದೇವಲೋಕದಲ್ಲಿ ಸಾರುತ್ತಾರೆ.

ಈ ಪ್ರಪಂಚದಲ್ಲಿ ಶ್ರೀಮದ್ಭಾಗವತದ ಕಥೆ ಸಿಕ್ಕುವುದು ಕಷ್ಟವೇ. ಕೋಟಿ-ಕೋಟಿಜನ್ಮಗಳ ಪುಣ್ಯ ಕೂಡಿಬಂದರೇನೇ ಇದು ದೊರೆಯುವುದು.

ಆದುದರಿಂದ ಓ ಯೋಗೀಂದ್ರನೇ! ಧೀಮಂತನೇ! ಇದನ್ನು ಪ್ರಯತ್ನ ಪೂರ್ವಕವಾಗಿ ಕೇಳಬೇಕು. ಇದನ್ನು ಇಂತಹ ದಿನದಲ್ಲಿ ಕೇಳಬೇಕು–ಇಂತಹ ದಿನದಲ್ಲಿ ಕೇಳಬಾರದು ಎಂಬ ನಿಯಮವೇನಿಲ್ಲ. ಸರ್ವದಾ ಶ್ರವಣಮಾಡ ಬಹುದು. ಸತ್ಯದಿಂದಲೂ ಬ್ರಹ್ಮಚರ್ಯನಿಯಮದಿಂದಲೂ ಸದಾ ಶ್ರವಣ ಮಾಡುತ್ತಿರಬೇಕು. ಅಂದರೆ ಕಲಿಯುಗದಲ್ಲಿ ಹೀಗೆ ಮಾಡುವುದು ಅಶಕ್ಯ ವಾದ್ದರಿಂದ ಶುಕಮಹಾಮುನಿಯು ಹೇಳಿರುವ ವಿಧಿವಿಶೇಷವನ್ನು ತಿಳಿದು ಅದರ ಪ್ರಕಾರ ಶ್ರವಣಮಾಡಬೇಕು. ವಿವರಿಸುವುದಾದರೆ–ಕಲಿಯುಗದಲ್ಲಿ ಬಹಳ ದಿವಸಗಳ ಕಾಲ ಚಿತ್ತವೃತ್ತಿಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು, ನಿಯಮಬದ್ಧನಾಗಿ ಆಚರಣೆಮಾಡುವುದು, ವ್ರತದೀಕ್ಷೆಯಲ್ಲಿರುವುದು ಇದೆಲ್ಲಾ ತುಂಬಾ ಕಷ್ಟ. ಅದಕ್ಕಾಗಿ ಶ್ರೀಶುಕರು ಸಪ್ತಾಹಶ್ರವಣವಿಧಿಯನ್ನು ಹೇಳಿದ್ದಾರೆ. ಶ್ರದ್ಧಾಪೂರ್ವಕವಾಗಿ ಪ್ರತಿನಿತ್ಯವೂ ಮಾಘಮಾಸದಲ್ಲಿ ಇದನ್ನು ಶ್ರವಣಮಾಡಿದರೆ ಎಷ್ಟು ಫಲವುಂಟೋ ಅಷ್ಟು ಫಲವು ಶುಕಮುನಿಯು ಹೇಳಿರುವ 'ಸಪ್ತಾಹಶ್ರವಣವಿಧಿ'ಯಿಂದಲೇ ದೊರೆಯುವುದು. ಏತಕ್ಕೆ ಈ ಸಪ್ತಾಹಶ್ರವಣವಿಧಿಯನ್ನು ಅವರು ಉಪದೇಶಮಾಡಿದರು? ಎಂದರೆ ಕಲಿಯುಗದಲ್ಲಿ ಮನೋಜಯವಿರುವುದಿಲ್ಲ. ರೋಗಗಳು ಹೆಚ್ಚು, ಆಯುಸ್ಸು ಕಡಿಮೆ ಮತ್ತು ಇನ್ನೂ ಅನೇಕದೋಷಗಳ ಸಂಭವವಿದೆ. ತಪಸ್ಸಿನಿಂದಾ ಗಲೀ, ಯೋಗದಿಂದಾಗಲೀ, ಸಮಾಧಿಯಿಂದಾಗಲೀ ಯಾವ ಫಲವು ದೊರೆಯುವುದಿಲ್ಲವೋ ಅವೆಲ್ಲವೂ ಈ ಸಪ್ತಾಹಶ್ರವಣವಿಧಿಯ ಆಚರಣೆ ಯಿಂದ ಅನಾಯಾಸವಾಗಿಯೇ ದೊರಕುವುದು. ಈ ಸಪ್ತಾಹವಿಧಿಯು ತಾನು ಯಜ್ಞಕ್ಕಿಂತಲೂ ಹೆಚ್ಚೆಂದು ಗರ್ಜಿಸುತ್ತಿದೆ. ವ್ರತಕ್ಕಿಂತಲೂ ಮಿಗಿ ಲೆಂದು ಮೊರೆಯುತ್ತಿದೆ. ತಪಸ್ಸಿಗಿಂತಲೂ ಅತಿಶಯವೆಂದು ಗರ್ಜಿಸುತ್ತಿದೆ; ತೀರ್ಥಗಳಿಗಿಂತಲೂ ಅಗ್ಗಳಿಕೆಯುಳ್ಳದ್ದೆಂದು ಗರ್ಜಿಸುತ್ತಿದೆ ; ಯೋಗ ಕ್ಕಿಂತಲೂ ಶ್ರೇಷ್ಠವೆಂದು ಭೋರ್ಗರೆಯುತ್ತಿದೆ. ಧ್ಯಾನಕ್ಕಿಂತಲೂ, ಜ್ಞಾನಕ್ಕಿಂತಲೂ ಅಧಿಕವೆಂದು ಗರ್ಜಿಸುತ್ತಿದೆ ; ಗರ್ಜಿಸುತ್ತಿದೆ ; ಘಟ್ಟಿಯಾಗಿ ಗರ್ಜಿಸುತ್ತಿದೆ. ಆ ಗರ್ಜನೆಯ ಬಗೆಗೆ ಇನ್ನೇನು ಹೇಳೋಣ? ಎಲ್ಲ ಶ್ರೇಷ್ಠಸಾಧನಗಳಿಗಿಂತಲೂ ತಾನೇ ಉತ್ಕೃಷ್ಟವೆಂದು ಗರ್ಜಿಸುತ್ತಿದೆ ; ಗರ್ಜಿಸುತ್ತಿದೆ ; ಕೇಳಿರಯ್ಯಾ!

**ಯಜ್ಞಾದ್ಗರ್ಜತಿ ಸಪ್ತಾಹಃ ಸಪ್ತಾಹೋ ಗರ್ಜತಿ ವ್ರತಾತ್ ।**
**ತಪಸೋ ಗರ್ಜತಿ ಪ್ರೋಚ್ಚೈಸ್ತೀರ್ಥಾನ್ನಿತ್ಯಂ ಹಿ ಗರ್ಜತಿ ॥೫೧॥**

**ಯೋಗಾದ್ಗರ್ಜತಿ ಸಪ್ತಾಹೋ ಧ್ಯಾನಾದ್ ಜ್ಞಾನಾಚ್ಚ ಗರ್ಜತಿ ।**
**ಕಿಂ ಬ್ರೂಮೋ ಗರ್ಜನಂ ತಸ್ಯ ರೇ ರೇ ಗರ್ಜತಿ ಗರ್ಜತಿ ॥೫೨॥**

ಭಾಗವತದ ಬಗೆಗೆ ಈ ಪ್ರಶಸ್ತಿಯನ್ನು ಕೇಳಿ ಶೌನಕಮಹರ್ಷಿಗಳು ಸೂತಪುರಾಣಿಕರನ್ನು ಪ್ರಶ್ನಿಸಿದರು : "ಪುರಾಣಿಕರೇ! ನೀವು ಹೇಳಿದ್ದು ತುಂಬಾ ಆಶ್ಚರ್ಯದ ಕಥೆಯಾಗಿದೆ. ಯೋಗವಿದರಿಗೆ ಮೊದಲಿಗನಾದ ಶ್ರೀಭಗವಂತನನ್ನು ಕುರಿತು ಹೇಳುವ ಈ ಶ್ರೀಮದ್ಭಾಗವತವು ಮೋಕ್ಷ ಸಾಧನಗಳಲ್ಲಿ ಪರಿಶೀಲಿಸಿದಾಗ ಈ ಯುಗದಲ್ಲಿ ಜ್ಞಾನಾದಿ ಧರ್ಮಗಳಿಗಿಂತಲೂ ಅತಿಶಯವಾದ ಮಹಿಮೆಯನ್ನು ಹೇಗೆ ಪಡೆಯಿತು?"

ಪುರಾಣಿಕರು ಹೀಗೆ ಉತ್ತರಿಸಿದರು :

"ಶ್ರೀಕೃಷ್ಣಪರಮಾತ್ಮನು ಭೂಮಿಯನ್ನು ಬಿಟ್ಟು ಸ್ವಧಾಮಕ್ಕೆ ತೆರಳಲು ಬಯಸಿದಾಗ ಉದ್ಧವನಿಗೆ ಶ್ರೀಮದ್ಭಾಗವತದ ಏಕಾದಶಸ್ಕಂಧದಲ್ಲಿ ಕಂಡುಬರುವ ಶ್ರೇಷ್ಠವಾದ ಭಾಗವತಧರ್ಮವನ್ನು ಬೋಧನೆಮಾಡಿದನು. ಅದನ್ನು ಕೇಳಿದನಂತರವೂ ಕೂಡ ಉದ್ಧವನು ಶ್ರೀಭಗವಂತನಲ್ಲಿ ಹೀಗೆ ವಿಜ್ಞಾಪಿಸಿ ದನು : "ಗೋವಿಂದ! ನೀನೇನೋ ನಿನ್ನ ಭಕ್ತರ ಕಾರ್ಯವನ್ನು ಮುಗಿಸಿ ಪರಮಧಾಮಕ್ಕೆ ದಯಮಾಡಿಸಿಬಿಡುವೆ. ಆದರೆ ನನ್ನ ಮನಸ್ಸಿನಲ್ಲಿ ಒಂದು ಚಿಂತೆಯುಂಟಾಗಿದೆ. ಅದನ್ನು ಕೇಳಿ ನನಗೆ ಸಮಾಧಾನವನ್ನು ಉಂಟುಮಾಡು. ಈಗ ಘೋರವಾದ ಕಲಿಯುಗವು ಇನ್ನೇನು ಬಂದುಬಿಡುತ್ತದೆ. ಅದರಲ್ಲಿ ಇನ್ನೂ ಅನೇಕ ಮಂದಿ ದುಷ್ಟರು ಪ್ರಕಟಹೊಂದುವರು. ಅವರ ಸಹವಾಸದಿಂದ ಅನೇಕ ಸತ್ಪುರುಷರೂ ಉಗ್ರಸ್ವಭಾವದವರಾಗಿಬಿಡುವರು. ಆಗ ಅವರ ಭಾರದಿಂದ ಕುಗ್ಗಿದ ಗೋರೂಪಿಣಿಯಾದ ಈ ಭೂಮಿಯು ಯಾರನ್ನು ಶರಣುಹೊಂದಿಯಾಳು? ಓ ಕಮಲಾಕ್ಷ! ಈಕೆಯನ್ನು ಸಂರಕ್ಷಿಸುವವರು ನಿನ್ನನ್ನು ಬಿಟ್ಟು ಬೇರೆ ಯಾರೂ ಕಾಣಿಸುವುದಿಲ್ಲ. ಆದ್ದರಿಂದ ನೀನು ಸಾಧುಗಳ ಮೇಲೆ ಕರುಣೆ ತೋರಿ ಇಲ್ಲಿಯೇ ಇರಬೇಕು. ಇಲ್ಲಿಂದ ಹೊರಟುಹೋಗಬಾರದು. ಭಕ್ತವತ್ಸಲ! ನಿರಾಕಾರನೂ ಚಿನ್ಮಯನೂ

ಆಗಿದ್ದರೂ ಭಕ್ತರಿಗೋಸ್ಕರವೇ ಈ ಸಗುಣರೂಪವನ್ನು ಧರಿಸಿದ್ದೀ ಯಲ್ಲವೇ? ನಿನ್ನನ್ನಗಲಿ ಆ ಭಕ್ತರು ಭೂಮಿಯಲ್ಲಿ ಹೇಗೆ ತಾನೇ ಬದುಕಲು ಸಾಧ್ಯ? ನಿರ್ಗುಣೋಪಾಸನೆ ಮಾಡುವುದಂತೂ ಅತಿ ಕಷ್ಟವೇ. ಆದುದರಿಂದ ನೀನು ಮತ್ತೂ ಸ್ವಲ್ಪ ವಿಚಾರಮಾಡಬೇಕಾಗಿದೆ."

ಪ್ರಭಾಸಕ್ಷೇತ್ರದಲ್ಲಿ ಉದ್ಧವನ ಆ ಅರಿಕೆಯನ್ನು ಕೇಳಿ ಶ್ರೀಹರಿಯು 'ಭಕ್ತರ ಅವಲಂಬನೆಗಾಗಿ ಏನು ಏರ್ಪಾಡುಮಾಡುವುದು?' ಎಂದು ಚಿಂತಿಸಿದನು. ಆತನು ತನ್ನ ಸಮಸ್ತಶಕ್ತಿಯನ್ನು ಶ್ರೀಮದ್ಭಾಗವತದಲ್ಲಿ ಇರಿಸಿ ಬಿಟ್ಟನು. ತಾನು ಅಂತರ್ಧಾನಹೊಂದಿ ಈ ಭಾಗವತಸಮುದ್ರದಲ್ಲಿ ಪ್ರವೇಶ ಮಾಡಿಬಿಟ್ಟನು. ಆದುದರಿಂದ ಈ ಶ್ರೀಮದ್ಭಾಗವತವು ಕಣ್ಣಿಗೆ ಕಾಣು ವಂತಹ ಭಗವಂತನ ವಾಙ್ಮಯಮೂರ್ತಿಯೇ ಆಗಿದೆ. ಇದನ್ನು ಸೇವನೆ ಮಾಡಿದರೆ, ಪಾರಾಯಣಮಾಡಿದರೆ, ಶ್ರವಣಮಾಡಿದರೆ ಅಥವಾ ದರ್ಶನ ಮಾಡಿದರೂ ಸರ್ವಪಾಪಗಳೂ ನಾಶಹೊಂದುವುವು. ಆದ್ದರಿಂದಲೇ ಇದರ ಸಪ್ತಾಹಶ್ರವಣವಿಧಿಯನ್ನು ಎಲ್ಲಕ್ಕಿಂತಲೂ ಉತ್ಕೃಷ್ಟವೆಂದು ಸಂಭಾವಿಸಿರು ವುದು. ಕಲಿಯುಗದಲ್ಲಿ ಇತರ ಎಲ್ಲ ಸಾಧನಗಳನ್ನೂ ಕಡೆಗಣಿಸಿ ಇದನ್ನೇ ಪ್ರಧಾನಧರ್ಮವೆಂದು ಎತ್ತಿ ಹೇಳಿದೆ. ಕಲಿಯುಗದಲ್ಲಿ ದುಃಖ, ದಾರಿದ್ರ್ಯ, ದೌರ್ಭಾಗ್ಯ, ಪಾಪಗಳನ್ನು ತೊಳೆದುಹಾಕಲು ಮತ್ತು ಕಾಮ-ಕ್ರೋಧಗಳನ್ನು ಜಯಿಸಲು ಇದು ಶ್ರೇಷ್ಠತಮವಾದ ಧರ್ಮವೆಂದು ಹೇಳಲ್ಪಟ್ಟಿರುವುದು. ಇಲ್ಲದಿದ್ದರೆ ದೇವತೆಗಳಿಗೂ ತಪ್ಪಿಸಿಕೊಳ್ಳಲು ಅತಿಕಷ್ಟಸಾಧ್ಯವಾಗಿ ರುವ ವೈಷ್ಣವೀಮಾಯೆಯನ್ನು ಮನುಷ್ಯರು ಹೇಗೆ ತಾನೇ ತೊರೆದಾರು? ಅವರ ಉಪಕಾರಕ್ಕಾಗಿ ಈ ಸಪ್ತಾಹಶ್ರವಣವಿಧಿಯನ್ನು ಜ್ಞಾನಿಗಳು ಹೇಳಿದ್ದಾರೆ.

ಸೂತಪುರಾಣಿಕರು ಭಾಷಣವನ್ನು ಮುಂದುವರಿಸಿದರು :

ಶೌನಕರೇ! ಮುನಿಗಳು ಹೀಗೆ ಸಭೆಯಲ್ಲಿ ಸಪ್ತಾಹಶ್ರವಣದ ಮಹಿಮೆ ಯನ್ನು ವರ್ಣಿಸುತ್ತಿರುವಂತೆಯೇ ಒಂದು ಆಶ್ಚರ್ಯದ ಘಟನೆಯಾಯಿತು. ಅದೇನೆಂಬುದನ್ನು ಹೇಳುತ್ತೇನೆ ; ಕೇಳಿರಿ. ಇದ್ದಕ್ಕಿದ್ದಂತೆಯೇ ಪ್ರೇಮೈಕ ರೂಪಿಣಿಯಾದ ಭಕ್ತಿದೇವಿಯು ತರುಣಾವಸ್ಥೆಯನ್ನು ಹೊಂದಿಬಿಟ್ಟಿದ್ದ ತನ್ನ ಇಬ್ಬರು ಪುತ್ರರನ್ನೂ ಕರೆದುಕೊಂಡು– "ಹೇ ಕೃಷ್ಣ! ಗೋವಿಂದ!

ಹರೇ! ಮುರಾರೇ! ಹೇ ನಾಥ! ನಾರಾಯಣ! ವಾಸುದೇವ!"–ಎಂದು ಭಗವನ್ನಾಮಗಳನ್ನು ಮತ್ತೆ ಮತ್ತೆ ಉಚ್ಚರಿಸುತ್ತಾ ಅಲ್ಲಿ ಪ್ರಕಟವಾದಳು. ಪರಮಸುಂದರವೇಷವುಳ್ಳ ಆ ದೇವಿಯು ಶ್ರೀಭಾಗವತದ ಅರ್ಥಗಳೆಂಬ ಆಭರಣಗಳನ್ನು ಧರಿಸಿ ಬೆಳಗುತ್ತಾ ಅಲ್ಲಿಗೆ ದಯಮಾಡಿಸಿದ್ದನ್ನು ಸಭಾಸದರೆಲ್ಲರೂ ಸಂದರ್ಶಿಸಿದರು. 'ಈಕೆಯು ಇಲ್ಲಿಗೆ ಹೇಗೆ ಬಂದಳು? ಮುನಿಗಳ ಮಧ್ಯೆ ಇದ್ದಕ್ಕಿದ್ದಂತೆ ಈಕೆಯ ಪ್ರವೇಶ ಹೇಗೆ ಆಯಿತು?'–ಎಂದು ಅವರು ತರ್ಕಿಸತೊಡಗಿದರು. ಆಗ ಸನಕಾದಿಮುನಿಗಳು ಅವರ ಸಂಶಯವನ್ನು ಪರಿಹರಿಸಿದರು. "ಈ ಭಕ್ತಿದೇವಿಯು ನಾವು ಈಗ ತಾನೇ ಪ್ರಸ್ತಾಪ ಮಾಡಿದ್ದ ಈ ಭಾಗವತಕಥೆಯ ಅರ್ಥದಿಂದ ಹೊರಬಂದಿದ್ದಾಳೆ"–ಎಂದು ಅಪ್ಪಣೆಕೊಡಿಸಿದರು. ಭಕ್ತಿದೇವಿಯು ತನ್ನ ಪುತ್ರರೊಡನೆ ಈ ಮಾತುಗಳನ್ನು ಕೇಳಿ ನಮ್ರತೆಯಿಂದ ಸನತ್ಕುಮಾರರನ್ನು ಕುರಿತು ಹೀಗೆಂದಳು :

"ಎಲೈ ಮುನೀಂದ್ರರೇ! ನಾನು ಕಲಿಯುಗದಲ್ಲಿ ನಷ್ಟಪ್ರಾಯಳಾಗಿದ್ದರೂ ನಿಮ್ಮ ಕಥಾಮೃತದ ಸೇಚನೆಯಿಂದ ಮತ್ತೆ ಪುಷ್ಟಿಯನ್ನು ಪಡೆದೆನು. ಈಗ ನಾನು ಎಲ್ಲಿ ವಾಸಮಾಡಬೇಕೆಂಬುದನ್ನು ಹೇಳಿರಿ."

ಆಕೆಗೆ ಬ್ರಹ್ಮಪುತ್ರರು ಹೀಗೆ ಆಜ್ಞೆಮಾಡಿದರು :

"ಓ ದೇವಿಯೇ! ನೀನು ಭಕ್ತರಿಗೆ ಭಗವಂತನ ಸ್ವರೂಪವನ್ನು ಕೊಡುವಾಕೆ. ಅನನ್ಯವಾದ ಪ್ರೇಮವನ್ನು ಧರಿಸಿ ಪೋಷಿಸುವಾಕೆ ಮತ್ತು ಸಂಸಾರರೋಗವನ್ನು ಬೇರುಸಹಿತ ಕಿತ್ತುಹಾಕುವ ಸಾಮರ್ಥ್ಯವುಳ್ಳವಳು. ಆದ್ದರಿಂದ ವಿಷ್ಣುಭಕ್ತರ ಹೃದಯದಲ್ಲಿ ನಿತ್ಯನಿರಂತರವಾಗಿ ಧೈರ್ಯದಿಂದ ವಾಸಮಾಡುತ್ತಿರು. ಕಲಿಯುಗದ ಈ ದೋಷಗಳು ಈ ಲೋಕದಲ್ಲಿ ಎಲ್ಲೆಡೆಗಳಲ್ಲೂ ತನ್ನ ಪ್ರಭಾವವನ್ನು ಬೀರಿದರೂ–ಅಲ್ಲಿ ನಿನ್ನ ಮೇಲೆ ದೃಷ್ಟಿಯನ್ನೂ ಬೀರಲಾರವು."

ಅವರಿಂದ ಹೀಗೆ ಆಣತಿ ಬಂದೊಡನೆಯೇ ಭಕ್ತಿಯು ಹರಿದಾಸರ ಹೃದಯದಲ್ಲಿ ಹೋಗಿ ಕುಳಿತಳು.

ಯಾರ ಹೃದಯದಲ್ಲಿ ಶ್ರೀಹರಿಭಕ್ತಿಯೊಂದೇ ವಾಸಮಾಡುತ್ತಿದೆಯೋ ಅವರು ಮೂರು ಲೋಕಗಳಲ್ಲಿಯೂ ಭೌತಿಕವಾಗಿ ಕಡುಬಡವರಾಗಿದ್ದರೂ

ವಾಸ್ತವವಾಗಿ ಅತಿಧನ್ಯ ( ಧನಸಂಪನ್ನ ) ರೆಂದೇ ತಿಳಿಯಬೇಕು. ಏಕೆಂದರೆ : ಭಕ್ತಿಯ ಸೂತ್ರಕ್ಕೆ ಕಟ್ಟುಬಿದ್ದು ಶ್ರೀಪತಿಯೂ ತನ್ನ ಧಾಮವನ್ನು ಬಿಟ್ಟು ಅಂತಹವರ ಹೃದಯವನ್ನು ಹೊಕ್ಕು ಅಲ್ಲಿ ವಾಸಮಾಡುವನು. ಭೂಲೋಕ ದಲ್ಲಿ ಭಗವಂತನ ಸಾಕ್ಷಾತ್ ಶ್ರೀಮೂರ್ತಿಯೇ ಆಗಿರುವ ಶ್ರೀಮದ್ಭಾಗವತದ ಮಹಿಮೆಯ ಬಗೆಗೆ ನಿಮಗೆ ಇನ್ನೆಷ್ಟು ಹೇಳೋಣ? ಇದರ ಆಶ್ರಯ ಪಡೆದು ಇದರ ಸಂಕೀರ್ತನೆಮಾಡಿದರೆ ಹೇಳುವವರು ಮತ್ತು ಕೇಳುವವರು ಇಬ್ಬರೂ ಶ್ರೀಕೃಷ್ಣಪರಮಾತ್ಮನ ಸಾಮ್ಯವನ್ನೇ ಹೊಂದಿಬಿಡುವರು. ಇದನ್ನು ಬಿಟ್ಟು ಇತರ ಧರ್ಮಗಳ ಗೊಡವೆಯೇಕೆ?"

**ಬ್ರೂಮೋಽದ್ಯ ತೇ ಕಿಮಧಿಕಂ ಮಹಿಮಾನಮೇವಂ**
**ಬ್ರಹ್ಮಾತ್ಮಕಸ್ಯ ಭುವಿ ಭಾಗವತಾಭಿಧಸ್ಯ ।**
**ಯತ್ಸಂಶ್ರಯಾನ್ನಿಗದಿತೇ ಲಭತೇ ಸುವಕ್ತಾ**
**ಶ್ರೋತಾಪಿ ಕೃಷ್ಣಸಮತಾಮಲಮನ್ಯಧರ್ಮೈಃ ॥೭೩॥**

ಪದ್ಮಪುರಾಣದ ಉತ್ತರಖಂಡದಲ್ಲಿ ಬರುವ ಭಾಗವತಮಾಹಾತ್ಮ್ಯೆಯಲ್ಲಿ ಭಕ್ತಿಕಷ್ಟಪರಿಹಾರವೆಂಬ ಮೂರನೆಯ ಅಧ್ಯಾಯವು ಮುಗಿಯಿತು.

---

## ಅಧ್ಯಾಯ ೪
## ಗೋಕರ್ಣೋಪಾಖ್ಯಾನದ ಪ್ರಾರಂಭ

ಸೂತಪುರಾಣಿಕರು ಹೇಳುತ್ತಾರೆ :

"ಎಲೈ ಮುನಿವರ್ಯರೇ! ಅನಂತರ ಅಲೌಕಿಕವಾದ ಭಕ್ತಿಯು ತನ್ನ ಭಕ್ತರ ಚಿತ್ತಗಳಲ್ಲಿ ನೆಲೆಗೊಂಡಿದ್ದನ್ನು ಕಂಡು ಭಕ್ತವತ್ಸಲನಾದ ಶ್ರೀಭಗವಂತನೇ ತನ್ನ ಲೋಕವನ್ನು ಬಿಟ್ಟು ಅಲ್ಲಿಗೆ ದಯಮಾಡಿಸಿದನು. ನೀರುಂಡ ಮೋಡದಂತೆ ಶ್ಯಾಮಲವಾದ ದೇಹಕಾಂತಿ, ಕೊರಳಲ್ಲಿ ವನಮಾಲೆ, ಪೀತಾಂಬರವನ್ನು ಧರಿಸಿದ ಮನೋಹರಮೂರ್ತಿ, ನಡುವಿನಲ್ಲಿ ಒಡ್ಯಾಣದ ಒಡವೆಗಳ ಸೊಗಸು, ತಲೆಯ ಮೇಲೆ ಕಂಗೊಳಿಸುವ ಕಿರೀಟ, ಕಿವಿಗಳಲ್ಲಿ ಶೋಭಿಸುವ ಕುಂಡಲಗಳು, ಮನಸ್ಸನ್ನು ಸೂರೆಗೊಳ್ಳುವ ತ್ರಿಭಂಗಿಯ*

---

* ತ್ರಿಭಂಗಿ = ಕೈ-ಕಾಲು-ಕಂಠಗಳು ವಿಶಿಷ್ಟರೀತಿಯಲ್ಲಿ ಬಗ್ಗಿ ನಿಂತಿರುವ ದೇಹ

ವಿನ್ಯಾಸ, ವಕ್ಷಃಸ್ಥಳದಲ್ಲಿ ಕಣ್ಮನಗಳನ್ನು ಸೆಳೆಯುವ ಕೌಸ್ತುಭದ ಶೋಭೆ, ಕೋಟಿ-ಕೋಟಿ ಕಾಮದೇವರನ್ನು ನಾಚಿಸುವ ಲಾವಣ್ಯ, ಸರ್ವಾಂಗಗಳಲ್ಲೂ ಹರಿಚಂದನದ ಲೇಪನೆ, ಇವುಗಳಿಂದ ಕಂಗೊಳಿಸುತ್ತಿದ್ದ ಪರಮಾನಂದ-ಚಿನ್ಮಯ-ಕಮನೀಯಮೂರ್ತಿಯಾದ ಆ ಮುರಳೀಧರನು ತನ್ನ ಭಕ್ತರ ನಿರ್ಮಲವಾಗಿದ್ದ ಹೃದಯಮಂದಿರವನ್ನು ಪ್ರವೇಶಿಸಿಬಿಟ್ಟನು.

ಶ್ರೀವೈಕುಂಠದಲ್ಲಿ ವಾಸಮಾಡುತ್ತಿರುವ ಮಹಾವಿಷ್ಣುಭಕ್ತರೂ ಶ್ರೀಭಗವಂತನ ಪರಿವಾರಕ್ಕೆ ಸೇರಿದವರೂ ಆದ ಉದ್ಧವನೇ ಮುಂತಾದ–ವರೂ ಭಗವತ್ಕಥಾಶ್ರವಣಕ್ಕಾಗಿ ಅಲ್ಲಿಗೆ ಬಂದು ಗುಪ್ತವಾಗಿ ಉಪಸ್ಥಿತರಾಗಿದ್ದರು. ಎಲ್ಲೆಲ್ಲಿಯೂ 'ಜಯ ಜಯ' ಎಂಬ ಮಂಗಳಾಶಂಸನೆಯ ಧ್ವನಿಯು ಕೇಳಿಬರುತ್ತಿತ್ತು. ದಿವ್ಯವಾದ ಭಕ್ತಿರಸಪ್ರವಾಹವು ಹುಚ್ಚುಹೊಳೆಯಾಗಿ ಹರಿಯತೊಡಗಿತು. ಮಂಗಳಾಚರಣಗಳ ಮತ್ತು ಪುಷ್ಪಗಳ ಮಳೆಯು ಮತ್ತೆ ಮತ್ತೆ ಆಗುತ್ತಿತ್ತು. ಅಡಿಗಡಿಗೆ ಶಂಖಧ್ವನಿಯು ಕೇಳಿಬರುತ್ತಿತ್ತು. ಸಭೆಯಲ್ಲಿದ್ದವರಿಗೆ ದೇಹ, ಮನ ಮತ್ತು ಆತ್ಮಗಳೂ ಮರೆತುಹೋದುವು. ಅವರ ಇಂತಹ ತನ್ಮಯತೆಯನ್ನು ಕಂಡು ಶ್ರೀನಾರದಮಹರ್ಷಿಗಳು ಹೀಗೆ ಉದ್ಗರಿಸಿದರು :

"ಎಲೈ ಮುನೀಶ್ವರರೇ! ಈ ಸಪ್ತಾಹಶ್ರವಣದ ಅತ್ಯದ್ಭುತವಾದ ಅಲೌಕಿಕವಾದ ಮಹಿಮೆಯನ್ನು ನಾನು ನೋಡಿದೆನು. ಇಲ್ಲಿ ಇರುವ ಮೂರ್ಖರು, ದುಷ್ಟರು ಮತ್ತು ಪಶು-ಪಕ್ಷಿಗಳೂ ಕೂಡ ಅತ್ಯಂತವಾಗಿ ಪಾಪರಹಿತರಾಗಿಬಿಟ್ಟಿದ್ದಾರೆ. ಆದುದರಿಂದ ಮನುಷ್ಯಲೋಕದಲ್ಲಿ ಕಲಿಕಾಲದಲ್ಲಿ ಚಿತ್ತವನ್ನು ಶುದ್ಧಿಮಾಡುವ ಮತ್ತು ಪಾಪಪುಂಜವನ್ನು ಧ್ವಂಸ ಮಾಡುವ ಪವಿತ್ರಸಾಧನಗಳಲ್ಲಿ ಶ್ರೀಮದ್ಭಾಗವತಕ್ಕೆ ಸಮಾನವಾದುದು ಬೇರಾವುದೂ ಇಲ್ಲ. ಮುನಿವರ್ಯರೇ! ತಾವು ಅತ್ಯಂತಕರುಣಾಳುಗಳು. ಲೋಕಕಲ್ಯಾಣವನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಅತ್ಯಂತವಿಚಿತ್ರವಾದ

---

ವಿನ್ಯಾಸದ ಸೊಗಸು. ಶ್ರೀಕೃಷ್ಣನ ಮೂರ್ತಿಯಲ್ಲಿ ಇದನ್ನು ವಿಶೇಷವಾಗಿ ನೋಡುತ್ತೇವೆ. 'ತ್ರಿಭಂಗಿಲಲಿತಂ ಜಾನೇ ಜಗನ್ಮೋಹನಮ್'

ಹೊಸಮಾರ್ಗವನ್ನು ತಿಳಿಸಿದ್ದೀರಿ. ಕಥಾರೂಪವಾದ ಈ ಸಪ್ತಾಹಯಜ್ಞದಿಂದ ಯಾರು-ಯಾರು ಪವಿತ್ರರಾಗುವರು–ಎಂಬುದನ್ನು ನನಗೆ ಹೇಳಿರಿ."

ಬ್ರಹ್ಮಕುಮಾರರು ಹೀಗೆ ಉತ್ತರಿಸಿದರು :

"ಯಾವ ಮನುಷ್ಯರು ಸದಾ ಪಾಪಾಚರಣೆಮಾಡಿದ್ದಾರೆಯೋ, ಸರ್ವದಾ ದುರ್ಮಾರ್ಗವನ್ನು ಹಿಡಿದು ದುರಾಚಾರದಲ್ಲಿ ತೊಡಗಿ ದ್ದಾರೆಯೋ, ಕ್ರೋಧವೆಂಬ ಅಗ್ನಿಯಲ್ಲಿ ಬೇಯುತ್ತಿರುತ್ತಾರೋ, ಕುಟಿಲರೂ ಕಾಮಪರಾಯಣರೂ ಆಗಿರುತ್ತಾರೋ–ಅವರೆಲ್ಲರೂ ಕಲಿಯುಗದಲ್ಲಿ ಈ ಸಪ್ತಾಹಶ್ರವಣಮಾಡುವುದರಿಂದ ಪವಿತ್ರರಾಗಿಬಿಡುತ್ತಾರೆ. ಯಾರು ಸತ್ಯಭ್ರಷ್ಟರಾಗಿ ದೀನರಾಗಿರುತ್ತಾರೋ, ತಾಯಿ-ತಂದೆಗಳನ್ನು ದೂಷಿಸು ತ್ತಾರೋ, ದುರಾಸೆಗಾರರಾಗಿ ಆಶ್ರಮಧರ್ಮವನ್ನು ತ್ಯಜಿಸಿರುತ್ತಾರೋ, ದಾಂಭಿಕರೂ ಮತ್ಸರಿಗಳೂ ಹಿಂಸಾಪರಾಯಣರೂ ಆಗಿದ್ದಾರೋ– ಅವರೆಲ್ಲರೂ ಕಲಿಯುಗದಲ್ಲಿ ಸಪ್ತಾಹಶ್ರವಣಯಜ್ಞದಿಂದ ಪವಿತ್ರತೆಯನ್ನು ಹೊಂದುವರು. ಯಾರು ಮದ್ಯಪಾನ, ಬ್ರಹ್ಮಹತ್ಯೆ, ಚಿನ್ನದ ಕಳುವು, ಗುರುಸ್ತ್ರೀಗಮನ ಮತ್ತು ವಿಶ್ವಾಸಘಾತಗಳೆಂಬ ಪಂಚಮಹಾಪಾತಕಗಳನ್ನು ಮಾಡಿರುತ್ತಾರೋ, ಕಪಟಾಚರಣೆಯಲ್ಲಿಯೇ ತೊಡಗಿರುತ್ತಾರೋ, ಕ್ರೂರಿಗಳಾಗಿ ಪಿಶಾಚಿಗಳಂತೆ ನಿರ್ದಯರಾಗಿರುತ್ತಾರೋ, ಬ್ರಾಹ್ಮಣರ ಸ್ವತ್ತನ್ನು ತಿಂದು ತಮ್ಮ ದೇಹವನ್ನು ಅದರಿಂದ ಬೆಳೆಸಿಕೊಂಡಿರುತ್ತಾರೋ, ವ್ಯಭಿಚಾರಿಗಳಾಗಿದ್ದಾರೋ–ಅವರೂ ಕೂಡ ಈ ಸಪ್ತಾಹಶ್ರವಣದಿಂದ ಪವಿತ್ರರಾಗುತ್ತಾರೆ. ಯಾವ ದುಷ್ಟರು ಹಠದಿಂದ ಸರ್ವದಾ ದೇಹ, ಮಾತು ಮತ್ತು ಮನಸ್ಸುಗಳಿಂದ ಪಾತಕಗಳನ್ನು ಮಾಡುತ್ತಾರೋ, ಇತರರ ಸ್ವತ್ತಿನಿಂದ ತಮ್ಮನ್ನು ಬೆಳೆಸಿಕೊಂಡಿರುತ್ತಾರೋ, ಮಲಿನರೂ ದುಷ್ಟವಾದ ಆಶಯವುಳ್ಳವರೂ ಆಗಿರುತ್ತಾರೋ–ಅಂತಹವರೂ ಕೂಡ ಕಲಿಯುಗದಲ್ಲಿ ಸಪ್ತಾಹಶ್ರವಣದಿಂದ ಪವಿತ್ರರಾಗುವರು.

ಈ ಸಂದರ್ಭದಲ್ಲಿ ನಾವು ನಿಮಗೆ ಒಂದು ಪುರಾತನವಾದ ಇತಿಹಾಸ ವನ್ನು ಹೇಳುತ್ತೇವೆ ; ಕೇಳಿರಿ. ಇದನ್ನು ಕೇಳಿದ ಮಾತ್ರದಿಂದಲೇ ಪಾಪ ಪರಿಹಾರವಾಗುವುದು.

ಹಿಂದೆ ತುಂಗಭದ್ರಾನದಿಯ ತೀರದಲ್ಲಿ ಒಂದು ಉತ್ತಮವಾದ

ಪಟ್ಟಣವಿತ್ತು. ಅದರಲ್ಲಿ ಎಲ್ಲ ವರ್ಣಗಳ ಜನರೂ ತಮ್ಮ-ತಮ್ಮ ಧರ್ಮಗಳನ್ನು ಆಚರಿಸುತ್ತಾ ಸತ್ಯ-ಸತ್ಕರ್ಮಗಳಲ್ಲಿ ಆಸಕ್ತರಾಗಿದ್ದರು. ಆ ಪಟ್ಟಣದಲ್ಲಿ ಆತ್ಮದೇವನೆಂಬ ಒಬ್ಬ ಬ್ರಾಹ್ಮಣನು ವಾಸವಾಗಿದ್ದನು. ಅವನು ಸರ್ವವೇದವಿಶಾರದನಾಗಿ ಶ್ರೌತ ಮತ್ತು ಸ್ಮಾರ್ತಕರ್ಮಗಳಲ್ಲಿ ನಿಷ್ಣಾತನಾಗಿ ಎರಡನೆಯ ಸೂರ್ಯನಂತೆ ತೇಜಸ್ವಿಯಾಗಿ ಬೆಳಗುತ್ತಿದ್ದನು. ಅವನು ಹಣಗಾರನಾಗಿದ್ದರೂ ಭಿಕ್ಷೆಯಿಂದ ಜೀವನನಡೆಸುತ್ತಿದ್ದನು. ಅವನ ಪ್ರೀತಿಯ ಹೆಂಡತಿಯ ಹೆಸರು ಧುಂಧುಲೀ. ಅವಳು ಸತ್ಕುಲಪ್ರಸೂತೆ. ಸುಂದರಿ. ಆದರೆ ತನ್ನ ಮಾತೇ ನಡೆಯಬೇಕೆಂದು ಹಠಮಾಡುತ್ತಿದ್ದಳು. ಜನರ ಸಮಾಚಾರವನ್ನು ಹೇಳುವುದು, ಕೇಳುವುದು, ಹರಡುವುದು ಇವುಗಳಲ್ಲಿ ಆಸಕ್ತಳಾಗಿದ್ದಳು. ಕ್ರೂರಸ್ವಭಾವದವಳು. ಬಹುಮಟ್ಟಿಗೆ ಹರಟೇಮಲ್ಲಿ. ಮನೆಯ ಕೆಲಸಗಳಲ್ಲಿ ನಿಪುಣೆ. ಆದರೆ ಕೃಪಣೆ. ಕಲಹಗಳಲ್ಲಿ ಪ್ರೀತಿಯುಳ್ಳವಳು. ಹೀಗೆ ಆ ದಂಪತಿಗಳು ಪರಸ್ಪರ ಪ್ರೇಮದಿಂದ ಇರುತ್ತಾ ವಿಹರಿಸುತ್ತಿದ್ದರು. ಅವರಲ್ಲಿ ಭೋಗವಿಲಾಸಸಾಮಗ್ರಿಗಳೂ ಹೇರಳವಾಗಿದ್ದುವು. ಮನೆ ಮುಂತಾದುವೂ ಚೆನ್ನಾಗಿದ್ದುವು. ಆದರೆ ಅದರಿಂದ ಅವರಿಗೆ ಸುಖವುಂಟಾಗಲಿಲ್ಲ. ಏಕೆಂದರೆ : ಅವರಿಗೆ ಸಂತಾನವಿರಲಿಲ್ಲ. ಬಹಳ ಕಾಲ ಕಳೆದರೂ ಮಕ್ಕಳಾಗದಿರಲು ಅವರು ಸಂತಾನಪ್ರಾಪ್ತಿಗೋಸ್ಕರ ಬಗೆ-ಬಗೆಯ ಪುಣ್ಯಕರ್ಮಗಳನ್ನು ಆರಂಭಿಸಿದರು. ದೀನ-ದರಿದ್ರರಿಗೆ ಗೋವು, ಭೂಮಿ, ಸುವರ್ಣ, ವಸ್ತ್ರ ಮುಂತಾದುವುಗಳನ್ನು ದಾನಮಾಡತೊಡಗಿದರು. ಹೀಗೆ ಅವರು ಧರ್ಮಮಾರ್ಗದಲ್ಲಿ ತಮ್ಮ ಸಂಪತ್ತಿನ ಅರ್ಧಭಾಗದಷ್ಟನ್ನು ಖರ್ಚುಮಾಡಿದರು. ಆದರೂ ಅವರಿಗೆ ಪುತ್ರನ ಅಥವಾ ಪುತ್ರಿಯ ಮುಖವನ್ನು ನೋಡುವ ಭಾಗ್ಯವುಂಟಾಗಲಿಲ್ಲ. ಇದರಿಂದ ಬ್ರಾಹ್ಮಣನು ಅತ್ಯಂತ ಚಿಂತಾಕುಲನಾದನು.

ಒಮ್ಮೆ ಆ ಬ್ರಾಹ್ಮಣನು ದುಃಖದಿಂದ ಮನೆಯನ್ನು ತೊರೆದು ಅರಣ್ಯಕ್ಕೆ ಹೊರಟುಬಿಟ್ಟನು. ಅವನು ಮಧ್ಯಾಹ್ನದ ವೇಳೆಯಲ್ಲಿ ಬಾಯಾರಿ ಒಂದು ಸರೋವರಕ್ಕೆ ಹೋದನು. ಸಂತಾನದ ಅಭಾವದ ದುಃಖದಿಂದ ಕೃಶನಾಗಿದ್ದ ಅವನು ಅಲ್ಲಿ ನೀರನ್ನು ಕುಡಿದು ಅದರ ಬಳಿಯೇ ಕುಳಿತುಕೊಂಡನು. ಕ್ಷಣಕಾಲಾನಂತರ ಅಲ್ಲಿಗೆ ಒಬ್ಬ ಸಂನ್ಯಾಸಿಯು ಬಂದನು.

ಅವನೂ ನೀರು ಕುಡಿದಾಗಿರುವುದನ್ನು ಕಂಡು ಬ್ರಾಹ್ಮಣನು ಅವನ ಬಳಿಗೆ ಹೋಗಿ ಪಾದಗಳಿಗೆರಗಿ ನಿಟ್ಟುಸಿರುಬಿಡುತ್ತಾ ಅವನ ಮುಂದೆ ಕುಳಿತುಕೊಂಡನು. ಯತಿಯು ಆತನನ್ನು "ಏಕೆ ಅಳುತ್ತಿದ್ದೀಯೆ? ಬ್ರಾಹ್ಮಣ! ಅಂತಹ ದೊಡ್ಡ ಚಿಂತೆಯೇನು ನಿನಗೆ ಉಂಟಾಗಿದೆ? ನಿನ್ನ ಶೋಕಕ್ಕೆ ಕಾರಣವೇನೆಂಬುದನ್ನು ನನಗೆ ಬೇಗನೆ ತಿಳಿಸು"–ಎಂದು ಕೇಳಲು, ಬ್ರಾಹ್ಮಣನು ಹೀಗೆಂದನು : "ಮುನಿಗಳೇ! ಪೂರ್ವಜನ್ಮಗಳ ಪಾಪಗಳ ಸಂಚಯದಿಂದ ನನಗೆ ಉಂಟಾಗಿರುವ ದುಃಖವನ್ನು ಹೇಗೆ ವರ್ಣಿಸಲಿ? ಈಗ ನನ್ನ ಪಿತೃಗಳು ನಾನು ತರ್ಪಣದಲ್ಲಿ ಕೊಟ್ಟ ಜಲಾಂಜಲಿಯನ್ನು ತಮ್ಮ ಚಿಂತೆಯ ನಿಟ್ಟುಸಿರಿನಿಂದ ಬಿಸಿಮಾಡಿ ಕುಡಿಯುತ್ತಿದ್ದಾರೆ. ದೇವತೆಗಳೂ ಮತ್ತು ಬ್ರಾಹ್ಮಣರೂ ನಾನು ಕೊಟ್ಟಿದ್ದನ್ನು ಪ್ರೀತಿ-ಸಂತೋಷಗಳಿಂದ ಸ್ವೀಕರಿಸುತ್ತಿಲ್ಲ. ಸಂತಾನವಿಲ್ಲದ ದುಃಖದಿಂದ ನನಗೆ ಎಲ್ಲವೂ ಶೂನ್ಯವಾಗಿ ಕಾಣುತ್ತಿದೆ. ಪ್ರಾಣವನ್ನು ಕಳೆದುಕೊಳ್ಳಲು ಇಲ್ಲಿಗೆ ಬಂದಿದ್ದೇನೆ. ಛೇ! ಸಂತಾನವಿಲ್ಲದ ಜೀವನವನ್ನು ಸುಡಬೇಕು. ಸಂತತಿಯಿಲ್ಲದ ಮನೆಗೆ ಧಿಕ್ಕಾರ. ಸಂತಾನರಹಿತನಾದವನ ಹಣಕ್ಕೂ ಧಿಕ್ಕಾರ. ಅಂತಹ ಕುಲಕ್ಕೂ ಧಿಕ್ಕಾರ. ನಾನು ಸಾಕಿದ ಹಸುವೂ ನಿಶ್ಚಯವಾಗಿ ಬಂಜೆಯಾಗಿಬಿಡುತ್ತಿದೆ. ನಾನು ನೆಟ್ಟ ಗಿಡಗಳಲ್ಲೂ ಹೂವು-ಹಣ್ಣುಗಳು ಬಿಡುವುದಿಲ್ಲ. ನನ್ನ ಮನೆಗೆ ಬಂದ ಹಣ್ಣು ಬೇಗನೆ ಕೊಳೆತುಹೋಗುತ್ತದೆ. ಸಂತಾನಹೀನನಾಗಿ ದುರ್ಭಾಗ್ಯನಾದ ನಾನು ಬದುಕಿ ಏನು ಪ್ರಯೋಜನ?"

ಹೀಗೆ ಹೇಳಿ ಬ್ರಾಹ್ಮಣನು ದುಃಖಪೀಡಿತನಾಗಿ ಆ ಸಂನ್ಯಾಸಿಯ ಬಳಿ ಕುಳಿತು ಬಿಕ್ಕಿ-ಬಿಕ್ಕಿ ಅಳತೊಡಗಿದನು. ಅದನ್ನು ಕಂಡು ಯತಿಯ ಮನಸ್ಸಿನಲ್ಲಿ ತುಂಬಾ ಕರುಣೆಯುಂಟಾಯಿತು. ಯೋಗನಿಷ್ಠನಾದ ಆ ಯತಿಯು ಆ ಬ್ರಾಹ್ಮಣನ ಹಣೆಯ ಬರಹವನ್ನು ನೋಡಿ ಅವನಿಗೆ ಹೀಗೆ ತಿಳಿವಳಿಕೆ ಹೇಳಿದನು :

"ಬ್ರಾಹ್ಮಣ! ಪ್ರಜೆಯನ್ನು ಪಡೆಯಬೇಕೆಂಬ ಈ ಮೋಹವನ್ನು ತೊರೆಯಪ್ಪಾ. ಕರ್ಮದ ಗತಿಯು ಪ್ರಬಲವಾದುದು. ವಿವೇಕವನ್ನು ಆಶ್ರಯಿಸಿ ಸಂಸಾರದ ವಾಸನೆಯನ್ನು ತೊರೆಯುವವನಾಗು. ನಾನು ನಿನ್ನ ಪ್ರಾರಬ್ಧಕರ್ಮವನ್ನು ನೋಡಿಯಾಗಿದೆ. ಅದರ ಆಧಾರದ ಮೇಲೆ ಹೇಳುವ

ಈ ಮಾತನ್ನು ಕೇಳು. ನಿನಗೆ ಏಳು ಜನ್ಮಗಳವರೆಗೂ ಯಾವ ಸಂತಾನವೂ ಹುಟ್ಟುವುದಿಲ್ಲ. ಖಂಡಿತವಾಗಿಯೂ ಹುಟ್ಟುವುದಿಲ್ಲ.

ಸಂತಾನದ ಕಾರಣದಿಂದಲೇ ಹಿಂದೆ ಸಗರಮಹಾರಾಜನೂ ಅಂಗ ರಾಜನೂ ದುಃಖವನ್ನು ಅನುಭವಿಸಬೇಕಾಗಿ ಬಂದಿತು. ಆದುದರಿಂದ ನೀನು ಈಗ ಕುಟುಂಬದ ಆಶೆಯನ್ನು ಬಿಟ್ಟುಬಿಡಪ್ಪಾ. ಸಂನ್ಯಾಸದಲ್ಲಿಯೇ ಎಲ್ಲ ರೀತಿಯಿಂದಲೂ ಸುಖವಿರುವುದು."

**ಸಂತತೇಃ ಸಗರೋ ದುಃಖಮವಾಪಾಙ್ಗಃ ಪುರಾ ತಥಾ ।**
**ರೇ ಮುಞ್ಚಾದ್ಯ ಕುಟುಮ್ಬಾಶಾಂ ಸಂನ್ಯಾಸೇ ಸರ್ವಥಾ ಸುಖಮ್ ॥**

ಬ್ರಾಹ್ಮಣನಿಗೆ ಈ ಉಪದೇಶವು ಹಿಡಿಸಲಿಲ್ಲ. ಅವನು "ಮಹಾತ್ಮರೇ! ಈ ವಿವೇಕದಿಂದ ನನಗೇನು ಲಾಭ? ನನಗೆ ಬೇಕಾಗಿರುವುದು ಪುತ್ರಭಾಗ್ಯ. ಬಲವಂತದಿಂದಲಾದರೂ ನನಗೆ ಪುತ್ರನನ್ನೇ ಕರುಣಿಸಿ. ಇಲ್ಲದಿದ್ದರೆ ನಾನು ಶೋಕದಿಂದ ಮೂರ್ಛಿತನಾಗಿ ತಮ್ಮ ಮುಂದೆಯೇ ಪ್ರಾಣಕಳೆದುಕೊಳ್ಳು ತ್ತೇನೆ. ಪತ್ನೀ-ಪುತ್ರರೇ ಮುಂತಾದವರು ಇಲ್ಲದ ನಿಮ್ಮ ಈ ಸಂನ್ಯಾಸವು ನೀರಸವೇ ಸರಿ. ಮೊಮ್ಮಕ್ಕಳಿಂದ ಕೂಡಿದ ಗೃಹಸ್ಥರ ಆಶ್ರಮವೇ ಸರಸ ವಾದುದು"–ಎಂದು ಯತಿಗೇ ಪ್ರತ್ಯುಪದೇಶಮಾಡಿದನು. ಅವನ ಆಗ್ರಹ ವನ್ನು ಕಂಡು ಆ ತಪೋಧನರು–"ಅಯ್ಯಾ! ಬ್ರಹ್ಮನ ಬರಹವನ್ನು ಅಳಿಸಲು ಹಠಮಾಡಿ ಚಿತ್ರಕೇತುರಾಜನು ಕಷ್ಟಕ್ಕೆ ಒಳಗಾದನು. ದೈವಹತನಾದವನ ಪ್ರಯತ್ನದಂತೆ ಪುತ್ರಸುಖವನ್ನು ಪಡೆಯಬೇಕೆಂಬ ನಿನ್ನ ಮನೋರಥವೂ ವ್ಯರ್ಥವಾಗುವುದು. ಅದಕ್ಕೇ ಹೀಗೆ ಹಠಮಾಡುತ್ತಿದ್ದೀಯೆ ; ಅದೇ ವಸ್ತುವನ್ನೇ ಬಯಸುತ್ತಿದ್ದೀಯೆ. ನಿನಗೇನು ಹೇಳಲಿ?"–ಎಂದು ಹೇಳಿದನು.

ಹೇಗೂ ಅವನು ತನ್ನ ಆಗ್ರಹವನ್ನು ಬಿಡುವುದಿಲ್ಲವೆಂದು ಖಚಿತ ವಾಗಲು ಆ ಯೋಗಿಯು ಅವನಿಗೆ ಒಂದು ಹಣ್ಣನ್ನು ಕೊಟ್ಟು–"ನಿನ್ನ ಹೆಂಡತಿಗೆ ಈ ಹಣ್ಣನ್ನು ತಿನ್ನಿಸು. ಅದರಿಂದ ನಿನಗೆ ಪುತ್ರಪ್ರಾಪ್ತಿಯಾಗು ವುದು. ನಿನ್ನ ಹೆಂಡತಿಯು ಒಂದು ಸಂವತ್ಸರಕಾಲ ಸತ್ಯ, ಶೌಚ, ದಯೆ, ದಾನ ಮತ್ತು ಒಪ್ಪೊತ್ತು ಆಹಾರಸೇವನೆಯ ವ್ರತನಿಯಮದಲ್ಲಿರಬೇಕು. ಹೀಗೆ

ಮಾಡಿದರೆ ನಿನ್ನ ಆ ಪುತ್ರನು ಅತ್ಯಂತಪರಿಶುದ್ಧನಾದ ಸತ್ಪುತ್ರನಾಗುವನು"–ಎಂದು ಹೇಳಿ ಹೊರಟುಹೋದನು. ಬ್ರಾಹ್ಮಣನು ಮನೆಗೆ ಹಿಂದಿರುಗಿದನು.

ಮನೆಗೆ ಬಂದ ಆತನು ಅರಣ್ಯದಲ್ಲಿ ನಡೆದುದೆಲ್ಲವನ್ನೂ ಹೆಂಡತಿಗೆ ಹೇಳಿ ಅವಳ ಕೈಗೆ ಆ ಹಣ್ಣನ್ನು ಕೊಟ್ಟು ತಾನು ಎಲ್ಲಿಗೋ ಹೋದನು. ಆ ಹೆಂಗಸು ವಕ್ರಸ್ವಭಾವದವಳು. ಅವಳು ಅಳುತ್ತಾ ತನ್ನ ಸಖಿಗೆ ಹೀಗೆ ಹೇಳಿದಳು:

"ನನ್ನ ಮನಸ್ಸಿಗೆ ತುಂಬಾ ಚಿಂತೆಯುಂಟಾಗಿದೆ. ಸಖಿ! ನಾನು ಈ ಹಣ್ಣನ್ನು ತಿನ್ನುವುದಿಲ್ಲ. ಹಣ್ಣನ್ನು ತಿಂದರೆ ಗರ್ಭ ಉಂಟಾಗುವುದು. ಅದರಿಂದ ಹೊಟ್ಟೆ ದಪ್ಪನಾಗುವುದು. ತಿನ್ನುವ ಆಹಾರದ ಪ್ರಮಾಣವು ಕಡಿಮೆಯಾಗಿ ದುರ್ಬಲತೆಯುಂಟಾಗುವುದು. ಆ ಸ್ಥಿತಿಯಲ್ಲಿ ಮನೆಗೆಲಸಗಳು ನಡೆಯುವುದಾದರೂ ಹೇಗೆ? ಆಗ ಏನಾದರೂ ದೈವವಶದಿಂದ ಕಳ್ಳಕಾಕರರೂ ಡಕಾಯಿತರೂ ಗ್ರಾಮಕ್ಕೆ ಲೂಟಿಮಾಡಲು ಬಂದರೆ ಗರ್ಭಿಣಿಯಾದ ನಾನು ಓಡಿಹೋಗುವುದು ಹೇಗೆ? ಗರ್ಭವೇನಾದರೂ ಬೆಳೆದು ಹೊಟ್ಟೆಯಲ್ಲಿ ಹೆಚ್ಚು ಕಾಲ ತಂಗಿಬಿಟ್ಟರೆ ಗತಿಯೇನು? ಅದನ್ನು ಹೊರಕ್ಕೆ ತೆಗೆಯುವುದು ಹೇಗೆ? ಗರ್ಭವು ಅಡ್ಡಡ್ಡಲಾಗಿ ಬಂದುಬಿಟ್ಟರಂತೂ ನಾನೂ ಮರಣವನ್ನೇ ಹೊಂದಬೇಕಾಗುವುದು. ಅದನ್ನು ಸುಕುಮಾರಿಯಾದ ನಾನು ಹೇಗೆ ಸಹಿಸಲಿ? ನಾನು ದುರ್ಬಲೆಯಾಗಿಬಿಟ್ಟ ಸಮಯದಲ್ಲಿ ನಾದಿನಿಯು ಇಲ್ಲಿಗೆ ಬಂದು ಮನೆಯ ಸಾಮಾನುಗಳನ್ನೆಲ್ಲಾ ಅಪಹರಿಸಿಕೊಂಡು ಹೋಗುವಳು. ಅದೂ ಅಲ್ಲದೇ ಸಂನ್ಯಾಸಿಯು ಹೇಳಿದ ಸತ್ಯ, ಶೌಚ ಮುಂತಾದ ನಿಯಮಗಳನ್ನು ಪಾಲನೆಮಾಡುವುದು ನನಗೆ ತುಂಬಾ ಕಷ್ಟವಾಗುವುದು. ಮಗುವನ್ನು ಹೆತ್ತ ಹೆಂಗಸು ಅದರ ಲಾಲನೆ-ಪಾಲನೆ ಮಾಡುವ ಕಷ್ಟವನ್ನೂ ಅನುಭವಿಸಬೇಕಾಗುವುದು. ನನ್ನ ಅಭಿಪ್ರಾಯದಂತೆ ಬಂಜೆಯಾಗಿರುವ ಹೆಂಗಸೇ ಅಥವಾ ವಿಧವೆಯಾದ ಹೆಂಗಸೇ ಸುಖಶಾಲಿನಿಯು."

ಮನಸ್ಸಿನಲ್ಲಿ ಇಂತಹ ಕುತರ್ಕಗಳು ಉಂಟಾದ್ದರಿಂದ ಆಕೆ ಹಣ್ಣನ್ನು ತಿನ್ನಲೇ ಇಲ್ಲ. ಪತಿಯು ಬಂದು ಕೇಳಿದಾಗ ತಾನು ಹಣ್ಣನ್ನು ತಿಂದಾಯಿ

ತೆಂದು ಸಲೀಸಾಗಿ ಸುಳ್ಳು ಹೇಳಿಬಿಟ್ಟಳು. ಒಂದು ದಿನ ಆಕೆಯ ಸೋದರಿಯು ಸ್ವೇಚ್ಛೆಯಿಂದ ಆಕೆಯ ಮನೆಗೆ ಬಂದಳು. ಧುಂಧುಲಿಯು ಆಕೆಗೆ ತನ್ನ ಸಮಾಚಾರವನ್ನೆಲ್ಲಾ ತಿಳಿಸಿ–"ನನಗೆ ಇದರಿಂದ ತುಂಬಾ ಚಿಂತೆಯಾಗಿದೆಯಮ್ಮ, ಏನು ಮಾಡಲಿ?"–ಎಂದು ಆಕೆಯನ್ನು ಕೇಳಿದಳು. ಅವಳು "ಚಿಂತೆಪಡಬೇಡ. ನಾನು ಗರ್ಭಿಣಿಯಾಗಿದ್ದೇನೆ. ಪ್ರಸವವಾದ ನಂತರ ಆ ಮಗುವನ್ನು ನಿನಗೆ ಕೊಟ್ಟುಬಿಡುತ್ತೇನೆ. ಅಲ್ಲಿಯವರೆಗೂ ನೀನು ಗರ್ಭಿಣಿಯ ಸೋಗುಹಾಕಿಕೊಂಡು ಗುಟ್ಟಾಗಿ ಮನೆಯಲ್ಲಿ ಸುಖವಾಗಿರು. ನೀನು ನನ್ನ ಗಂಡನಿಗೆ ಹಣವನ್ನು ಕೊಟ್ಟರೆ ಅವನು ತನ್ನ ಶಿಶುವನ್ನು ನಿನಗೆ ಕೊಟ್ಟುಬಿಡುವನು. ನನ್ನ ಶಿಶುವು ಆರು ತಿಂಗಳಿಗೇ ಹುಟ್ಟಿ ಸತ್ತುಹೋಯಿತೆಂದು ಜನರೆಲ್ಲರೂ ನಂಬುವಂತೆ ಮಾಡೋಣ. ನಾನು ಪ್ರತಿನಿತ್ಯವೂ ನಿನ್ನ ಮನೆಗೆ ಬಂದು ನಿನಗೆ ಕೊಡಲ್ಪಡುವ ಮಗುವಿನ ಪಾಲನೆ-ಪೋಷಣೆಗಳನ್ನು ಮಾಡುತ್ತಿರುವೆನು. ಈಗ ಆ ಹಣ್ಣಿನಲ್ಲಿ ಪ್ರಭಾವವಿದೆಯೇ ಎಂಬುದನ್ನು ಪರೀಕ್ಷಿಸುವುದಕ್ಕೋಸ್ಕರ ಅದನ್ನು ಮನೆಯಲ್ಲಿರುವ ಹಸುವಿಗೆ ತಿನ್ನಿಸಿಬಿಡು"–ಎಂದು ಸಲಹೆನೀಡಿದಳು. ಧುಂಧುಲಿಯು ಸ್ತ್ರೀಸ್ವಭಾವಕ್ಕೆ ಅನುಗುಣವಾಗಿ ಆ ಸಲಹೆಯಂತೆಯೇ ಎಲ್ಲವನ್ನೂ ಮಾಡಿದಳು.

ಇದಾದನಂತರ ಸಕಾಲದಲ್ಲಿ ಧುಂಧುಲಿಯ ಸೋದರಿಯು ಪುತ್ರನನ್ನು ಪ್ರಸವಿಸಲು ಮಗುವಿನ ತಂದೆಯು ಗುಟ್ಟಾಗಿ ಅದನ್ನು ಧುಂಧುಲಿಗೆ ಒಪ್ಪಿಸಿಬಿಟ್ಟನು. ಆಕೆಯು ತನಗೆ ಸುಖಪ್ರಸವವಾಗಿದೆ–ಎಂದು ಪತಿಗೆ ಸಮಾಚಾರ ಕೊಟ್ಟಳು. ಆತ್ಮದೇವನಿಗೆ ಪುತ್ರಲಾಭವಾಯಿತೆಂದು ಕೇಳಿ ಎಲ್ಲರಿಗೂ ಬಹಳ ಸಂತೋಷವಾಯಿತು. ಬ್ರಾಹ್ಮಣನು ಆ ಮಗುವಿಗೆ ಜಾತಕರ್ಮಸಂಸ್ಕಾರವನ್ನು ಆಚರಿಸಿ ವಿಪ್ರರಿಗೆ ದಾನ-ಧರ್ಮಗಳನ್ನು ಮಾಡಿದನು. ಆತನ ಮನೆಯ ಬಾಗಿಲಿನಲ್ಲಿ ನೃತ್ಯ, ಗೀತ ಮುಂತಾದ ಮಂಗಳಕಾರ್ಯಗಳು ವೈಭವದಿಂದ ನಡೆದುವು. ಧುಂಧುಲಿಯು ತನ್ನ ಪತಿಯ ಮುಂದೆ "ನನ್ನ ಸ್ತನಗಳಲ್ಲಿ ಹಾಲು ಇಲ್ಲವಾಗಿದೆ. ಸ್ತನ್ಯವಿಲ್ಲದೇ ಮಗುವನ್ನು ಪೋಷಿಸುವುದು ಹೇಗೆ? ಹೆರಿಗೆ ಆಗಿರುವ ನನ್ನ ಸೋದರಿಗೆ ಹುಟ್ಟಿದ ಮಗು ಸತ್ತಿದೆ. ಆದುದರಿಂದ ಆಕೆಯನ್ನು ಇಲ್ಲಿಗೆ ಕರೆಸಿ ಮನೆಯಲ್ಲಿ ರಕ್ಷಿಸಿಕೊಳ್ಳಿ. ನಿಮ್ಮ ಮಗುವನ್ನು ಆಕೆ ಪೋಷಿಸುವಳು"–ಎಂದು ಕೇಳಿಕೊಂಡಳು.

ಮಗನ ರಕ್ಷಣೆಯಾಗಲೆಂದು ಪತಿಯು ಅದೆಲ್ಲಕ್ಕೂ ಒಪ್ಪಿಕೊಂಡು ಹಾಗೆಯೇ ನಡೆಸಿದನು. ತಾಯಿ ಧುಂಧುಲಿಯು ಪುತ್ರನಿಗೆ 'ಧುಂಧುಕಾರಿ' ಎಂದು ಹೆಸರನ್ನಿಟ್ಟಳು.

ಇದಾದನಂತರ ಮೂರು ತಿಂಗಳು ಕಳೆಯಲು ಆತ್ಮದೇವನ ಮನೆಯ ಹಸುವು ಒಂದು ಪುತ್ರಶಿಶುವನ್ನು ಪ್ರಸವಿಸಿತು. ಅದು ಸರ್ವಾಂಗಸುಂದರವಾಗಿತ್ತು. ದಿವ್ಯಕಾಂತಿಯಿಂದ ಕೂಡಿದ್ದ ಮಗುವು ನಿರ್ಮಲವಾದ ಬಂಗಾರದ ಬಣ್ಣದಿಂದ ಹೊಳೆಯುತ್ತಿತ್ತು. ಅದನ್ನು ನೋಡಿ ಪ್ರಸನ್ನನಾದ ಆತ್ಮದೇವನು ಅದಕ್ಕೆ ತಾನೇ ಜಾತಕರ್ಮಾದಿಸಂಸ್ಕಾರಗಳನ್ನು ಮಾಡಿದನು. ಹಸುವಿನ ಹೊಟ್ಟೆಯಿಂದ ಮನುಷ್ಯಶಿಶುಹುಟ್ಟಿದೆ–ಅದೂ ಆತ್ಮದೇವನ ಮನೆಯ ಹಸುವಿನಿಂದಲೇ ಹುಟ್ಟಿದೆ–ಎಂಬ ಸಮಾಚಾರವನ್ನು ಕೇಳಿ ಆಶ್ಚರ್ಯಚಕಿತರಾದ ಜನರು ಅದನ್ನು ನೋಡಲು ಬಂದು ಹೇಳಿದರು : "ಆತ್ಮದೇವನಿಗೆ ಎಂತಹ ಭಾಗ್ಯ ಕುದುರಿತು ನೋಡಿ! ಆತನ ಮನೆಯ ಹಸುವಿನ ಹೊಟ್ಟೆಯಲ್ಲಿ ದೇವರೂಪವುಳ್ಳ ಮನುಷ್ಯ ಬಾಲಕನು ಹುಟ್ಟಿದ್ದಾನಲ್ಲಾ! ಎಂತಹ ಕೌತುಕ!" ಆದರೆ ಇಲ್ಲಿ ನಡೆದಿದ್ದ ಗುಟ್ಟಿನ ವಿಷಯ ದೈವಯೋಗದಿಂದ ಯಾರಿಗೂ ತಿಳಿಯಲಿಲ್ಲ. ಆ ಬಾಲಕನಿಗೆ ಹಸುವಿನ ಕಿವಿಯಂತೆ ಕಿವಿಗಳು ಇದ್ದುದನ್ನು ಕಂಡು ಆತ್ಮದೇವನು ಅವನಿಗೆ 'ಗೋಕರ್ಣ' ಎಂದು ನಾಮಕರಣಮಾಡಿದನು. ಕೆಲವು ಕಾಲದಲ್ಲೇ ಆ ಇಬ್ಬರು ಬಾಲಕರೂ ತರುಣರಾಗಿ ಬೆಳೆದರು. ಅವರಲ್ಲಿ ಗೋಕರ್ಣನು ಪಂಡಿತನೂ ಜ್ಞಾನಿಯೂ ಆದನು. ಧುಂಧುಕಾರಿಯಾದರೋ ಮಹಾದುಷ್ಟನಾದನು. ಅವನು ಸ್ನಾನ-ಶೌಚಕ್ರಿಯೆಗಳನ್ನು ಮಾಡುತ್ತಿರಲಿಲ್ಲ. ಅಭಕ್ಷ್ಯಭಕ್ಷಣ-ಅಪೇಯಪಾನಗಳನ್ನು ಮಾಡುತ್ತಿದ್ದನು. ಮಹಾಕ್ರೋಧಿಯಾಗಿ ಬೆಳೆದನು. ದುಷ್ಟವಾದ ರೀತಿಯಿಂದ ದುಷ್ಟಜನರಿಂದ ದುಷ್ಟಪದಾರ್ಥಗಳನ್ನು ಸಂಗ್ರಹಮಾಡುತ್ತಿದ್ದನು. ಹೆಣದ ಕೈಮುಟ್ಟಿಸಿದ ಅನ್ನವನ್ನು ತಿನ್ನುತ್ತಿದ್ದನು. ಕಳ್ಳತನ, ಪರದ್ವೇಷ, ಮತ್ತೊಬ್ಬರ ಮನೆಗೆ ಬೆಂಕಿಹಚ್ಚುವುದು ಇವೆಲ್ಲಾ ಅವನ ಶೀಲ-ಸ್ವಭಾವವಾಗಿತ್ತು. ಆಟವಾಡಿಸಿ ಮುದ್ದಿಸುವೆನೆಂದು ಮಕ್ಕಳನ್ನು ಕರೆದುಕೊಂಡು ಹೋಗಿ ಅವುಗಳನ್ನು ಒಡನೆಯೇ ಬಾವಿಗೆ ಎಸೆದುಬಿಡುತ್ತಿದ್ದನು. ಆಯುಧಗಳನ್ನು ಧರಿಸಿಕೊಂಡು ಸದಾ ಪರರಿಗೆ ಹಿಂಸೆಮಾಡುವುದರಲ್ಲಿ ನಿರತನಾಗಿ

ದ್ದನು. ದೀನರನ್ನೂ ಕುರುಡ-ಕುಂಟರನ್ನೂ ಪೀಡಿಸುತ್ತಿದ್ದನು. ಚಾಂಡಾಲರ ಸಹವಾಸದಲ್ಲಿ ಪ್ರೀತಿಯುಳ್ಳವನಾಗಿದ್ದನು. ವೇಶ್ಯೆಯ ಸಹವಾಸದಲ್ಲಿ ಬಿದ್ದು ಅವನು ತಂದೆಯ ಎಲ್ಲ ಸಂಪತ್ತನ್ನೂ ಕಳೆದುಬಿಟ್ಟನು. ಒಂದು ದಿನ ತಂದೆ-ತಾಯಿಗಳಿಬ್ಬರನ್ನೂ ಹೊಡೆದು ಬಡಿದು ಮನೆಯಲ್ಲಿದ್ದ ಪಾತ್ರೆ-ಪದಾರ್ಥಗಳನ್ನೆಲ್ಲಾ ಕಿತ್ತುಕೊಂಡು ಹೋದನು.

ಹೀಗೆ ಸಂಪತ್ತೆಲ್ಲವೂ ನಾಶವಾದದ್ದನ್ನು ನೋಡಿ ಜಿಪುಣಾಗ್ರೇಸರ ನಾಗಿದ್ದ ಅವನ ತಂದೆಯು ಬಿಕ್ಕಿ-ಬಿಕ್ಕಿ ಅಳತೊಡಗಿದನು. "ಅಯ್ಯೋ! ಇದಕ್ಕಿಂತಲೂ ಈತನ ತಾಯಿಯು ಬಂಜೆಯಾಗಿದ್ದರೇ ಚೆನ್ನಾಗಿತ್ತಲ್ಲಾ! ಕುಪುತ್ರನು ಕಡುದುಃಖವನ್ನೇ ಉಂಟುಮಾಡುತ್ತಾನೆ. ಈಗ ನಾನು ಎಲ್ಲಿ ವಾಸಿಸಲಿ? ಎಲ್ಲಿಗೆ ಹೋಗಲಿ? ನನ್ನ ಈ ಸಂಕಟವನ್ನು ಪರಿಹರಿಸುವವರಾರು? ಅಯ್ಯೋ! ನನಗೆ ಎಂತಹ ಕಷ್ಟ ಒದಗಿತು? ಈ ದುಃಖದಿಂದ ನಾನು ಪ್ರಾಣತೊರೆಯಲೇ ಬೇಕಾಗುವುದು"–ಎಂದು ಗೋಳಾಡತೊಡಗಿ ದನು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಮಹಾಜ್ಞಾನಿಯಾದ ಗೋಕರ್ಣನು ಬಂದನು. ಅವನು ತಂದೆಗೆ ವೈರಾಗ್ಯವನ್ನು ಉಪದೇಶಿಸುತ್ತಾ ತುಂಬಾ ತಿಳಿವಳಿಕೆ ನೀಡಿದನು :

"ಅಪ್ಪಾ! ಈ ಸಂಸಾರವು ಅಸಾರವಾದುದು. ಇದು ಅತ್ಯಂತ ದುಃಖ ರೂಪವಾದುದು. ಮೋಹವನ್ನು ಉಂಟುಮಾಡುವುದು. ಪುತ್ರನು ಯಾರಿಗೆ ಸೇರಿದವನು? ಹಣವು ಯಾರಿಗೆ ಸೇರಿದ್ದು? ಈ ವಿಷಯಗಳಲ್ಲಿ ಸ್ನೇಹ ವನ್ನಿಟ್ಟುಕೊಂಡಿರುವವನು ಹಗಲೂ-ರಾತ್ರಿ ಅವುಗಳಿಗಾಗಿ ಎಣ್ಣೆಯುಳ್ಳ ದೀಪದಂತೆ ಉರಿಯುತ್ತಿರುತ್ತಾನೆ.

**ಅಸಾರಂ ಖಲು ಸಂಸಾರೋ ದುಃಖರೂಪೀ ವಿಮೋಹಕಃ ।**
**ಸುತಃ ಕಸ್ಯ ಧನಂ ಕಸ್ಯ ಸ್ನೇಹವಾನ್ ಜ್ವಲತೇಽನಿಶಮ್ ॥೭೪॥**

ಇಂದ್ರನಿಗಾಗಲೀ ಚಕ್ರವರ್ತಿಗಾಗಲೀ–ನಿಜವಾಗಿ ಕಿಂಚಿತ್ತೂ ಸುಖ ವಿಲ್ಲ. ಸುಖವಿರುವುದು ಏಕಾಂತಸೇವಿಯಾದ ವಿರಕ್ತನಾದ ಮುನಿಗೆ ಮಾತ್ರವೇ. 'ಈತನು ನನ್ನ ಪುತ್ರ' ಎಂಬ ಅಜ್ಞಾನವನ್ನು ತೊರೆದುಬಿಡು. ಮೋಹವು ನರಕಕ್ಕೆ ಕಾರಣವಾಗುವುದು. ಈ ದೇಹವು ಹೇಗೂ ಬಿದ್ದು ಹೋಗುವುದು. ಆದ್ದರಿಂದ ಎಲ್ಲವನ್ನೂ ತೊರೆದು ಅರಣ್ಯಕ್ಕೆ ಹೋಗು, ತಂದೆಯೇ!"–ಎಂದು ಉಪದೇಶಮಾಡಿದನು.

ಆತನ ಮಾತನ್ನು ಕೇಳಿ ಆತ್ಮದೇವನು ಅರಣ್ಯಕ್ಕೆ ಹೋಗಲು ಸಿದ್ಧನಾಗಿ ಆತನನ್ನು ಹೀಗೆ ಪ್ರಾರ್ಥಿಸಿದನು :

"ಅರಣ್ಯದಲ್ಲಿ ನಾನು ಏನಪ್ಪಾ ಮಾಡಬೇಕು? ಇದನ್ನು ವಿಸ್ತಾರವಾಗಿ ಹೇಳು. ನಾನೊಬ್ಬ ದೊಡ್ಡ ಮೂರ್ಖ. ಇಲ್ಲಿಯವರೆಗೂ ಸ್ನೇಹಪಾಶಕ್ಕೆ ಕಟ್ಟುಬಿದ್ದು ಕುಂಟನಂತೆ ಕರ್ಮವಶದಿಂದ ಸಂಸಾರವೆಂಬ ಕುರುಡು ಬಾವಿಯಲ್ಲಿ ಬಿದ್ದುಬಿಟ್ಟಿದ್ದೇನೆ. ಓ ದಯಾನಿಧಿಯೇ! ನನ್ನನ್ನು ಉದ್ಧರಿಸು."

ಅದಕ್ಕೆ ಗೋಕರ್ಣನು ಹೀಗೆ ಉತ್ತರಿಸಿದನು :

"ಅಪ್ಪ! ಈ ಶರೀರವು ಮೂಳೆ, ಮಾಂಸ ಮತ್ತು ರಕ್ತಗಳ ಪಿಂಡವು. ಇದರಲ್ಲಿ 'ನಾನು' ಎಂಬ ಅಭಿಮಾನವನ್ನು ತೊರೆ. ಪತ್ನೀ-ಪುತ್ರ ಮುಂತಾದವರಲ್ಲಿ 'ಇವರು ನನ್ನವರು' ಎಂಬ ಮಮತೆಯನ್ನು ಬಿಡು. ಎಂದಿಗೂ ಆ ಅಭಿಮಾನ-ಮಮತೆಗಳನ್ನು ಇಟ್ಟುಕೊಳ್ಳಬೇಡ. ಈ ಜಗತ್ತು ಕ್ಷಣಿಕವೆಂದು ಸದಾ ಭಾವಿಸು. ಉಳಿದ ವಿಷಯಗಳಲ್ಲಿ ಅನುರಾಗವನ್ನು ತೊರೆದು ವೈರಾಗ್ಯದಲ್ಲಿ ಮಾತ್ರ ಅನುರಾಗವನ್ನು ಇಟ್ಟುಕೊಂಡಿರುವ 'ವೈರಾಗ್ಯರಸಿಕ'ನಾಗು. ಭಗವಂತನ ಭಕ್ತಿಯಲ್ಲಿ ನಿಷ್ಠನಾಗು. ಪರಮಾತ್ಮಯೋಗವೆಂಬ ಧರ್ಮವನ್ನು ಮಾತ್ರ ಸೇವಿಸು. ಲೋಕಧರ್ಮಗಳನ್ನು ತ್ಯಜಿಸು. ಸಾಧುಪುರುಷರನ್ನು ಸೇವಿಸು. ಕಾಮದ ದುರಾಸೆಯನ್ನು ಬಿಡು. ಇತರರ ಗುಣ-ದೋಷಗಳ ಚಿಂತನೆಮಾಡುವುದನ್ನು ಶೀಘ್ರವಾಗಿ ಬಿಟ್ಟು ಭಗವಂತನ ಸೇವೆ ಮತ್ತು ಭಗವಂತನ ಕಥೆ ಇವುಗಳಲ್ಲಿ ರಸವುಳ್ಳವನಾಗು."

ಪುತ್ರನ ಆ ವಾಣಿಯಿಂದ ಪ್ರಭಾವಿತನಾಗಿ ಆತ್ಮದೇವನು ಮನೆಯನ್ನು ಬಿಟ್ಟು ಅರಣ್ಯಕ್ಕೆ ಹೊರಟುಬಿಟ್ಟನು. ಅವನಿಗೆ ವಯಸ್ಸು ಅರುವತ್ತು ಆಗಿದ್ದರೂ ಅವನ ಬುದ್ಧಿಯು ಸ್ಥಿರವಾಗಿತ್ತು. ಪ್ರತಿದಿನವೂ ಹಗಲು-ರಾತ್ರಿಗಳಲ್ಲಿ ಸದಾ ಶ್ರೀಹರಿಯ ಸೇವೆಯನ್ನೇ ಮಾಡುತ್ತಾ ನಿಯಮಪೂರ್ವಕವಾಗಿ ಶ್ರೀಮದ್ಭಾಗವತದ ದಶಮಸ್ಕಂಧವನ್ನು ಪಾರಾಯಣಮಾಡಿದ್ದರಿಂದ ಅವನು ಶ್ರೀಕೃಷ್ಣಪರಮಾತ್ಮನ ಪಾದಗಳನ್ನು ಸೇರಿಕೊಂಡನು."

ಪದ್ಮಪುರಾಣದ ಉತ್ತರಖಂಡದಲ್ಲಿ ಬರುವ ಭಾಗವತಮಾಹಾತ್ಮ್ಯೆಯಲ್ಲಿ
ವಿಪ್ರಮೋಕ್ಷವೆಂಬ ನಾಲ್ಕನೆಯ ಅಧ್ಯಾಯವು ಮುಗಿಯಿತು.

# ಅಧ್ಯಾಯ ೫
# ಧುಂಧುಕಾರಿಗೆ ಪ್ರೇತಯೋನಿ ಬಂದದ್ದು ಮತ್ತು ಅವನ ಉದ್ಧಾರ

ಸೂತಪುರಾಣಿಕರು ಹೇಳುತ್ತಾರೆ :

"ತಂದೆಯು ವೈಕುಂಠವಾಸಿಯಾದನಂತರ ಧುಂಧುಕಾರಿಯು ತನ್ನ ತಾಯಿಯನ್ನು ಪೀಡಿಸತೊಡಗಿದನು. ಒಂದು ದಿನ ಆತನು ಆಕೆಯನ್ನು ಬಲವಾಗಿ ಹೊಡೆದು–"ಹಣ ಎಲ್ಲಿದೆ ಹೇಳು. ಇಲ್ಲದಿದ್ದರೆ ಉರಿಯುವ ಕೊಳ್ಳಿಯಿಂದ ಬಡಿದು ನಿನ್ನನ್ನು ಕೊಂದುಬಿಡುತ್ತೇನೆ"–ಎಂದು ಹೆದರಿಸಿದನು. ಅವನ ಈ ಬೆದರಿಕೆಯಿಂದ ಮತ್ತು ಪುತ್ರದುಃಖದಿಂದ ಪೀಡಿತಳಾಗಿ ತಾಯಿ ಧುಂಧುಲಿಯು ರಾತ್ರಿಯಲ್ಲಿ ಬಾವಿಗೆ ಬಿದ್ದು ಮರಣಹೊಂದಿದಳು. ಗೋಕರ್ಣನಾದರೋ ಯೋಗನಿಷ್ಠನಾಗಿ ತೀರ್ಥಯಾತ್ರೆಗೆ ಹೊರಟು ಬಿಟ್ಟನು. ಅವನಿಗೆ ಸುಖವಾಗಲೀ ದುಃಖವಾಗಲೀ–ಯಾವುದೂ ಇರಲಿಲ್ಲ. ವೈರಿಯಾಗಲೀ ಬಂಧು-ಮಿತ್ರರಾಗಲೀ ಯಾರೂ ಇರಲಿಲ್ಲ. ಎಲ್ಲ ದ್ವಂದ್ವಗಳನ್ನೂ ಅವನು ಜಯಿಸಿದ್ದನು. ಧುಂಧುಕಾರಿಯು ಐದು ಮಂದಿ ವೇಶ್ಯೆಯರನ್ನಿಟ್ಟುಕೊಂಡು ಮನೆಯಲ್ಲಿಯೇ ಇರತೊಡಗಿದನು. ಅವರಿಗೆ ಭೋಗಸಾಮಗ್ರಿಗಳನ್ನು ತಂದುಕೊಡುವ ಚಿಂತೆಯಿಂದ ಬುದ್ಧಿಗೆಟ್ಟವನಾಗಿ ಅತಿಭಯಂಕರವಾದ ಕರ್ಮಗಳನ್ನು ಮಾಡತೊಡಗಿದನು. ಒಂದು ದಿನ ಆ ಕುಲಟೆಯರು ಅವನಿಂದ ತುಂಬಾ ಒಡವೆಗಳು ಬೇಕೆಂದು ಬಯಸಿದರು. ಅವುಗಳನ್ನು ತಂದುಕೊಡಲೆಂದು ಕಾಮದಿಂದ ಕುರುಡಾದ ಅವನು ತನಗೆ ಮೃತ್ಯುವು ಒದಗುವುದೆಂಬುದನ್ನೂ ಗಮನಿಸದೇ ಮನೆಯಿಂದ ಹೊರಟನು. ಅಲ್ಲಿಂದ ಇಲ್ಲಿಂದ ಎಲ್ಲಿಂದಲೋ ಹಣವನ್ನು ಸಂಗ್ರಹಿಸಿಕೊಂಡು ಮನೆಗೆ ಹಿಂದಿರುಗಿ ಅವರಿಗೆ ಬೇಕಾದಷ್ಟು ಒಳ್ಳೆಯ ವಸ್ತ್ರಗಳನ್ನೂ ಒಡವೆಗಳನ್ನೂ ತಂದುಕೊಟ್ಟನು. ಆ ಬಹುಹಣದ ಸಂಗ್ರಹವನ್ನು ನೋಡಿ ರಾತ್ರಿಸಮಯದಲ್ಲಿ ಆ ವೇಶ್ಯೆಯರು ಹೀಗೆ ಯೋಚನೆಮಾಡಿದರು :

"ಇವನು ನಿತ್ಯವೂ ಕಳ್ಳತನಮಾಡುತ್ತಿರುತ್ತಾನೆ. ಆದುದರಿಂದ ರಾಜನು ಇವನನ್ನು ಹಿಡಿದೇ ಹಿಡಿಯುವನು. ನಿಶ್ಚಯವಾಗಿಯೂ

ಇವನಲ್ಲಿರುವ ಹಣವನ್ನು ಕಿತ್ತುಕೊಂಡು ಈತನನ್ನು ವಧಿಸುವನು. ಆದ್ದರಿಂದ ಈ ಹಣವನ್ನು ಗುಟ್ಟಾಗಿ ಇಟ್ಟುಕೊಳ್ಳುವುದಕ್ಕೋಸ್ಕರ ನಾವೇ ಈತನನ್ನು ಏಕೆ ಕೊಂದುಹಾಕಿಬಿಡಬಾರದು? ಇವನನ್ನು ಕೊಂದುಹಾಕಿ ಹಣವನ್ನು ತೆಗೆದುಕೊಂಡು ಎಲ್ಲಿಗಾದರೂ ಹೊರಟುಹೋಗೋಣ.''

ಹೀಗೆಂದು ನಿಶ್ಚಯಮಾಡಿದ ಅವರು ನಿದ್ರಿಸುತ್ತಿದ್ದ ಧುಂಧುಕಾರಿಯನ್ನು ಹಗ್ಗಗಳಿಂದ ಕಟ್ಟಿಹಾಕಿ ಕುತ್ತಿಗೆಗೆ ಹಗ್ಗವನ್ನು ಬಿಗಿದು ಅವನನ್ನು ಕೊಲ್ಲಲು ತೊಡಗಿದರು. ಆದರೂ ಅವನು ಬೇಗ ಸಾಯದೇ ಇರಲು ಚಿಂತಾ ಕ್ರಾಂತರಾದರು. ಆಗ ಅವರು ಅವನ ಬಾಯೊಳಗೆ ಉರಿಯುವ ಕೊಳ್ಳಿಯನ್ನು ತುರುಕಿದರು. ಆ ಬೆಂಕಿಯ ಜ್ವಾಲೆಯ ಕಡುದುಃಖದಿಂದ ಪೀಡಿತನಾಗಿ ಧುಂಧುಕಾರಿಯು ಸತ್ತುಹೋದನು. ಆಗ ಆ ಹೆಂಗಸರು ಅವನ ದೇಹವನ್ನು ಒಂದು ಹಳ್ಳದೊಳಗೆ ಹಾಕಿ ಹೂತುಬಿಟ್ಟರು. ಸಾಮಾನ್ಯವಾಗಿ ಇಂತಹ ಹೆಂಗಸರು ಎಂತಹ ಕೆಟ್ಟಕೆಲಸವನ್ನಾದರೂ ಮಾಡುವವರೇ! ಇದು ಹೀಗೆಯೇ ಆಗಿದೆಯೆಂಬ ರಹಸ್ಯವು ಯಾರಿಗೂ ತಿಳಿಯಲಿಲ್ಲ. 'ಧುಂಧುಕಾರಿಯು ಎಲ್ಲಿ?'–ಎಂದು ಜನರು ಕೇಳಿದಾಗ 'ನಮ್ಮ ಪ್ರಿಯತಮನು ಈಗ ಹಣದ ಆಸೆಯಿಂದ ದೂರದೇಶಕ್ಕೆ ಹೋಗಿದ್ದಾನೆ. ಈ ವರ್ಷದೊಳಗೇ ಹಿಂದಿರುಗಿ ಬಂದುಬಿಡುವನು'–ಎಂದು ಆ ವೇಶ್ಯೆಯರು ಹೇಳುತ್ತಿದ್ದರು.

ದುಷ್ಟರಾದ ಇಂತಹ ಸ್ತ್ರೀಯರ ಮೇಲೆ ವಿದ್ವಾಂಸರು ನಂಬಿಕೆ ಇಡ ಬಾರದು. ಅವರನ್ನು ನಂಬುವ ಮೂಢರು ದುಃಖದ ಆಕ್ರಮಣಕ್ಕೆ ಸಿಕ್ಕಿಬೀಳ ಬೇಕಾಗುತ್ತದೆ. ಅವರ ಮಾತು ಅಮೃತದಂತೆ ಕಾಮಿಗಳ ಹೃದಯದಲ್ಲಿ ರಸವನ್ನು ವೃದ್ಧಿಪಡಿಸುತ್ತದೆ. ಆದರೆ ಹೃದಯವು ಕತ್ತಿಯ ಅಲುಗಿನಂತೆ ಇರುತ್ತದೆ. ಇಂತಹ ದುಷ್ಟಸ್ತ್ರೀಯರಿಗೆ ಯಾರು ತಾನೇ ಪ್ರಿಯರಾಗುತ್ತಾರೆ?

ಆ ಕುಲಟೆಯರು ಧುಂಧುಕಾರಿಯ ಇಡೀ ಸಂಪತ್ತನ್ನು ಶೇಖರಿಸಿ ಕೊಂಡು ಅಲ್ಲಿಂದ ಸದ್ದಿಲ್ಲದೆ ಹೊರಟುಹೋದರು. ಅನಂತರ ಧುಂಧು ಕಾರಿಯು ತನ್ನ ಕುಕರ್ಮಗಳ ಫಲವಾಗಿ ಭಯಂಕರವಾದ ಪ್ರೇತವಾಗಿ ಬಿಟ್ಟನು. ಸುಂಟರಗಾಳಿಯ ರೂಪತಾಳಿ ಸದಾ ಎಲ್ಲ ದಿಕ್ಕುಗಳಲ್ಲೂ ಅಲೆದಾಡುತ್ತಾ ಚಳಿ-ಬಿಸಿಲುಗಳಿಂದಲೂ ಹಸಿವು-ಬಾಯಾರಿಕೆಗಳಿಂದಲೂ ಸಂಕಟ ಪಡುತ್ತಾ–''ಅಯ್ಯೋ ದೈವವೇ! ಅಯ್ಯೋ ವಿಧಿಯೇ!''–ಎಂದು ಮತ್ತೆ

ಮತ್ತೆ ಕೂಗಿಕೊಳ್ಳುತ್ತಿದ್ದನು. ಅವನಿಗೆ ಎಲ್ಲಿಯೂ ಆಶ್ರಯವು ದೊರೆಯಲಿಲ್ಲ. ಕೆಲವು ದಿನಗಳನಂತರ ಗೋಕರ್ಣನಿಗೂ ಜನರ ಬಾಯಿಂದ ಧುಂಧುಕಾರಿಯ ಸಾವಿನ ಸಮಾಚಾರವು ತಿಳಿದುಬಂದಿತು. ಅವನನ್ನು ಅನಾಥನೆಂದರಿತು ಗೋಕರ್ಣನು ಅವನಿಗೆ ಗಯೆಯಲ್ಲಿ ಶ್ರಾದ್ಧವನ್ನು ಮಾಡಿದನು. ತಾನು ಹೋದ ತೀರ್ಥಕ್ಷೇತ್ರಗಳಲ್ಲೆಲ್ಲಾ ಅವನಿಗೆ ಶ್ರಾದ್ಧಮಾಡುತ್ತಿದ್ದನು.

ಈ ರೀತಿ ಸುತ್ತಾಡುತ್ತಾ ಗೋಕರ್ಣನು ಒಮ್ಮೆ ತನ್ನ ನಗರಿಗೆ ಬಂದನು. ಅಲ್ಲಿ ಅವನು ರಾತ್ರಿ ಸಮಯದಲ್ಲಿ ಇತರರ ದೃಷ್ಟಿಗೆ ಬೀಳದೇ ನೇರವಾಗಿ ತನ್ನ ಮನೆಯ ಅಂಗಳಕ್ಕೆ ನಿದ್ರೆಮಾಡಲು ಹೋದನು. ಅಲ್ಲಿ ತನ್ನ ಆ ತಮ್ಮನು ನಿದ್ರಿಸುತ್ತಿರುವುದನ್ನು ಕಂಡು ಅರ್ಧರಾತ್ರಿಯ ಸಮಯದಲ್ಲಿ ಧುಂಧುಕಾರಿಯು ಆತನಿಗೆ ತನ್ನ ಅತಿರೌದ್ರವಾದ ರೂಪದಿಂದ ಕಾಣಿಸಿ ಕೊಂಡನು. ಒಮ್ಮೆ ಟಗರಿನ ರೂಪ, ಒಮ್ಮೆ ಆನೆಯ ರೂಪ, ಒಮ್ಮೆ ಎಮ್ಮೆ ಕೋಣದ ರೂಪ, ಒಮ್ಮೆ ಇಂದ್ರನ ರೂಪ, ಒಮ್ಮೆ ಅಗ್ನಿಯ ರೂಪ ಹೀಗೆ ನಾನಾರೂಪಗಳನ್ನು ತೋರಿಸಿ ಕೊನೆಗೆ ಮತ್ತೆ ತನ್ನ ಪುರುಷಾಕಾರದಲ್ಲಿ ಕಾಣಿಸಿಕೊಂಡನು. ಅಂತಹ ವಿಪರೀತವಾದ ಅವಸ್ಥೆಗಳನ್ನು ಕಂಡರೂ ಗೋಕರ್ಣನು ಹೆದರದೇ ಧೈರ್ಯದಿಂದಲೇ ಇದ್ದು ಆತನು ಯಾರೋ ದುರ್ಗತಿಯನ್ನು ಹೊಂದಿದ ಜೀವ–ಎಂದು ನಿಶ್ಚಯಿಸಿದನು. ಧೈರ್ಯದಿಂದ ಆತನನ್ನು ಕುರಿತು–"ಯಾರಪ್ಪಾ ನೀನು? ರಾತ್ರಿಯ ಸಮಯದಲ್ಲಿ ಈ ರೌದ್ರವಾದ ರೂಪಗಳನ್ನು ಏಕೆ ತೋರಿಸುತ್ತಿದ್ದೀಯೇ? ನಿನಗೆ ಈ ಅವಸ್ಥೆ ಏಕೆ ಉಂಟಾಯಿತು? ನೀನು ಪ್ರೇತವೇ? ಪಿಶಾಚವೇ? ರಾಕ್ಷಸನೇ? ಯಾರು ಆಗಿರುವೆ–ಎನ್ನುವುದನ್ನು ನನಗೆ ತಿಳಿಸು"–ಎಂದು ಕೇಳಿದನು.

ಸೂತಪುರಾಣಿಕರು ಹೇಳುತ್ತಾರೆ :

ಗೋಕರ್ಣನು ಹೀಗೆ ಕೇಳಲು ಆ ಪ್ರೇತದೇಹಿಯು ಗಟ್ಟಿಯಾಗಿ ಮತ್ತೆ ಮತ್ತೆ ಅಳತೊಡಗಿದನು. ಮಾತನ್ನು ಉಚ್ಚರಿಸಲು ಅಶಕ್ತನಾಗಿ ಸಂಜ್ಞಾ ಸಂಕೇತವನ್ನು ಮಾತ್ರ ಮಾಡಿದನು. ಆಗ ಗೋಕರ್ಣನು ತನ್ನ ಬೊಗಸೆಯಲ್ಲಿ ಕೊಂಚ ನೀರನ್ನು ತೆಗೆದುಕೊಂಡು ಅಭಿಮಂತ್ರಣಮಾಡಿ ಆ ಪ್ರೇತದ ಮೇಲೆ ಚಿಮುಕಿಸಿದನು. ಅದರಿಂದ ಆ ಪ್ರೇತದ ಪಾಪವು ಶಾಂತವಾಗಿ ಅದು ಗೋಕರ್ಣನಿಗೆ ಹೀಗೆಂದಿತು :

"ಅಪ್ಪಾ! ನಾನು ನಿನ್ನ ಒಡಹುಟ್ಟಿದವನು. ಧುಂಧುಕಾರಿಯೆಂಬ ಹೆಸರಿನವನು. ನನ್ನ ಪಾಪಗಳ ದೆಸೆಯಿಂದ ಬ್ರಾಹ್ಮಣತ್ವವನ್ನು ಕಳೆದು ಕೊಂಡೆನು. ನಾನು ಮಾಡಿದ ದುಷ್ಟಕರ್ಮಗಳಿಗೆ ಲೆಕ್ಕವೇ ಇಲ್ಲ. ಮಹಾ ಅಜ್ಞಾನದಲ್ಲಿ ತೊಳಲಾಡುತ್ತಿದ್ದೆ. ಅದರಿಂದಲೇ ಮನುಷ್ಯರಿಗೆ ಮಿತಿಮೀರಿದ ಹಿಂಸೆಯನ್ನು ಮಾಡಿದೆ. ಕೊನೆಗೆ ಕುಲಟಾಸ್ತ್ರೀಯರು ನನ್ನನ್ನು ದುಃಖದಿಂದ ನರಳಿಸಿ ಕೊಂದುಹಾಕಿದರು. ಆದ್ದರಿಂದ ಪ್ರೇತತ್ವವನ್ನು ಹೊಂದಿ ಈ ದುರವಸ್ಥೆಯನ್ನು ಅನುಭವಿಸುತ್ತಿದ್ದೇನೆ. ದೈವವಶದಿಂದ ಕರ್ಮದ ಫಲವಾಗಿ ಗಾಳಿಯನ್ನೇ ಆಹಾರವನ್ನಾಗಿ ತೆಗೆದುಕೊಂಡು ಜೀವಿಸುತ್ತಿದ್ದೇನೆ. ಬಂಧುವೇ! ನೀನಾದರೋ ಕರುಣಾಸಮುದ್ರನು. ಈಗ ಯಾವುದಾದರೂ ಪ್ರಕಾರದಿಂದ ನನಗೆ ಈ ಪ್ರೇತಯೋನಿಯಿಂದ ಬಿಡುಗಡೆಯನ್ನುಂಟು ಮಾಡಿಸು, ತಮ್ಮಾ!"

ಪ್ರೇತದ ಮಾತನ್ನು ಕೇಳಿ ಗೋಕರ್ಣನು ಹೀಗೆ ಹೇಳಿದನು :

"ಎಲೈ ಪ್ರೇತವೇ! ನಿನ್ನನ್ನು ಉದ್ದೇಶಿಸಿ ನಾನು ಗಯೆಯಲ್ಲಿ ವಿಧಿ ಪೂರ್ವಕವಾಗಿ ಪಿಂಡದಾನಮಾಡಿದೆನು. ಆದರೂ ನಿನಗೆ ಏಕೆ ಮುಕ್ತಿ ದೊರಕಲಿಲ್ಲ? ಎಂಬುದು ನನಗೆ ತುಂಬಾ ಆಶ್ಚರ್ಯವಾಗಿದೆ. ಗಯಾಶ್ರಾದ್ಧ ದಿಂದಲೂ ಮುಕ್ತಿಯುಂಟಾಗದೇ ಇದ್ದರೆ ಮುಕ್ತಿಯನ್ನುಂಟುಮಾಡಲು ಬೇರೆ ಯಾವ ಉಪಾಯವೂ ಇಲ್ಲ. ಅದಕ್ಕಾಗಿ ಈಗ ನಾನೇನು ಮಾಡಬೇಕು, ಹೇಳಪ್ಪಾ!"

ಅದಕ್ಕೆ ಪ್ರೇತವು–"ನೂರಾರು ಗಯಾಶ್ರಾದ್ಧಗಳಿಂದಲೂ ನನಗೆ ಮುಕ್ತಿಯು ದೊರೆಯಲಾರದು. ಅದಕ್ಕೆ ಬೇರೆ ಯಾವುದಾದರೂ ಉಪಾಯ ವನ್ನು ಯೋಚಿಸಪ್ಪಾ"–ಎಂದು ಪ್ರಾರ್ಥಿಸಲು, ಗೋಕರ್ಣನಿಗೆ ಆ ಮಾತನ್ನು ಕೇಳಿ ತುಂಬಾ ಆಶ್ಚರ್ಯವಾಯಿತು. "ನೂರು ಗಯಾಶ್ರಾದ್ಧಮಾಡಿದರೂ ನಿನಗೆ ಮುಕ್ತಿಯಾಗುವುದಿಲ್ಲವೇ? ಹಾಗಾದರೆ ನಿನಗೆ ಮುಕ್ತಿಯನ್ನು ದೊರಕಿ ಸಲು ಸಾಧ್ಯವೇ ಇಲ್ಲವೆಂದು ಕಾಣುತ್ತದೆ. ಆದರೂ ಈಗ ನೀನು ನಿರ್ಭಯ ವಾಗಿ ನಿನ್ನ ಸ್ಥಾನದಲ್ಲಿ ಇದ್ದುಕೊಂಡಿರು. ನಾನು ವಿಚಾರಮಾಡಿ ನಿನಗೆ ಮುಕ್ತಿಯನ್ನುಂಟುಮಾಡುವ ಬೇರೆ ಯಾವುದಾದರೂ ಉಪಾಯವನ್ನು

ಮಾಡುವೆನು"–ಎಂದು ಪ್ರೇತಕ್ಕೆ ಆಶ್ವಾಸನೆಯನ್ನು ಕೊಟ್ಟು ಕಳುಹಿಸಿದನು. ಅವನ ಅಪ್ಪಣೆಯಂತೆ ಪ್ರೇತವು ತನ್ನ ಸ್ಥಾನಕ್ಕೆ ಹೊರಟುಹೋಯಿತು. ಇತ್ತಕಡೆ ಗೋಕರ್ಣನು ಇಡೀ ರಾತ್ರಿಯಲ್ಲಿ ಯೋಚನೆಮಾಡಿದರೂ ಆತನಿಗೆ ಆವಶ್ಯಕವಾಗಿದ್ದ ಉಪಾಯವು ಹೊಳೆಯಲಿಲ್ಲ. ಮಾರನೆಯ ದಿನ ಪ್ರಾತಃಕಾಲ ಆತನು ಬಂದದ್ದನ್ನು ಕಂಡ ಊರಜನರು ತುಂಬಾ ಪ್ರೇಮದಿಂದ ಆತನ ಭೇಟಿಗೆ ಬಂದರು. ಗೋಕರ್ಣನು ರಾತ್ರಿ ನಡೆದ ಸಮಾಚಾರ ವೆಲ್ಲವನ್ನೂ ಅವರಿಗೆ ತಿಳಿಸಿದನು. ಅವರಲ್ಲಿ ವಿದ್ವಾಂಸರು, ಯೋಗನಿಷ್ಠರು, ಜ್ಞಾನಿಗಳು, ಬ್ರಹ್ಮವಾದಿಗಳು ಮುಂತಾದ ಯಾರಿಗೂ ಕೂಡ ಶಾಸ್ತ್ರ ಸಮೂಹಗಳನ್ನು ಎಷ್ಟು ತಿರುವಿಹಾಕಿದರೂ ಧುಂಧುಕಾರಿಗೆ ಮುಕ್ತಿ ಯನ್ನುಂಟುಮಾಡಿಸುವ ಉಪಾಯವು ತಿಳಿಯಲಿಲ್ಲ. ಕೊನೆಗೆ ಅವರೆಲ್ಲರೂ– "ಈ ಬಗೆಗೆ ಸೂರ್ಯನಾರಾಯಣನು ಏನು ಆಜ್ಞೆಮಾಡುತ್ತಾನೋ ಅದರಂತೆ ನಡೆದುಕೊಳ್ಳಬೇಕು"–ಎಂದು ಸಿದ್ಧಾಂತವನ್ನು ತಿಳಿಸಿದರು. ಆಗ ಗೋಕರ್ಣನು ಸೂರ್ಯನ ಗತಿಯನ್ನು ತನ್ನ ತಪೋಬಲದಿಂದ ಸ್ತಂಭಿಸಿ ಆತನನ್ನು ಸ್ತುತಿಸಿದನು:

"ಓ ಜಗತ್ತಿಗೆ ಸಾಕ್ಷಿಯಾದ ಭಗವಂತನೇ! ನಿನಗೆ ನಮಸ್ಕಾರವು. ದಯವಿಟ್ಟು ಈ ಧುಂಧುಕಾರಿಗೆ ಮುಕ್ತಿಯನ್ನುಂಟುಮಾಡುವ ಸಾಧನವು ಯಾವುದೆಂಬುದನ್ನು ತಿಳಿಸುವ ಅನುಗ್ರಹಮಾಡು"–ಎಂದು ಪ್ರಾರ್ಥಿಸಿದನು.

ಅದನ್ನು ಕೇಳಿ ಸೂರ್ಯನು ದೂರದಿಂದಲೇ–"ಶ್ರೀಮದ್ಭಾಗವತದಿಂದ ಈತನಿಗೆ ಮುಕ್ತಿಯುಂಟಾಗುವುದು. ಒಂದು ಸಪ್ತಾಹಕಾಲ ಅದರ ಪಾರಾಯಣಮಾಡು"–ಎಂದು ಸ್ಪಷ್ಟವಾಗಿ ಉಪದೇಶಮಾಡಿದನು. ಸೂರ್ಯನಾರಾಯಣನು ಅಪ್ಪಣೆಕೊಡಿಸಿದ ಆ ಧರ್ಮವಚನವು ಅಲ್ಲಿ ಎಲ್ಲರಿಗೂ ಕೇಳಿಸಿತು. ಆ ಎಲ್ಲರೂ–"ಪ್ರಯತ್ನಪೂರ್ವಕವಾಗಿ ಈ ವಿಧಿ ಯನ್ನು ಆಚರಿಸಪ್ಪಾ. ಇದು ತುಂಬಾ ಸುಲಭವಾಗಿ ಆಚರಿಸಲಿಕ್ಕೆ ಬರುವ ಸಾಧನವೂ ಆಗಿದೆ"–ಎಂದು ಗೋಕರ್ಣನಿಗೆ ತಿಳಿಸಿದರು. ಅದರಂತೆ ನಿಶ್ಚಯಿಸಿ ಗೋಕರ್ಣನೂ ಕಥಾಪ್ರವಚನಮಾಡಲು ಸಿದ್ಧನಾಗತೊಡಗಿದನು.

ಸಪ್ತಾಹವಿಧಿಯ ಆ ಪ್ರವಚನವನ್ನು ಆಲಿಸಲು ದೇಶಗಳಿಂದಲೂ ಗ್ರಾಮಗಳಿಂದಲೂ ಅನೇಕಜನರು ಬರತೊಡಗಿದರು.

ಬಹುಮಂದಿ ಕುಂಟರೂ, ಹೆಳವರೂ, ಕುರುಡರೂ, ಮುದುಕರೂ ಮತ್ತು ಮೂರ್ಖಪುರುಷರೂ ತಮ್ಮ ಪಾಪಗಳ ನಿವೃತ್ತಿಗಾಗಿ ಅಲ್ಲಿಗೆ ಬಂದು ತಲುಪಿದರು. ಹೀಗೆ ಅಲ್ಲಿ ದೇವತೆಗಳಿಗೂ ಆಶ್ಚರ್ಯವನ್ನುಂಟುಮಾಡು ವಷ್ಟು ಜನಸಂದಣಿ ಸೇರಿತು. ಗೋಕರ್ಣನು ಕಥಾಪ್ರವಚನಮಾಡಲು ಪೀಠವನ್ನು ಅಲಂಕರಿಸಿದೊಡನೆಯೇ ಆ ಪ್ರೇತವೂ ಅಲ್ಲಿಗೆ ಬಂದು ತಾನು ಕುಳಿತುಕೊಳ್ಳಲು ಜಾಗವನ್ನು ಹುಡುಕತೊಡಗಿತು. ಅದಕ್ಕೆ ಏಳು ಗಂಟುಗಳಿಂದ ಕೂಡಿದ ಒಂದು ಎತ್ತರವಾದ ಬಿದಿರಿನ ಮರ ಕಾಣಿಸಿತು. ಅದರ ಕೆಳಗಡೆಯ ರಂಧ್ರದ ಮೂಲಕ ಪ್ರೇತವು ಮರದೊಳಗೆ ಹೊಕ್ಕು ಕಥೆಯನ್ನು ಕೇಳಲು ಅಲ್ಲಿ ಕುಳಿತುಕೊಂಡಿತು. ವಾಯುರೂಪದಲ್ಲಿದ್ದುದರಿಂದ ಅದಕ್ಕೆ ಹೊರಗೆ ಬೇರೆ ಎಲ್ಲೂ ಕುಳಿತುಕೊಳ್ಳಲು ಸಾಧ್ಯವಾಗದೇ ಇರಲು ಹೀಗೆ ಆ ಬಿದಿರು ಮರದೊಳಗೆ ನುಗ್ಗಿ ಕುಳಿತುಕೊಳ್ಳಬೇಕಾಯಿತು.

ಗೋಕರ್ಣನು ವಿಷ್ಣುಭಕ್ತನಾದ ಬ್ರಾಹ್ಮಣನೊಬ್ಬನನ್ನು ಮುಖ್ಯ ಶ್ರೋತೃವನ್ನಾಗಿ ವರಣಮಾಡಿ ಕೂರಿಸಿ, ಪ್ರಥಮಸ್ಕಂಧದಿಂದಾರಂಭಿಸಿ ಸ್ಪಷ್ಟವಾಗಿ ಪ್ರವಚನಮಾಡಿದನು. ಸಾಯಂಕಾಲದಲ್ಲಿ ಕಥಾಸಂಕೀರ್ತನಕ್ಕೆ ವಿಶ್ರಾಂತಿಕೊಟ್ಟಾಗ ಒಂದು ಆಶ್ಚರ್ಯಕರವಾದ ಘಟನೆಯು ನಡೆಯಿತು. ಎಲ್ಲರೂ ನೋಡುತ್ತಿರುವಂತೆಯೇ ಆ ಬಿದಿರಿನ ಮರದಲ್ಲಿ ಒಂದು ಗಂಟು 'ಥಡ್' ಎಂದು ಶಬ್ದಮಾಡುತ್ತಾ ಒಡೆದುಹೋಯಿತು. ಎರಡನೆಯ ದಿನ ಸಾಯಂಕಾಲ ಕಥಾಪ್ರವಚನಕ್ಕೆ ವಿಶ್ರಾಂತಿಕೊಟ್ಟಾಗ ಮರದ ಎರಡನೆಯ ಗಂಟು ಒಡೆಯಿತು. ಮೂರನೆಯ ದಿನ ಸಂಜೆ ಅದರ ಮೂರನೆಯ ಗಂಟು ಒಡೆಯಿತು. ಹೀಗೆ ಏಳು ದಿವಸಗಳಲ್ಲಿ ಅದರ ಏಳು ಗಂಟುಗಳನ್ನೂ ಭೇದಿಸಿ ಶ್ರೀಮದ್ಭಾಗವತದ ಹನ್ನೆರಡನೆಯ ಸ್ಕಂಧವನ್ನು ಶ್ರವಣಮಾಡಿ ಮುಗಿಸಿ ದೊಡನೆಯೇ ಪ್ರೇತವು ತನ್ನ ಪ್ರೇತತ್ವವನ್ನು ಕಳೆದುಕೊಂಡಿತು. ಪ್ರೇತತ್ವ ದಿಂದ ಬಿಡುಗಡೆಹೊಂದಿದ ಧುಂಧುಕಾರಿಯು ದಿವ್ಯರೂಪಧಾರಿಯಾದನು. ತುಲಸೀಮಾಲೆಯಿಂದ ಅಲಂಕೃತನಾಗಿ ಶ್ಯಾಮಲಮೂರ್ತಿಯಾಗಿ ಕಿರೀಟ-ಕುಂಡಲಗಳಿಂದ ರಾರಾಜಿಸುತ್ತಾ ತಮ್ಮನಾದ ಗೋಕರ್ಣನಿಗೆ ನಮಸ್ಕರಿಸಿ ಹೀಗೆಂದನು : "ತಮ್ಮಾ! ನೀನು ಕೃಪೆಯಿಂದ ನನಗೆ ಈ ಪ್ರೇತಯೋನಿಯ ಕಶ್ಮಲದಿಂದ ಬಿಡುಗಡೆಯನ್ನುಂಟುಮಾಡಿದೆ. ಪ್ರೇತಪೀಡೆಯನ್ನು ಧ್ವಂಸ

ಮಾಡಿದ ಈ ಶ್ರೀಮದ್ಭಾಗವತಕಥೆಯು ನಿಜಕ್ಕೂ ಧನ್ಯವಾದುದು. ಶ್ರೀಕೃಷ್ಣಸಾಲೋಕ್ಯವನ್ನುಂಟುಮಾಡಿದ ಈ ಸಪ್ತಾಹಶ್ರವಣವಿಧಿಯೂ ಧನ್ಯವಾದುದು. ಸಪ್ತಾಹಶ್ರವಣದ ಯೋಗ ಬಂದೊಡನೆಯೇ ಎಲ್ಲ ಪಾಪ ಗಳೂ ಗಡ-ಗಡನೆ ನಡುಗುತ್ತವೆ. 'ಈಗ ಈ ಕಥೆಯು ನಮ್ಮನ್ನು ಒಡನೆಯೇ ಕೊನೆಗಾಣಿಸಿಬಿಡುವುದು'–ಎಂದು ಭಯದಿಂದ ಕಂಪಿಸುತ್ತವೆ. ಬೆಂಕಿಯು, ಸೌದೆಗಳು ಹಸಿಯದು-ಒಣಗಿದ್ದು, ಚಿಕ್ಕದು-ದೊಡ್ಡದು ಎಲ್ಲವನ್ನೂ ತಾರತಮ್ಯವಿಲ್ಲದೆ ಸುಟ್ಟುಹಾಕಿಬಿಡುವುದಲ್ಲವೇ? ಹಾಗೆಯೇ ಈ ಸಪ್ತಾಹಶ್ರವಣವು ಮನಸ್ಸು, ಮಾತು ಮತ್ತು ಕರ್ಮಗಳಿಂದ ಸಂಭವಿಸಿದ ಹೊಸ ಮತ್ತು ಹಳೆಯ, ಸಣ್ಣ ಮತ್ತು ದೊಡ್ಡದಾದ ಸರ್ವಪಾಪಗಳನ್ನೂ ಬೂದಿಯಾಗಿಸಿಬಿಡುತ್ತದೆ.

ಈ ಭಾರತವರ್ಷದಲ್ಲಿ ಶ್ರೀಮದ್ಭಾಗವತದ ಕಥೆಯನ್ನು ಯಾರು ಕೇಳುವುದಿಲ್ಲವೋ–ಅವರ ಜನ್ಮವು ವ್ಯರ್ಥ ಎಂದು ಸೂರಿಗಳು ದೇವತೆಗಳ ಸಭೆಗಳಲ್ಲಿ ಘೋಷಣೆಮಾಡುತ್ತಾರೆ.

**ಅಸ್ಮಿನ್ವೈ ಭಾರತೇ ವರ್ಷೇ ಸೂರಿಭಿರ್ದೇವಸಂಸದಿ ।**
**ಅಕಥಾಶ್ರಾವಿಣಾಂ ಪುಂಸಾಂ ನಿಷ್ಫಲಂ ಜನ್ಮ ಕೀರ್ತಿತಮ್ ॥೫೬॥**

ಅನಿತ್ಯವಾದ ಈ ಶರೀರವನ್ನು ಮೋಹದಿಂದ ಪಾಲನೆ-ಪೋಷಣೆ ಮಾಡಿ ಗಟ್ಟಿಮುಟ್ಟಾಗಿ ಬಲಶಾಲಿಯನ್ನಾಗಿ ಮಾಡಿದರೂ ಶುಕಶಾಸ್ತ್ರ ಶ್ರೀಮದ್ಭಾಗವತಕಥೆಯನ್ನು ಕೇಳದಿದ್ದ ಅಂತಹ ಶರೀರದಿಂದ ಏನು ತಾನೇ ಲಾಭ? ಮೂಳೆಗಳು ಇದರ ಕಂಬಗಳು ; ನರ-ನಾಡಿಗಳೆಂಬ ಹಗ್ಗಗಳಿಂದ ಅವು ಕಟ್ಟಲ್ಪಟ್ಟಿವೆ. ಅವುಗಳ ಮೇಲೆ ರಕ್ತ-ಮಾಂಸಗಳ ಲೇಪನೆಮಾಡಿ ಚರ್ಮ ದಿಂದ ಇದನ್ನು ಕಟ್ಟಿಹಾಕಲಾಗಿದೆ. ಇದು ದುರ್ವಾಸನೆಯಿಂದ ಕೂಡಿ ಮೂತ್ರ-ಪುರೀಷಗಳು ತುಂಬಿರುವ ಪಾತ್ರೆಯಾಗಿದೆ. ಇದು ಮುಪ್ಪು ಮತ್ತು ಶೋಕಗಳ ಕಾರಣ ಪರಿಣಾಮದಲ್ಲಿ ಅತಿದುಃಖಮಯವಾಗಿದೆ. ರೋಗಗಳಿಗೆ ತೌರು ಮನೆಯೇ ಆಗಿದೆ. ಸದಾ ಯಾವುದಾದರೂ ಕಾಮನೆಯಿಂದ ಪೀಡಿತವಾ ಗಿರುವುದರಿಂದ ಇದನ್ನು ಎಂದಿಗೂ ತೃಪ್ತಿಪಡಿಸಲಾಗುವುದಿಲ್ಲ. ಇದನ್ನು ಧರಿ

ಸಿರುವುದೇ ಭಾರ. ಇದರ ರೋಮ-ರೋಮಗಳಲ್ಲೂ ದೋಷಗಳು ತುಂಬಿವೆ. ಕೊನೆಗೆ ಇದು ನಾಶಹೊಂದುವುದಕ್ಕೆ ಒಂದು ಕ್ಷಣಕಾಲವೂ ಬೇಕಾಗಿಲ್ಲ. ಭೂಮಿಯಲ್ಲಿ ಹೂತುಬಿಟ್ಟರೆ ಹುಳುಗಳ ರೂಪವನ್ನು ತಾಳು ತ್ತದೆ. ಪಶುವು ತಿಂದರೆ ವಿಷ್ಠೆಯಾಗುತ್ತದೆ ಮತ್ತು ಬೆಂಕಿಯಲ್ಲಿ ಹಾಕಿಸುಟ್ಟರೆ ಬೂದಿಯ ರಾಶಿಯಾಗಿಬಿಡುತ್ತದೆ. ಇವು ಮೂರು ತಾನೇ ಇದರ ಗತಿಗಳು! ಇಂತಹ ಅಸ್ಥಿರವಾದ ಶರೀರದಿಂದ ಮನುಷ್ಯನು ಸ್ಥಿರವಾದ ಫಲವನ್ನು ಕೊಡುವ ಕರ್ಮವನ್ನು ಏಕೆ ಮಾಡುವುದಿಲ್ಲ? ಬೆಳಿಗ್ಗೆ ಬೇಯಿಸಿದ ಪಕ್ವಾನ್ನವು ಸಂಜೆಯ ವೇಳೆಗೆ ಹಳಸಿ ಕೆಟ್ಟುಹೋಗುತ್ತದೆ. ಹೀಗಿರುವಾಗ ಅದರ ರಸದಿಂದಲೇ ಪುಷ್ಟವಾಗಿರುವ ಈ ಶರೀರಕ್ಕೆ ನಿತ್ಯತೆಯೆಲ್ಲಿಂದ ಬಂತು?

ಈ ಲೋಕದಲ್ಲಿ 'ಸಪ್ತಾಹಶ್ರವಣ'ವನ್ನು ಮಾಡಿದರೆ ಶೀಘ್ರವಾಗಿಯೇ ಭಗವಂತನ ಸಾಮೀಪ್ಯವುಂಟಾಗುವುದು. ಆದ್ದರಿಂದ ಸರ್ವದೋಷಗಳನ್ನೂ ತೊಡೆದುಹಾಕುವುದಕ್ಕೆ ಇದು ತಾನೇ ಸಾಧನವಾಗಿದೆ? ಈ ಕಥೆಯನ್ನು ಶ್ರವಣಮಾಡದ ಬಡಜೀವಿಗಳು–ನೀರಿನಲ್ಲಿ ಏಳುವ ಗುಳ್ಳೆಗಳಂತೆ ಮತ್ತು ಜಂತುಗಳಲ್ಲಿ ಆವಿರ್ಭವಿಸುವ ಸೊಳ್ಳೆಗಳಂತೆ–ಶೀಘ್ರವಾಗಿ ಸಾಯುವುದಕ್ಕೆ ಹುಟ್ಟಿದವರೆನ್ನಬೇಕು. ಯಾವುದರ ಪ್ರಭಾವದಿಂದ ಜಡವಾದ ಬಿದಿರುಮರದ ಗಂಟುಗಳು ಕತ್ತರಿಸಿಹೋಗಬಲ್ಲವೋ–ಅಂತಹ ಶ್ರೀಮದ್ಭಾಗವತದ ಕಥೆಯ ಶ್ರವಣದಿಂದ ಚಿತ್ತದಲ್ಲಿರುವ ಗಂಟುಗಳು ಬಿಚ್ಚಿಹೋಗುವುದರಲ್ಲಿ ಆಶ್ಚರ್ಯವೇನು?

ಈ ಸಪ್ತಾಹಶ್ರವಣಮಾಡಿದ್ದೇ ಆದರೆ ಹೃದಯದ ಗಂಟು ಬಿಚ್ಚಿ ಹೋಗುತ್ತದೆ. ಸಕಲಸಂಶಯಗಳೂ ಕತ್ತರಿಸಿಹೋಗುತ್ತವೆ ಮತ್ತು ಜೀವಿಯ ಸಕಲಕರ್ಮಗಳೂ ಕ್ಷೀಣಿಸಿಹೋಗುತ್ತವೆ.

**ಭಿದ್ಯತೇ ಹೃದಯಗ್ರಂಥಿಃ ಛಿದ್ಯನ್ತೇ ಸರ್ವಸಂಶಯಾಃ ।**
**ಕ್ಷೀಯನ್ತೇ ಚಾಸ್ಯ ಕರ್ಮಾಣಿ ಸಪ್ತಾಹಶ್ರವಣೇ ಕೃತೇ ॥೬೫॥**

ಈ ಶ್ರೀಮದ್ಭಾಗವತವೆಂಬ ಕಥಾತೀರ್ಥವು ಸಂಸಾರವೆಂಬ ಕೆಸರನ್ನು ತೊಳೆದುಹಾಕುವುದರಲ್ಲಿ ಅತ್ಯಂತಸಮರ್ಥವಾದುದು. ಈ ತೀರ್ಥವು ಚಿತ್ತ ದಲ್ಲಿ ಇದ್ದಿತೆಂದರೆ ಮುಕ್ತಿಯು ನಿಶ್ಚಯವಾಗಿಯೂ ಅಂಗೈಯಲ್ಲಿದ್ದಂತೆಯೇ ಎಂದು ವಿದ್ವಾಂಸರು ಹೇಳುವರು."

ಧುಂಧುಕಾರಿಯು ಹೀಗೆ ಹೇಳುತ್ತಿರುವಂತೆಯೇ ಅಲ್ಲಿಗೆ ವೈಕುಂಠ ಲೋಕವಾಸಿಗಳಿಂದ ಕೂಡಿದ ಮತ್ತು ಪ್ರಭಾವಲಯದಿಂದ ಥಳ-ಥಳಿಸುತ್ತಿದ್ದ ವಿಮಾನವು ಬಂದಿತು. ಎಲ್ಲರೂ ನೋಡುತ್ತಿರುವಂತೆಯೇ ಧುಂಧುಲೀ ಪುತ್ರನು ಆ ದಿವ್ಯವಿಮಾನವನ್ನೇರಿದನು. ಆಗ ವಿಮಾನದಲ್ಲಿದ್ದ ವಿಷ್ಣುಭಕ್ತರನ್ನು ನೋಡಿ ಗೋಕರ್ಣನು–"ಎಲೈ ದಿವ್ಯಪಾರ್ಷದರೇ! ಇಲ್ಲಿ ಈ ದಿವ್ಯ ಕಥೆಯನ್ನು ಕೇಳಿದ ಶುದ್ಧಹೃದಯರಾದ ಶ್ರೋತೃಗಳು ಬಹುಮಂದಿ ಇದ್ದಾರೆ. ಅವರಿಗೋಸ್ಕರವೂ ನೀವು ಬಹಳ ವಿಮಾನಗಳನ್ನು ಒಟ್ಟಿಗೇ ಏಕೆ ತಂದಿಲ್ಲ? ಎಲ್ಲರೂ ಸಮಾನರೂಪದಲ್ಲಿ ಕಥೆಯನ್ನು ಕೇಳಿರುವಾಗ ಅವರಿಗೆ ದೊರೆಯು ತ್ತಿರುವ ಫಲದಲ್ಲಿ ಭೇದವೇಕೆ ಉಂಟಾಯಿತು? ಹೇಳಿರಿ"–ಎಂದು ಪ್ರಶ್ನಿಸಿದನು.

ಅದಕ್ಕೆ ಹರಿದಾಸರು ಹೀಗೆ ಉತ್ತರಿಸಿದರು :

"ಎಲೈ ಮಾನಪ್ರದನಾದ ಮಹಾತ್ಮನೇ! ಶ್ರವಣಮಾಡಿದ ವಿಧಾನದಲ್ಲಿ ಭೇದವಾಗಿರುವುದರಿಂದ ಇಲ್ಲಿ ಫಲದಲ್ಲಿಯೂ ಭೇದವುಂಟಾಗಿದೆ. ಇಲ್ಲಿ ಇರುವ ಎಲ್ಲರೂ ಶ್ರವಣವನ್ನು ಮಾಡಿದ್ದರೂ ಹಾಗೆಯೇ ಮನನವನ್ನು ಎಲ್ಲರೂ ಮಾಡಿಲ್ಲ. ಆದ್ದರಿಂದಲೇ ಒಟ್ಟಿಗೇ ಭಜನೆ ಮಾಡಿದ್ದರೂ ಫಲದಲ್ಲಿ ಭೇದವುಂಟಾಗಿದೆ.

**ಶ್ರವಣಸ್ಯ ವಿಭೇದೇನ ಫಲಭೇದೋಽತ್ರ ಸಂಸ್ಥಿತಃ ।**
**ಶ್ರವಣಂ ತು ಕೃತಂ ಸರ್ವೈರ್ನ ತಥಾ ಮನನಂ ಕೃತಮ್ ।**
**ಫಲಭೇದಸ್ತತೋ ಜಾತೋ ಭಜನಾದಪಿ ಮಾನದ ॥೭೧॥**

ಈ ಪ್ರೇತವು ಏಳು ದಿನಗಳ ಕಾಲವೂ ನಿರಾಹಾರದಿಂದಿದ್ದು ಕಥಾ ಶ್ರವಣಮಾಡಿತು ಮತ್ತು ಶ್ರವಣಮಾಡಿದ ವಿಷಯವನ್ನು ಸ್ಥಿರವಾದ ಚಿತ್ತದಿಂದ ಮನನಮಾಡಿ ಚೆನ್ನಾಗಿ ಅದರ ನಿಧಿಧ್ಯಾಸನವನ್ನೂ ಮಾಡಿತು.

ಜ್ಞಾನವು ದೃಢಪಡದಿದ್ದರೆ ಅದು ವ್ಯರ್ಥ. ಏಕಾಗ್ರತೆ–ಸಾವಧಾನತೆ ಗಳಿಲ್ಲದೆ ಮಾಡಿದರೆ ಶ್ರವಣವು ವ್ಯರ್ಥ. ಸಂದೇಹದೊಡನೆ ಗ್ರಹಣಮಾಡ ಲ್ಪಟ್ಟ ಮಂತ್ರವು ವ್ಯರ್ಥ. ಚಂಚಲಮನಸ್ಸಿನಿಂದ ಮಾಡಿದ ಮಂತ್ರಜಪವು ವ್ಯರ್ಥ. ವಿಷ್ಣುಭಕ್ತನಿಲ್ಲದೇ ಇರುವ ದೇಶ, ಅಪಾತ್ರನಿಗೆ ಮಾಡಿಸಿದ ಶ್ರಾದ್ಧ, ಶ್ರೋತ್ರಿಯನಲ್ಲದವನಿಗೆ ಕೊಟ್ಟ ದಾನ ಮತ್ತು ಆಚಾರರಹಿತವಾದ ಕುಲ-

ಇವೆಲ್ಲವೂ ವ್ಯರ್ಥವೇ ಸರಿ. ಗುರುವಚನಗಳಲ್ಲಿ ವಿಶ್ವಾಸ, ತಾನು ದೀನನೆಂಬ ವಿನಯ, ಮನಸ್ಸಿನ ದೋಷಗಳನ್ನು ಗೆಲ್ಲುವಿಕೆ, ಶ್ರವಣದಲ್ಲಿ ಏಕಾಗ್ರತೆ–ಇವುಗಳು ಇದ್ದರೆ ತಾನೇ ಕಥಾಶ್ರವಣವು ಸಫಲವಾಗುವುದು!

**ಅದೃಢಂ ಚ ಹತಂ ಜ್ಞಾನಂ ಪ್ರಮಾದೇನ ಹತಂ ಶ್ರುತಮ್ ।**
**ಸಂದಿಗ್ಧೋ ಹಿ ಹತೋ ಮಂತ್ರೋ ವ್ಯಗ್ರಚಿತ್ತೋ ಹತೋ ಜಪಃ ॥**
**ಅವೈಷ್ಣವೋ ಹತೋ ದೇಶೋ ಹತಂ ಶ್ರಾದ್ಧಮಪಾತ್ರಕಮ್ ।**
**ಹತಮಶ್ರೋತ್ರಿಯೇ ದಾನಂ ಅನಾಚಾರಂ ಹತಂ ಕುಲಮ್ ॥೭೪॥**
**ವಿಶ್ವಾಸೋ ಗುರುವಾಕ್ಯೇಷು ಸ್ವಸ್ಮಿನ್ ದೀನತ್ವಭಾವನಾ ।**
**ಮನೋದೋಷಜಯಶ್ಚೈವ ಕಥಾಯಾಂ ನಿಶ್ಚಲಾ ಮತಿಃ ।**
**ಏವಮಾದಿಕೃತಂ ಚೇತ್ಸ್ಯಾತ್ ತದಾ ವೈ ಶ್ರವಣೇ ಫಲಮ್ ॥೭೫॥**

ಈ ಶ್ರೋತೃಗಳು ಮತ್ತೆ ಶ್ರೀಮದ್ಭಾಗವತಕಥೆಯನ್ನು ಮೇಲೆ ಹೇಳಿದ ನಿಯಮಗಳೊಡನೆ ಕೇಳಿದರೆ ಆಗ ನಿಶ್ಚಯವಾಗಿಯೂ ಇವರೆಲ್ಲರಿಗೂ ವೈಕುಂಠಪ್ರಾಪ್ತಿಯಾಗುವುದು. ಇದೂ ಅಲ್ಲದೇ, ಗೋಕರ್ಣ! ಶ್ರೀಭಗವಂತನು ತಾನೇ ಬಂದು ನಿನಗೆ ಗೋಲೋಕವಾಸವನ್ನು ಅನುಗ್ರಹಿಸುವನು.''

ಹೀಗೆಂದು ಹೇಳಿ ಆ ಪಾರ್ಷದರೆಲ್ಲರೂ ಹರಿಕೀರ್ತನೆಮಾಡುತ್ತಾ ವೈಕುಂಠಕ್ಕೆ ಹೊರಟುಹೋದರು.

ಶ್ರಾವಣಮಾಸದಲ್ಲಿ ಗೋಕರ್ಣನು ಮತ್ತೆ ಅದೇ ರೀತಿಯಲ್ಲಿ ಸಪ್ತಾಹವಿಧಿಯಂತೆ ಶ್ರೀಮದ್ಭಾಗವತಕಥಾಶ್ರವಣವನ್ನು ಆಚರಿಸಿದನು. ಆ ಶ್ರೋತೃಗಳೇ ಮತ್ತೆ ಅದರ ಶ್ರವಣವನ್ನು ಮಾಡಿದರು. ಆ ಕಥಾಶ್ರವಣವು ಮುಗಿದಾಗ ಏನು ಘಟನೆ ನಡೆಯಿತೆಂಬುದನ್ನು ಕೇಳು, ನಾರದ! ಭಕ್ತ ಜನರಿಂದ ತುಂಬಿದ ವಿಮಾನಗಳೊಡನೆ ಸಾಕ್ಷಾತ್ ಶ್ರೀಹರಿಯೇ ಅಲ್ಲಿ ಆವಿರ್ಭವಿಸಿದನು. ಆಗ ಎಲ್ಲ ಕಡೆಗಳಲ್ಲೂ–'ಜಯ ಜಯ! ನಮೋ ನಮಃ!'–ಎಂಬ ಧ್ವನಿಗಳು ಮೊಳಗತೊಡಗಿದುವು. ಆನಂದಗೊಂಡ ಶ್ರೀಮನ್ನಾರಾಯಣನು ತಾನೇ ಪಾಂಚಜನ್ಯಧ್ವನಿಯನ್ನು ಮೊಳಗಿಸಿದನು. ಗೋಕರ್ಣನನ್ನು ತನ್ನ ಎದೆಗೆ ಅಪ್ಪಿಕೊಂಡು ಅವನನ್ನು ತನಗೆ ಸಮಾನನನ್ನಾಗಿ ಮಾಡಿಕೊಂಡುಬಿಟ್ಟನು. ಉಳಿದ ಶ್ರೋತೃಗಳು ಮೇಘಶ್ಯಾಮಲ

ರಾಗಿ, ಪೀತಾಂಬರಧಾರಿಗಳಾಗಿ, ಕಿರೀಟ-ಕುಂಡಲಗಳಿಂದ ಕಂಗೊಳಿಸುವ ದಿವ್ಯರೂಪಸಂಪನ್ನರಾಗಿ ಬೆಳಗುವಂತೆ ಮಾಡಿದನು. ಆ ಗ್ರಾಮದಲ್ಲಿ ನಾಯಿಗಳೂ ಮತ್ತು ಚಾಂಡಾಲಪರ್ಯಂತವಾದ ಯಾವ ಜೀವಗಳಿದ್ದುವೋ–ಅವೆಲ್ಲವೂ ಗೋಕರ್ಣನ ಕೃಪೆಯಿಂದ ದಿವ್ಯವಿಮಾನಗಳಿಗೆ ಏರಿಸಲ್ಪಟ್ಟುವು ಮತ್ತು ಯೋಗಿಜನರು ಹೋಗುವ ಶ್ರೀಹರಿಲೋಕಕ್ಕೆ ಕಳುಹಿಸಲ್ಪಟ್ಟುವು. ಕಥಾಶ್ರವಣದಿಂದ ಸುಪ್ರೀತನಾದ ಭಕ್ತವತ್ಸಲ-ಗೋಪವಲ್ಲಭ ಶ್ರೀಗೋಪಾಲನು ಗೋಕರ್ಣನೊಡನೆ ಗೋಲೋಕಕ್ಕೆ ದಯಮಾಡಿಸಿದನು. ಹಿಂದೆ ಅಯೋಧ್ಯಾನಿವಾಸಿಗಳೆಲ್ಲರೂ ಶ್ರೀರಾಮದೇವರೊಡನೆ ಸಾಕೇತಧಾಮಕ್ಕೆ ಹೋಗಿ ಸೇರಿದಂತೆ–ಅವರೆಲ್ಲರೂ ಶ್ರೀಕೃಷ್ಣನೊಡನೆ ಯೋಗಿದುರ್ಲಭವಾದ ಗೋಲೋಕದಲ್ಲಿ ಹೋಗಿ ಸೇರಿಕೊಂಡರು. ಯಾವ ಲೋಕಕ್ಕೆ ಸೂರ್ಯನಿಗೂ, ಚಂದ್ರನಿಗೂ ಮತ್ತು ಸಿದ್ಧಪುರುಷರಿಗೂ ಯಾವಾಗಲೂ ಗತಿ ಇರುವುದಿಲ್ಲವೋ–ಅಂತಹ ಲೋಕಕ್ಕೆ ಶ್ರೀಮದ್ಭಾಗವತದ ಕಥಾಶ್ರವಣ ದಿಂದ ಅವರೆಲ್ಲರೂ ಬಿಜಯಮಾಡಿಸಿದರು.

ಸಪ್ತಾಹಯಜ್ಞದ ಮೂಲಕ ಶ್ರೀಮದ್ಭಾಗವತಕಥಾಶ್ರವಣಮಾಡುವುದರಿಂದ ಎಂತಹ ಉಜ್ಜ್ವಲವಾದ ಫಲಸಂಪಾದನೆಯಾಗುವುದೆಂಬುದರ ಬಗೆಗೆ ನಾವು ಏನು ತಾನೇ ಹೇಳೋಣ, ನಾರದ! ತಮ್ಮ ಕರ್ಣಪುಟಗಳಿಂದ ಶ್ರೀಗೋಕರ್ಣನ ಕಥೆಯ ಒಂದು ಅಕ್ಷರವನ್ನಾದರೂ ಪಾನಮಾಡಿದವರಿಗೆ ಮತ್ತೆ ತಾಯಿಯ ಗರ್ಭದಲ್ಲಿ ವಾಸವಿರುವುದಿಲ್ಲ. ತಪಸ್ವೀಜನರು ವಾತಾಹಾರ, ಜಲಾಹಾರ, ಒಣಗಿದ ತರಗೆಲೆಗಳ ಆಹಾರ ಇವುಗಳನ್ನು ಸೇವಿಸುತ್ತಾ ಶರೀರಶೋಷಣೆಮಾಡಿಕೊಂಡು ಬಹಳ ಕಾಲದವರೆಗೆ ಘೋರವಾದ ತಪಸ್ಸು ಮತ್ತು ಯೋಗಾಭ್ಯಾಸಗಳನ್ನು ಮಾಡುವುದರಿಂದಲೂ ಯಾವ ಫಲವನ್ನು ಪಡೆಯಲಾರರೋ–ಅಂತಹ ಫಲವನ್ನು 'ಸಪ್ತಾಹಶ್ರವಣ'ದಿಂದ ಸಹಜವಾಗಿ ಹೊಂದಬಹುದು. ಈ ಪುಣ್ಯವಾದ ಇತಿಹಾಸವನ್ನು ಚಿತ್ರಕೂಟದಲ್ಲಿ ವಿರಾಜಮಾನರಾಗಿರುವ ಶಾಂಡಿಲ್ಯಮುನೀಶ್ವರರೂ ಬ್ರಹ್ಮಾನಂದಮಗ್ನರಾಗಿ ಪಾರಾಯಣಮಾಡುತ್ತಿರುತ್ತಾರೆ. ಪರಮಪವಿತ್ರವಾದ ಈ ಆಖ್ಯಾನವನ್ನು ಒಂದು ಬಾರಿ ಕೇಳಿದರೂ ಎಲ್ಲ ಪಾಪರಾಶಿಗಳೂ ಭಸ್ಮವಾಗಿಬಿಡುತ್ತವೆ. ಶ್ರಾದ್ಧಸಮಯದಲ್ಲಿ ಇದನ್ನು ಪಾರಾಯಣಮಾಡಿದರೆ ಪಿತೃಗಣಗಳಿಗೆ ತೃಪ್ತಿ

ಯುಂಟಾಗುತ್ತದೆ ಮತ್ತು ಪ್ರತಿನಿತ್ಯವೂ ಪಾರಾಯಣಮಾಡಿದರೆ ಪುನರಾವೃತ್ತಿರಹಿತವಾದ ಮೋಕ್ಷವೇ ದೊರೆಯುವುದು."

ಪದ್ಮಪುರಾಣದ ಉತ್ತರಖಂಡದಲ್ಲಿ ಬರುವ ಭಾಗವತಮಾಹಾತ್ಮ್ಯೆಯಲ್ಲಿ ಗೋಕರ್ಣಮೋಕ್ಷವರ್ಣನೆಯೆಂಬ ಐದನೆಯ ಅಧ್ಯಾಯವು ಮುಗಿಯಿತು.

---

## ಅಧ್ಯಾಯ ೬
## ಸಪ್ತಾಹಯಜ್ಞದ ವಿಧಿ

ಬ್ರಹ್ಮಪುತ್ರರಾದ ಸನಕಾದಿಮುನಿಕುಮಾರರು ಹೇಳಿದರು :

"ಈಗ ನಾವು ನಿಮಗೆ ಸಪ್ತಾಹಶ್ರವಣದ ವಿಧಿಯನ್ನು ನಿರೂಪಣೆ ಮಾಡುವೆವು. ಸಾಮಾನ್ಯವಾಗಿ ಜನರ ಸಹಾಯ ಮತ್ತು ಧನಬಲಗಳಿಂದಲೇ ಈ ವಿಧಿಯನ್ನು ನೆರವೇರಿಸಲು ಸಾಧ್ಯವಾಗುವುದು. ಮೊದಲು ಪ್ರಯತ್ನ ಪೂರ್ವಕವಾಗಿ ಜ್ಯೋತಿಷ್ಕರನ್ನು ಕರೆಯಿಸಿ ಒಳ್ಳೆಯ ಮುಹೂರ್ತವನ್ನು ಕೇಳಿ ತಿಳಿದುಕೊಳ್ಳಬೇಕು ಮತ್ತು ವಿವಾಹವನ್ನು ಮಾಡುವುದಕ್ಕೆ ಎಷ್ಟು ಹಣ ಬೇಕಾಗುತ್ತದೆಯೋ ಅಷ್ಟೇ ಹಣದ ವ್ಯವಸ್ಥೆಯನ್ನು ಈ ಉತ್ಸವಕ್ಕೂ ಮಾಡಿಕೊಳ್ಳಬೇಕು. ಕಥೆಯನ್ನು ಪ್ರಾರಂಭಿಸುವುದಕ್ಕೆ ಭಾದ್ರಪದ, ಅಶ್ವಯುಜ, ಕಾರ್ತೀಕ, ಮಾರ್ಗಶಿರ, ಆಷಾಢ ಮತ್ತು ಶ್ರಾವಣಮಾಸಗಳು ಶ್ರೋತೃಗಳಿಗೆ ಮೋಕ್ಷಪ್ರಾಪ್ತಿಗೆ ಪೋಷಕವಾದುವುಗಳು. ಇವುಗಳಲ್ಲಿಯೂ ಅಧಿಕಮಾಸ, ಕುಹೂಯೋಗವುಳ್ಳ* ದಿನ ಮುಂತಾದುವುಗಳನ್ನು ವರ್ಜಿಸಬೇಕು. ಉತ್ಸಾಹಿಗಳಾದ ಇತರ ಜನರನ್ನೂ ಸಹಾಯಕರನ್ನಾಗಿ ಸೇರಿಸಿಕೊಳ್ಳಬೇಕು ಮತ್ತು–'ಕಥಾಶ್ರವಣ ನಡೆಯುತ್ತದೆ. ನೀವು ಕುಟುಂಬ ಪರಿವಾರಸಮೇತ ಇದಕ್ಕೆ ದಯಮಾಡಿಸಬೇಕು'–ಎಂದು ದೇಶ-ದೇಶಾಂತರಗಳಿಗೂ ಪ್ರಯತ್ನಪೂರ್ವಕವಾಗಿ ಸಮಾಚಾರವನ್ನು ಕಳುಹಿಸಬೇಕು. ಭಗವಂತನ ಕಥೆ ಮತ್ತು ಸಂಕೀರ್ತನೆಗಳಿಗೆ ದೂರವಾಗಿರುವ ಸ್ತ್ರೀಯರು ಶೂದ್ರರು ಮುಂತಾದವರಿಗೂ ಇದು ತಿಳಿಯುವಂತೆ ಏರ್ಪಡಿಸಬೇಕು. ಬೇರೆ-ಬೇರೆ ದೇಶಗಳಲ್ಲಿ ವಿರಕ್ತರೂ, ಹರಿಕೀರ್ತನೆಯಲ್ಲಿ ಆಸಕ್ತಿಯುಳ್ಳವರೂ

* ಭದ್ರಾ, ವ್ಯತೀಪಾತ ಮುಂತಾದುವು ಕುಹೂಯೋಗಗಳು.

ಆದ ಯಾವ ವಿಷ್ಣುಭಕ್ತರುಂಟೋ ಅವರಿಗೆ ಅವಶ್ಯವಾಗಿ ಆಹ್ವಾನಪತ್ರಗಳನ್ನು ಕಳುಹಿಸಬೇಕು. ಆ ಪತ್ರದ ಒಕ್ಕಣೆ ಹೀಗಿರಬೇಕು.

"ಎಲೈ ಮಹನೀಯರೇ! ಏಳು ದಿವಸಗಳ ಕಾಲ ಬಹಳ ದುರ್ಲಭವಾದ ಸತ್ಪುರುಷರ ಸಭೆ ಸೇರುವುದು ಮತ್ತು ಅಪೂರ್ವದ ಸಮಯವಾಗಿ ಶ್ರೀಮದ್ಭಾಗವತದ ಕಥಾಪ್ರವಚನವು ನಡೆಯುವುದು. ಶ್ರೀಮದ್ಭಾಗವತ ಕಥಾಮೃತವನ್ನು ಪಾನಮಾಡಲು ಭಕ್ತರಸಿಕರಾದ ತಾವು ಪ್ರೇಮದಿಂದ ಶೀಘ್ರವಾಗಿ ದಯಮಾಡಿಸಬೇಕು. ತಮಗೆ ಹೆಚ್ಚು ಅವಕಾಶವಿಲ್ಲದಿದ್ದರೆ ಒಂದು ದಿವಸವಾದರೂ ಇಲ್ಲಿಗೆ ಅವಶ್ಯವಾಗಿ ದಯಮಾಡಿಸಬೇಕು. ಏಕೆಂದರೆ : ಈ ಕಾರ್ಯಕ್ರಮದ ಪ್ರತಿಕ್ಷಣವೂ ಅತ್ಯಂತದುರ್ಲಭವಾಗಿದೆ."

ಹೀಗೆ ಎಲ್ಲರಿಗೂ ವಿನಯಪೂರ್ವಕವಾಗಿ ಕರೆಯನ್ನು ನೀಡಬೇಕು. ಬಂದವರೆಲ್ಲರಿಗೂ ವಾಸಮಾಡಲು ಜಾಗವನ್ನು ಏರ್ಪಡಿಸಬೇಕು. ಕಥಾಶ್ರವಣವನ್ನು ಯಾವುದಾದರೂ ತೀರ್ಥಕ್ಷೇತ್ರದಲ್ಲಿ ಅಥವಾ ವನದಲ್ಲಿ ಅಥವಾ ಮನೆಯಲ್ಲಾದರೂ ಏರ್ಪಡಿಸುವುದು ಸಮ್ಮತ. ಕಥೆಯು ನಡೆಯುವ ಜಾಗವನ್ನು ಭೂಮಿಯು ವಿಶಾಲವಾಗಿರುವ ಜಾಗದಲ್ಲಿ ಏರ್ಪಡಿಸಬೇಕು. ಆ ಭೂಮಿಯನ್ನು ಗುಡಿಸಿ ಸಾರಿಸಿ ರಂಗವಲ್ಲಿಗಳಿಂದ ಅಲಂಕರಿಸಬೇಕು. ಮನೆಯ ಸಾಮಾನುಗಳನ್ನೆಲ್ಲಾ ತೆಗೆದು ಮನೆಯ ಒಂದು ಮೂಲೆಯಲ್ಲಿರಿಸಬೇಕು. ಐದು ದಿನಗಳಿಗೆ ಮೊದಲೇ, ಹಾಸುವ ಬಟ್ಟೆಗಳನ್ನು ಪ್ರಯತ್ನಪೂರ್ವಕ ಸಂಗ್ರಹಿಸಿರಬೇಕು ಮತ್ತು ಬಾಳೆಯ ಕಂಬಗಳಿಂದ ಅಲಂಕೃತವಾದ ಒಂದು ಎತ್ತರವಾದ ಮಂಟಪವನ್ನು ಸಿದ್ಧಪಡಿಸಬೇಕು. ಅದನ್ನು ಎಲ್ಲ ಕಡೆಗಳಲ್ಲೂ ಹಣ್ಣು-ಹೂವು-ಪತ್ರೆ ಮತ್ತು ತಳಿರು-ತೋರಣಗಳಿಂದ ಅಲಂಕರಿಸಬೇಕು. ನಾಲ್ಕು ದಿಕ್ಕುಗಳಲ್ಲೂ ಬಹುಸಂಪತ್ತಿನಿಂದ ಶೋಭಿಸುವ ಧ್ವಜಗಳನ್ನು ಏರಿಸಬೇಕು. ಆ ಮಂಟಪದಲ್ಲಿ ಸ್ವಲ್ಪ ಎತ್ತರವಾದ ಜಾಗದಲ್ಲಿ ವಿಸ್ತಾರವಾಗಿ ಸಪ್ತಲೋಕಗಳ ರಚನೆಯನ್ನು ಕಲ್ಪಿಸಿ ಅಲ್ಲಿ ವಿರಕ್ತರಾದ ಬ್ರಾಹ್ಮಣರನ್ನು ಕರೆದು ಕೂರಿಸಬೇಕು. ಅವರಿಗೆ ಪೂರ್ವಭಾವಿಯಾಗಿಯೇ ಯಥೋಚಿತವಾದ ಪೀಠವನ್ನು ಏರ್ಪಡಿಸಬೇಕು. ಪ್ರವಚನಕಾರನು ಉತ್ತರಾಭಿಮುಖವಾಗಿದ್ದರೆ ಮುಖ್ಯಶ್ರೋತೃವು ಪೂರ್ವಾಭಿಮುಖವಾಗಿರಬೇಕು. ಪ್ರವಚನ

ಕಾರನು ಪೂರ್ವಾಭಿಮುಖವಾಗಿದ್ದರೆ ಮುಖ್ಯಶ್ರೋತೃವು ಉತ್ತರಾಭಿಮುಖವಾಗಿರಬೇಕು. ಅಥವಾ ಪೂಜ್ಯನಾದ ಪ್ರವಚನಕಾರ ಮತ್ತು ಪೂಜಕನಾದ ಶ್ರೋತೃ ಇವರ ಮಧ್ಯೆ ಇರುವುದೇ ಪೂರ್ವದಿಕ್ಕು ಎಂದು ಭಾವಿಸಬಹುದು. ಪೂಜ್ಯನು ಪೂರ್ವಾಭಿಮುಖವಾಗಿ ಕುಳಿತಿರುತ್ತಾನೆ. ಆಗ ಪೂಜಕನು ಆ ಪೂಜ್ಯನಿಗೆ ಅಭಿಮುಖವಾಗಿದ್ದರೆ ಅವನಿಗೆ ಅದೇ ಪೂರ್ವದಿಕ್ಕು. ದೇಶ-ಕಾಲ ಮುಂತಾದುವುಗಳನ್ನು ಅರಿತಿರುವ ವಿದ್ವಾಂಸರು ಶ್ರೋತೃಗಳಿಗೆ ಶಾಸ್ತ್ರದಲ್ಲಿ ಇದೇ ನಿಯಮವನ್ನು ಹೇಳುತ್ತಾರೆ. ಪ್ರವಚನಕಾರನು ಎಂತಹವನಾಗಿರಬೇಕು? ಎಂದರೆ : ಆತನು ವೇದ-ಶಾಸ್ತ್ರಗಳನ್ನು ಸ್ಪಷ್ಟವಾಗಿ ವ್ಯಾಖ್ಯಾನ ಮಾಡುವುದರಲ್ಲಿ ಸಮರ್ಥನಾಗಿರಬೇಕು. ಉತ್ತಮವಾದ ದೃಷ್ಟಾಂತಗಳನ್ನು ಕೊಡುವುದರಲ್ಲಿ ಕುಶಲನಾಗಿರಬೇಕು. ವಿವೇಕಿಯೂ ಮತ್ತು ನಿಃಸ್ಪೃಹನೂ ಆಗಿರಬೇಕು. ಇಂತಹ ಗುಣಗಳಿಂದ ಸಂಪನ್ನನಾಗಿರುವ ವಿಷ್ಣುಭಕ್ತನಾದ ಬ್ರಾಹ್ಮಣನು ಅವನಾಗಿರಬೇಕು. ಪಂಡಿತರೇ ಆಗಿದ್ದರೂ ಕೂಡ ಯಾರು ಅನೇಕಧರ್ಮಗಳ ಬಗೆಗೆ ಭ್ರಮೆಯನ್ನು ಹೊಂದಿದ್ದಾರೋ, ಸ್ತ್ರೀಲಂಪಟರಾಗಿದ್ದಾರೋ, ಪಾಷಂಡಮತದ ಪರವಾಗಿ ವಾದಿಸುತ್ತಾರೋ–ಅಂತಹವರನ್ನು ಶ್ರೀಮದ್ಭಾಗವತದ ಪ್ರವಚನಕ್ಕೆ ನಿಯೋಜಿಸಬಾರದು. ಪ್ರವಚನಕಾರನ ಹತ್ತಿರದಲ್ಲಿ ಅವನ ಸಹಾಯಕ್ಕಾಗಿ ಅಂತಹವನೇ ಆದ ಒಬ್ಬ ವಿದ್ವಾಂಸನನ್ನು ನೇಮಿಸಬೇಕು. ಅವನು ಎಲ್ಲ ಬಗೆಯ ಸಂಶಯಗಳನ್ನೂ ಹೋಗಲಾಡಿಸುವುದರಲ್ಲಿ ಸಮರ್ಥನಾಗಿರಬೇಕು. ಜನರಿಗೆ ಬೋಧನೆಮಾಡುವುದರಲ್ಲಿ ಆಸಕ್ತನಾಗಿ ಕುಶಲನಾಗಿರಬೇಕು. ಕಥೆಯನ್ನು ಪ್ರಾರಂಭಿಸುವುದಕ್ಕೆ ಹಿಂದಿನ ದಿವಸವೇ ವ್ರತಸ್ವೀಕಾರಕ್ಕಾಗಿ ಪ್ರವಚನಕಾರನು ಕ್ಷೌರಮಾಡಿಸಿಕೊಳ್ಳಬೇಕು ಮತ್ತು ಅರುಣೋದಯಸಮಯದಲ್ಲಿ ಶೌಚಾನಂತರ ಚೆನ್ನಾಗಿ ಸ್ನಾನಮಾಡಬೇಕು. ಆತನು ಸಂಧ್ಯಾವಂದನೆಯೇ ಮುಂತಾದ ತನ್ನ ನಿತ್ಯಕರ್ಮಗಳನ್ನು ಪ್ರಯತ್ನಪೂರ್ವಕ ಸಂಕ್ಷೇಪವಾಗಿ ಮುಗಿಸಿಕೊಂಡು ಕಥೆಗೆ ಒದಗಬಹುದಾದ ವಿಘ್ನಗಳ ಪರಿಹಾರಕ್ಕಾಗಿ ಗಣಪತಿಯನ್ನು ಪೂಜೆಮಾಡಬೇಕು. ಅನಂತರ ಪಿತೃಗಣಗಳನ್ನು ಕುರಿತು ತರ್ಪಣಕೊಟ್ಟು ಹಿಂದಿನ ಪಾಪಗಳ ಶುದ್ಧಿಗೋಸ್ಕರ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಒಂದು ಮಂಡಲವನ್ನು ರಚಿಸಿ ಅದರಲ್ಲಿ ಶ್ರೀಹರಿಯನ್ನು ಪ್ರತಿಷ್ಠೆಮಾಡಬೇಕು ಮತ್ತು ಆ ಶ್ರೀಕೃಷ್ಣಪರಮಾತ್ಮನನ್ನು

ಕುರಿತು ಮಂತ್ರೋಚ್ಚಾರಣಪೂರ್ವಕವಾಗಿ ಷೋಡಶೋಪಚಾರಪೂಜೆಯನ್ನು ಆಚರಿಸಿ ಪ್ರದಕ್ಷಿಣ-ನಮಸ್ಕಾರಗಳನ್ನು ಮಾಡಿ ಹೀಗೆ ಪ್ರಾರ್ಥಿಸಬೇಕು :

"ಎಲೈ ದಯಾನಿಧಿಯೇ! ಸಂಸಾರಸಾಗರದಲ್ಲಿ ಮುಳುಗಿರುವ ದೀನನು ನಾನು. ಕರ್ಮಗಳ ಮೋಹವೆಂಬ ಮೊಸಳೆಯ ಹಿಡಿತಕ್ಕೆ ಸಿಕ್ಕಿಬಿದ್ದಿದ್ದೇನೆ. ಈ ಸಾಗರದ ದೆಸೆಯಿಂದ ನನ್ನನ್ನು ಪಾರುಮಾಡಯ್ಯ."

ಅನಂತರ ಶ್ರೀಮದ್ಭಾಗವತಕ್ಕೂ ಧೂಪ-ದೀಪಾದಿ ಪೂಜಾಸಾಮಗ್ರಿಗಳಿಂದ ಅತ್ಯಂತ ಉತ್ಸಾಹ-ಪ್ರೀತಿಪೂರ್ವಕವಾಗಿ ವಿಧಿಪ್ರಕಾರ ಪೂಜೆಮಾಡಬೇಕು. ಮತ್ತೆ ಆ ಪುಸ್ತಕದ ಮುಂದೆ ತೆಂಗಿನಕಾಯಿಯನ್ನು ಅಥವಾ ಬಿಲ್ವಫಲವನ್ನು ಇರಿಸಿ ನಮಸ್ಕರಿಸಿ ಪ್ರಸನ್ನವಾದ ಮನಸ್ಸಿನಿಂದ ಈ ರೀತಿ ಸ್ತುತಿಸಬೇಕು :

"ಹೇ ನಾಥ! ಶ್ರೀಮದ್ಭಾಗವತರೂಪದಲ್ಲಿರುವ ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನೇ ಆಗಿ ನೀನು ಬೆಳಗುತ್ತಿದ್ದೀಯೆ. ಭವಸಾಗರದಿಂದ ಪಾರಾಗಲು ನಿನ್ನನ್ನು ಶರಣುಹೊಂದುತ್ತೇನೆ. ನನ್ನ ಈ ಮನೋರಥವನ್ನು ಯಾವ ವಿಘ್ನಬಾಧೆಯೂ ಆಗದಂತೆ ಸಾಂಗೋಪಾಂಗವಾಗಿ ನೆರವೇರಿಸಯ್ಯ, ನಾನು ನಿನ್ನ ದಾಸನಯ್ಯ, ಕೇಶವ!"

ಹೀಗೆ ದೈನ್ಯದ ಮಾತುಗಳನ್ನು ಹೇಳಿ ಮತ್ತೆ ಪ್ರವಚನಕಾರನನ್ನು ಪೂಜಿಸಬೇಕು. ಆತನನ್ನು ಸುಂದರವಾದ ವಸ್ತ್ರ-ಆಭರಣ ಮುಂತಾದುವುಗಳಿಂದ ಅಲಂಕರಿಸಿ ಪೂಜೆಯ ಕೊನೆಯಲ್ಲಿ ಆತನನ್ನೂ ಸ್ತುತಿಸಬೇಕು :

"ಎಲೈ ಶುಕರೂಪಿಯಾದ ಜ್ಞಾನಿಶ್ರೇಷ್ಠನೇ! ಉಪದೇಶಮಾಡುವುದರಲ್ಲಿ ಕುಶಲನೇ! ಸರ್ವಶಾಸ್ತ್ರವಿಶಾರದನೇ! ಈ ಕಥೆಯನ್ನು ಪ್ರಕಾಶಪಡಿಸಿ ಕರುಣೆಯಿಂದ ನನ್ನ ಅಜ್ಞಾನವನ್ನು ತೊಲಗಿಸಯ್ಯ!"–ಎಂದು ಪ್ರಾರ್ಥಿಸಬೇಕು. ಮತ್ತೆ ಆತನ ಮುಂದೆ ತನ್ನ ಮಂಗಳಕ್ಕೋಸ್ಕರ ಪ್ರಸನ್ನತೆಯಿಂದ ನಿಯಮಗ್ರಹಣಮಾಡಿ ಏಳು ದಿನಗಳವರೆಗೆ ಯಥಾಶಕ್ತಿಯಾಗಿ ಅದನ್ನು ಪಾಲಿಸಬೇಕು. 'ಕಥೆಗೆ ವಿಘ್ನವುಂಟಾಗದಿರಲಿ' ಎಂದು ಐದು ಮಂದಿ ಬ್ರಾಹ್ಮಣರನ್ನು ವರಣಮಾಡಬೇಕು. ಅವರು ದ್ವಾದಶಾಕ್ಷರಮಹಾಮಂತ್ರದ ಮೂಲಕ ಶ್ರೀಭಗವಂತನ ನಾಮಧೇಯಗಳನ್ನು ಜಪಿಸಬೇಕು.

ವಿಷ್ಣುಭಕ್ತರಾದ ಬ್ರಾಹ್ಮಣರನ್ನೂ ಇತರ ಸಂಕೀರ್ತನಕಾರರನ್ನೂ ನಮಸ್ಕರಿಸಿ ಪೂಜೆಮಾಡಿ, ಅವರ ಅನುಮತಿಯನ್ನು ಪಡೆದು ತಾನು ಆಸನವನ್ನು ಅಲಂಕರಿಸಬೇಕು. ಅನಂತರ ಬ್ರಾಹ್ಮಣರಿಗೂ, ವಿಷ್ಣುಭಕ್ತರಾದ ಇತರ ಸಂಕೀರ್ತನಕಾರರಿಗೂ ನಮಸ್ಕಾರಮಾಡಿ ಅವರನ್ನು ಆರಾಧಿಸಬೇಕು ಮತ್ತು ಅವರ ಅಪ್ಪಣೆ ಪಡೆದು ತಾನು ಆಸನಸ್ವೀಕಾರಮಾಡಬೇಕು.

ಲೋಕವೇನು, ಧನಸಂಪತ್ತೇನು, ಮನೆ-ಮಠಗಳೇನು, ಮಡದಿ-ಮಕ್ಕಳೇನು–ಮುಂತಾದ ಚಿಂತೆಯನ್ನು ಬಿಟ್ಟು ಶುದ್ಧವಾದ ಮನಸ್ಸಿನಿಂದ ಕಥೆಯಲ್ಲಿ ಏಕಾಗ್ರಚಿತ್ತವನ್ನು ಯಾವನು ಇಟ್ಟುಕೊಂಡಿರುತ್ತಾನೋ–ಅವನಿಗೆ ಉತ್ತಮವಾದ ಫಲವು ಸಿಕ್ಕುವುದು. ಧೀಮಂತನಾದ ಪ್ರವಚನಕಾರನು ಸೂರ್ಯೋದಯದಿಂದ ಪ್ರಾರಂಭಮಾಡಿ ಮೂರೂವರೆ ಪ್ರಹರಕಾಲದ ವರೆಗೆ ಧೀರವಾದ ಕಂಠದಿಂದ ಕಥಾವಾಚನಮಾಡಬೇಕು. ಮಧ್ಯಾಹ್ನದಲ್ಲಿ ಎರಡು ಘಳಿಗೆಯವರೆಗೆ ವಾಚನವನ್ನು ನಿಲ್ಲಿಸಬೇಕು. ಆ ಸಮಯದಲ್ಲಿ ವಿಷ್ಣುಭಕ್ತರು ಆ ಕಥೆಯ ಪ್ರಸಂಗಕ್ಕೆ ಅನುಗುಣವಾಗಿ ಭಗವಂತನ ಗುಣಗಳನ್ನು ಕೀರ್ತನೆಮಾಡುತ್ತಿರಬೇಕು. ವ್ಯರ್ಥವಾದ ಮಾತುಗಳನ್ನಾಡುತ್ತಿರಬಾರದು. ಕಥಾಶ್ರವಣ-ಕೀರ್ತನಸಮಯಗಳಲ್ಲಿ ಮಲ-ಮೂತ್ರವಿಸರ್ಜನೆಯನ್ನು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕಾಗಿ ಲಘುವಾಗಿ ಮತ್ತು ಮಿತ ಪ್ರಮಾಣದಲ್ಲಿ ಆಹಾರವನ್ನು ಸೇವಿಸುವುದು ಸುಖಕರ. ಒಪ್ಪತ್ತು ಮಾತ್ರ ಊಟಮಾಡುವುದು ಮತ್ತು ಆಗಲೂ ಹವಿಷ್ಯಾನ್ನವನ್ನು ಮಾತ್ರ ಸ್ವೀಕರಿಸುವುದು ಶ್ರೇಷ್ಠ. ಶಕ್ತಿಯಿದ್ದರೆ ಏಳು ರಾತ್ರಿಗಳು ಉಪವಾಸದಲ್ಲಿದ್ದು ಕಥಾ ಶ್ರವಣಮಾಡಬೇಕು ಅಥವಾ ಕೇವಲ ತುಪ್ಪವನ್ನು ಅಥವಾ ಹಾಲನ್ನು ಅಥವಾ ಹಣ್ಣುಗಳನ್ನು ಸೇವಿಸುತ್ತಾ ಇಲ್ಲವೇ ಒಪ್ಪತ್ತುಮಾತ್ರ ಭೋಜನಮಾಡುತ್ತಾ ಕಥೆಯನ್ನು ಕೇಳಬೇಕು. ಈ ಆಹಾರನಿಯಮದಲ್ಲಿ ಯಾವುದನ್ನು ಅನುಸರಿ ಸಲು ಸಾಧ್ಯವೋ ಅದನ್ನು ಅನುಸರಿಸುತ್ತಾ ಕಥಾಶ್ರವಣಮಾಡಬೇಕು.

ಊಟಮಾಡುವುದರಿಂದಲೇ ಕಥಾಶ್ರವಣಕ್ಕೆ ಸಹಾಯಕವಾಗುವ ಪಕ್ಷದಲ್ಲಿ ಆಗ ಉಪವಾಸಮಾಡುವುದಕ್ಕಿಂತಲೂ ಊಟಮಾಡುವುದೇ ಶ್ರೇಷ್ಠ. ಉಪವಾಸದಿಂದ ಕಥಾಶ್ರವಣಕ್ಕೆ ಅಡ್ಡಿಯುಂಟಾಗುವಂತಿದ್ದರೆ ಆಗ ಉಪವಾಸವು ಖಂಡಿತವಾಗಿಯೂ ಉತ್ತಮವಲ್ಲ.

**ಭೋಜನಂ ತು ವರಂ ಮನ್ಯೇ ಕಥಾಶ್ರವಣಕಾರಕಮ್ ।**
**ನೋಪವಾಸೋ ವರಃ ಪ್ರೋಕ್ತಃ ಕಥಾವಿಘ್ನಕರೋ ಯದಿ ॥೪೩॥**

ಸಪ್ತಾಹಶ್ರವಣವ್ರತವನ್ನು ನಡೆಸುವವರು ಅನುಸರಿಸಬೇಕಾದ ಇತರ ನಿಯಮಗಳನ್ನು ಕೇಳು ; ನಾರದ! ವಿಷ್ಣುವಿನಲ್ಲಿ ಏಕಭಕ್ತಿಯ ದೀಕ್ಷೆಯಿಲ್ಲದವನಿಗೆ ಈ ಕಥಾಶ್ರವಣದಲ್ಲಿ ಅಧಿಕಾರವಿಲ್ಲ. ಕಥಾವ್ರತಿಯು ನಿತ್ಯವೂ ಬ್ರಹ್ಮಚರ್ಯನಿಯಮದಲ್ಲಿರಬೇಕು. ಭೂಮಿಯ ಮೇಲೆ ಮಲಗಬೇಕು ಮತ್ತು ಎಲೆಯಲ್ಲಿಯೇ ಊಟಮಾಡಬೇಕು. ಆತನು ದ್ವಿದಲಧಾನ್ಯ, ಜೇನು ತುಪ್ಪ, ಎಣ್ಣೆ, ಗುರುವಾದ ಆಹಾರ, ಕೆಟ್ಟಭಾವದಿಂದ ಸಂಪಾದಿಸಿದ ಬಡಿಸಿದ ಅಥವಾ ಸ್ವೀಕರಿಸಿದ ಭಾವದುಷ್ಟವಾದ ಆಹಾರಪದಾರ್ಥ ಮತ್ತು ತಂಗಳನ್ನ–ಇವುಗಳನ್ನು ಸದಾ ತ್ಯಾಗಮಾಡಬೇಕು. ಕಾಮ, ಕ್ರೋಧ, ಮದ, ಮಾನ, ಮಾತ್ಸರ್ಯ, ಲೋಭ, ಮೋಹ, ದಂಭ, ದ್ವೇಷ–ಇವುಗಳಿಂದ ದೂರವಾಗಿರಬೇಕು. ವೇದಗಳು, ವಿಷ್ಣುಭಕ್ತರು, ವಿಪ್ರರು, ಗುರುಭಕ್ತರು, ಗೋಸೇವಕರು, ಸ್ತ್ರೀಯರು, ರಾಜರು, ಮಹಾಪುರುಷರು–ಇವರ ನಿಂದೆಯನ್ನು ಸರ್ವದಾ ತ್ಯಜಿಸಬೇಕು. ರಜಸ್ವಲೆಯರು, ಚಂಡಾಲರು, ಮ್ಲೇಚ್ಛರು, ಪತಿತರು, ಸಂಸ್ಕಾರಹೀನರು, ವ್ರತಭ್ರಷ್ಟರು, ಬ್ರಹ್ಮದ್ವೇಷಿಗಳು, ವೈದಿಕಮತಕ್ಕೆ ಹೊರಗಾದವರು–ಇವರೊಡನೆ ಮಾತನಾಡಬಾರದು. ಸತ್ಯ, ಶೌಚ, ದಯೆ, ಮೌನ, ಋಜುತ್ವ, ವಿನಯ, ಉದಾರವಾದ ಮನಸ್ಸು–ಇವುಗಳಿಂದ ಕೂಡಿರಬೇಕು. ಬಡತನವುಳ್ಳವನು. ಕ್ಷಯ ಅಥವಾ ಇತರ ರೋಗಗಳಿಂದ ಪೀಡಿತನಾದವನು, ಭಾಗ್ಯಹೀನ, ಪಾಪಕರ್ಮಿ, ಸಂತಾನಹೀನ ಮತ್ತು ಮೋಕ್ಷವನ್ನು ಬಯಸುವವನು–ಇವರೆಲ್ಲರೂ ಈ ಕಥೆಯನ್ನು ಕೇಳಬೇಕು. ರಜಸ್ಸು ತಡೆಹಿಡಿಯಲ್ಪಟ್ಟ ಹೆಂಗಸು, ಒಂದೇ ಒಂದು ಸಂತಾನವಾಗಿ ಸಂತತಿ ತಡೆಹಿಡಿಯಲ್ಪಟ್ಟ ಹೆಂಗಸು, ಹುಟ್ಟಿದೊಡನೆಯೇ ಸಾಯುವ ಮಕ್ಕಳುಳ್ಳವಳು, ಗರ್ಭಸ್ರಾವ ಆದವಳು–ಇವರು ಪ್ರಯತ್ನಪೂರ್ವಕವಾಗಿ ಈ ಕಥೆಯನ್ನು ಕೇಳಬೇಕು. ವಿಧಿಪೂರ್ವಕವಾಗಿ ಕಥಾಶ್ರವಣಮಾಡಿದರೆ ಇವರೆಲ್ಲರಿಗೂ ಅಕ್ಷಯವಾದ ಫಲದ ಪ್ರಾಪ್ತಿಯಾಗುತ್ತದೆ. ಈ ಅತ್ಯುತ್ತಮವಾದ ದಿವ್ಯಕಥೆಯು ಕೋಟಿಯಜ್ಞಗಳ ಫಲವನ್ನೀಯುತ್ತದೆ.

ಈ ರೀತಿಯಲ್ಲಿ ವ್ರತದ ವಿಧಿಗಳನ್ನು ಪಾಲಿಸಿ ಕೊನೆಗೆ ವ್ರತದ

ಉದ್ಯಾಪನೆಯನ್ನು ಮಾಡಬೇಕು. ಫಲಾಪೇಕ್ಷೆಯಿಂದ ಈ ಸಪ್ತಾಹವ್ರತವನ್ನು ಆಚರಿಸುವವನು ಜನ್ಮಾಷ್ಟಮೀವ್ರತದ ಉದ್ಯಾಪನೆಯಂತೆಯೇ ಇದರ ಉದ್ಯಾಪನೆಯನ್ನೂ ಮಾಡಬೇಕು. ಆದರೆ ಫಲಾಪೇಕ್ಷೆಯಿಲ್ಲದ ವಿರಕ್ತಭಕ್ತರಿಗೆ ಈ ಉದ್ಯಾಪನೆಯು ಕಡ್ಡಾಯವಲ್ಲ. ಅವರು ಕಥಾಶ್ರವಣದಿಂದಲೇ ಪವಿತ್ರರಾಗಿಬಿಟ್ಟಿರುತ್ತಾರೆ. ಏಕೆಂದರೆ : ಅವರು ನಿಷ್ಕಾಮಿಗಳಾದ ವಿಷ್ಣು ಭಕ್ತರು.

ಹೀಗೆ ಸಪ್ತಾಹಯಜ್ಞವು ಸಮಾಪ್ತವಾದನಂತರ ಶ್ರೋತೃಗಳು ಶ್ರೀಮದ್ಭಾಗವತಪುಸ್ತಕವನ್ನೂ ಮತ್ತು ಪ್ರವಚನಕಾರನನ್ನೂ ಅತ್ಯಂತ ಭಕ್ತಿಯಿಂದ ಪೂಜಿಸಬೇಕು. ಅನಂತರ ಪ್ರವಚನಕಾರನು ಶ್ರೋತೃಗಳಿಗೆ ಪ್ರಸಾದ, ತುಲಸೀ, ಪುಷ್ಪಮಾಲೆ ಮುಂತಾದುವುಗಳನ್ನು ಅನುಗ್ರಹಿಸಬೇಕು. ಆಮೇಲೆ ಎಲ್ಲರೂ ಮೃದಂಗ-ತಾಳ-ಮದ್ದಳೆಗಳ ಇಂಪಾದ ಧ್ವನಿಯೊಡನೆ ಸಂಕೀರ್ತನೆಮಾಡಬೇಕು. 'ಜಯ ಜಯ ನಮೋ ನಮಃ' ಎಂಬ ಧ್ವನಿಗಳೊಡನೆ ಶಂಖಧ್ವನಿಯನ್ನು ಮಾಡಿ ಬ್ರಾಹ್ಮಣರಿಗೂ ಯಾಚಕರಿಗೂ ಅನ್ನದಾನಮಾಡಬೇಕು. ಶ್ರೋತೃವು ವಿರಕ್ತನಾಗಿದ್ದರೆ ಮಾರನೇ ದಿನ ಕರ್ಮಶಾಂತಿಗಾಗಿ ಗೀತಾಪಾರಾಯಣಮಾಡಬೇಕು. ಗೃಹಸ್ಥನಾಗಿದ್ದರೆ ಹೋಮಮಾಡಬೇಕು. ಆ ಹೋಮದಲ್ಲಿ ದಶಮಸ್ಕಂಧದ ಒಂದೊಂದು ಶ್ಲೋಕವನ್ನೂ ಪಠಿಸಿ ವಿಧಿಪೂರ್ವಕವಾಗಿ ಪಾಯಸ, ಜೇನುತುಪ್ಪ, ತುಪ್ಪ, ಎಳ್ಳು, ಅನ್ನ, ಎಳ್ಳನ್ನ–ಇತ್ಯಾದಿಗಳಿಂದ ಆಹುತಿಕೊಡಬೇಕು.

ಅಥವಾ ಏಕಾಗ್ರಚಿತ್ತದಿಂದ ಗಾಯತ್ರೀಮಂತ್ರದಿಂದ ಹೋಮಮಾಡಬೇಕು. ಏಕೆಂದರೆ : ಶ್ರೀಮದ್ಭಾಗವತಮಹಾಪುರಾಣವು ತಾತ್ತ್ವಿಕವಾಗಿ ಗಾಯತ್ರೀಮಯವಾಗಿ ಗಾಯತ್ರೀಸ್ವರೂಪವೇ* ಆಗಿದೆ. ಹೋಮ ಮಾಡುವ ಶಕ್ತಿ ಇಲ್ಲದಿದ್ದರೆ ಹೋಮಫಲವು ಸಿದ್ಧಿಯಾಗುವುದಕ್ಕೋಸ್ಕರ ಹೋಮದ್ರವ್ಯಗಳ ದಾನವನ್ನು ಮಾಡಬೇಕು. ಸಪ್ತಾಹಶ್ರವಣಯಜ್ಞದಲ್ಲಿ

---

* ಗಾಯತ್ರೀಮಂತ್ರದಿಂದ ಪ್ರಾರಂಭವಾಗಿ ಗಾಯತ್ರಿಯ ಅರ್ಥವನ್ನು ವರ್ಣಿಸುವುದೇ ಶ್ರೀಮದ್ಭಾಗವತದ ಲಕ್ಷಣ. 'ಗಾಯತ್ರ್ಯಾಶ್ಚ ಸಮಾರಂಭೋ ಯತ್ರ ಭಾಗವತಂ ವಿದುಃ' 'ಆರಭ್ಯ ಯತ್ರ ಗಾಯತ್ರೀಂ ವರ್ಣ್ಯತೇ ಧರ್ಮವಿಸ್ತರಃ'–ಎಂದು ಸ್ಕಾಂದ ಮತ್ತು ಮತ್ಸ್ಯಪುರಾಣಗಳು ಹೇಳುತ್ತವೆ.

ಸಂಭವಿಸಿರಬಹುದಾದ ಬಗೆ-ಬಗೆಯ ಛಿದ್ರಗಳನ್ನು ದೂರಮಾಡಲು ಮತ್ತು ವಿಧಿಯಲ್ಲಿ ಹೆಚ್ಚು ಮತ್ತು ಕಡಿಮೆ ಆಗಿರುವ ದೋಷಗಳನ್ನು ಶಮನಗೊಳಿಸಲು ವಿಷ್ಣುಸಹಸ್ರನಾಮದ ಪಾರಾಯಣವನ್ನು ಮಾಡಬೇಕು. ಅದರಿಂದ ಎಲ್ಲ ಕರ್ಮಗಳೂ ಸಫಲವಾಗುವುವು. ಅದಕ್ಕಿಂತಲೂ ಶ್ರೇಷ್ಠವಾದ ಕರ್ಮವು ಮತ್ತೊಂದು ಇಲ್ಲ.

ಅನಂತರ ಹನ್ನೆರಡು ಮಂದಿ ಬ್ರಾಹ್ಮಣರಿಗೆ ಪಾಯಸ, ಜೇನುತುಪ್ಪ ಇತ್ಯಾದಿಗಳಿಂದ ಭೋಜನಮಾಡಿಸಬೇಕು. ವ್ರತದ ಪೂರ್ಣತೆಯನ್ನು ಪಡೆಯುವುದಕ್ಕಾಗಿ ಗೋದಾನ-ಸುವರ್ಣದಾನಗಳನ್ನು ಮಾಡಬೇಕು. ಶಕ್ತಿಯಿದ್ದ ಪಕ್ಷದಲ್ಲಿ ಮೂರು ತೊಲ ಸುವರ್ಣದಿಂದ ಒಂದು ಸಿಂಹಾಸನವನ್ನು ಮಾಡಿಸಿ, ಅದರಲ್ಲಿ ಸುಂದರವಾದ ಅಕ್ಷರಗಳಿಂದ ಬರೆಯಲ್ಪಟ್ಟಿರುವ ಶ್ರೀಮದ್ಭಾಗವತಗ್ರಂಥವನ್ನು ಇರಿಸಿ, ಆವಾಹನಾದಿ ಷೋಡಶೋಪಚಾರ ಪೂಜೆಗಳನ್ನು ಸಲ್ಲಿಸಿ, ದಕ್ಷಿಣಾಸಹಿತವಾಗಿ ವಸ್ತ್ರ-ಭೂಷಣ-ಗಂಧಾದಿಗಳಿಂದ ಪೂಜಿಸಲ್ಪಟ್ಟ ಜಿತೇಂದ್ರಿಯನಾದ ಆಚಾರ್ಯನಿಗೆ ಸಮರ್ಪಿಸಿದರೆ–ಹಾಗೆ ದಾನಮಾಡಿದ ಧನ್ಯನಾದ ದಾತೃವು ಭವಬಂಧನಗಳಿಂದ ಬಿಡುಗಡೆಹೊಂದುವನು. ಹೀಗೆ ವಿಧಿಪೂರ್ವಕವಾಗಿ ಆಚರಿಸಿದರೆ ಸಪ್ತಾಹಶ್ರವಣವು ಸರ್ವ ಪಾಪಗಳನ್ನೂ ನಿವೃತ್ತಿಮಾಡುವುದು. ಅಭೀಷ್ಟಫಲವನ್ನು ಕೊಡುವುದು. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಅನುಗ್ರಹಿಸುವ ಸಾಧನ ಇದು ಎಂಬುದರಲ್ಲಿ ಸಂದೇಹವಿಲ್ಲ."

ಸನಕಾದಿ ಮುನಿಗಳು ಶ್ರೀಮದ್ಭಾಗವತಮಹಿಮೆಯನ್ನು ಹೀಗೆ ವರ್ಣಿಸಿ ನಾರದರನ್ನು ಕುರಿತು–"ಈ ರೀತಿ ನಿನಗೆ ಸಪ್ತಾಹಶ್ರವಣದ ವಿಧಿಯನ್ನು ಪೂರ್ಣವಾಗಿ ತಿಳಿಸಿದ್ದೇವೆ. ಈಗ ಇನ್ನೇನನ್ನು ಕೇಳಬಯಸುತ್ತೀಯೆ? ಶ್ರೀಮದ್ಭಾಗವತದಿಂದಲೇ ಭೋಗ ಮತ್ತು ಮೋಕ್ಷ ಎರಡೂ ಕೈಗೆ ಸಿಕ್ಕುತ್ತವೆ"–ಎಂದು ನಿರೂಪಣೆ ಮಾಡಿದರು.

ಸೂತಪುರಾಣಿಕರು ಹೇಳುತ್ತಾರೆ :

"ಹೀಗೆ ಹೇಳಿ ಆ ಮಹಾತ್ಮರು ನಿಯಮಪೂರ್ವಕವಾಗಿ ಶ್ರವಣ ಮಾಡುವ ಎಲ್ಲ ಭೂತಗಳಿಗೂ ಪುಣ್ಯಕರವೂ, ಪಾಪಪರಿಹಾರಕವೂ, ಭುಕ್ತಿ-ಮುಕ್ತಿಪ್ರದಾಯಕವೂ ಆಗಿರುವ ಶ್ರೀಮದ್ಭಾಗವತಕಥೆಯನ್ನು ಯಥಾ

ವಿಧಿಯಾಗಿ ಪ್ರವಚನಮಾಡಿದರು. ಅನಂತರ ದೇವದೇವನಾದ ಶ್ರೀಪುರುಷೋತ್ತಮನನ್ನು ಯಥಾವಿಧಿಯಾಗಿ ಸ್ತೋತ್ರಮಾಡಿದರು. ಕಥೆ ಯನ್ನು ಶ್ರವಣಮಾಡಿದನಂತರ ಕೊನೆಯಲ್ಲಿ ಜ್ಞಾನ-ಭಕ್ತಿ-ವೈರಾಗ್ಯದೇವತೆ ಗಳು ಎಲ್ಲ ಭೂತಗಳಿಗೂ ಆಕರ್ಷಕವಾದ ಪುಷ್ಟಿಯನ್ನೂ ತಾರುಣ್ಯವನ್ನೂ ಪಡೆದು ಕಂಗೊಳಿಸಿದರು. ತನ್ನ ಮನೋರಥವು ಈಡೇರಿದ್ದರಿಂದ ನಾರದರೂ ಪರಮಾನಂದಪೂರ್ಣರಾಗಿ ಪುಲಕಿತರಾದರು. ಭಗವಂತನಿಗೆ ಪ್ರಿಯರಾದ ನಾರದರು ಹೀಗೆ ಕಥೆಯನ್ನು ಕೇಳಿ ಕೃತಕೃತ್ಯರಾಗಿ ಪ್ರೇಮದಿಂದ ಗದ್ಗದವಾದ ಮಾತಿನಿಂದ ಸನಕಾದಿಗಳಿಗೆ ಕೈಜೋಡಿಸಿ ಹೀಗೆ ವಿಜ್ಞಾಪಿಸಿದರು:

"ಓ ಮಹಾತ್ಮರೇ! ಕರುಣಾಪರರಾದ ನಿಮ್ಮಿಂದ ನಾನು ಧನ್ಯ ನಾದೆನು. ನಿಮ್ಮಿಂದ ಮಹಾನುಗ್ರಹವಾಯಿತು. ಈಗ ನನಗೆ ಸರ್ವಪಾಪ ಹರನಾದ ಭಗವಾನ್ ಶ್ರೀಹರಿಯ ಪ್ರಾಪ್ತಿಯಾಯಿತು. ಎಲೈ ತಪೋಧನರೇ! ನಾನು ಈ ಶ್ರೀಮದ್ಭಾಗವತಶ್ರವಣವನ್ನೇ ಸರ್ವಶ್ರೇಷ್ಠವಾದ ಧರ್ಮವೆಂದು ತಿಳಿಯುತ್ತೇನೆ. ಏಕೆಂದರೆ : ಇದರಿಂದ ಶ್ರೀವೈಕುಂಠನಿವಾಸಿಯಾದ ಶ್ರೀಕೃಷ್ಣ ಪರಮಾತ್ಮನು ದೊರೆಯುತ್ತಾನೆ."

ಸೂತಪುರಾಣಿಕರು ಹೇಳುತ್ತಾರೆ :

"ವೈಷ್ಣವಶ್ರೇಷ್ಠರಾದ ನಾರದರು ಹೀಗೆ ಹೇಳುತ್ತಿರುವಾಗಲೇ ಅಲ್ಲಿಗೆ ಇಷ್ಟಬಂದಲ್ಲಿ ಸುತ್ತಾಡುತ್ತಿದ್ದ ಮಹಾಯೋಗೇಶ್ವರರಾದ ಶುಕಮಹರ್ಷಿಗಳು ದಯಮಾಡಿಸಿದರು. ಹದಿನಾರು ವಯಸ್ಸಿನ ಹರೆಯದಲ್ಲಿದ್ದರೂ ಮಹಾ ಜ್ಞಾನಿಗಳಾಗಿ ಜ್ಞಾನಮಹಾಸಮುದ್ರದ ಚಂದ್ರನಂತೆ ಕಂಗೊಳಿಸುತ್ತಿದ್ದ, ಆತ್ಮಲಾಭದಿಂದ ಕೃತಕೃತ್ಯರಾಗಿದ್ದ, ಶ್ರೀವೇದವ್ಯಾಸರ ಸುಪುತ್ರರಾದ ಶುಕಮುನೀಂದ್ರರು ಪರಮಪ್ರೇಮದಿಂದ ಮೆಲ್ಲ-ಮೆಲ್ಲಗೆ ಶ್ರೀಭಾಗವತವನ್ನು ಪಠಿಸುತ್ತಾ ಕಥಾಸಪ್ತಾಹದ ಕೊನೆಯಲ್ಲಿ ಅಲ್ಲಿಗೆ ತಮ್ಮ ಶ್ರೀಪಾದಪದ್ಮಗಳನ್ನು ಬೆಳೆಯಿಸಿದರು.

ತತ್ರಾಯಯೌ ಷೋಡಶವಾರ್ಷಿಕಸ್ತದಾ
ವ್ಯಾಸಾತ್ಮಜೋ ಜ್ಞಾನಮಹಾಬ್ಧಿಚನ್ದ್ರಮಾಃ ।
ಕಥಾವಸಾನೇ ನಿಜಲಾಭಪೂರ್ಣಃ
ಪ್ರೇಮ್ಣಾ ಪಠನ್ ಭಾಗವತಂ ಶನೈಃ ಶನೈಃ ॥೭೮॥

ಆ ಪರಮತೇಜಸ್ವಿಯನ್ನು ಕಂಡು ಎಲ್ಲ ಸಭಾಸದರೂ ಭಕ್ತಿ-ಸಂಭ್ರಮಗಳಿಂದ ಒಡನೆಯೇ ಮೇಲೆದ್ದು ಅವರಿಗೆ ಉನ್ನತವಾದ ಮಹಾಸನವನ್ನು ಸಮರ್ಪಿಸಿದರು. ದೇವರ್ಷಿನಾರದರೂ ಅವರನ್ನು ಪ್ರೇಮದಿಂದ ಪೂಜಿಸಿದರು. ಅವರು ಸುಖವಾಗಿ ಆಸನದಲ್ಲಿ ಬಿಜಯಮಾಡಿಸಿ–"ನನ್ನ ನಿರ್ಮಲವಾದ ವಾಣಿಯನ್ನು ಕೇಳುವವರಾಗಿ"–ಎಂದು ಪ್ರಾರಂಭಿಸಿ ಅನುಗ್ರಹ ಭಾಷಣಮಾಡಿದರು.

"ಓ ರಸಿಕರೇ! ಭಾವುಕರೇ! ಈ ಅದ್ಭುತವಾದ ರಸವನ್ನು ; ಶ್ರೀಮದ್ಭಾಗವತರಸವನ್ನು ಕುಡಿಯಿರಿ. ಲಯಹೊಂದುವವರೆಗೂ ಪಾನಮಾಡಿರಿ. ಬಾರಿ-ಬಾರಿಗೂ ಪಾನಮಾಡಿರಿ. ಇದು ವೇದವೆಂಬ ಕಲ್ಪವೃಕ್ಷದಿಂದ ಜಾರಿರುವ ಪರಿಪಕ್ವವಾದ ಫಲ ; ಶ್ರೀಶುಕನೆಂಬ ಶುಕಪಕ್ಷಿಯ ಮುಖದ ಯೋಗದಿಂದ ಅಮೃತರಸವು ಪರಿಪೂರ್ಣವಾಗಿರುವ ಫಲ. ಸಿಪ್ಪೆಯಿಲ್ಲದೇ ತಿರುಳೂ ಇಲ್ಲದೇ ಕೇವಲ ರಸವೇ ರಸವಾಗಿರುವ ಅಚ್ಚರಿಯ ಫಲ. ಈ ಲೋಕದಲ್ಲೇ ಸುಲಭವಾಗಿ ದೊರಕಿದೆ."

ನಿಗಮಕಲ್ಪತರೋರ್ಗಲಿತಂ ಫಲಂ
ಶುಕಮುಖಾದಮೃತದ್ರವಸಂಯುತಮ್ ।
ಪಿಬತ ಭಾಗವತಂ ರಸಮಾಲಯಂ
ಮುಹುರಹೋ ರಸಿಕಾ ಭುವಿ ಭಾವುಕಾಃ ॥೮೦॥

ಈ ಶ್ರೀಮದ್ಭಾಗವತದಲ್ಲಿ ಪರಮಧರ್ಮವು ನಿರೂಪಿತವಾಗಿದೆ. ಇದು ಪ್ರತಿಪಾದನೆಮಾಡುವ ವಸ್ತು ಮಾತ್ಸರ್ಯರಹಿತರಾದ ಸಜ್ಜನರಿಗೆ ವೇದ್ಯವಾದ ಪರಮಸತ್ಯ. ಆಧ್ಯಾತ್ಮಿಕ-ಆಧಿದೈವಿಕ-ಆಧಿಭೌತಿಕಗಳೆಂಬ ಮೂರು ತಾಪಗಳನ್ನೂ ನಿರ್ಮೂಲಗೊಳಿಸುವುದು. ಪರಮಮಂಗಳಕರವಾದುದು. ಮಹಾಮುನಿಗಳಾದ ವೇದವ್ಯಾಸರೇ ರಚಿಸಿರುವ ಇಂತಹ ಶ್ರೀಮದ್ಭಾಗವತ ಇರುವಾಗ ಬೇರೆ ಸಾಧನಗಳೇಕೆ? ಸುಕೃತಿಗಳು ಇದನ್ನು ಕೇಳಬೇಕೆಂಬ ಇಚ್ಛೆಯನ್ನು ಪ್ರಕಟಪಡಿಸಿದರೂ ಸಾಕು. ಒಡನೆಯೇ ತತ್ಕ್ಷಣದಲ್ಲೇ ಆ ಭಗವಂತನು ಅವರ ಹೃದಯವನ್ನು ಪ್ರವೇಶಿಸಿ ಅಲ್ಲಿಯೇ ಸೆರೆಹಿಡಿಯಲ್ಪಡುತ್ತಾನೆ.

ಧರ್ಮಃ ಪ್ರೋಜ್ಝಿತಕೈತವೋಽತ್ರ
ಪರಮೋ ನಿರ್ಮತ್ಸರಾಣಾಂ ಸತಾಂ
ವೇದ್ಯಂ ವಾಸ್ತವಮತ್ರ ವಸ್ತು
ಶಿವದಂ ತಾಪತ್ರಯೋನ್ಮೂಲನಮ್ ।
ಶ್ರೀಮದ್ಭಾಗವತೇ ಮಹಾಮುನಿಕೃತೇ
ಕಿಂ ವಾ ಪರೈರೀಶ್ವರಃ
ಸದ್ಯೋ ಹೃದ್ಯವರುಧ್ಯತೇ ಸುಕೃತಿಭಿಃ
ಶುಶ್ರೂಷುಭಿಸ್ತತ್‌ಕ್ಷಣಾತ್ ॥೮೧॥

ಈ ಶ್ರೀಮದ್ಭಾಗವತವು ಪುರಾಣಗಳಿಗೆ ಶಿರೋಮಣಿಯಾಗಿರುವ ಮಹಾಪುರಾಣ. ವಿಷ್ಣುಭಕ್ತರ ಧನವಾಗಿದೆ. ಇದರಲ್ಲಿ ಪರಮಹಂಸರಿಗೆ ಪ್ರಾಪ್ಯವಾಗಿರುವ ವಿಶುದ್ಧವಾದ ಜ್ಞಾನವೇ ವರ್ಣಿತವಾಗಿದೆ. ಜ್ಞಾನ-ವೈರಾಗ್ಯ ಮತ್ತು ಭಕ್ತಿಗಳಿಂದ ಕೂಡಿದ ನಿವೃತ್ತಿಯ ಮಾರ್ಗವನ್ನು ಇಲ್ಲಿ ಪ್ರಕಾಶಪಡಿಸಿದೆ. ಭಕ್ತಿಪೂರ್ವಕವಾಗಿ ಇದರ ಶ್ರವಣ, ಪಾರಾಯಣ ಮತ್ತು ಮನನಗಳಲ್ಲಿ ಆಸಕ್ತನಾದವನು ಮುಕ್ತನಾಗಿಬಿಡುತ್ತಾನೆ. ಈ ರಸವು ಸ್ವರ್ಗದಲ್ಲಾಗಲೀ, ಸತ್ಯಲೋಕದಲ್ಲಾಗಲೀ, ಕೈಲಾಸದಲ್ಲಾಗಲೀ, ವೈಕುಂಠದಲ್ಲಾಗಲೀ ಎಲ್ಲಿಯೂ ಇಲ್ಲ. ಆದುದರಿಂದ ಎಲೈ ಭಾಗ್ಯವಂತರೇ! ಇದನ್ನು ಪಾನಮಾಡಿರಿ ; ಬಿಡಬೇಡಿರಿ ; ಖಂಡಿತವಾಗಿಯೂ ಬಿಡಬೇಡಿರಿ."

ಸೂತಪುರಾಣಿಕರು ಹೇಳುತ್ತಾರೆ :

"ಬಾದರಾಯಣಪುತ್ರರು ಹೀಗೆ ಹೇಳುತ್ತಿರುವಂತೆಯೇ ಸಭೆಯ ಮಧ್ಯದಲ್ಲಿ ಶ್ರೀಹರಿಯೇ ಪ್ರಕಟವಾಗಿಬಿಟ್ಟನು. ಪ್ರಹ್ಲಾದ, ಬಲಿ, ಉದ್ಧವ, ಅರ್ಜುನ–ಮುಂತಾದ ಪಾರ್ಷದರಿಂದ ಕೂಡಿ ಭಗವಂತನು ಕಾಣಿಸಿ ಕೊಂಡನು ಮತ್ತು ದೇವರ್ಷಿನಾರದರು ಆತನನ್ನು ಯಥೋಚಿತವಾಗಿ ಪೂಜಿ ಸಿದರು. ದೊಡ್ಡ ಆಸನದಲ್ಲಿ ಬಿಜಯಮಾಡಿಸಿ ಪ್ರಸನ್ನನಾಗಿದ್ದ ಶ್ರೀಹರಿಯನ್ನು ಕಂಡು ಅವರೆಲ್ಲರೂ ಆತನ ಮುಂದೆ ಕೀರ್ತನಮಾಡಿದರು. ಆ ಕೀರ್ತನ ವನ್ನು ನೋಡಲು ಪಾರ್ವತೀಸಮೇತನಾದ ಮಹಾದೇವನೂ ಮತ್ತು ಬ್ರಹ್ಮ

ದೇವರೂ ಅಲ್ಲಿಗೆ ದಯಮಾಡಿಸಿದರು. ಆಗ ಪ್ರಾರಂಭವಾಯಿತು ಕೀರ್ತನ. ಅದರಲ್ಲಿ ಪಟುವಾದ ಗತಿಯುಳ್ಳ ಪ್ರಹ್ಲಾದನು ಕೈತಾಳ ಹಾಕತೊಡಗಿದನು. ಉದ್ಧವನು ಕಂಚಿನ ತಾಳವನ್ನು ನುಡಿಸಿದನು. ನಾರದರು ವೀಣೆ ನುಡಿಸುತ್ತಿದ್ದರು. ಸ್ವರವಿಜ್ಞಾನಕುಶಲನಾದ ಕಾರಣ ಅರ್ಜುನನು ರಾಗಾಲಾಪನೆ ಮಾಡತೊಡಗಿದನು. ಇಂದ್ರನು ಮೃದಂಗ ಬಾರಿಸಿದನು. ಸನಕಾದಿ ಕುಮಾರರು ಜಯ-ಜಯಕಾರಮಾಡುತ್ತಿದ್ದರು. ಮತ್ತು ಎಲ್ಲರ ಮುಂದೆ ಶುಕಮಹಾಮುನಿಗಳು ಬಗೆ-ಬಗೆಯ ರಸವಾದ ಅಂಗಭಂಗಿಗಳಿಂದ ಭಾವ ಹಿಡಿಯುತ್ತಿದ್ದರು. ಅವರೆಲ್ಲರ ಮಧ್ಯೆ ತೇಜೋನಿಧಿಗಳಾದ ಭಕ್ತಿ-ಜ್ಞಾನ-ವೈರಾಗ್ಯಗಳು ನಟರಂತೆ ನರ್ತಿಸತೊಡಗಿದುವು. ಇಂತಹ ಅಲೌಕಿಕವಾದ ಕೀರ್ತನವನ್ನು ಕಂಡು ಶ್ರೀಭಗವಂತನು ತುಂಬ ಪ್ರಸನ್ನನಾಗಿ :

"ನಿಮ್ಮ ಈ ಕಥೆ ಮತ್ತು ಕೀರ್ತನೆಗಳಿಂದ ನಾನು ತುಂಬ ಪ್ರಸನ್ನನಾಗಿದ್ದೇನೆ. ನಿಮ್ಮ ಭಕ್ತಿಭಾವಕ್ಕೆ ವಶನಾಗಿಬಿಟ್ಟಿದ್ದೇನೆ. ಆದ್ದರಿಂದ ನನ್ನಿಂದ ಯಾವುದಾದರೂ ವರವನ್ನು ಕೇಳಿಕೊಳ್ಳಿರಿ"–ಎಂದು ಅಪ್ಪಣೆಕೊಡಿಸಿದನು.

ಭಗವಂತನ ಆ ಮಾತನ್ನು ಕೇಳಿ ಅವರೆಲ್ಲರೂ ತುಂಬ ಪ್ರಸನ್ನರಾಗಿ ಶ್ರೀಭಗವಂತನನ್ನು ಕುರಿತು "ಪ್ರಭೋ! ಈ ಮುಂದೆಯೂ ಕೂಡ ಎಲ್ಲೆಲ್ಲಿ ಸಪ್ತಾಹಕಥೆ ನಡೆಯುತ್ತದೆಯೋ ಅಲ್ಲೆಲ್ಲಾ ನೀನು ಈ ಪಾರ್ಷದರೊಡನೆ ಅವಶ್ಯವಾಗಿ ದಯಮಾಡಿಸಬೇಕು. ಇದೇ ನಮ್ಮಮನೋರಥ. ನೀನು ಇದನ್ನು ಈಡೇರಿಸಬೇಕು"–ಎಂದು ಬೇಡಿಕೊಂಡರು. ಸ್ವಾಮಿಯು–'ಓಂ **ತಥಾಸ್ತು**–ಹಾಗೆಯೇ ಆಗಲೀ'–ಎಂದು ಹೇಳಿ ಅಂತರ್ಧಾನಹೊಂದಿದನು.

ಅನಂತರ ನಾರದಮಹರ್ಷಿಗಳು ಭಗವಂತನ ಮತ್ತು ಆತನ ಪಾರ್ಷದರ ಪಾದಪದ್ಮಗಳಿಗೆ ಪ್ರಣಾಮಮಾಡಿದರು ಮತ್ತು ಶುಕರೇ ಮುಂತಾದ ತಪಸ್ವಿಗಳಿಗೂ ನಮಸ್ಕಾರಮಾಡಿದರು. ಕಥಾಮೃತವನ್ನು ಪಾನಮಾಡಿದ್ದರಿಂದ ಎಲ್ಲರಿಗೂ ಪರಮಾನಂದವುಂಟಾಯಿತು. ಅವರ ಮೋಹವು ನಾಶವಾಯಿತು. ಮತ್ತೆ ಅವರೆಲ್ಲರೂ ತಮ್ಮ-ತಮ್ಮ ಸ್ಥಾನಗಳಿಗೆ ಹೊರಟುಹೋದರು.

ಆ ಸಮಯದಲ್ಲಿ ಶುಕಮುನಿಗಳು ಪುತ್ರಸಹಿತಳಾದ ಭಕ್ತಿಯನ್ನು ತಮ್ಮ ಶಾಸ್ತ್ರವಾದ ಶ್ರೀಮದ್ಭಾಗವತದಲ್ಲಿ ಸ್ಥಾಪನೆಮಾಡಿಬಿಟ್ಟರು. ಆದ್ದರಿಂದಲೇ ಶ್ರೀಮದ್ಭಾಗವತವನ್ನು ಸೇವಿಸಿದರೆ ಶ್ರೀಹರಿಯು ವಿಷ್ಣುಭಕ್ತರ ಹೃದಯದಲ್ಲಿ ಬಂದು ಬೆಳಗುತ್ತಾನೆ. ಯಾರು ದಾರಿದ್ರ್ಯವೆಂಬ ದುಃಖಜ್ವರದ ಜ್ವಾಲೆಯಿಂದ ಸುಟ್ಟುಹೋಗುತ್ತಿದ್ದಾರೆಯೋ, ಮಾಯಾಪಿಶಾಚಿಯು ಯಾರನ್ನು ತುಳಿದು ಹಾಕಿದೆಯೋ ಮತ್ತು ಯಾರು ಸಂಸಾರಸಮುದ್ರದಲ್ಲಿ ಮುಳುಗುತ್ತಿದ್ದಾರೆಯೋ–ಅವರೆಲ್ಲರಿಗೂ ಮಂಗಳವನ್ನುಂಟುಮಾಡುವುದಕ್ಕಾಗಿ ಶ್ರೀಮದ್ಭಾಗವತವು ಸಿಂಹನಾದಮಾಡುತ್ತಿದೆ.

ಈ ನಡುವೆ ಶೌನಕರು–"ಈ ಶ್ರೀಮದ್ಭಾಗವತವನ್ನು ಶುಕಮಹರ್ಷಿಗಳು ಪರೀಕ್ಷಿದ್ರಾಜನಿಗೆ ಉಪದೇಶಮಾಡಿದ್ದು ಯಾವಾಗ? ಆಮೇಲೆ ಗೋಕರ್ಣನು ಇದನ್ನು ಪ್ರವಚನಮಾಡಿದ ಕಾಲ ಯಾವುದು? ಸನಕಾದಿಗಳು ನಾರದರಿಗೆ ಇದನ್ನು ಯಾವಾಗ ಉಪದೇಶಮಾಡಿದರು?–ಈ ಸಂಶಯಗಳನ್ನು ಪರಿಹಾರಮಾಡಿ, ಪುರಾಣಿಕರೇ!" ಎಂದು ಪ್ರಾರ್ಥಿಸಿದರು. ಅದಕ್ಕೆ ಸೂತರು ಹೀಗೆ ಉತ್ತರಿಸಿದರು :

"ಶ್ರೀಕೃಷ್ಣಪರಮಾತ್ಮನು ನಿರ್ಯಾಣಹೊಂದಿ ಕಲಿಯುಗದಲ್ಲಿ ಮೂವತ್ತು ವರ್ಷಗಳು ಕಳೆದ ಮೇಲೆ ಭಾದ್ರಪದಮಾಸದ ಶುಕ್ಲಪಕ್ಷದ ನವಮಿಯಲ್ಲಿ ಶುಕಮಹರ್ಷಿಗಳು ಕಥಾಪ್ರವಚನವನ್ನು ಪರೀಕ್ಷಿದ್ರಾಜನ ಮುಂದೆಮಾಡಿದರು. ಹಾಗೆ ಪರೀಕ್ಷಿದ್ರಾಜನು ಶ್ರವಣಮಾಡಿದನಂತರ ಇನ್ನೂರು ವರ್ಷಗಳು ಕಳೆದ ಮೇಲೆ ಆಷಾಢಮಾಸದ ಶುಕ್ಲನವಮಿಯಂದು ಗೋಕರ್ಣನು ಈ ಕಥೆಯನ್ನು ಪ್ರವಚನಮಾಡಿದನು. ಅಲ್ಲಿಂದ ಮುಂದೆ ಮೂರು ಸಾವಿರ ವರ್ಷಗಳು ಕಳೆದ ಮೇಲೆ ಕಾರ್ತಿಕ ಶುದ್ಧನವಮಿಯಂದು ಬ್ರಹ್ಮಪುತ್ರರಾದ ಸನಕಾದಿಗಳು ಇದನ್ನು ಶ್ರೀ ನಾರದರಿಗೆ ಉಪದೇಶಿಸಿದರು. ಇದೇ ಈ ಮೂರು ಮಂದಿ ಉಪದೇಶಿಸಿದ ಕಾಲಕ್ರಮ. ಎಲೈ ಅನಘರೇ! ನೀವು ಪ್ರಶ್ನೆಮಾಡಿದ್ದಕ್ಕೆ ಈ ಉತ್ತರ ಕೊಟ್ಟಾಯಿತು. ಈ ಕಲಿಯುಗದಲ್ಲಿ ಶ್ರೀಮದ್ಭಾಗವತದ ಕಥೆಯೇ ಭವರೋಗಕ್ಕೆ ರಾಮಬಾಣವಾಗಿದೆ.

ಎಲೈ ಸತ್ಪುರುಷರೇ! ನೀವು ಈ ಕಥಾಮೃತವನ್ನು ಪಾನಮಾಡಿರಿ.

ಇದು ಶ್ರೀಕೃಷ್ಣನಿಗೆ ಅತ್ಯಂತಪ್ರಿಯವಾದುದು. ಸಕಲದೋಷಗಳನ್ನೂ ನಾಶಪಡಿಸುವುದು. ಮುಕ್ತಿಯನ್ನು ಹೊಂದಿಸುವುದಕ್ಕೆ ಏಕಮಾತ್ರಕಾರಣವಾದುದು. ಭಕ್ತಿಯ ವಿಲಾಸವನ್ನು ವೃದ್ಧಿಪಡಿಸುವುದು. ಇದನ್ನು ಸವಿಯಿರಿ. ಇತರ ಸಾಧನಗಳನ್ನು ಮತ್ತು ತೀರ್ಥಗಳನ್ನು ಸೇವಿಸುವ ಪಾಡೇಕೆ? ಕೈಯಲ್ಲಿ ಪಾಶವನ್ನು ಹಿಡಿದುಕೊಂಡಿರುವ ತನ್ನ ದೂತರನ್ನು ನೋಡಿ ಯಮಧರ್ಮರಾಜನು ಅವರ ಕಿವಿಯಲ್ಲಿ ಗುಟ್ಟಾಗಿ ಹೀಗೆ ಹೇಳುತ್ತಾನೆ :

"ಶ್ರೀಭಗವಂತನ ಕಥೆಗಳಿಂದ ಯಾರು ಉನ್ಮತ್ತರಾಗಿದ್ದಾರೆಯೋ ಅವರನ್ನು ಬಿಟ್ಟುಬಿಡಿ. ಇತರರಿಗೆ ದಂಡವನ್ನು ವಿಧಿಸುವ ಶಕ್ತಿ ನನಗುಂಟು. ಆದರೆ ವಿಷ್ಣುಭಕ್ತರ ಮೇಲೆ ನನಗೆ ಅಧಿಕಾರವಿಲ್ಲ."

ಈ ಅಸಾರವಾದ ಸಂಸಾರದಲ್ಲಿ ವಿಷಯಗಳೆಂಬ ವಿಷದ ಆಸಕ್ತಿಯಿಂದ ವ್ಯಾಕುಲವಾದ ಬುದ್ಧಿಯುಳ್ಳ ಎಲೈ ಜನರೇ! ನಿಮ್ಮ ಆತ್ಮಕಲ್ಯಾಣಕ್ಕೋಸ್ಕರ ಅರ್ಧಕ್ಷಣಕಾಲವಾದರೂ ಶುಕರು ಅನುಗ್ರಹಿಸಿದ ಶ್ರೀಭಾಗವತ ಕಥೆಯೆಂಬ ಅನುಭವದ ಅಮೃತವನ್ನು ಪಾನಮಾಡಿರಿ. ಎಲೈ ಜನರೇ! ನಿಂದಿತವಾದ ಕಥೆಗಳಿಂದ ಕೂಡಿದ ಕುಮಾರ್ಗದಲ್ಲಿ ವ್ಯರ್ಥವಾಗಿ ಏಕೆ ಅಲೆದಾಡುತ್ತಿದ್ದೀರಿ? ಈ ಕಥೆಯು ಕಿವಿಗೆ ಪ್ರವೇಶಮಾಡಿದ್ದರಿಂದಲೇ ಮುಕ್ತಿಯು ದೊರಕುವುದು. ಇದಕ್ಕೆ ಸಾಕ್ಷಿ ಪರೀಕ್ಷಿದ್ರಾಜ. ಶ್ರೀಶುಕಮಹರ್ಷಿಗಳು ಪ್ರೇಮರಸಪ್ರವಾಹದಲ್ಲಿದ್ದು ಈ ಕಥೆಯನ್ನು ಉಪದೇಶಿಸಿದರು. ಯಾರ ಕಂಠವು ಈ ಕಥೆಯನ್ನು ಮೊಳಗಿಸುತ್ತದೆಯೋ ಅವರು ಶ್ರೀವೈಕುಂಠಕ್ಕೆ ಅಧಿಕಾರಿಗಳಾಗಿಬಿಡುತ್ತಾರೆ. ಶೌನಕರೇ! ನಾನು ಅನೇಕ ಶಾಸ್ತ್ರಗಳನ್ನು ನೋಡಿ ಸಿದ್ಧವಾದ ಮತ್ತು ಅತಿಗೋಪ್ಯವಾದ ರಹಸ್ಯವನ್ನು ಈಗ ನಿಮಗೆ ತಿಳಿಸಿದ್ದೇನೆ. ಇದು ಎಲ್ಲ ಶಾಸ್ತ್ರಗಳ ಸಿದ್ಧಾಂತಗಳ ಸಾರ. ಈ ಪ್ರಪಂಚದಲ್ಲಿ ಶುಕಶಾಸ್ತ್ರಕ್ಕಿಂತಲೂ ಪವಿತ್ರವಾದ ಬೇರಾವ ವಸ್ತುವೂ ಇಲ್ಲ. ಆದುದರಿಂದ ತಾವು ಪರಮಾನಂದದ ಪ್ರಾಪ್ತಿಗೋಸ್ಕರ ದ್ವಾದಶಸ್ಕಂಧರೂಪದಲ್ಲಿರುವ ಇದರ ರಸವನ್ನು ಸವಿಯಿರಿ. ಯಾವ ಮನುಷ್ಯನು ನಿಯಮಪೂರ್ವಕವಾಗಿ ಈ ಕಥೆಯನ್ನು ಭಕ್ತಿಭಾವದಿಂದ ಶ್ರವಣಮಾಡುತ್ತಾನೆಯೋ ಮತ್ತು ಯಾವನು ಶುದ್ಧವಾದ ಅಂತಃಕರಣವುಳ್ಳ ಭಗವದ್ಭಕ್ತರ ಮುಂದುಗಡೆ ಇದನ್ನು

ಪ್ರವಚನಮಾಡುತ್ತಾನೆಯೋ–ಅವರಿಬ್ಬರೂ ಶಾಸ್ತ್ರವಿಧಿಯನ್ನು ಪೂರ್ಣವಾಗಿ ಪಾಲಿಸುವರಾದ್ದರಿಂದ ಇದರ ಪಾರಮಾರ್ಥಿಕವಾದ ಪಾಲನ್ನು ಪಡೆಯುತ್ತಾರೆ. ಅವರಿಗೆ ಮೂರು ಲೋಕಗಳಲ್ಲಿ ಅಸಾಧ್ಯವಾಗಿ ಯಾವುದೂ ಉಳಿಯುವುದಿಲ್ಲ."

ಪದ್ಮಪುರಾಣದ ಉತ್ತರಖಂಡದಲ್ಲಿ ಬರುವ ಶ್ರೀಮದ್ಭಾಗವತ ಮಾಹಾತ್ಮ್ಯದಲ್ಲಿ ಶ್ರವಣವಿಧಿ ಎಂಬ ೬ನೆಯ ಅಧ್ಯಾಯವು ಮುಗಿಯಿತು.

---

## ಶ್ರೀಮದ್ಭಾಗವತಮಾಹಾತ್ಮ್ಯ–೭

( ಶ್ರೀಭಗವಂತನು ಬ್ರಹ್ಮದೇವರಿಗೆ ತನ್ನ ಮುಖಾರವಿಂದದಿಂದಲೇ ಅನುಗ್ರಹಮಾಡಿದ್ದು )

**ಶ್ರೀಮದ್ಭಾಗವತಂ ನಾಮ ಪುರಾಣಂ ಲೋಕವಿಶ್ರುತಮ್ ।**
**ಶೃಣುಯಾಚ್ಛ್ರದ್ಧಯಾ ಯುಕ್ತೋ ಮಮ ಸನ್ತೋಷಕಾರಣಮ್ ॥೧॥**

ಲೋಕವಿಖ್ಯಾತವಾಗಿರುವ ಶ್ರೀಮದ್ಭಾಗವತವೆಂಬ ಪುರಾಣರತ್ನವನ್ನು ಶ್ರದ್ಧೆಯಿಂದ ಶ್ರವಣಮಾಡಬೇಕು. ಇದು ನನಗೆ ಸಂತೋಷವನ್ನುಂಟು ಮಾಡುತ್ತದೆ.

**ನಿತ್ಯಂ ಭಾಗವತಂ ಯಸ್ತು ಪುರಾಣಂ ಪಠತೇ ನರಃ ।**
**ಪ್ರತ್ಯಕ್ಷರಂ ಭವೇತ್ತಸ್ಯ ಕಪಿಲಾದಾನಜಂ ಫಲಮ್ ॥೨॥**

ಪ್ರತಿದಿನವೂ ಶ್ರೀಮದ್ಭಾಗವತವನ್ನು ಪಾರಾಯಣಮಾಡುವವನಿಗೆ ಒಂದೊಂದು ಅಕ್ಷರದ ಪಠನಕ್ಕೂ ಒಂದೊಂದು ಕಪಿಲಾಗೋವನ್ನು ದಾನ ಮಾಡಿದ ಪುಣ್ಯಫಲ ದೊರೆಯುವುದು.

**ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।**
**ಪಠತೇ ಶೃಣುಯಾದ್ಯಸ್ತು ಗೋಸಹಸ್ರಫಲಂ ಲಭೇತ್ ॥೩॥**

ಪ್ರತಿದಿನವೂ ಶ್ರೀಮದ್ಭಾಗವತದಿಂದ ಅರ್ಧಶ್ಲೋಕವನ್ನಾಗಲೀ ಶ್ಲೋಕದ ಒಂದು ಪಾದವನ್ನಾಗಲೀ ಓದುವವನು ಅಥವಾ ಕೇಳುವವನು ಸಾವಿರ ಗೋವುಗಳನ್ನು ದಾನಮಾಡಿದ ಪುಣ್ಯಕ್ಕೆ ಭಾಗಿಯಾಗುವನು.

**ಯಃ ಪಠೇತ್ಪ್ರಯತೋ ನಿತ್ಯಂ ಶ್ಲೋಕಂ ಭಾಗವತಂ ಸುತ ।**
**ಅಷ್ಟಾದಶಪುರಾಣಾನಾಂ ಫಲಮಾಪ್ನೋತಿ ಮಾನವಃ ॥೪॥**

ಎಲೈ ಪುತ್ರನೇ! ಪ್ರತಿನಿತ್ಯವೂ ಸಂಯಮದಿಂದ ಕೂಡಿ ಶ್ರೀಮದ್ಭಾಗವತವನ್ನು ಯಾವನು ಪಾರಾಯಣಮಾಡುತ್ತಾನೆಯೋ–ಅವನಿಗೆ ಹದಿನೆಂಟು ಪುರಾಣಗಳನ್ನೂ ಪಾರಾಯಣಮಾಡಿದ ಫಲವು ಸಿಕ್ಕುವುದು.

**ನಿತ್ಯಂ ಮಮ ಕಥಾ ಯತ್ರ ತತ್ರ ತಿಷ್ಠನ್ತಿ ವೈಷ್ಣವಾಃ ।**
**ಕಲಿಬಾಹ್ಯಾ ನರಾಸ್ತೇ ವೈ ಯೇಽರ್ಚಯನ್ತಿ ಸದಾ ಮಮ ॥೫॥**

ನಿತ್ಯವೂ ನನ್ನ ಕಥೆಯು ಎಲ್ಲಿ ನಡೆಯುತ್ತದೆಯೋ ಅಲ್ಲಿ ಪ್ರಹ್ಲಾದನೇ ಮುಂತಾದ ನನ್ನ ಭಕ್ತಪಾರ್ಷದರು ಉಪಸ್ಥಿತರಾಗಿರುತ್ತಾರೆ. ಈ ಭಾಗವತವನ್ನು ಪೂಜೆಮಾಡುವ ಮನುಷ್ಯರು ಕಲಿಯ ಅಧಿಕಾರಕ್ಕೆ ಒಳಪಡುವುದಿಲ್ಲ.

**ವೈಷ್ಣವಾನಾಂ ತು ಶಾಸ್ತ್ರಾಣಿ ಯೇಽರ್ಚಯನ್ತಿ ಗೃಹೇ ನರಾಃ ।**
**ಸರ್ವಪಾಪವಿನಿರ್ಮುಕ್ತಾ ಭವನ್ತಿ ಸುರವನ್ದಿತಾಃ ॥೬॥**

ಮಹಾವಿಷ್ಣುವನ್ನು ಕುರಿತ ಶಾಸ್ತ್ರಗಳನ್ನು ಮನೆಯಲ್ಲಿ ಪೂಜೆಮಾಡುವ ಮನುಷ್ಯರು ಸಮಸ್ತಪಾಪಗಳಿಂದಲೂ ಬಿಡುಗಡೆಹೊಂದಿ ದೇವತೆಗಳಿಂದಲೂ ವಂದಿತರಾಗುತ್ತಾರೆ.

**ಯೇಽರ್ಚಯನ್ತಿ ಗೃಹೇ ನಿತ್ಯಂ ಶಾಸ್ತ್ರಂ ಭಾಗವತಂ ಕಲೌ ।**
**ಆಸ್ಫೋಟಯನ್ತಿ ವಲ್ಗನ್ತಿ ತೇಷಾಂ ಪ್ರೀತೋ ಭವಾಮ್ಯಹಮ್ ॥೭॥**

ಕಲಿಯುಗದಲ್ಲಿ ಯಾರು ತಮ್ಮ ಮನೆಯಲ್ಲಿ ಶ್ರೀಮದ್ಭಾಗವತಶಾಸ್ತ್ರವನ್ನು ಪ್ರತಿನಿತ್ಯವೂ ಪೂಜೆಮಾಡುತ್ತಾ ಕಲಿಪುರುಷನಿಗೆ ಹೆದರದೇ ಭುಜ ತಟ್ಟುತ್ತಾ ಕುಣಿದು ಕುಪ್ಪಳಿಸುತ್ತಾರೆಯೋ–ಅವರ ವಿಷಯದಲ್ಲಿ ನಾನು ಪ್ರಸನ್ನನಾಗಿರುತ್ತೇನೆ.

**ಯಾವದ್ದಿನಾನಿ ಹೇ ಪುತ್ರ ಶಾಸ್ತ್ರಂ ಭಾಗವತಂ ಗೃಹೇ ।**
**ತಾವತ್ಪಿಬನ್ತಿ ಪಿತರಃ ಕ್ಷೀರಂ ಸರ್ಪಿರ್ಮಧೂದಕಮ್ ॥೮॥**

ಪುತ್ರ! ಮನುಷ್ಯನು ಎಷ್ಟು ದಿನಗಳ ಕಾಲ ತನ್ನ ಗೃಹದಲ್ಲಿ ಶ್ರೀಮದ್ಭಾಗವತವನ್ನು ಇಟ್ಟುಕೊಂಡಿರುತ್ತಾನೋ–ಅಲ್ಲಿಯವರೆಗೂ ಅವನ ಪಿತೃಗಳು ಹಾಲು, ತುಪ್ಪ, ಜೇನು ಮತ್ತು ಸಿಹಿನೀರನ್ನು ಕುಡಿಯುತ್ತಿರುವರು.

**ಯಚ್ಛನ್ತಿ ವೈಷ್ಣವೇ ಭಕ್ತ್ಯಾ ಶಾಸ್ತ್ರಂ ಭಾಗವತಂ ಹಿ ಯೇ ।**
**ಕಲ್ಪಕೋಟಿಸಹಸ್ರಾಣಿ ಮಮ ಲೋಕೇ ವಸನ್ತಿ ತೇ ॥೯॥**

ವಿಷ್ಣುಭಕ್ತನಿಗೆ ಭಕ್ತಿಪೂರ್ವಕವಾಗಿ ಶ್ರೀಮದ್ಭಾಗವತವನ್ನು ಸಮರ್ಪಿಸುವ ಸುಕೃತಿಗಳು ಸಾವಿರಾರು ಕೋಟಿ ಕಲ್ಪಕಾಲಗಳವರೆಗೆ ವೈಕುಂಠಧಾಮದಲ್ಲಿ ವಾಸಮಾಡುವರು.

**ಯೇಽರ್ಚಯನ್ತಿ ಸದಾ ಗೇಹೇ ಶಾಸ್ತ್ರಂ ಭಾಗವತಂ ನರಾಃ ।**
**ಪ್ರೀಣಿತಾಸ್ತೈಶ್ಚ ವಿಬುಧಾ ಯಾವದಾಭೂತಸಂಪ್ಲವಮ್ ॥೧೦॥**

ಯಾರು ಸದಾ ತಮ್ಮ ಮನೆಯಲ್ಲಿ ಶ್ರೀಮದ್ಭಾಗವತಶಾಸ್ತ್ರವನ್ನು ಪೂಜಿಸುತ್ತಾರೋ–ಅವರು ಕಲ್ಪಕಾಲದವರೆಗೆ ಸಮಸ್ತದೇವತೆಗಳನ್ನೂ ತೃಪ್ತಿಪಡಿಸಿದಂತೆಯೇ ಸರಿ.

**ಶ್ಲೋಕಾರ್ಧಂ ಶ್ಲೋಕಪಾದಂ ವಾ ವರಂ ಭಾಗವತಂ ಗೃಹೇ ।**
**ಶತಶೋಽಥ ಸಹಸ್ರೈಶ್ಚ ಕಿಮನ್ಯೈಃ ಶಾಸ್ತ್ರಸಂಗ್ರಹೈಃ ॥೧೧॥**

ಮನೆಯಲ್ಲಿ ನೂರಾರು ಸಾವಿರಾರು ಇತರ ಶಾಸ್ತ್ರಸಂಗ್ರಹಗಳನ್ನು ಇಟ್ಟುಕೊಂಡು ಏನು ಫಲ? ಶ್ರೀಮದ್ಭಾಗವತದ ಒಂದು ಶ್ಲೋಕದ ಅರ್ಧ ಭಾಗವನ್ನಾಗಲೀ ಅಥವಾ ಒಂದು ಭಾಗವನ್ನಾಗಲೀ ಇಟ್ಟುಕೊಂಡರೂ ಅದಕ್ಕಿಂತಲೂ ಉತ್ತಮವೇ.

**ನ ಯಸ್ಯ ತಿಷ್ಠತೇ ಶಾಸ್ತ್ರಂ ಗೃಹೇ ಭಾಗವತಂ ಕಲೌ ।**
**ನ ತಸ್ಯ ಪುನರಾವೃತ್ತಿಃ ಯಾಮ್ಯಪಾಶಾತ್ಕದಾಚನ ॥೧೨॥**

ಕಲಿಯುಗದಲ್ಲಿ ಯಾವ ಮನುಷ್ಯನ ಮನೆಯಲ್ಲಿ ಭಾಗವತಶಾಸ್ತ್ರ ಇರುವುದಿಲ್ಲವೋ–ಅವನಿಗೆ ಎಂದಿಗೂ ಯಮನ ಪಾಶದಿಂದ ಬಿಡುಗಡೆ ಆಗುವುದಿಲ್ಲ.

**ಕಥಂ ಸ ವೈಷ್ಣವೋ ಜ್ಞೇಯಃ ಶಾಸ್ತ್ರಂ ಭಾಗವತಂ ಕಲೌ ।**
**ಗೃಹೇ ನ ತಿಷ್ಠತೇ ಯಸ್ಯ ಶ್ವಪಚಾದಧಿಕೋ ಹಿ ಸಃ ॥೧೩॥**

ಈ ಕಲಿಯುಗದಲ್ಲಿ ಯಾವನ ಗೃಹದಲ್ಲಿ ಶ್ರೀಮದ್ಭಾಗವತಶಾಸ್ತ್ರವಿರುವುದಿಲ್ಲವೋ ಅವನನ್ನು ವಿಷ್ಣುಭಕ್ತನೆಂದು ಹೇಗೆ ಕರೆಯಲಾದೀತು? ಅವನು ಶ್ವಪಚನಿಗಿಂತಲೂ ತುಂಬಾ ಕೆಳಮಟ್ಟದವನೇ.

**ಸರ್ವಸ್ವೇನಾಪಿ ಲೋಕೇಶ ಕರ್ತವ್ಯಃ ಶಾಸ್ತ್ರಸಂಗ್ರಹಃ ।**
**ವೈಷ್ಣವಸ್ತು ಸದಾ ಭಕ್ತ್ಯಾ ತುಷ್ಟ್ಯರ್ಥಂ ಮಮ ಪುತ್ರಕ ॥೧೪॥**

ನನ್ನ ಪ್ರಿಯಪುತ್ರನೇ! ಲೋಕೇಶ್ವರನಾದ ಬ್ರಹ್ಮನೇ! ಮನುಷ್ಯನು ತನ್ನ ಸರ್ವಸ್ವವನ್ನಾದರೂ ಕೊಟ್ಟು ಭಕ್ತಿಪೂರ್ವಕವಾಗಿ ನನ್ನನ್ನು ಸಂತೋಷಪಡಿಸಲು ಈ ವಿಷ್ಣುಪರವಾದ ಶಾಸ್ತ್ರವನ್ನು ಸಂಗ್ರಹಿಸಿಟ್ಟುಕೊಳ್ಳಬೇಕು.

**ಯತ್ರ ಯತ್ರ ಭವೇತ್ಪುಣ್ಯಂ ಶಾಸ್ತ್ರಂ ಭಾಗವತಂ ಕಲೌ ।**
**ತತ್ರ ತತ್ರ ಸದೈವಾಹಂ ಭವಾಮಿ ತ್ರಿದಶೈಃ ಸಹ ॥೧೫॥**

ಕಲಿಯುಗದಲ್ಲಿ ಈ ಪವಿತ್ರವಾದ ಭಾಗವತಶಾಸ್ತ್ರ ಎಲ್ಲೆಲ್ಲಿ ಇರುವುದೋ ಅಲ್ಲೆಲ್ಲಾ ನಾನು ದೇವತೆಗಳ ಸಹಿತನಾಗಿ ಸದಾ ಇರುವೆನು.

**ತತ್ರ ಸರ್ವಾಣಿ ತೀರ್ಥಾಣಿ ನದೀನದಸರಾಂಸಿ ಚ ।**
**ಯಜ್ಞಾಃ ಸಪ್ತಪುರೀ ನಿತ್ಯಂ ಪುಣ್ಯಾಃ ಸರ್ವೇ ಶಿಲೋಚ್ಚಯಾಃ ॥೧೬॥**

ಆ ಜಾಗದಲ್ಲಿ ನದ-ನದೀ ಮತ್ತು ಸರೋವರರೂಪವಾದ ಸಮಸ್ತ ತೀರ್ಥಗಳೂ ಮತ್ತು ಸಮಸ್ತಯಜ್ಞಗಳೂ, ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಕಂಚೀ, ಅವಂತೀ, ದ್ವಾರಾವತಿಗಳೆಂಬ ಸಪ್ತಮೋಕ್ಷಪ್ರದ ಪುರಿಗಳೂ ಮತ್ತು ಸಮಸ್ತಪವಿತ್ರಪರ್ವತಗಳೂ ಸದಾ ವಾಸವಾಗಿರುತ್ತವೆ.

**ಶ್ರೋತವ್ಯಂ ಮಮ ಶಾಸ್ತ್ರಂ ಹಿ ಯಶೋಧರ್ಮಜಯಾರ್ಥಿನಾ ।**
**ಪಾಪಕ್ಷಯಾರ್ಥಂ ಲೋಕೇಶ ಮೋಕ್ಷಾರ್ಥಂ ಧರ್ಮಬುದ್ಧಿನಾ ॥೧೭॥**

ಓ ಲೋಕೇಶ್ವರನೇ! ಯಶಸ್ಸು, ಧರ್ಮ ಮತ್ತು ವಿಜಯಗಳನ್ನು ಬಯಸುವವನು ಮತ್ತು ಧರ್ಮಬುದ್ಧಿಯುಳ್ಳವನು ಪಾಪಕ್ಷಯಕ್ಕಾಗಿ ಮತ್ತು ಮೋಕ್ಷಪ್ರಾಪ್ತಿಗಾಗಿ ಈ ನನ್ನ ಶಾಸ್ತ್ರವನ್ನು ಅವಶ್ಯವಾಗಿ ಕೇಳಬೇಕು.

**ಶ್ರೀಮದ್ಭಾಗವತಂ ಪುಣ್ಯಮಾಯುರಾರೋಗ್ಯವರ್ಧನಮ್ ।**
**ಪಠನಾತ್ ಶ್ರವಣಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥೧೮॥**

ಈ ಪವಿತ್ರವಾದ ಪುರಾಣವು ಆಯುಸ್ಸು-ಆರೋಗ್ಯಗಳನ್ನು ವೃದ್ಧಿ

ಪಡಿಸುವುದು. ಇದನ್ನು ಪಾರಾಯಣಮಾಡಿದರೆ ಅಥವಾ ಶ್ರವಣಮಾಡಿದರೂ ಸಾಕು ; ಸಮಸ್ತಪಾಪಗಳಿಂದಲೂ ಬಿಡುಗಡೆಯಾಗುತ್ತದೆ.

**ನ ಶೃಣ್ವನ್ತಿ ನ ಹೃಷ್ಯನ್ತಿ ಶ್ರೀಮದ್ಭಾಗವತಂ ಪರಮ್ ।**
**ಸತ್ಯಂ ಸತ್ಯಂ ಹಿ ಲೋಕೇಶ ತೇಷಾಂ ಸ್ವಾಮೀ ಸದಾ ಯಮಃ ॥೧೯॥**

ಓ ಲೋಕೇಶನೇ! ಈ ಪರಮೋತ್ತಮವಾದ ಶ್ರೀಮದ್ಭಾಗವತವನ್ನು ಯಾರು ಕೇಳುವುದಿಲ್ಲವೋ, ಕೇಳಿ ಸಂತೋಷಪಡುವುದಿಲ್ಲವೋ–ಅವರಿಗೆ ಸದಾ ಯಮರಾಜನೇ ಸ್ವಾಮಿಯಾಗಿರುವನು. ಅವರು ಸದಾ ಯಮರಾಜನ ವಶದಲ್ಲೇ ಇರುವವರು. ನಾನು ಹೇಳುತ್ತಿರುವ ಮಾತು ಸತ್ಯವಪ್ಪಾ ಸತ್ಯ.

**ನ ಗಚ್ಛತಿ ಯದಾ ಮರ್ತ್ಯಃ ಶ್ರೋತುಂ ಭಾಗವತಂ ಸುತ ।**
**ಏಕಾದಶ್ಯಾಂ ವಿಶೇಷೇಣ ನಾಸ್ತಿ ಪಾಪತರಸ್ತತಃ ॥೨೦॥**

ಪುತ್ರನೇ! ಯಾವ ಮನುಷ್ಯನು ಎಲ್ಲ ದಿನಗಳಲ್ಲಿಯೂ ಮತ್ತು ವಿಶೇಷವಾಗಿ ಏಕಾದಶೀದಿನದಲ್ಲಿ ಶ್ರೀಮದ್ಭಾಗವತವನ್ನು ಶ್ರವಣಮಾಡಲು ಹೋಗುವುದಿಲ್ಲವೋ–ಅವನಿಗಿಂತಲೂ ದೊಡ್ಡ ಪಾಪಿಷ್ಠ ಬೇರಾವನೂ ಇಲ್ಲವು.

**ಶ್ಲೋಕಂ ಭಾಗವತಂ ಚಾಪಿ ಶ್ಲೋಕಾರ್ಧಂ ಪಾದಮೇವ ವಾ ।**
**ಲಿಖಿತಂ ತಿಷ್ಠತೇ ಯಸ್ಯ ಗೃಹೇ ತಸ್ಯ ವಸಾಮ್ಯಹಮ್ ॥೨೧॥**

ಯಾವನ ಮನೆಯಲ್ಲಿ ಶ್ರೀಮದ್ಭಾಗವತದ ಒಂದೇ ಒಂದು ಶ್ಲೋಕವಾಗಲೀ, ಶ್ಲೋಕದ ಅರ್ಧಭಾಗವಾಗಲೀ, ಶ್ಲೋಕದ ಒಂದು ಪಾದವೇ ಆಗಲೀ ಬರೆಯಲ್ಪಟ್ಟಿರುತ್ತದೆಯೋ ಆತನ ಮನೆಯಲ್ಲಿ ನಾನು ಸದಾ ವಾಸಮಾಡುತ್ತೇನೆ.

**ಸರ್ವಾಶ್ರಮಾಭಿಗಮನಂ ಸರ್ವತೀರ್ಥಾವಗಾಹನಮ್ ।**
**ನ ತಥಾ ಪಾವನಂ ನೃಣಾಂ ಶ್ರೀಮದ್ಭಾಗವತಂ ಯಥಾ ॥೨೨॥**

ಮನುಷ್ಯರಿಗೆ ಎಲ್ಲ ಪುಣ್ಯಾಶ್ರಮಗಳಿಗೆ ಯಾತ್ರೆಮಾಡುವುದಾಗಲೀ ಅಥವಾ ಸಮಸ್ತತೀರ್ಥಗಳಲ್ಲಿ ಸ್ನಾನಮಾಡುವುದಾಗಲೀ ಯಾವುದೂ ಶ್ರೀಮದ್ಭಾಗವತದಷ್ಟು ಪವಿತ್ರಕರವಲ್ಲ.

**ಯತ್ರ ಯತ್ರ ಚತುರ್ವಕ್ತ್ರ ಶ್ರೀಮದ್ಭಾಗವತಂ ಭವೇತ್ ।**
**ಗಚ್ಛಾಮಿ ತತ್ರ ತತ್ರಾಹಂ ಗೌರ್ಯಥಾ ಸುತವತ್ಸಲಾ ॥೨೩॥**

ಕರುವಿನಲ್ಲಿ ವಾತ್ಸಲ್ಯವುಳ್ಳ ಹಸುವು ಅದು ಎಲ್ಲಿಗೇ ಹೋದರೂ ಅಲ್ಲಿಗೆಲ್ಲಾ ಹೋಗುವುದಿಲ್ಲವೇ? ಹಾಗೆಯೇ ನಾನು ಶ್ರೀಮದ್ಭಾಗವತ ಕಥೆಯು ಎಲ್ಲಿ ನಡೆಯುತ್ತದೆಯೋ ಅಲ್ಲಿಗೆಲ್ಲಾ ಹೋಗುವೆನಪ್ಪಾ, ಚತುರ್ಮುಖ!

**ಮತ್ಕಥಾವಾಚಕಂ ನಿತ್ಯಂ ಮತ್ಕಥಾಶ್ರವಣೇ ರತಮ್ ।**
**ಮತ್ಕಥಾಪ್ರೀತಮನಸಂ ನಾಹಂ ತ್ಯಕ್ಷ್ಯಾಮಿ ತಂ ನರಮ್ ॥೨೪॥**

ಯಾವನು ನನ್ನ ಕಥೆಯನ್ನು ಹೇಳುತ್ತಾನೆಯೋ, ಯಾವನು ಅದನ್ನು ಕೇಳುವುದರಲ್ಲೇ ಸದಾ ನಿರತನಾಗಿರುತ್ತಾನೆಯೋ ಮತ್ತು ನನ್ನ ಕಥೆಯಿಂದ ಯಾವನು ಮನಸ್ಸಿನಲ್ಲಿ ಸಂತೋಷಪಟ್ಟುಕೊಳ್ಳುತ್ತಾನೆಯೋ–ಅಂತಹ ಮನುಷ್ಯನನ್ನು ನಾನು ಎಂದಿಗೂ ತ್ಯಜಿಸುವುದಿಲ್ಲ.

**ಶ್ರೀಮದ್ಭಾಗವತಂ ಪುಣ್ಯಂ ದೃಷ್ಟ್ವಾ ನೋತ್ತಿಷ್ಠತೇ ಹಿ ಯಃ ।**
**ಸಾಂವತ್ಸರಂ ತಸ್ಯ ಪುಣ್ಯಂ ವಿಲಯಂ ಯಾತಿ ಪುತ್ರಕ ॥೨೫॥**

ಪ್ರಿಯಪುತ್ರನೇ! ಪರಮಪುಣ್ಯಕರವಾದ ಶ್ರೀಮದ್ಭಾಗವತವನ್ನು ನೋಡಿದಾಗ ಯಾವನು ಭಕ್ತಿ-ಗೌರವಗಳಿಂದ ತನ್ನ ಆಸನದಿಂದ ಎದ್ದು ನಿಂತುಕೊಳ್ಳುವುದಿಲ್ಲವೋ–ಅವನು ಒಂದು ವರ್ಷಪೂರ್ತಿಮಾಡಿದ ಪುಣ್ಯ ಫಲವನ್ನು ಕಳೆದುಕೊಳ್ಳುವನು.

**ಶ್ರೀಮದ್ಭಾಗವತಂ ದೃಷ್ಟ್ವಾ ಪ್ರತ್ಯುತ್ಥಾನಾಭಿವಾದನೈಃ ।**
**ಸಮ್ಮಾನಯೇತ ತಂ ದೃಷ್ಟ್ವಾ ಭವೇತ್ ಪ್ರೀತಿರ್ಮಮಾತುಲಾ ॥**

ಶ್ರೀಮದ್ಭಾಗವತವನ್ನು ಕಂಡೊಡನೆಯೇ ಯಾವನು ಎದುರುಗೊಂಡು ಎದ್ದುನಿಂತು ನಮಸ್ಕಾರಗಳಿಂದ ಅದನ್ನು ಗೌರವಿಸುತ್ತಾನೆಯೋ–ಅಂತಹವನನ್ನು ಕಂಡರೆ ನನಗೆ ಎಣೆಯಿಲ್ಲದ ಪ್ರಸನ್ನತೆ ಉಂಟಾಗುತ್ತದೆ.

**ದೃಷ್ಟ್ವಾ ಭಾಗವತಂ ದೂರಾತ್ಪ್ರಕ್ರಮೇತ್ಸಮ್ಮುಖಂ ಹಿ ಯಃ ।**
**ಪದೇ ಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯಸಂಶಯಮ್ ॥೨೭॥**

ಶ್ರೀಮದ್ಭಾಗವತವನ್ನು ದೂರದಿಂದ ಕಂಡೊಡನೆಯೇ ಯಾವನು ನಗುಮುಖದಿಂದ ಅದರ ಹತ್ತಿರ ಹೋಗುವನೋ–ಅವನಿಡುವ ಪ್ರತಿ ಹೆಜ್ಜೆಗೂ ಅಶ್ವಮೇಧಯಜ್ಞಮಾಡಿದ ಫಲವು ಲಭಿಸುವುದು. ಇದು ನಿಶ್ಚಿತ; ಸಂದೇಹಬೇಡ.

**ಉತ್ಥಾಯ ಪ್ರಣಮೇದ್ಯಸ್ತು ಶ್ರೀಮದ್ಭಾಗವತಂ ನರಃ ।**
**ಧನಪುತ್ರಾಂಸ್ತಥಾ ದಾರಾನ್ಭಕ್ತಿಂ ಚ ಪ್ರದದಾಮ್ಯಹಮ್ ॥೨೮॥**

ಎದ್ದುನಿಂತು ಶ್ರೀಮದ್ಭಾಗವತಕ್ಕೆ ನಮಸ್ಕಾರಮಾಡುವ ಮನುಷ್ಯನಿಗೆ ನಾನು ಹಣ-ಕಾಸು, ಮಡದಿ-ಮಕ್ಕಳನ್ನೂ ಮತ್ತು ಭಕ್ತಿಯನ್ನೂ ಅನುಗ್ರಹಿಸುವೆನು.

**ಮಹಾರಾಜೋಪಚಾರೈಸ್ತು ಶ್ರೀಮದ್ಭಾಗವತಂ ಸುತ ।**
**ಶೃಣ್ವನ್ತಿ ಯೇ ನರಾ ಭಕ್ತ್ಯಾ ತೇಷಾಂ ವಶ್ಯೋ ಭವಾಮ್ಯಹಮ್ ॥**

ಎಲೈ ಪುತ್ರನೇ! ಯಾವ ಮನುಷ್ಯರು ಮಹಾರಾಜರಿಗೆ ಉಚಿತವಾದ ಉಪಚಾರಗಳೊಡನೆ ಭಕ್ತಿಯಿಂದ ಕೂಡಿ ಶ್ರೀಮದ್ಭಾಗವತವನ್ನು ಕೇಳುತ್ತಾರೋ ಅವರಿಗೆ ನಾನು ವಶನಾಗಿ ಬಿಡುವೆನಪ್ಪಾ.

**ಮಮೋತ್ಸವೇಷು ಸರ್ವೇಷು ಶ್ರೀಮದ್ಭಾಗವತಂ ಪರಮ್ ।**
**ಶೃಣ್ವನ್ತಿ ಯೇ ನರಾ ಭಕ್ತ್ಯಾ ಮಮ ಪ್ರೀತ್ಯೈ ಚ ಸುವ್ರತ ॥೩೦॥**

**ವಸ್ತ್ರಾಲಂಕರಣೈಃ ಪುಷ್ಪೈಃ ಧೂಪದೀಪೋಪಹಾರಕೈಃ ।**
**ವಶೀಕೃತೋ ಹ್ಯಹಂ ತೈಶ್ಚ ಸತ್‌ಸ್ತ್ರಿಯಾ ಸತ್ಪತಿರ್ಯಥಾ ॥೩೧॥**

ಎಲೈ ಉತ್ತಮವ್ರತಿಯೇ! ಯಾರು ನನ್ನ ಎಲ್ಲ ಉತ್ಸವಗಳಲ್ಲೂ ನನ್ನ ಪ್ರೀತಿಗೋಸ್ಕರ ವಸ್ತ್ರ, ಅಲಂಕಾರ, ಪುಷ್ಪ, ಧೂಪ, ದೀಪ–ಇತ್ಯಾದಿ ಉಪಹಾರಗಳನ್ನು ಸಮರ್ಪಿಸುತ್ತಾ ಪರಮೋತ್ತಮವಾದ ಶ್ರೀಮದ್ಭಾಗವತವನ್ನು ಭಕ್ತಿಪೂರ್ವಕವಾಗಿ ಶ್ರವಣಮಾಡುತ್ತಾರೆಯೋ–ಅವರು ಸಾಧ್ವಿಯಾದ ಹೆಂಗಸು ತನ್ನ ಸಾಧುವಾದ ಪತಿಯನ್ನು ವಶಪಡಿಸಿಕೊಳ್ಳುವಂತೆ ನನ್ನನ್ನು ವಶಪಡಿಸಿಕೊಂಡುಬಿಡುತ್ತಾರೆ."

ಶ್ರೀಮದ್ಭಾಗವತಮಾಹಾತ್ಮ್ಯಕ್ಕೆ ಮಂಗಳ.

ಶ್ರೀಸದ್ಗುರವೇ ನಮಃ  ಓಂ ನಮೋ ಭಗವತೇ ವಾಸುದೇವಾಯ

# ಶ್ರೀಮದ್ಭಾಗವತಪೂಜಾವಿಧಿ-ವಿನಿಯೋಗ, ನ್ಯಾಸ, ಧ್ಯಾನ

ಪ್ರಾತಃಕಾಲ ಸ್ನಾನ-ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಶ್ರೀಭಗವಂತನಿಗೆ ನಮಸ್ಕಾರಮಾಡಿ "ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ" ಇತ್ಯಾದಿ ಶಾಂತಿಮಂತ್ರಗಳನ್ನು ಪಠಿಸಬೇಕು. ಅನಂತರ ಶ್ರೀಕೃಷ್ಣಪರಮಾತ್ಮನಿಗೂ, ಶ್ರೀವೇದವ್ಯಾಸರಿಗೂ, ಶ್ರೀಶುಕ ಮಹರ್ಷಿಗಳಿಗೂ, ಶ್ರೀಮದ್ಭಾಗವತಗ್ರಂಥಕ್ಕೂ ಧ್ಯಾನ-ಆವಾಹನಾದಿ ಷೋಡಶೋಪಚಾರಪೂಜೆಯನ್ನು ಸಮರ್ಪಿಸಬೇಕು. ಶ್ರೀಪುರುಷಸೂಕ್ತದ ಋಕ್ಕುಗಳಿಂದ ಆ ಪೂಜೆಯನ್ನು ಸಲ್ಲಿಸಬೇಕು.

ಅದಕ್ಕಾಗಿ ಪವಿತ್ರಪಾಣಿಯಾಗಿ ಪ್ರಾಣಾಯಾಮಮಾಡಿ ಸಂಕಲ್ಪವನ್ನು ಹೇಳಬೇಕು. "ಹರಿಃ ಓಂ ತತ್ಸತ್... ಆದ್ಯ ಬ್ರಹ್ಮಣಃ ದ್ವಿತೀಯ ಪರಾರ್ಧೇ.... ಸಂವತ್ಸರೇ... ಆಯನೇ... ಋತೌ... ಮಾಸೇ.. ಪಕ್ಷೇ... ಶುಭತಿಥೌ... ವಾಸರಯುಕ್ತಾಯಾಂ... ನಕ್ಷತ್ರಯುಕ್ತಾಯಾಂ ಶುಭತಿಥೌ... ಗೋತ್ರಸ್ಯ... ಶರ್ಮಣಃ / ವರ್ಮಣಃ/ ಗುಪ್ತಸ್ಯ / ಮಮ ಸಕುಟುಂಬಸ್ಯ ಸಪರಿವಾರಸ್ಯ ಶ್ರೀಗೋವರ್ಧನಧರಣ ಚರಣಾರವಿಂದಪ್ರಸಾದಾತ್ ಸರ್ವಸಮೃದ್ಧಿಪ್ರಾಪ್ತ್ಯರ್ಥಂ ಶ್ರೀಭಗವ ದನುಗ್ರಹಪೂರ್ವಕ ಭಗವದೀಯಪ್ರೇಮೋಪಲಬ್ಧಯೇ ಚ ಶ್ರೀಭಗವನ್ನಾಮಾತ್ಮಕಭಗವತ್ಸ್ವರೂಪಶ್ರೀಭಾಗವತಸ್ಯ ಪಾಠೇ ಅಧಿಕಾರಸಿದ್ಧ್ಯರ್ಥಂ ಶ್ರೀಕೃಷ್ಣಪರಮಾತ್ಮನಃ ಶ್ರೀವ್ಯಾಸಮಹರ್ಷೇಃ ಶ್ರೀಶುಕಮಹರ್ಷೇಃ ಶ್ರೀಭಗವನ್ನಾಮಾತ್ಮಕಸ್ವರೂಪಿ ಶ್ರೀಮದ್ಭಾಗವತಸ್ಯ ಪುರುಷಸೂಕ್ತವಿಧಾನೇನ ಪೂಜಾಂ ಕರಿಷ್ಯೇ" ಇತ್ಯಾದಿಯಾಗಿ ಸಂಕಲ್ಪಮಾಡುವುದು.

ಓಂ ತದಸ್ತು ಮಿತ್ರಾ ವರುಣಾ ತದಗ್ನೇ
ಶಂಯೋರಸ್ಮಭ್ಯಮಿದಮಸ್ತು ಶಸ್ತಮ್ ।

**ಅಶೀಮಹಿ ಗಾಥಮುತ ಪ್ರತಿಷ್ಠಾಂ**
**ನಮೋ ದಿವೇ ಬೃಹತೇ ಸಾಧನಾಯ ॥**

ಎಂಬ ಮಂತ್ರದಿಂದ ಪೂಜ್ಯವಸ್ತುವನ್ನು ದಿವ್ಯಪೀಠದ ಮೇಲೆ ಪ್ರತಿಷ್ಠೆ ಮಾಡುವುದು. **"ಓಂ ಸಹಸ್ರಶೀರ್ಷಾ ಪುರುಷಃ... ದ್ದಶಾಙ್ಗುಲಮ್" ಶ್ರೀಕೃಷ್ಣಪರಮಾತ್ಮನೇ ಶ್ರೀವೇದವ್ಯಾಸಾಯ ಶ್ರೀಶುಕಮಹರ್ಷಯೇ ಶ್ರೀಭಗವನ್ನಾಮಾತ್ಮಕಸ್ವರೂಪಿಣೇ ಶ್ರೀಮದ್ಭಾಗವತಾಯ ನಮಃ ಆವಾಹಯಾಮಿ"** ಇತ್ಯಾದಿ ವಿಧಾನದಿಂದ ಪುರುಷಸೂಕ್ತದ ಹದಿನಾರು ಅಥವಾ ಹದಿನೆಂಟು ಋಕ್ಕುಗಳಿಂದ ಶ್ರೀಕೃಷ್ಣಪರಮಾತ್ಮನಿಗೂ, ಶ್ರೀವೇದವ್ಯಾಸಗುರುದೇವರಿಗೂ, ಶ್ರೀಶುಕಮಹಾಮುನಿಗಳಿಗೂ, ಶ್ರೀಮದ್ಭಾಗವತಗ್ರಂಥಕ್ಕೂ ಪೂಜೆಯನ್ನು ಭಕ್ತಿಯಿಂದ ಸಮರ್ಪಿಸಬೇಕು.

ಪ್ರಾರ್ಥನೆ **:**

**ವನ್ದೇ ಶ್ರೀಕೃಷ್ಣದೇವಂ ಮುರನರಕಭಿದಂ ವೇದವೇದಾನ್ತವೇದ್ಯಂ**
**ಲೋಕೇ ಭಕ್ತಿಪ್ರಸಿದ್ಧಂ ಯದುಕುಲಜಲಧೌ ಪ್ರಾದುರಾಸೀದಪಾರೇ ।**
**ಯಸ್ಯಾಸೀದ್ರೂಪಮೇವಂ ತ್ರಿಭುವನತರಣೇ ಭಕ್ತಿವಚ್ಚ ಸ್ವತನ್ತ್ರಂ**
**ಶಾಸ್ತ್ರಂ ರೂಪಂ ಚ ಲೋಕೇ ಪ್ರಕಟಯತಿ ಮುದಾ ಯಃ ಸ ನೋ ಭೂತಿಹೇತುಃ ॥**

ಶ್ರೀಕೃಷ್ಣಪರಮಾತ್ಮನಿಗೆ ಪ್ರಣಾಮಗಳು. ಮುರ-ನರಕಾಸುರರನ್ನು ಸಂಹರಿಸಿದವನೂ, ವೇದ-ವೇದಾಂತಗಳಿಂದಲೇ ತಿಳಿಯಲ್ಪಡಲು ಯೋಗ್ಯನಾದವನೂ, ಭಕ್ತಿಯಿಂದಲೇ ಹೊಂದಲ್ಪಡುವವನೂ, ಅಪಾರವಾದ ಯದುಕುಲಮಹಾಂಬುಧಿಯಲ್ಲಿ ಈ ಲೋಕದಲ್ಲಿ ಪ್ರಕಟಗೊಂಡವನೂ ಆದ ಸ್ವಾಮಿ ಶ್ರೀಕೃಷ್ಣನಿಗೆ ನಮಸ್ಕಾರಗಳು. ಈ ಲೋಕದಲ್ಲಿ ತನ್ನ ಸ್ವರೂಪವನ್ನೂ ಮತ್ತು ಶಾಸ್ತ್ರವನ್ನೂ ಪ್ರಕಟಪಡಿಸುವ ಮತ್ತು ಮೂರು ಲೋಕಗಳ ಜೀವಗಳನ್ನೂ ದಾಟಿಸಲು ಭಕ್ತಿಯಂತೆಯೇ ಸ್ವತಂತ್ರವಾದ ನೌಕೆಯಂತಿರುವ ಆ ಶ್ರೀಭಗವಂತನು ನಮ್ಮೆಲ್ಲರಿಗೂ ಮಂಗಲವನ್ನುಂಟುಮಾಡಲಿ.

**ನಮಃ ಕೃಷ್ಣಪದಾಬ್ಜಾಯ ಭಕ್ತಾಭೀಷ್ಟಪ್ರದಾಯಿನೇ ।**
**ಆರಕ್ತಂ ರೋಚಯೇಚ್ಛಶ್ವತ್ ಮಾಮಕೇ ಹೃದಯಾಮ್ಬುಜೇ ॥**

ಕೆಂದಾವರೆಯಂತೆ ಕಂಗೊಳಿಸುತ್ತಾ ನನ್ನ ಹೃದಯಕಮಲದಲ್ಲಿ ಸದಾ ಪ್ರಕಾಶವನ್ನು ಚೆಲ್ಲುತ್ತಿರುವ ಮತ್ತು ಭಕ್ತಜನರ ಅಭೀಷ್ಟಗಳನ್ನು ಈಡೇರಿಸುವ ಶ್ರೀಕೃಷ್ಣಪರಮಾತ್ಮನ ಪೊನ್ನಡಿಗಳಿಗೆ ಪುನಃ ಪುನಃ ಪ್ರಣಾಮ ಮಾಡುತ್ತೇನೆ.

**ಶ್ರೀಭಾಗವತರೂಪಂ ತತ್ಪೂಜಯೇದ್ಭಕ್ತಿಪೂರ್ವಕಮ್ ।**
**ಅರ್ಚಕಾಯಾಖಿಲಾನ್ಕಾಮಾನ್ ಪ್ರಯಚ್ಛತಿ ನ ಸಂಶಯಃ ।**

ಶ್ರೀಮದ್ಭಾಗವತವು ಆ ಶ್ರೀಭಗವತ್‌ಸ್ವರೂಪವೇ ಆಗಿದೆ. ಅದನ್ನು ಭಕ್ತಿಪೂರ್ವಕವಾಗಿ ಭಜಿಸಬೇಕು. ಅದು ಪೂಜಕರ ಎಲ್ಲ ಇಷ್ಟಾರ್ಥಗಳನ್ನೂ ಈಡೇರಿಸುತ್ತದೆಯೆಂಬುದರಲ್ಲಿ ಸಂಶಯವೇ ಇಲ್ಲ.

**ಋಷಿ-ದೇವತೆ-ಛಂದಸ್ಸುಗಳು :**

**ಓಂ ಅಸ್ಯ ಶ್ರೀಮದ್ಭಾಗವತಾಖ್ಯಸ್ತೋತ್ರಮಹಾಮನ್ತ್ರಸ್ಯ । ಶ್ರೀ ನಾರದೋ ಭಗವಾನೃಷಿಃ । ಬೃಹತೀ ಛನ್ದಃ । ಶ್ರೀಕೃಷ್ಣಃ ಪರಮಾತ್ಮಾ ದೇವತಾ । ಓಂ ಬ್ರಹ್ಮ ಬೀಜಂ । ಭಕ್ತಿಶ್ಶಕ್ತಿಃ । ಜ್ಞಾನ ವೈರಾಗ್ಯೇ ಕೀಲಕಂ । ಮಮ ಶ್ರೀಭಗವತ್‌ಪ್ರಸಾದಸಿದ್ಧ್ಯರ್ಥೇ ಪಾಠೇ ವಿನಿಯೋಗಃ**

**ಋಷ್ಯಾದಿನ್ಯಾಸಗಳು :**

**ಓಂ ನಾರದಮಹರ್ಷಯೇ ನಮಃ - ಶಿರಸಿ । ಓಂ ಬೃಹತೀ ಛಂದಸೇ ನಮಃ-ಮುಖೇ । ಓಂ ಶ್ರೀ ಕೃಷ್ಣಪರಮಾತ್ಮದೇವತಾಯೈ ನಮಃ-ಹೃದಯೇ । ಓಂ ಬ್ರಹ್ಮಬೀಜಾಯ ನಮಃ-ಗುಹ್ಯೇ । ಓಂ ಭಕ್ತಿಶಕ್ತಯೇ ನಮಃ - ಪಾದಯೋಃ । ಓಂ ಜ್ಞಾನವೈರಾಗ್ಯಕೀಲ- ಕಾಭ್ಯಾಂ ನಮಃ - ನಾಭೌ । ಓಂ ವಿನಿಯೋಗಾಯ ನಮಃ - ಸರ್ವಾಙ್ಗೇ ।**

**ಕರನ್ಯಾಸ :**

**ಓಂ ನಮೋ ಭಗವತೇ ವಾಸುದೇವಾಯ**

**ಓಂ ಓಂ ಓಂ ನಮೋ ದಕ್ಷಿಣತರ್ಜನ್ಯಾಂ । ಓಂ ನಂ ಓಂ ನಮೋ ದಕ್ಷಿಣಮಧ್ಯಮಾಯಾಂ । ಓಂ ಮೋಂ ಓಂ ನಮೋ ದಕ್ಷಿಣಾ**

ನಾಮಿಕಾಯಾಂ । ಓಂ  ಭಂ ಓಂ ನಮೋ ದಕ್ಷಿಣಕನಿಷ್ಠಿಕಾಯಾಂ ।ಓಂ ಗಂ ಓಂ ನಮೋ ವಾಮಕನಿಷ್ಠಿಕಾಯಾಂ । ಓಂ ವಂ ಓಂ ನಮೋ ವಾಮಾನಾಮಿಕಾಯಾಂ । ಓಂ ತೇಂ ಓಂ ನಮೋ ವಾಮ ಮಧ್ಯಮಾಯಾಂ। ಓಂ  ವಾಂ ಓಂ ನಮೋ ವಾಮತರ್ಜನ್ಯಾಂ ।ಓಂ ಸುಂ ಓಂ ನಮಃ ಓಂ ದೇಂ ಓಂ ನಮೋ ದಕ್ಷಿಣಾಙ್ಗುಷ್ಠ ಪರ್ವಣೋಃ। ಓಂ ವಾಂ ಓಂ ನಮಃ ಓಂ ಯಂ ಓಂ ನಮೋ ವಾಮಾಙ್ಗುಷ್ಠಪರ್ವಣೋಃ।

ಎಂದು ಕರದ ಆಯಾ ನಿರ್ದಿಷ್ಟಭಾಗಗಳಲ್ಲಿ ದ್ವಾದಶಾಕ್ಷರ ಮಹಾ ಮಂತ್ರದ ಅವಯವಗಳನ್ನು ನ್ಯಾಸಮಾಡಬೇಕು.

ಅಂಗನ್ಯಾಸ :

ಓಂ ನಮೋ ನಮೋ ಹೃದಯಾಯ ನಮಃ ।ಓಂ ಭಗವತೇ ನಮಃ ಶಿರಸೇ ಸ್ವಾಹಾ । ಓಂ ವಾಸುದೇವಾಯ ನಮಃ ಶಿಖಾಯೈ ವಷಟ್ । ಓಂ ನಮೋ ನಮಃ ಕವಚಾಯ ಹುಂ । ಓಂ ಭಗವತೇ ನಮಃ ನೇತ್ರತ್ರಯಾಯ ವೌಷಟ್ । ಓಂ ವಾಸುದೇವಾಯ ನಮಃ ವೀರ್ಯಾಯಾಸ್ತ್ರಾಯ ಫಟ್

ಹೀಗೆ ಹೃದಯಾದಿ ಸ್ಥಾನಗಳಲ್ಲಿ ನ್ಯಾಸಮಾಡಬೇಕು.

ಧ್ಯಾನಂ :

ಕಿರೀಟಕೇಯೂರಮಹಾರ್ಹನಿಷ್ಕೈ-
ರ್ಮಣ್ಯುತ್ತಮಾಲಂಕೃತಸರ್ವಗಾತ್ರಮ್ ।
ಪೀತಾಂಬರಂ ಕಾಞ್ಚನಚಿತ್ರನದ್ಧ-
ಮಾಲಾಧರಂ ಕೇಶವಮಭ್ಯುಪೈಮಿ ॥

ಮಸ್ತಕದಲ್ಲಿ ಕಿರೀಟವನ್ನೂ, ತೋಳುಗಳಲ್ಲಿ ತೋಳ್ಬಳೆಗಳನ್ನೂ, ಕೊರಳಿನಲ್ಲಿ ಬಹುಮೂಲ್ಯ ಹಾರಗಳನ್ನೂ, ಎಲ್ಲ ಅಂಗಗಳಲ್ಲಿಯೂ ಮಣಿ ಗಳ ಸುಂದರ ಆಭರಣಗಳನ್ನೂ ಧರಿಸಿ ಕಂಗೊಳಿಸುತ್ತಿರುವ, ಪೀತಾಂಬರ ಧಾರಿಯೂ ವನಮಾಲಾವಿಭೂಷಿತನೂ ಆದ ಶ್ರೀಕೇಶವಸ್ವಾಮಿಯನ್ನು ಧ್ಯಾನಸಮಾಧಿಯಿಂದ ಹೊಂದುವೆನು.

## ಶ್ರೀಮದ್ಭಾಗವತಸಪ್ತಾಹದ ಆಚರಣೆಗೆ ಅವಶ್ಯಕವಾದ ಕೆಲವು ಮುಖ್ಯವಿಧಿಗಳು :

ಮುಹೂರ್ತ ವಿಚಾರ:- ವಿದ್ವಾಂಸರಾದ ಜ್ಯೋತಿಷಿಗಳನ್ನು ಕರೆಸಿ, ಅವರೊಡನೆ ವಿಚಾರಮಾಡಿ ಸಪ್ತಾಹಕ್ಕೆ ಬೇಕಾಗುವ ಶುಭಮುಹೂರ್ತವನ್ನು ನಿಶ್ಚಯಿಸಬೇಕು. ನಕ್ಷತ್ರಗಳಲ್ಲಿ ಹಸ್ತ, ಚಿತ್ತೆ, ಸ್ವಾತಿ, ವಿಶಾಖೆ, ಅನುರಾಧ, ಪುನರ್ವಸು, ಪುಷ್ಯ, ರೇವತಿ, ಅಶ್ವಿನಿ, ಮೃಗಶಿರೆ, ಶ್ರವಣ, ಧನಿಷ್ಠೆ ಮತ್ತು ಪೂರ್ವಾಭಾದ್ರ–ಇವು ಶ್ರೇಷ್ಠ. ತಿಥಿಗಳಲ್ಲಿ ದ್ವಿತೀಯೇ, ತೃತೀಯೇ, ಪಂಚಮೀ, ಷಷ್ಠೀ, ದಶಮೀ, ಏಕಾದಶೀ ಮತ್ತು ದ್ವಾದಶೀ–ಇವು ಪ್ರಶಸ್ತ. ಸೋಮ, ಬುಧ, ಗುರು ಮತ್ತು ಶುಕ್ರ–ಇವು ಸರ್ವೋತ್ಕೃಷ್ಟವಾದ ವಾರಗಳು. ತಿಥಿ-ವಾರ-ನಕ್ಷತ್ರಗಳನ್ನು ವಿಚಾರಮಾಡುವುದರ ಜೊತೆಗೆ ಗುರು-ಶುಕ್ರ ಗ್ರಹಗಳು ಅಸ್ತ, ಬಾಲ ಅಥವಾ ವೃದ್ಧಸ್ಥಿತಿಯಲ್ಲಿ ಇವೆಯೇ ಎಂಬುದನ್ನು ಗಮನಿಸಬೇಕು. ಆ ಗ್ರಹಾಸ್ತ ಮುಂತಾದುವು ಇರಬಾರದು. ಭದ್ರಾದಿ ದೋಷಗಳೂ ಕಥಾರಂಭಕಾಲದಲ್ಲಿ ಇರಕೂಡದು. ಆ ದಿವಸ ಪೃಥ್ವಿಯು ಜಾಗ್ರತವಾಗಿರಬೇಕು. ಪ್ರವಚನಕರ್ತೃ ಮತ್ತು ಪ್ರಧಾನಶ್ರೋತೃಗಳಿಗೆ ಚಂದ್ರಬಲ ಸರಿಯಾಗಿರಬೇಕು. ಲಗ್ನದಲ್ಲಿ ಶುಭಗ್ರಹಗಳ ಯೋಗ ಅಥವಾ ದೃಷ್ಟಿ ಇರಬೇಕು. ಶುಭಗ್ರಹಗಳ ಸ್ಥಿತಿಯು ಕೇಂದ್ರದಲ್ಲಿ ಅಥವಾ ತ್ರಿಕೋಣ ದಲ್ಲಿ ಇದ್ದರೆ ಉತ್ತಮ. ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತೀಕ ಮತ್ತು ಮಾರ್ಗಶಿರ–ಇವಿಷ್ಟು ಮಾಸಗಳೂ ಕಥಾರಂಭಕ್ಕೆ ಪ್ರಶಸ್ತ. ಹಲವು ವಿದ್ವಾಂಸರ ಅಭಿಪ್ರಾಯದಲ್ಲಿ ಚೈತ್ರ ಮತ್ತು ಪೌಷ್ಯವನ್ನು ಬಿಟ್ಟು ಉಳಿದ ಎಲ್ಲ ಮಾಸಗಳೂ ಕಥಾಪ್ರಾರಂಭಕ್ಕೆ ಆಗಬಹುದು.

## ಯಾವ ಸ್ಥಾನದಲ್ಲಿ ಕಥೆ ನಡೆಯಬೇಕು?

ಶ್ರೀಮದ್ಭಾಗವತಸಪ್ತಾಹಕ್ಕೆ ಉತ್ತಮವೂ, ಪವಿತ್ರವೂ ಆದ ಸ್ಥಾನದ ವ್ಯವಸ್ಥೆ ಆವಶ್ಯಕ. ಹೆಚ್ಚು ಜನರು ಸೌಕರ್ಯವಾಗಿ ಕುಳಿತುಕೊಳ್ಳಲು ಅನುಕೂಲವಾದ ಜಾಗದಲ್ಲಿ ಕಥೆಯನ್ನು ಏರ್ಪಡಿಸುವುದು ಉತ್ತಮ. ನದಿಯ ದಡ, ಉಪವನ, ದೇವಾಲಯ ಅಥವಾ ಸ್ವಗೃಹ–ಇವುಗಳೆಲ್ಲಾ ಸಪ್ತಾಹಕಥೆಗೆ ತಕ್ಕ ಸ್ಥಾನಗಳು. ಜಾಗವನ್ನು ಗುಡಿಸಿ, ಸಾರಿಸಿ ಸ್ವಚ್ಛ

ವಾಗಿರಿಸಿರಬೇಕು. ನೆಲವನ್ನು ಗೋಮಯ ಮತ್ತು ಹಳದೀಮಣ್ಣಿನಿಂದ ಸಾರಿಸಿ ಲೇಪಿಸಿರಬೇಕು ಅಥವಾ ದೃಢವಾದ ಅಂಗಳವಾಗಿದ್ದರೆ ಅದನ್ನು ಚೆನ್ನಾಗಿ ತೊಳೆಯಿಸಿ ಪವಿತ್ರವೂ ಸುಂದರವೂ ಆದ ಆಸನಗಳನ್ನು ಅಲ್ಲಿ ಹಾಕಬೇಕು. ಮೇಲುಗಡೆ ಚಪ್ಪರಗಳನ್ನು ಕಟ್ಟಬೇಕು. ಆದರೆ ಚಪ್ಪರ-ಛಾವಣಿ ಮುಂತಾದ ಯಾವುದೇ ಅಲಂಕಾರಕ್ಕಾಗಲೀ, ಉಪಕರಣಗಳಿಗಾಗಲೀ ನೀಲಿ ಬಣ್ಣದ ವಸ್ತುವನ್ನು ಬಳಸಬಾರದು. ಯಜಮಾನನ ಕೈಯ್ಯಲ್ಲಿ ಹದಿನಾರು ಕೈಯ್ಯಷ್ಟು ಉದ್ದವಾಗಿ ಮತ್ತು ಅಷ್ಟೇ ಅಗಲವಾಗಿರುವಂತೆ ಕಥಾಮಂಟಪ ವನ್ನು ನಿರ್ಮಿಸಬೇಕು. ಅದನ್ನು ಬಾಳೆಯ ಕಂಬಗಳಿಂದ ಸಿಂಗರಿಸಬೇಕು. ಹಸಿರಾಗಿರುವ ಬಿದಿರಿನ ಕಂಬಗಳನ್ನು ನೆಡಬೇಕು. ಹೊಸ ತಳಿರು-ತೋರಣ ಗಳಿಂದಲೂ, ಪುಷ್ಪಮಾಲೆಗಳಿಂದಲೂ, ಧ್ವಜ-ಪತಾಕೆಗಳಿಂದಲೂ ಮಂಟಪ ವನ್ನು ಚೆನ್ನಾಗಿ ಅಲಂಕರಿಸಬೇಕು. ಆ ಮಂಟಪದ ನೈಋತ್ಯಭಾಗದಲ್ಲಿ ಕಥಾಪ್ರವಚನಕಾರನಿಗೂ ಮುಖ್ಯಶ್ರೋತೃವಿಗೂ ಕುಳಿತುಕೊಳ್ಳುವ ಜಾಗ ಇರಬೇಕು. ಉಳಿದ ಭಾಗದಲ್ಲಿ ದೇವತೆಗಳನ್ನು ಮತ್ತು ಕಲಶವನ್ನು ಸ್ಥಾಪಿಸ ಬೇಕು. ಪ್ರವಚನಕಾರನು ಕುಳಿತುಕೊಳ್ಳಲು ಎತ್ತರವಾದ ವೇದಿಕಾಪೀಠ ವನ್ನು ನಿರ್ಮಿಸಿ ಅದರ ಮೇಲೆ ಶುದ್ಧವಾದ ಆಸನವನ್ನು ಇಡಬೇಕು. ಅದರ ಹಿಂದೆ ಮತ್ತು ಪಾರ್ಶ್ವಭಾಗಗಳಲ್ಲಿ ಒರಗುಮಣೆ ದಿಂಬುಗಳು ಇರಬೇಕು. ಶ್ರೀಮದ್ಭಾಗವತವನ್ನು ಬಿಜಯಮಾಡಿಸಲು ಸ್ವರ್ಣದಿಂದ ಅಲಂಕೃತವಾದ ಒಂದು ಸಣ್ಣ ಸಿಂಹಪೀಠ ಅಥವಾ ಆಧಾರಪೀಠವನ್ನು* ಇರಿಸಿ ಅದರ ಮೇಲೆ ಪವಿತ್ರವಾದ ಮಡಿಬಟ್ಟೆಯನ್ನು ಹೊದ್ದಿಸಬೇಕು. ಅದರ ಮೇಲೆ ಮುಂದೆ ಹೇಳುವ ವಿಧಿಗೆ ತಕ್ಕಂತೆ ಅಷ್ಟದಳಕಮಲವನ್ನು ಮಾಡಿಸಿ ಪೂಜೆಮಾಡಿ ಶ್ರೀಮದ್ಭಾಗವತಪುಸ್ತಕವನ್ನು ಅದರ ಮೇಲೆ ಬಿಜಯಮಾಡಿಸಬೇಕು. ಕಥಾಪ್ರವಚನಕಾರನು ವಿದ್ವಾಂಸನೂ, ಸಕಲಶಾಸ್ತ್ರ

---

* ಈ ಪೀಠದಲ್ಲಿ ಮೂರು ತೊಲ ಚಿನ್ನದ ಹೊದಿಕೆ ಇರಬೇಕು. ಅಷ್ಟು ಸಾಧ್ಯವಾಗದಿದ್ದರೆ ತನ್ನ ಶಕ್ತಿಗೆ ಅನುಗುಣವಾಗಿ ಎಷ್ಟು ಸಾಧ್ಯವಾಗುತ್ತದೆಯೋ ಅಷ್ಟು ಚಿನ್ನವನ್ನು ಸೇರಿಸಿಯೇ ಈ ಸಿಂಹಾಸನವನ್ನು ಮಾಡಿಸಬೇಕು. ಆದರೆ ಶಕ್ತಿ ಇರುವವರು ಜಿಪುಣತನದಿಂದ ಚಿನ್ನದ ಪ್ರಮಾಣವನ್ನು ಕಡಿಮೆಮಾಡಬಾರದು.

ಕುಶಲನೂ, ದೃಷ್ಟಾಂತಗಳನ್ನು ಕೊಟ್ಟು ಶ್ರೋತೃಗಳಿಗೆ ವಿಷಯವನ್ನು ಮನದಟ್ಟುಮಾಡುವ ಶಕ್ತಿಯುಳ್ಳವನೂ, ಸದಾಚಾರಿಯೂ, ಸದ್ಗುಣ ಸಂಪನ್ನನೂ ಆದ ಬ್ರಾಹ್ಮಣನಾಗಿರಬೇಕು. ಆತನು ಸುಶೀಲನೂ, ಸತ್ಕುಲ ಪ್ರಸೂತನೂ, ಗಂಭೀರಸ್ವಭಾವದವನೂ ಮತ್ತು ಶ್ರೀಕೃಷ್ಣಭಕ್ತನೂ ಆಗಿರುವುದು ಆವಶ್ಯಕ. ಅವನಲ್ಲಿ ಅಸೂಯೆ, ಪರನಿಂದೆ ಮುಂತಾದ ದುರ್ಗುಣ-ದುರಾಚಾರಗಳು ಕಿಂಚಿತ್ತೂ ಇರಬಾರದು. ಶ್ರೀಮದ್ಭಾಗವತದ ಪುಸ್ತಕವನ್ನು ರೇಷ್ಮೆವಸ್ತ್ರದಿಂದ ಮುಚ್ಚಿ ಛತ್ರ-ಚಾಮರದೊಡನೆ ಪಲ್ಲಕ್ಕಿಯಲ್ಲಿ ಅಥವಾ ತನ್ನ ತಲೆಯ ಮೇಲೆ ಇರಿಸಿಕೊಂಡು ಕಥಾಮಂಟಪಕ್ಕೆ ಬಿಜಯಮಾಡಿಸಿ ದಿವ್ಯಪೀಠದ ಮೇಲೆ ಸ್ಥಾಪಿಸಬೇಕು. ಆ ಪ್ರತಿಷ್ಠಾಸಮಯದಲ್ಲಿ ಮಂಗಳ ವಾದ್ಯ, ಗೀತ ಮುಂತಾದುವುಗಳು ಮೊಳಗುವ ಉತ್ಸವ ಆಗಬೇಕು. ಕೆಲಸಕ್ಕೆ ಬಾರದಿರುವ ಪದಾರ್ಥ ಯಾವುದೂ ಕಥಾಮಂಟಪದಲ್ಲಿರಬಾರದು. ಅಲ್ಲಲ್ಲಿ ಗೋಡೆಗಳಲ್ಲಿ ಆ ಭಗವಂತನನ್ನೂ ಅವನ ಲೀಲೆಗಳನ್ನೂ ಸ್ಮರಣೆಗೆ ತರುವ ಚಿತ್ರಗಳನ್ನು ಹಾಕಬೇಕು. ಪ್ರವಚನಕಾರನು ಉತ್ತರಾಭಿಮುಖನಾಗಿದ್ದರೆ ಮುಖ್ಯಶ್ರೋತೃವು ಪೂರ್ವಾಭಿಮುಖನಾಗಿರಬೇಕು. ಅವನು ಪೂರ್ವಾಭಿಮುಖನಾಗಿದ್ದರೆ ಶ್ರೋತೃವು ಉತ್ತರಾಭಿಮುಖನಾಗಿರಬೇಕು.

ಸಪ್ತಾಹಕಥೆಯು ಒಂದು ದೊಡ್ಡ ಯಜ್ಞ. ಅದು ಚೆನ್ನಾಗಿ ನೆರವೇರುವಂತೆ ಮಾಡಲು ಬಂಧು-ಮಿತ್ರರೂ ಮತ್ತು ಇತರೇ ಜನರೂ ಸಹಾಯಮಾಡಬೇಕು. ಹಣಕಾಸು-ಸಂಪತ್ತಿನ ವ್ಯವಸ್ಥೆಯನ್ನೂ ಮೊದಲಿನಿಂದಲೇ ಮಾಡಿರಬೇಕು. ಕಥಾಶ್ರವಣಕ್ಕೆ ಏಳೆಂಟು ದಿನ ಮೊದಲಿನಿಂದಲೇ ದೂರದ ಜಾಗಗಳಿಗೆ ಸಮಾಚಾರ ಕಳುಹಿಸಿ ಅವರು ತಾವಾಗಿಯೇ ಅಲ್ಲಿಗೆ ದಯಮಾಡಿಸಿ ಕಥಾಶ್ರವಣದ ಲಾಭವನ್ನು ಪಡೆಯಬೇಕೆಂದು ಪ್ರಾರ್ಥಿಸಬೇಕು. ಹೆಚ್ಚು ಸಮಯ ಅಲ್ಲಿ ಬಂದಿರಲು ಸಾಧ್ಯವಾಗದಿದ್ದರೆ ಒಂದು ದಿವಸವಾದರೂ ದಯಮಾಡಿಸಿ ಕಥಾಶ್ರವಣಮಾಡಬೇಕೆಂದು ಅರಿಕೆಮಾಡಬೇಕು. ದೂರದಿಂದ ಬಂದ ಅತಿಥಿಗಳಿಗೆ ಇಳಿದುಕೊಳ್ಳುವುದಕ್ಕೂ ಮತ್ತು ಭೋಜನಾದಿಗಳಿಗೂ ವ್ಯವಸ್ಥೆಮಾಡಬೇಕು. ಪ್ರವಚನಕಾರನು ವ್ರತಕೈಗೊಳ್ಳುವುದಕ್ಕೆ ಒಂದು ದಿನ ಮೊದಲೇ ಕ್ಷೌರಮಾಡಿಸಿಕೊಂಡಿರಬೇಕು ; ಒಂದು ದಿನ

ಮೊದಲೇ ದೇವತಾಸ್ಥಾಪನೆ, ಪೂಜೆ ಇತ್ಯಾದಿಗಳನ್ನು ಮಾಡಿರುವುದು ಉತ್ತಮ. ಪ್ರತಿದಿನವೂ ಸೂರ್ಯೋದಯಕ್ಕೆ ಮೊದಲೇ ಸ್ನಾನಾದಿಗಳನ್ನು ಮಾಡಿ ಸಂಧ್ಯಾವಂದನಾದಿಗಳನ್ನು ಸಂಕ್ಷೇಪವಾಗಿ ಆಚರಿಸಿ, ಕಥಾವಾಚನಕ್ಕೆ ಯಾವ ವಿಘ್ನವೂ ಬರದಿರಲೆಂದು ಪ್ರತಿದಿನವೂ ಶ್ರೀಗಣೇಶನ ಪೂಜೆಯನ್ನು ಮಾಡಬೇಕು.

ಸಪ್ತಾಹದ ಮೊದಲನೆಯ ದಿವಸ ಯಜಮಾನನು ಸ್ನಾನ ಮುಂತಾದುವುಗಳಿಂದ ಶುದ್ಧನಾಗಿ ನಿತ್ಯಕರ್ಮಗಳನ್ನು ಮುಗಿಸಿ ಅಭ್ಯುದಯಶ್ರಾದ್ಧವನ್ನು ಮಾಡಬೇಕು. ಈ ಅಭ್ಯುದಯಶ್ರಾದ್ಧವನ್ನು ಇದಕ್ಕಿಂತ ಮೊದಲೂ ಮಾಡಿರಬಹುದು. ಯಜ್ಞದಲ್ಲಿ ಇಪ್ಪತ್ತೊಂದು ದಿವಸ ಮೊದಲು ಅಭ್ಯುದಯಶ್ರಾದ್ಧ ಮಾಡಬಹುದೆಂಬ ವಿಧಿಯಿದೆ. ಇದೂ ಪ್ರವಚನಮಹಾಯಜ್ಞವೇ ತಾನೇ! ಅನಂತರ ಶ್ರೀಗಣೇಶ, ಬ್ರಹ್ಮದೇವರು ಮುಂತಾದ ದೇವತೆಗಳೊಡನೆ ನವಗ್ರಹಗಳನ್ನೂ, ಹದಿನಾರು ಮಂದಿ ಮಾತೃಕೆಯರನ್ನೂ, ಅಶ್ವತ್ಥಾಮ, ಬಲಿ, ವ್ಯಾಸ, ಹನುಮಂತ, ವಿಭೀಷಣ, ಕೃಪ, ಪರಶುರಾಮರೆಂಬ ಏಳು ಮಂದಿ ಚಿರಂಜೀವಿಗಳನ್ನೂ ಹಾಗೆಯೇ ಕಲಶಗಳನ್ನೂ ಪ್ರತಿಷ್ಠೆಮಾಡಬೇಕು. ಒಂದು ವೇದಿಕಾಪೀಠದ ಮೇಲೆ ಸರ್ವತೋಭದ್ರ ಮಂಡಲವನ್ನು ರಚಿಸಿ ಅದರ ಮಧ್ಯದಲ್ಲಿ ಲಕ್ಷ್ಮೀ-ನಾರಾಯಣರ ಪೂರ್ಣ ಪ್ರತಿಮೆಯನ್ನು ಪ್ರತಿಷ್ಠೆಮಾಡಬೇಕು. ಕಲಶಕ್ಕೆ ಪಕ್ಕದಲ್ಲಿಯೇ ಸಾಲಿಗ್ರಾಮ ರೂಪಿಯಾದ ಭಗವಂತನು ಸಿಂಹಾಸನದ ಮೇಲೆ ಬೆಳಗುತ್ತಿರಬೇಕು. ಸರ್ವತೋಭದ್ರಮಂಡಲದಲ್ಲಿರುವ ಎಲ್ಲ ದೇವತೆಗಳನ್ನೂ ಪೂಜಿಸಿದನಂತರ ಭಗವಂತರಾದ ನರ-ನಾರಾಯಣರನ್ನೂ, ಗುರು, ವಾಯು, ಸರಸ್ವತೀ, ಆದಿಶೇಷ, ಸನಕಾದಿಕುಮಾರರು, ಸಾಂಖ್ಯಾಯನರು, ಪರಾಶರರು, ಬೃಹಸ್ಪತಿಗಳು, ಮೈತ್ರೇಯರು ಮತ್ತು ಉದ್ಧವ–ಇವರನ್ನೂ ಆವಾಹಿಸಿ ಪ್ರತಿಷ್ಠೆಮಾಡಿ ಅವರೆಲ್ಲರನ್ನೂ ಪೂಜೆಮಾಡಬೇಕು. ಅನಂತರ ತ್ರಯ್ಯಾರುಣಿಯೇ ಮುಂತಾದ ಆರು ಮಂದಿ ಪೌರಾಣಿಕರನ್ನೂ ಸ್ಥಾಪಿಸಿ ಪೂಜಿಸಿ, ಪ್ರತ್ಯೇಕವಾದ ಪೀಠದ ಮೇಲೆ ಸುಂದರವಾದ ವಸ್ತ್ರವನ್ನು ಹೊದಿಸಿ ಶ್ರೀನಾರದಮಹರ್ಷಿಗಳನ್ನು ಪ್ರತಿಷ್ಠೆಮಾಡಿ ಪೂಜಿಸಬೇಕು. ಅನಂತರ ಆಧಾರಪೀಠ, ಪುಸ್ತಕ ಮತ್ತು ವ್ಯಾಸರು ( ಪ್ರವಚನಮಾಡುವ ಆಚಾರ್ಯರು ) ಇವರಿಗೂ ಸಾಧ್ಯ

ವಾದಷ್ಟು ಉಪಚಾರಗಳನ್ನು ಸಮರ್ಪಿಸಿ ಅವರನ್ನು ಆರಾಧಿಸಬೇಕು. ಕಥೆಯು ನಿರ್ವಿಘ್ನವಾಗಿ ಪೂರ್ಣವಾಗುವುದಕ್ಕಾಗಿ ಶ್ರೀಗಣೇಶಮಂತ್ರ, ದ್ವಾದಶಾಕ್ಷರಮಂತ್ರ ಮತ್ತು ಗಾಯತ್ರೀಮಂತ್ರಗಳನ್ನು ಜಪಿಸುವುದಕ್ಕೂ ಶ್ರೀವಿಷ್ಣುಸಹಸ್ರನಾಮ ಮತ್ತು ಭಗವದ್ಗೀತೆಗಳನ್ನು ಪಾರಾಯಣಮಾಡು ವುದಕ್ಕೂ ಯಥಾಶಕ್ತಿಯಾಗಿ ಏಳು, ಐದು ಅಥವಾ ಮೂರು ಮಂದಿ ಬ್ರಾಹ್ಮಣರ ವರಣಮಾಡಬೇಕು. ಬೇರೊಬ್ಬ ಬ್ರಾಹ್ಮಣನ ಮೂಲಕ ಪ್ರತ್ಯೇಕವಾಗಿ ಶ್ರೀಮದ್ಭಾಗವತವನ್ನು ಪಾರಾಯಣಮಾಡಿಸಬೇಕು. ದೇವತೆ ಗಳ ಸ್ಥಾಪನೆ ಮತ್ತು ಪೂಜೆಗಳಿಗೆ ಮೊದಲು ಸ್ವಸ್ತಿವಾಚನಪೂರ್ವಕವಾಗಿ ಕೈಯಲ್ಲಿ ಪವಿತ್ರ, ಅಕ್ಷತೆ, ಪುಷ್ಪ, ತೀರ್ಥ ಮತ್ತು ದ್ರವ್ಯಗಳನ್ನು ಇಟ್ಟುಕೊಂಡು ಮಹಾಸಂಕಲ್ಪಮಾಡಬೇಕು.

"ಓಂ ತತ್ಸತ್, ಆದ್ಯ ಶ್ರೀಮಹಾಭಗವತೋ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ..... ಸಂವತ್ಸರೇ..... ಅಯನೇ.... ಋತೌ.... ಮಾಸೇ... ಪಕ್ಷೇ... ಮುಹೂರ್ತೇ... ಕರಣಾದಿಯುಕ್ತಾಯಾಂ... ವಾಸರಯುಕ್ತಾಯಾಂ... ನಕ್ಷತ್ರಯುಕ್ತಾಯಾಂ ಶುಭತಿಥೌ ಶುಭನಕ್ಷತ್ರ–ಶುಭಯೋಗ–ಶುಭಕರಣ ಏವಂಗುಣವಿಶೇಷೇಣ ವಿಶಿಷ್ಟಾಯಾಂ ಅಸ್ಯಾಂ... ಶುಭತಿಥೌ... ಗೋತ್ರಃ... ಪ್ರವರಃ... ಶರ್ಮಾ/ವರ್ಮಾ/ಗುಪ್ತಃ ಅಹಂ ಪೂರ್ವಾತೀತಾನೇಕಜನ್ಮಸಂಚಿತಾ–ಖಿಲದುಷ್ಕೃತಿನಿವೃತ್ತಿಪುರಸ್ಸರೈಹಿಕಾಧ್ಯಾತ್ಮಿಕಾದಿ ವಿವಿಧತಾಪಪಾಪಾ–ಪನೋದನಾರ್ಥಂ, ದಶಾಶ್ವಮೇಧಯಜ್ಞಜನ್ಯಸಮ್ಯಗಿಷ್ಟರಾಜ ಸೂಯಯಜ್ಞಸಹಸ್ರಪುಣ್ಯಸಮಪುಣ್ಯಚನ್ದ್ರಸೂರ್ಯಗ್ರಹಣಕಾಲಿಕಬಹು–ಬ್ರಾಹ್ಮಣಸಮ್ಪ್ರದಾನಸರ್ವಸಸ್ಯಪೂರ್ಣಸರ್ವರತ್ನೋಪಶೋಭಿತಮಹೀ–ದಾನಪುಣ್ಯಪ್ರಾಪ್ತಯೇ ಶ್ರೀಗೋವಿನ್ದಚರಣಾರ ವಿನ್ದಯುಗಲೇ ನಿರನ್ತರಮುತ್ತರೋತ್ತರಮೇಧಮಾನನಿಸ್ಸೀಮ ಪ್ರೇಮೋಪಲಬ್ಧಯೇ, ತದೀಯಪರಮಾನನ್ದಮಯಗೋಲೋಕ ಧಾಮ್ನಿ ನಿತ್ಯನಿವಾಸಪೂರ್ವಕ ತತ್ಪರಿಚರ್ಯಾರಸಾಸ್ವಾದನಸೌಭಾಗ್ಯ ಸಿದ್ಧಯೇ ಚ ಅಮುಕಗೋತ್ರಾ ಮುಕಪ್ರವರಾಮಮುಕಬ್ರಾಹ್ಮಣವದ ನಾರವಿನ್ದಾತ್ ಶ್ರೀಕೃಷ್ಣವಾಙ್ಮಯ

**ಮೂರ್ತೀಭೂತಂ ಶ್ರೀಮದ್ಭಾಗ ವತಮಷ್ಟಾದಶಪುರಾಣ ಪ್ರಕೃತಿಭೂತ ಮನೇಕ ಶ್ರೋತೃಶ್ರವಣ ಪೂರ್ವಕಮಮುಕದಿನಾದಾರಭ್ಯಾ ಮುಕದಿನಪರ್ಯನ್ತಂ ಸಪ್ತಾಹಯಜ್ಞತಯಾ ಶ್ರೋಷ್ಯಾಮಿ* ಪ್ರಾಪ್ಸ್ಯಮಾನೇ ಅಸ್ಮಿನ್ ಸಪ್ತಾಹಯಜ್ಞೇ ವಿಘ್ನಪೂಗನಿವಾರಣ ಪೂರ್ವಕಂ ಯಜ್ಞರಕ್ಷಾಕರಣಾರ್ಥಂ ಗಣಪತಿಬ್ರಹ್ಮಾದಿಸಹಿತನವಗ್ರಹ ಷೋಡಶಮಾತೃಕಾಸಪ್ತಚಿರಜೀವಿ- ಪುರುಷಸರ್ವತೋಭದ್ರಮಣ್ಡಲಂ - ದೇವಕಲಶಾದ್ಯರ್ಚನಪುರಸ್ಸರಂ ಶ್ರೀಲಕ್ಷ್ಮೀನಾರಾಯಣಪ್ರತಿಮಾ-ಸಾಲಗ್ರಾಮ - ನರನಾರಾಯಣ - ಗುರು-ವಾಯು-ಸರಸ್ವತೀ-ಶೇಷ - ಸನತ್ಕುಮಾರ-ಸಾಂಖ್ಯಾಯನ- ಪರಾಶರ-ಬೃಹಸ್ಪತಿ - ಮೈತ್ರೇಯೋದ್ಧವ-ತ್ರಯ್ಯಾರುಣಿ-ಕಶ್ಯಪ-ರಾಮಶಿಷ್ಯಾಕೃತವ್ರಣ-ವೈಶಂಪಾಯನ-ಹಾರೀತ-ನಾರದಪೂಜನಂ ಆಧಾರಪೀಠಪುಸ್ತಕವ್ಯಾಸಪೂಜಾಂ ಚ ಯಥಾಲಬ್ಧೋಪಚಾರೈಃ ಕರಿಷ್ಯೇ''**

ಹೀಗೆ ಸಂಕಲ್ಪಮಾಡಿದನಂತರ ಹಿಂದೆ ಹೇಳಿದ ದೇವತೆಗಳನ್ನು ಚಿತ್ರ ಪಟದಲ್ಲಿ, ವಿಗ್ರಹದಲ್ಲಿ ಅಥವಾ ಅಕ್ಷತೆಯಲ್ಲಿ ಆವಾಹಿಸಿ, ಸ್ಥಾಪಿಸಿ, ವೈದಿಕ ಪೂಜಾಪದ್ಧತಿಯಂತೆ ಪ್ರತಿಯೊಬ್ಬರಿಗೂ ಪೂಜೆಮಾಡಬೇಕು. ಸಪ್ತ ಚಿರಂಜೀವಿಪುರುಷರಿಗೆ ಮತ್ತು ಸನತ್ಕುಮಾರರೇ ಮುಂತಾದವರಿಗೆ ನಾಮಮಂತ್ರಗಳಿಂದ ಪೂಜೆಮಾಡುವುದು.

ಕಥಾಮಂಟಪದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಅಥವಾ ಕೋಣಗಳ

---

* ಸಂತಾನದ ಇಚ್ಛೆಯಿಂದ ಪ್ರಯೋಗಮಾಡುವ ಮನಸ್ಸಿದ್ದರೆ ಸಂಕಲ್ಪದಲ್ಲಿ ಹೀಗೆ ಯೋಜನೆಮಾಡಿಕೊಳ್ಳಬೇಕು : **"ಅತೀತಾನನ್ತಜನ್ಮಸಮ್ಪಾದಿತದುಷ್ಕೃತಪರಿಪಾಕವಶಪ್ರಾಪ್ತ ಜನ್ಮಾಙ್ಗಕ್ರೂರಗ್ರಹಸೂಚಿತಪತ್ನೀವಂಧ್ಯಾತ್ವ - ಮೃತವತ್ಸತ್ವ - ಸ್ರವದ್ಗರ್ಭ - ತ್ವಾದಿರೂಪಸಂತತಿಪ್ರತಿಬಂಧಕದೋಷನಿವೃತ್ತಯೇ ಸದ್ಗುಣಸಮ್ಪನ್ನಚಿರಂಜೀವಿ ಸುಪುತ್ರಪ್ರಾಪ್ತಯೇ ಚ..."**

ಯಾವನಾದರೂ ಗತಿಸಿದ ವ್ಯಕ್ತಿಯ ಸದ್ಗತಿಗಾಗಿ ಶ್ರೀಮದ್ಭಾಗವತಸಪ್ತಾಹಮಾಡುವ ಉದ್ದೇಶವಿದ್ದರೆ ಸಂಕಲ್ಪದಲ್ಲಿ ಹೀಗೆ ಯೋಜನೆಮಾಡಬೇಕು : **"ಸ್ವೀಯಾ-ನಂತದುಷ್ಕೃತಪರಿಪಾಕವಶಾತ್ ನಾನಾವಿಧದುಃಖಕ್ಷೇತ್ರಯೋನೀನಾಂ ಪಿತೄಣಾಂ ಅಮುಕಾಮುಕಶರ್ಮಣಾಂ......, ಯೋನೇ ಪಿತುಃ ಅಮುಕಶರ್ಮಣಃ ಅನ್ಯಸ್ಯ ವಾ**

ಲ್ಲಿಯೂ ಒಂದೊಂದು ಕಲಶವನ್ನೂ ಮತ್ತು ಮಧ್ಯದಲ್ಲಿ ಒಂದು ಕಲಶವನ್ನೂ–ಹೀಗೆ ಒಟ್ಟು ಐದು ಕಲಶಗಳನ್ನು ಸ್ಥಾಪಿಸಬೇಕು. ನಾಲ್ಕು ಕಡೆಗಳಲ್ಲಿರುವ ಕಲಶಗಳಲ್ಲಿ ಪೂರ್ವಕಲಶದಲ್ಲಿ ಋಗ್ವೇದವನ್ನೂ, ದಕ್ಷಿಣ ಕಲಶದಲ್ಲಿ ಯಜುರ್ವೇದವನ್ನೂ, ಪಶ್ಚಿಮಕಲಶದಲ್ಲಿ ಸಾಮವೇದವನ್ನೂ, ಉತ್ತರಕಲಶದಲ್ಲಿ ಅಥರ್ವವೇದವನ್ನೂ ಪ್ರತಿಷ್ಠೆಮಾಡಿ ಪೂಜಿಸಬೇಕು. ಕೆಲವರು ಮಧ್ಯದಲ್ಲಿ ಸರ್ವತೋಭದ್ರಮಂಡಲದ ಮಧ್ಯಭಾಗದಲ್ಲಿ ಒಂದೇ ತಾಮ್ರಕಲಶವನ್ನು ಪ್ರತಿಷ್ಠೆಮಾಡಿ ಅದರ ನಾಲ್ಕು ದಿಕ್ಕುಗಳಲ್ಲಿಯೂ ಸರ್ವತೋಭದ್ರಮಂಡಲದ ವೇದಿಕಾಪೀಠದ ನಾಲ್ಕು ಕಡೆಗಳಲ್ಲೂ ನಾಲ್ಕು ವೇದಗಳ ಪ್ರತಿಷ್ಠೆಮಾಡಿ ಪೂಜಿಸಬೇಕೆಂದು ಹೇಳುತ್ತಾರೆ. ಇದೇ ಕಲಶದ ಮೇಲೆ ಭಗವಂತನಾದ ಲಕ್ಷ್ಮೀನಾರಾಯಣಸ್ವಾಮಿಯ ಚಿನ್ನದ ಪ್ರತಿಮೆಯನ್ನು ಸ್ಥಾಪನೆಮಾಡಿ ಷೋಡಶೋಪಚಾರವಿಧಿಯಿಂದ ಅದನ್ನು ಪೂಜಿಸಬೇಕು. ಪೂಜೆಯ ಕ್ರಮವು ಹೀಗಿರಬೇಕು :

ಮೊದಲು ರಕ್ಷಾದೀಪವನ್ನು ಹತ್ತಿಸಬೇಕು. ಒಂದು ಪಾತ್ರೆಯಲ್ಲಿ ತುಪ್ಪವನ್ನು ತುಂಬಿ ಹತ್ತಿಯ ಹೂಬತ್ತಿಗಳನ್ನು ಹತ್ತಿಸಿ ಅದನ್ನು ಸುರಕ್ಷಿತವಾದ ಜಾಗದಲ್ಲಿ ಅಕ್ಷತೆಯ ಮೇಲೆ ಸ್ಥಾಪಿಸಬೇಕು. ಗಾಳಿ ಮುಂತಾದುವುಗಳ ಹೊಡೆತದಿಂದ ಅದು ನಂದಿಹೋಗದಂತೆ ಎಚ್ಚರಿಕೆಯಿಂದ ಏರ್ಪಡಿಸಬೇಕು. ಅನಂತರ ಸ್ವಸ್ತಿವಾಚನಪೂರ್ವಕವಾಗಿ ಮಂಗಲಪಾಠವನ್ನೂ ಸರ್ವದೇವನಮಸ್ಕಾರಗಳನ್ನೂ ಮಾಡಿ ಹಿಂದೆ ಹೇಳಿರುವ ಮಹಾಸಂಕಲ್ಪವನ್ನು ಪಠಿಸಬೇಕು. ಅನಂತರ ಒಂದು ಪಾತ್ರೆಯಲ್ಲಿ ಅಕ್ಕಿಯನ್ನು ತುಂಬಿ ಅದರಲ್ಲಿ ಶ್ರೀಗಣೇಶದೇವರನ್ನು ಆವಾಹನೆಮಾಡಬೇಕು : **'ಓಂ ಭೂರ್ಭುವಸ್ಸ್ವಃ' ಗಣಪತೇ ಇಹಾಗಚ್ಛ ಇಹ ತಿಷ್ಠ ಮಮ ಪೂಜಾಂ ಗೃಹಾಣ'** ಎಂದು ಆವಾಹನೆಮಾಡಿ **'ಗಣಾನಾಂ ತ್ವಾ ಗಣಪತಿಗ್ಂ ಹವಾಮಹೇ'** ಇತ್ಯಾದಿ ಮಂತ್ರಗಳನ್ನು ಪಠಿಸಬೇಕು. ಅನಂತರ **"ಗಜಾನನಂ ಭೂತಗಣಾಧಿ ಸೇವಿತಂ ಕಪಿತ್ಥಜಮ್ಬೂಫಲಸಾರಭಕ್ಷಿತಮ್ ॥"** ಇತ್ಯಾದಿ ಶ್ಲೋಕ

---

ಕಸ್ಯಚಿತ್, ಪ್ರೇತತ್ವನಿವೃತ್ತಿಪೂರ್ವಕಂ ಉತ್ತಮವೈಕುಣ್ಠಧಾಮೋಪಲಬ್ಧಯೇ" ಹೀಗೆ ಅವಶ್ಯಕತಾನುಸಾರ ಬೇರೆ-ಬೇರೆ ಉದ್ದೇಶಕ್ಕೆ ತಕ್ಕಂತೆ ಬೇರೆ-ಬೇರೆ ಯೋಜನೆಗಳನ್ನು ಸೇರಿಸಿಕೊಳ್ಳಬೇಕು.

ಗಳನ್ನು ಪಠಿಸುತ್ತಾ ಅವುಗಳಲ್ಲಿರುವಂತೆ ಧ್ಯಾನಮಾಡಬೇಕು. "ಓಂ ಮನೋ ಜೂತಿಃ" ಇತ್ಯಾದಿ ಮಂತ್ರಗಳಿಂದ ವಿವಿಧವಾದ ಉಪಚಾರಗಳಿಗೆ ಸಂಬಂಧಿಸಿದ ಶ್ಲೋಕಗಳನ್ನು ಪಠಿಸುತ್ತಾ ಗಣೇಶದೇವರಿಗೆ ಕ್ರಮವಾಗಿ ಅರ್ಘ್ಯ, ಪಾದ್ಯ, ಆಚಮನೀಯ, ಸ್ನಾನೀಯ, ಪುನರಾಚಮನೀಯ, ಪಂಚಾಮೃತಸ್ನಾನ, ಶುದ್ಧೋದಕಸ್ನಾನ, ವಸ್ತ್ರ, ರಕ್ಷಾಸೂತ್ರ, ಯಜ್ಞೋಪವೀತ, ಗಂಧ, ಶ್ರೀಚೂರ್ಣ (ಅರಿಸಿನ), ಕುಂಕುಮ, ಗಂಧೋದಕ, ಅಕ್ಷತೆ, ಪುಷ್ಪ, ಮಾಲ್ಯ, ದೂರ್ವಾದಳ, ಭೂಷಣ, ಗಂಧಲೇಪನ, ಧೂಪ, ದೀಪ, ನೈವೇದ್ಯ ಮತ್ತು ಫಲಗಳನ್ನು ಸಮರ್ಪಿಸಬೇಕು. ಗಂಗೋದಕದಿಂದ ಆಚಮನಮಾಡಿಸಿ ಮುಖಶುದ್ಧಿಗಾಗಿ ಅಡಕೆ, ಲವಂಗ, ಏಲಕ್ಕಿ, ಪಚ್ಚಕರ್ಪೂರಸಹಿತವಾದ ತಾಂಬೂಲ–ಇವುಗಳನ್ನು ಸಮರ್ಪಿಸಬೇಕು. ಕೊನೆಗೆ ದಕ್ಷಿಣಾದ್ರವ್ಯ ಮತ್ತು ವಿಶೇಷಾರ್ಘ್ಯಗಳನ್ನೂ ಪ್ರದಕ್ಷಿಣ-ನಮಸ್ಕಾರ ಗಳನ್ನೂ ನಿವೇದಿಸಿ ಫಲಹಸ್ತನಾಗಿ ಹೀಗೆ ಪ್ರಾರ್ಥಿಸಬೇಕು :

ಓಂ ಲಮ್ಬೋದರಂ ಪರಮಸುನ್ದರಮೇಕದನ್ತಂ
ರಕ್ತಾಮ್ಬರಂ ತ್ರಿನಯನಂ ಪರಮಂ ಪವಿತ್ರಮ್ ।
ಉದ್ಯದ್ದಿವಾಕರಕರೋಜ್ಜ್ವಲಕಾಯಕಾನ್ತಂ
ವಿಘ್ನೇಶ್ವರಂ ಸಕಲವಿಘ್ನಹರಂ ನಮಾಮಿ ॥

ತ್ವಾಂ ದೇವ ವಿಘ್ನದಲನೇತಿ ಚ ಸುನ್ದರೇತಿ
ಭಕ್ತಪ್ರಿಯೇತಿ ಸುಖದೇತಿ ಫಲಪ್ರದೇತಿ ।
ವಿದ್ಯಾಪ್ರದೇತ್ಯಘಹರೇತಿ ಚ ಯೇ ಸ್ತುವನ್ತಿ
ತೇಭ್ಯೋ ಗಣೇಶ ವರದೋ ಭವ ನಿತ್ಯಮೇವ ॥

'ಅನಯಾ ಪೂಜಯಾ ಶ್ರೀಗಣಪತಿಃ ಪ್ರೀಯತಾಂ ನ ಮಮ' ಎಂದು ಹೇಳಿ ಶ್ರೀಗಣೇಶದೇವರಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಇದಾದನಂತರ ಬ್ರಹ್ಮಾದಿಸಹಿತ ನವಗ್ರಹಗಳನ್ನೂ ಆವಾಹನೆಮಾಡಿ ಪೂಜಿಸಬೇಕು. ಆವಾಹನವಾಕ್ಯ = 'ಓಂ ಭೂರ್ಭುವಸ್ಸ್ವಃ ಭೋಃ ಬ್ರಹ್ಮವಿಷ್ಣುಶಿವಸಹಿತಸೂರ್ಯಾದಿನವಗ್ರಹಾಃ ಇಹಾಗಚ್ಛತ । ಇಹ ತಿಷ್ಠತ । ಮಮ ಪೂಜಾಂ ಗೃಹ್ಣೀತ ।' ವೈದಿಕಮಂತ್ರಗಳಿಂದಲೂ ಇವರ ಆವಾಹನೆಮಾಡಬಹುದು. ಮತ್ತೆ ಹಿಂದಿನಂತೆ ಉಪಚಾರಮಂತ್ರಗಳಿಂದ

ಅಥವಾ 'ಓಂ ಬ್ರಹ್ಮಣೇ ನಮಃ । ಓಂ ವಿಷ್ಣವೇ ನಮಃ । ಓಂ ಶಿವಾಯ ನಮಃ । ಓಂ ಸೂರ್ಯಾಯ ನಮಃ । ಓಂ ಚಂದ್ರಮಸೇ ನಮಃ । ಓಂ ಭೌಮಾಯ ನಮಃ । ಓಂ ಬುಧಾಯ ನಮಃ । ಓಂ ಬೃಹಸ್ಪತಯೇ ನಮಃ। ಓಂ ಭಾರ್ಗವಾಯ ನಮಃ । ಓಂ ಶನೈಶ್ಚರಾಯ ನಮಃ । ಓಂ ರಾಹವೇ ನಮಃ। ಓಂ ಕೇತವೇ ನಮಃ' ಎಂಬ ನಾಮಮಂತ್ರಗಳಿಂದ ಅವರಿಗೆ ಅರ್ಘ್ಯ, ಪಾದ್ಯ ಮುಂತಾದ ಉಪಚಾರಗಳನ್ನು ಸಮರ್ಪಿಸಿ, ಫಲಹಸ್ತನಾಗಿ ಈ ಕೆಳಗಿನ ಪ್ರಾರ್ಥನೆಯನ್ನು ಸಲ್ಲಿಸಬೇಕು :

**ಓಂ ಬ್ರಹ್ಮಾ ಮುರಾರಿಸ್ತ್ರಿಪುರಾನ್ತಕಾರೀ**
**ಭಾನುಃ ಶಶೀ ಭೂಮಿಸುತೋ ಬುಧಶ್ಚ ।**
**ಗುರುಶ್ಚ ಶುಕ್ರಃ ಶನಿರಾಹುಕೇತವಃ**
**ಸರ್ವೇ ಗ್ರಹಾಃ ಶಾನ್ತಿಕರಾ ಭವನ್ತು ॥**

ಮತ್ತು 'ಅನಯಾ ಪೂಜಯಾ ಬ್ರಹ್ಮವಿಷ್ಣುಶಿವಸಹಿತ ಸೂರ್ಯದಿನವಗ್ರಹಾಃ ಪ್ರೀಯನ್ತಾಂ ನ ಮಮ' ಎಂದು ಹೇಳಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಅನಂತರ ಗೌರಿಯೇ ಮುಂತಾದ ಹದಿನಾರು ಮಂದಿ ಮಾತೃದೇವತೆಗಳನ್ನು ಆವಾಹಿಸಿ ನಾಮಮಂತ್ರಗಳಿಂದ ಅವರಿಗೆ ಉಪಚಾರಗಳನ್ನು ಸಮರ್ಪಿಸುವುದು.

'ಓಂ ಭೂರ್ಭುವಸ್ಸ್ವಃ ಭೋಃ ಗೌರ್ಯಾದಿ ಷೋಡಶ ಮಾತರಃ ಇಹಾಗಚ್ಛತ । ಮಮ ಪೂಜಾಂ ಗೃಹ್ಣೀತ ।' ಎಂದು ಆವಾಹನೆ.

ಓಂ ಗೌರ್ಯೈ ನಮಃ । ಓಂ ಪದ್ಮಾಯೈ ನಮಃ । ಓಂ ಶಚ್ಯೈ ನಮಃ । ಓಂ ಮೇಧಾಯೈ ನಮಃ । ಓಂ ಸಾವಿತ್ರ್ಯೈ ನಮಃ । ಓಂ ವಿಜಯಾಯೈ ನಮಃ । ಓಂ ಜಯಾಯೈ ನಮಃ । ಓಂ ದೇವಸೇನಾಯೈ ನಮಃ। ಓಂ ಸ್ವಧಾಯೈ ನಮಃ । ಓಂ ಸ್ವಾಹಾಯೈ ನಮಃ । ಓಂ ಮಾತೃಭ್ಯೋ ನಮಃ । ಓಂ ಲೋಕ ಮಾತೃಭ್ಯೋ ನಮಃ । ಓಂ ಹೃಷ್ಟ್ಯೈ ನಮಃ। ಓಂ ಪುಷ್ಟ್ಯೈ ನಮಃ ।

ಓಂ ತುಷ್ಟ್ಯೈ ನಮಃ । ಓಂ ಆತ್ಮಕುಲದೇವತಾಯೈ ನಮಃ । (ಎಂಬ ನಾಮಮಂತ್ರಗಳಿಂದ ಪಾದ್ಯಾದಿ ಉಪಚಾರಗಳು)

ಪ್ರಾರ್ಥನಾಶ್ಲೋಕ : (ಫಲಹಸ್ತನಾಗಿ)

ಗೌರೀ ಪದ್ಮಾ ಶಚೀ ಮೇಧಾ ಸಾವಿತ್ರೀ ವಿಜಯಾ ಜಯಾ ।
ದೇವಸೇನಾ ಸ್ವಧಾ ಸ್ವಾಹಾ ಮಾತರೋ ಲೋಕಮಾತರಃ ॥
ಹೃಷ್ಟಿಃ ಪುಷ್ಟಿಸ್ತಥಾ ತುಷ್ಟಿರಾತ್ಮನಃ ಕುಲದೇವತಾ ।
ಇತ್ಯೇತಾ ಮಾತರಸ್ಸರ್ವಾ ವೃದ್ಧಿಂ ಕುರ್ವನ್ತು ಮೇ ಸದಾ ॥

'ಅನಯಾ ಪೂಜಯಾ ಗೌರ್ಯಾದಿಷೋಡಶಮಾತರಃ ಪ್ರೀಯನ್ತಾಂ ನ ಮಮ' ಎಂದು ಪುಷ್ಪಾಂಜಲಿಯನ್ನು ಇವರಿಗೆ ಸಮರ್ಪಿಸಬೇಕು.

ಇದಾದ ಮೇಲೆ ಸಪ್ತಚಿರಂಜೀವಿಗಳ ಆವಾಹನೆ, ಪೂಜೆ ಮತ್ತು ಅವರಿಗೆ ಪುಷ್ಪಾಂಜಲಿ.

ಆವಾಹನವಾಕ್ಯ :- 'ಓಂ ಭೂರ್ಭುವಸ್ಸ್ವಃ ಭೋಃ ಅಶ್ವತ್ಥಾಮಾದಿ ಸಪ್ತಚಿರಜೀವಿನಃ ಇಹಾಗತ್ಯ ಮಮ ಪೂಜಾಂ ಗೃಹ್ಣೀತ ।

ಪೂಜಾನಾಮಮಂತ್ರ : ಓಂ ಅಶ್ವತ್ಥಾಮ್ನೇ ನಮಃ । ಓಂ ಬಲಯೇ ನಮಃ । ಓಂ ವ್ಯಾಸಾಯ ನಮಃ । ಓಂ ಹನುಮತೇ ನಮಃ । ಓಂ ವಿಭೀಷಣಾಯ ನಮಃ । ಓಂ ಕೃಪಾಯ ನಮಃ । ಓಂ ಪರಶುರಾಮಾಯ ನಮಃ । ಇವರನ್ನು ಫಲಹಸ್ತನಾಗಿ ಹೀಗೆ ಪ್ರಾರ್ಥಿಸಬೇಕು.

ಅಶ್ವತ್ಥಾಮಾ ಬಲಿರ್ವ್ಯಾಸೋ ಹನುಮಾಂಶ್ಚ ವಿಭೀಷಣಃ ।
ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ।
ಯಜಮಾನಗೃಹೇ ನಿತ್ಯಂ ಸುಖದಾಃ ಸಿದ್ಧಿದಾಃ ಸದಾ ॥

'ಅನಯಾ ಪೂಜಯಾ ಅಶ್ವತ್ಥಾಮಾದಿ ಸಪ್ತಚಿರಜೀವಿನಃ ಪ್ರೀಯನ್ತಾಂ ನ ಮಮ' ಎಂದು ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಇದಾದನಂತರ ಸರ್ವತೋಭದ್ರಮಂಡಲದಲ್ಲಿರುವ ದೇವತೆಗಳ ಆವಾಹನ-ಪೂಜನಗಳನ್ನು ದೇವಪೂಜಾಪದ್ಧತಿಗಳಿಗನುಗುಣವಾಗಿ ಮಾಡಿ ಮಧ್ಯದಲ್ಲಿ ತಾಮ್ರಕಲಶವನ್ನು ಸ್ಥಾಪಿಸಬೇಕು. ಅದರ ಸಂಕ್ಷಿಪ್ತವಿಧಿ :- 'ಓಂ

**ಭೂರಸಿ'** ಇತ್ಯಾದಿ ಮಂತ್ರದಿಂದ ಭೂಮಿಯನ್ನು ಪ್ರಾರ್ಥಿಸಿ ಕೈಯಿಂದ ಕಲಶದ ಕೆಳಗಿರುವ ಭೂಮಿಯನ್ನು ಸ್ಪರ್ಶಿಸಬೇಕು. **'ಓಂ ಮಹೀ ದ್ಯೌಃ ಪೃಥ್ವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಂ । ಪಿಪೃತಾನ್ನೋ ವರೀಮಭಿಃ '** ಎಂಬ ಮಂತ್ರವನ್ನು ಆ ಸಮಯದಲ್ಲಿ ಹೇಳಬೇಕು. ಅದೇ ಭೂಮಿಯಲ್ಲಿ ಕುಂಕುಮ ಮುಂತಾದುವುಗಳಿಂದ ಅಷ್ಟದಳಕಮಲವನ್ನು ರಚಿಸಿ ಅದರ ಮೇಲೆ **'ಓಂ ಧಾನ್ಯಮಸಿ'** ಇತ್ಯಾದಿ ಮಂತ್ರದಿಂದ ಸಪ್ತ ಧಾನ್ಯಗಳನ್ನು ಹಾಕಬೇಕು. ಮತ್ತೆ ಆ ಸಪ್ತಧಾನ್ಯಗಳ ಮೇಲೆ **'ಓಂ ಆಜಿಘ್ರಕಲಶಂ'** ಇತ್ಯಾದಿ ಮಂತ್ರಗಳನ್ನು ಉಚ್ಚರಿಸುತ್ತಾ ಕಲಶವನ್ನು ಸ್ಥಾಪಿಸಬೇಕು. ಅನಂತರ 'ಓಂ ವರುಣಸ್ಯೋತ್ತಂಭನಮಸಿ' ಇತ್ಯಾದಿ ಮಂತ್ರದಿಂದ ಕಲಶಕ್ಕೆ ಶುದ್ಧವಾದ ಜಲವನ್ನು ಸುರಿಯಬೇಕು. ಆಮೇಲೆ 'ಓಂ ಸ್ಥಿರೋ ಭವ' ಇತ್ಯಾದಿ ಮಂತ್ರವನ್ನು ಪಠಿಸಿ ಬೀಳದಂತೆ ಮತ್ತು ಅಲ್ಲಾಡದಂತೆ ಕಲಶವನ್ನು ಸ್ಥಿರವಾಗಿರಿಸಬೇಕು. ಆ ಕಲಶದ ಪೂರ್ವಭಾಗ ದಲ್ಲಿ **'ಓಂ ಅಗ್ನಿಮೀಳೇ'** ಇತ್ಯಾದಿ ಮಂತ್ರದಿಂದ ಋಗ್ವೇದವನ್ನೂ, ದಕ್ಷಿಣಭಾಗದಲ್ಲಿ **'ಓಂ ಇಷೇತ್ವೋರ್ಜೇತ್ವಾ'** ಇತ್ಯಾದಿ ಮಂತ್ರದಿಂದ ಯಜುರ್ವೇದವನ್ನೂ, ಪಶ್ಚಿಮಭಾಗದಲ್ಲಿ **'ಓಂ ಅಗ್ನ ಆಯಾಹಿ ವೀತಯೇ'** ಇತ್ಯಾದಿ ಮಂತ್ರದಿಂದ ಸಾಮವೇದವನ್ನೂ, ಉತ್ತರಭಾಗದಲ್ಲಿ **'ಓಂ ಶನ್ನೋದೇವೀರಭಿಷ್ಟಯೇ'** ಇತ್ಯಾದಿ ಮಂತ್ರದಿಂದ ಅಥರ್ವವೇದ ವನ್ನೂ ಆವಾಹಿಸಿ ಸ್ಥಾಪಿಸಬೇಕು. ಐದು ಕಲಶಗಳಿದ್ದರೆ ಬೇರೆ-ಬೇರೆ ಕಲಶಗಳಲ್ಲಿ ಬೇರೆ-ಬೇರೆ ವೇದಗಳನ್ನು ಸ್ಥಾಪಿಸಬೇಕು. ಅನಂತರ ಕಲಶ ದಲ್ಲಿ **'ಓಂ ಅಶ್ವತ್ಥೇ'** ಇತ್ಯಾದಿ ಮಂತ್ರದಿಂದ ಆಲ, ಅರಳಿ, ನೇರಳೆ ಮತ್ತು ಮಾವಿನ ಚಿಗುರುಗಳನ್ನು ಹಾಕಬೇಕು. **'ಕಾಂಡಾತ್ಕಾಂಡಾತ್ ಪ್ರರೋಹನ್ತೀ'** ಎಂಬ ಮಂತ್ರದಿಂದ ಅದರೊಳಗೆ ಗರಿಕೆಯ ಚಿಗುರು ಗಳನ್ನು ಸೇರಿಸಬೇಕು. **'ಓಂ ಪವಿತ್ರೇ ಸ್ಥಃ'** ಎಂಬ ಮಂತ್ರದಿಂದ ಕುಶವನ್ನೂ, **'ಓಂ ಯಾಃ ಫಲಿನೀಃ'** ಎಂಬ ಮಂತ್ರದಿಂದ ಅಡಕೆಯನ್ನೂ, **'ಓಂ ಹಿರಣ್ಯಗರ್ಭಃ** ಅಥವಾ **'ತತ್ಸುವರ್ಣಗ್ಂ ಹಿರಣ್ಯಮಭವತ್ ।'** ಇತ್ಯಾದಿ ಮಂತ್ರದಿಂದ ಚಿನ್ನದ ಚೂರನ್ನೂ, **'ಓಂ ಪರಿವಾಜಪತಿಃ'** ಎಂಬ ಮಂತ್ರದಿಂದ ಪಂಚರತ್ನಗಳನ್ನೂ (ಬಂಗಾರ, ಬೆಳ್ಳಿ, ಮುತ್ತು, ಹವಳ, ವಜ್ರ

ಗಳನ್ನೂ ), '**ಓಂ ಯಾ ಓಷಧೀಃ**' ಎಂಬ ಮಂತ್ರದಿಂದ ಸರ್ವೌಷಧ ಗಳನ್ನೂ (ದಶಮೂಲಗಳನ್ನೂ ), '**ಓಂ ಗಂಧದ್ವಾರಾಂ**' ಎಂಬ ಮಂತ್ರ ದಿಂದ ಗಂಧವನ್ನೂ, '**ಓಂ ಅಕ್ಷನ್ನಮೀಮದನ್ತ**' ಎಂಬ ಮಂತ್ರದಿಂದ ಅಕ್ಷತೆಯನ್ನೂ ಕಲಶದೊಳಗೆ ಹಾಕಬೇಕು. '**ಓಂ ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ**' ಎಂಬ ಮಂತ್ರದಿಂದಾಗಲೀ, '**ಓಂ ಓಷಧಯಃ ಪ್ರತಿಗೃಹ್ಣೀತ ಪುಷ್ಪಾವತೀಃ** ' ಎಂಬ ಮಂತ್ರದಿಂದಾಗಲೀ ಅಥವಾ '**ಓಂ ಆಯನೇ ತೇ ಪರಾಯಣೇ**' ಎಂಬ ಮಂತ್ರದಿಂದಾಗಲೀ ಪುಷ್ಪಗಳನ್ನೂ ಅದರಲ್ಲಿ ಸೇರಿಸಬೇಕು. '**ಓಂ ಧೂರಸಿ**' ಎಂಬ ಮಂತ್ರದಿಂದ ಧೂಪದಿಂದ ಅದನ್ನು ಸುವಾಸಿತವಾಗಿಸುವುದು. '**ಓಂ ಅಗ್ನಿರ್ಜ್ಯೋತಿಃ**' ಅಥವಾ '**ಓಂ ಉದ್ದೀಪ್ಯಸ್ವ ಜಾತವೇದಃ** ' ಎಂಬ ಮಂತ್ರದಿಂದ ದೀಪವನ್ನು ಹೊತ್ತಿಸಿ ಇಡುವುದು. '**ಓಂ ತಂ ಚ ನದ್ಯಃ** ' ಎಂಬ ಮಂತ್ರದಿಂದ ತೀರ್ಥೋದಕವನ್ನೂ, '**ಓಂ ಉಪಹ್ವರೇ**' ಎಂಬ ಮಂತ್ರದಿಂದ ನದೀಸಂಗಮತೀರ್ಥವನ್ನೂ, '**ಓಂ ಸಮುದ್ರಾಯ ತ್ವಾ**' ಎಂಬ ಮಂತ್ರದಿಂದ ಅಥವಾ '**ಓಂ ಸಮುದ್ರಾಯ ವಯುನಾಯ**' ಎಂಬ ಮಂತ್ರದಿಂದ ಸಮುದ್ರತೀರ್ಥವನ್ನೂ ಕಲಶದಲ್ಲಿ ಸೇರಿಸಬೇಕು. '**ಓಂ ಸ್ಯೋನಾ ಪೃಥಿವೀ**' ಇತ್ಯಾದಿ ಮಂತ್ರದಿಂದ ಸಪ್ತಮೃತ್ತಿಕೆಗಳನ್ನೂ [ ಅಂದರೆ ಗಜಶಾಲೆ, ಅಶ್ವಶಾಲೆ, ಚೌಕ, ಸಂಗಮ, ಹುತ್ತ, ಗೋಷ್ಠ ( ಹಸುವಿನ ಕೊಟ್ಟಿಗೆ ) ಮತ್ತು ಮಡು ಇವುಗಳ ಮಣ್ಣುಗಳನ್ನು] ಹಾಕಬೇಕು. '**ಓಂ ವಸೋಃ ಪವಿತ್ರಮಸಿ**' ಎಂಬ ಮಂತ್ರದಿಂದ ಕಲಶದ ಮೇಲೆ ಕೆಂಪುಬಟ್ಟೆಯನ್ನು ಹೊದ್ದಿಸುವುದು. '**ಓಂ ಪೂರ್ಣಾದರ್ವಿಪರಾಪತ**' ಎಂಬ ಮಂತ್ರದಿಂದ ಕಲಶದ ಮೇಲೆ ಒಂದು ಪೂರ್ಣಪಾತ್ರವನ್ನು (ಅಂದರೆ ಅಕ್ಕಿ ತುಂಬಿದ ಕಂಚಿನ ಅಥವಾ ತಾಮ್ರದ ಪಾತ್ರೆಯನ್ನು ) ಇರಿಸುವುದು. '**ಓಂ ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ**' ಎಂಬ ಮಂತ್ರದಿಂದ ಆ ಪೂರ್ಣಪಾತ್ರದ ಮೇಲೆ ಕೆಂಪುಬಟ್ಟೆ ಸುತ್ತಿರುವ ಶ್ರೀಫಲವನ್ನು (ಬಿಲ್ವದ ಹಣ್ಣು) ಅಥವಾ ತೆಂಗಿನಕಾಯನ್ನು ಇರಿಸಬೇಕು. ಕೈಯಲ್ಲಿ ಅಕ್ಷತೆಯನ್ನು ತೆಗೆದುಕೊಂಡು '**ಓಂ ಮನೋ ಜ್ಯೋತಿಃ** ' ಇತ್ಯಾದಿ ಮಂತ್ರದಿಂದ ಕಲಶದ ಮೇಲೆ ಅಕ್ಷತೆಯನ್ನು ಹಾಕುವುದು–ಇದು ಕಲಶಪ್ರತಿಷ್ಠೆ ಎನ್ನಿಸುವುದು. ಅನಂತರ '**ಸರ್ವೇ ಸಮುದ್ರಾಃ ಸರಿತಃ** ' ಅಥವಾ :-

ಓಂ ಕಲಶಸ್ಯ ಮುಖೇ ವಿಷ್ಣುಃ ಕಣ್ಠೇ ರುದ್ರಃ ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ।
ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುನ್ಧರಾ ।
ಋಗ್ವೇದೋऽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥
ಅಂಗೈಶ್ಚ ಸಹಿತಾಃ ಸರ್ವೇ ಕಲಶಾಮ್ಬುಸಮಾಶ್ರಿತಾಃ ।
ಆಯಾನ್ತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ ॥

'ಆಪೋ ವಾ ಇದಗ್ಂ ಸರ್ವಂ..... ಭೂರ್ಭುವಸ್ಸುವರಾಪ ಓಂ' 'ಗಂಗೇ ಚ ಯಮುನೇ ಚೈವ' ಇತ್ಯಾದಿ ಮಂತ್ರಶ್ಲೋಕಗಳನ್ನೂ ಮತ್ತು 'ಇಮಂ ಮೇ ಗಂಗೇ ಯಮುನೇ ಸರಸ್ವತಿ' ಎಂಬ ಮಂತ್ರವನ್ನೂ ಹೇಳಿ ಅದರಲ್ಲಿ ತೀರ್ಥಗಳನ್ನು ಆವಾಹನೆಮಾಡಬೇಕು. ಗಂಧವೇ ಮುಂತಾದ ಉಪಚಾರಗಳಿಂದ ತೀರ್ಥಗಳನ್ನು ಪೂಜಿಸಿ ಕಲಶವನ್ನು ಹೀಗೆ ಪ್ರಾರ್ಥಿಸಬೇಕು:

ದೇವದಾನವಸಂವಾದೇ ಮಥ್ಯಮಾನೇ ಜಲಾರ್ಣವೇ ।
ಉತ್ಪನ್ನೋऽಸಿ ತದಾ ಕುಮ್ಭ ವಿಧೃತೋ ವಿಷ್ಣುನಾ ಸ್ವಯಮ್ ॥
ತ್ವತ್ತೋಯೇ ಸರ್ವತೀರ್ಥಾನಿ ದೇವಾಃ ಸರ್ವೇ ತ್ವಯಿ ಸ್ಥಿತಾಃ ।
ತ್ವಯಿ ತಿಷ್ಠನ್ತಿ ಭೂತಾನಿ ತ್ವಯಿ ಪ್ರಾಣಾಃ ಪ್ರತಿಷ್ಠಿತಾಃ ॥
ಶಿವಃ ಸ್ವಯಂ ತ್ವಮೇವಾಸಿ ವಿಷ್ಣುಸ್ತ್ವಂ ಚ ಪ್ರಜಾಪತಿಃ ।
ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾಃ ಸಪೈತೃಕಾಃ ॥
ತ್ವಯಿ ತಿಷ್ಠನ್ತಿ ಸರ್ವೇऽಪಿ ಯತಃ ಕಾಮಫಲಪ್ರದಾಃ ।
ತ್ವತ್ಪ್ರಸಾದಾದಿಮಂ ಯಜ್ಞಂ ಕರ್ತುಮೀಹೇ ಜಲೋದ್ಭವ ॥
ಸಾನ್ನಿಧ್ಯಂ ಕುರು ಮೇ ದೇವ ಪ್ರಸನ್ನೋ ಭವ ಸರ್ವದಾ ।
ಬ್ರಾಹ್ಮಣೈರ್ನಿರ್ಮಿತಸ್ತ್ವಂ ಹಿ ಮನ್ತ್ರೈರೇವಾಮೃತೋದ್ಭವೈಃ ।
ಪ್ರಾರ್ಥಯಾಮಿ ಚ ಕುಮ್ಭ ತ್ವಾಂ ವಾಞ್ಛಿತಾನ್ಯಾದಧಸ್ವ ಮೇ ॥

ಪುರಾ ಹಿ ಸೃಷ್ಟಶ್ಚ ಪಿತಾಮಹೇನ
ಮಹೋತ್ಸವಾನಾಂ ಪ್ರಥಮೋ ವರಿಷ್ಠಃ ।
ದೂರ್ವಾವಟಾಶ್ವತ್ಥಸುಫಲ್ಲವಲೈರ್ಯುಕ್
ಕರೋತು ಶಾನ್ತಿಂ ಕಲಶಃ ಸುವಾಸಾಃ ॥

(ಆಲ, ಅಶ್ವತ್ಥ, ನೇರಳೆ, ಮಾವು, ಅಡಿಕೆಗೋಳಿ–ಎಂಬ ಐದು ಮರಗಳ ತೊಗಟೆಗಳನ್ನೂ ಕಲಶೋದಕಕ್ಕೆ ಸೇರಿಸುವುದುಂಟು.)

ಹೀಗೆ ಕಲಶಪ್ರಾರ್ಥನೆಯನಂತರ **'ಗಣಾನಾಂ ತ್ವಾ'** ಎಂಬ ಮಂತ್ರದಿಂದ ಗಣೇಶದೇವರನ್ನೂ, **'ತತ್ತ್ವಾಯಾಮಿ'** ಎಂಬ ಮಂತ್ರದಿಂದ ವರುಣದೇವರನ್ನೂ ಅದರಲ್ಲಿ ಆವಾಹಿಸಿ ಷೋಡಶೋಪಚಾರಗಳಿಂದ ಪೂಜಿಸಬೇಕು. ಅರ್ಘ್ಯ, ಪಾದ್ಯ, ಆಚಮನೀಯ, ಸ್ನಾನ, ವಸ್ತ್ರ, ಯಜ್ಞೋಪವೀತ, ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ, ದಕ್ಷಿಣೆ, ಪ್ರದಕ್ಷಿಣೆ ಮತ್ತು ಪುಷ್ಪಾಂಜಲಿ–ಇವು ಷೋಡಶೋಪಚಾರಗಳು. (ಇಲ್ಲಿ ಅಕ್ಷತೆ, ದಕ್ಷಿಣೆ ಇವುಗಳನ್ನು ಬಿಟ್ಟು ನಮಸ್ಕಾರ-ಸ್ತುತಿಗಳನ್ನು ಸೇರಿಸುವುದೂ ಉಂಟು.) ಈ ಪೂಜಾನಂತರ **'ಅನಯಾ ಪೂಜಯಾ ವರುಣಾದ್ಯಾವಾಹಿತದೇವತಾಃ ಪ್ರೀಯನ್ತಾಂ ನ ಮಮ'** ಎಂದು ಹೇಳಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಇದಾದನಂತರ ಕಲಶದ ಮೇಲೆ ಸುವರ್ಣದ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ಸಂಸ್ಕರಿಸಿ ಸ್ಥಾಪಿಸಬೇಕು. ಪುರುಷಸೂಕ್ತದ ಹದಿನಾರು ಅಥವಾ ಹದಿನೆಂಟು ಋಕ್ಕುಗಳಿಂದ ಲಕ್ಷ್ಮೀನಾರಾಯಣದೇವರ ಪೂಜೆ ಮಾಡಿ ಸಾಲಿಗ್ರಾಮವನ್ನೂ ಹೀಗೆಯೇ ಪೂಜಿಸಬೇಕು. ಪೂಜಾನಂತರ ಶ್ರೀಭಗವಂತನನ್ನು :

**ಬ್ರಹ್ಮಸತ್ರಂ ಕರಿಷ್ಯಾಮಿ ತವಾನುಗ್ರಹತೋ ವಿಭೋ ।**
**ತನ್ನಿರ್ವಿಘ್ನಂ ಭವೇದ್ದೇವ ರಮಾನಾಥ ಕ್ಷಮಸ್ವ ಮೇ ॥**

ಎಂದು ಪ್ರಾರ್ಥಿಸಿ, **'ಅನಯಾ ಪೂಜಯಾ ಲಕ್ಷ್ಮೀಸಹಿತೋ ಭಗವಾನ್ನಾರಾಯಣಃ ಪ್ರೀಯತಾಂ ನ ಮಮ'** ಎಂದು ಹೇಳಿ ಪುಷ್ಪಾಂಜಲಿಯನ್ನು ಸ್ವಾಮಿಗೆ ಸಮರ್ಪಿಸಬೇಕು. (ಪ್ರತಿ ಪೂಜೆಯಲ್ಲೂ ಹೀಗೆಯೇ ವಿಧಿ)

ಆಮೇಲೆ **'ನರನಾರಾಯಣಾಭ್ಯಾಂ ನಮಃ'** ಎಂಬ ನಾಮಮಂತ್ರದಿಂದ ನರ-ನಾರಾಯಣದೇವರನ್ನು ಆವಾಹಿಸಿ ಪೂಜಿಸಿ ಹೀಗೆ ಪ್ರಾರ್ಥಿಸಬೇಕು :

ಯೋ ಮಾಯಯಾ ವಿರಚಿತಂ ನಿಜಮಾತ್ಮನೀದಂ
ಖೇ ರೂಪಭೇದಮಿವ ತತ್ಪ್ರತಿ ಚಕ್ಷಣಾಯ ।
ಏತೇನ ಧರ್ಮಸದನೇ ಋಷಿಮೂರ್ತಿನಾದ್ಯ
ಪ್ರಾದುಶ್ಚಕಾರ ಪುರುಷಾಯ ನಮಃ ಪರಸ್ಮೈ ॥

ಸೋಽಯಂ ಸ್ಥಿತಿವ್ಯತಿಕರೋಽಪಶಮಾಯ ಸೃಷ್ಟಾನ್
ಸತ್ತ್ವೇನ ನಃ ಸುರಗಣಾನನುಮೇಯತತ್ತ್ವಃ ।
ದೃಶ್ಯಾವದಭ್ರಕರುಣೇನ ವಿಲೋಕನೇನ
ಯಚ್ಛ್ರೀನಿಕೇತಮಮಲಂ ಕ್ಷಿಪತಾರವಿನ್ದಮ್ ॥

'ಅನಯಾ ಪೂಜಯಾ ಭಗವನ್ತೌ ನರ-ನಾರಾಯಣೌ ಪ್ರೀಯೇತಾಂ ನ ಮಮ' ಎಂದು ಪುಷ್ಪಾಂಜಲಿಯನ್ನು ಸಮರ್ಪಿಸುವುದು.

ಇದಾದನಂತರ ಪ್ರವಚನಕಾರನ ಮತ್ತು ಶ್ರೋತೃಗಳ ಸರ್ವವಿಕಾರಗಳನ್ನೂ ಹೋಗಲಾಡಿಸುವುದಕ್ಕಾಗಿ ಶ್ರೀವಾಯುದೇವರನ್ನೂ ಆವಾಹಿಸಿ ಪೂಜಿಸಬೇಕು.

'ಓಂ ವಾಯವೇ ಸರ್ವಕಲ್ಯಾಣಕರ್ತ್ರೇ ಸ್ವಾಹಾ' ಎಂಬ ಮಂತ್ರದಿಂದ ಪಾದ್ಯ ಮುಂತಾದ ಉಪಚಾರಗಳನ್ನು ಸಮರ್ಪಿಸಿ ಹೀಗೆ ಪ್ರಾರ್ಥಿಸಬೇಕು :

ಅನ್ತಃ ಪ್ರವಿಶ್ಯ ಭೂತಾನಿ ಯೋ ಬಿಭರ್ತ್ಯಾತ್ಮಕೇತುಭಿಃ ।
ಅನ್ತರ್ಯಾಮೀಶ್ವರಃ ಸಾಕ್ಷಾತ್ ಪಾತು ನೋ ಯದ್ವಶೇ ಸ್ಫುಟಮ್ ॥

'ಅನಯಾ ಪೂಜಯಾ ಸರ್ವಕಲ್ಯಾಣಕರ್ತಾ ವಾಯುಃ ಪ್ರೀಯತಾಂ ನ ಮಮ' ಎಂದು ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಶ್ರೀವಾಯುದೇವರ ಪೂಜಾನಂತರ '**ಓಂ ಗುರವೇ ನಮಃ**' ಎಂಬ ಮಂತ್ರದಿಂದ ಶ್ರೀಗುರುದೇವರಿಗೆ ಪೂಜೆಗಳನ್ನು ಸಲ್ಲಿಸಿ ಹೀಗೆ ಪ್ರಾರ್ಥನೆ ಮಾಡಬೇಕು :

ಬ್ರಹ್ಮಸ್ಥಾನಸರೋಜಮಧ್ಯವಿಲಸಚ್ಛೀತಾಂಶುಪೀಠಸ್ಥಿತಂ
ಸ್ಫೂರ್ಜತ್ಸೂರ್ಯರುಚಿಂ ವರಾಭಯಕರಂ ಕರ್ಪೂರ-
ಕುನ್ದೋಜ್ಜ್ವಲಮ್ ।

ಶ್ವೇತಸ್ರಗ್ವಸನಾನುಲೇಪನಯುತಂ ವಿದ್ಯುದ್ರುಚಾ ಕಾನ್ತಯಾ ।
ಸಂಶ್ಲಿಷ್ಟಾರ್ಧತನುಂ ಪ್ರಸನ್ನವದನಂ ವನ್ದೇ ಗುರುಂ ಸಾದರಮ್ ॥

'ಅನಯಾ ಪೂಜಯಾ ಶ್ರೀಗುರುದೇವಃ ಪ್ರೀಯತಾಂ ನ ಮಮ' ಎಂದು ಪುಷ್ಪಾಂಜಲಿ.

ಅನಂತರ ಬಿಳಿಯ ಪುಷ್ಪ ಮುಂತಾದುವುಗಳಿಂದ ಶ್ರೀಸರಸ್ವತೀದೇವಿಯನ್ನು 'ಓಂ ಸರಸ್ವತ್ಯೈ ನಮಃ' ಎಂಬ ನಾಮಮಂತ್ರದಿಂದ ಪೂಜೆ ಮಾಡಿ ಹೀಗೆ ಪ್ರಾರ್ಥಿಸಬೇಕು :

ಯಾ ಕುನ್ದೇನ್ದುತುಷಾರಹಾರಧವಳಾ ಯಾ ಶುಭ್ರವಸ್ತ್ರಾನ್ವಿತಾ
ಯಾ ವೀಣಾವರದಣ್ಡಮಣ್ಡಿತಕರಾ ಯಾ ಶ್ವೇತಪದ್ಮಾಸನಾ ।
ಯಾ ಬ್ರಹ್ಮಾಚ್ಯುತಶಂಕರಪ್ರಭೃತಿಭಿರ್ದೇವೈಃ ಸದಾ ವನ್ದಿತಾ
ಸಾ ಮಾಂ ಪಾತು ಸರಸ್ವತೀ ಭಗವತೀ ನಿಶ್ಶೇಷಜಾಡ್ಯಾಪಹಾ ॥

'ಅನಯಾ ಪೂಜಯಾ ಭಗವತೀ ಸರಸ್ವತೀ ಪ್ರೀಯತಾಂ ನ ಮಮ' ಎಂದು ಪುಷ್ಪಾಂಜಲಿಯನ್ನು ಸಮರ್ಪಿಸುವುದು.

ಸರಸ್ವತೀಪೂಜಾನಂತರ ಓಂ ಶೇಷಾಯ ನಮಃ । ಓಂ ಸನತ್ಕುಮಾರಾಯ ನಮಃ । ಓಂ ಸಾಂಖ್ಯಾಯನಾಯ ನಮಃ । ಓಂ ಪರಾಶರಾಯ ನಮಃ । ಓಂ ಬೃಹಸ್ಪತಯೇ ನಮಃ । ಓಂ ಮೈತ್ರೇಯಾಯ ನಮಃ।ಓಂ ಉದ್ಧವಾಯ ನಮಃ ।ಎಂಬ ನಾಮ ಮಂತ್ರಗಳಿಂದ ಆದಿಶೇಷನೇ ಮುಂತಾದವರನ್ನು ಆವಾಹಿಸಿ ಪೂಜಿಸಬೇಕು. ಅನಂತರ ಮಾಡಬೇಕಾದ ಪ್ರಾರ್ಥನೆ :

ಶೇಷಃ ಸನತ್ಕುಮಾರಶ್ಚ ಸಾಂಖ್ಯಾಯನಪರಾಶರೌ ।
ಬೃಹಸ್ಪತಿಶ್ಚ ಮೈತ್ರೇಯ ಉದ್ಧವಶ್ಚಾತ್ರ ಕರ್ಮಣಿ ।
ಪ್ರತ್ಯೂಹವೃನ್ದಂ ಸತತಂ ಹರನ್ತಾಂ ಪೂಜಿತಾ ಮಯಾ ॥

'ಅನಯಾ ಪೂಜಯಾ ಶೇಷ-ಸನತ್ಕುಮಾರ-ಸಾಂಖ್ಯಾಯನ-ಪರಾಶರ-ಬೃಹಸ್ಪತಿ- ಮೈತ್ರೇಯೋದ್ಧವಾಃ ಪ್ರೀಯನ್ತಾಂ ನ ಮಮ' ಎಂದು ಪುಷ್ಪಾಂಜಲಿಯನ್ನು ಸಮರ್ಪಣೆಮಾಡುವುದು.

ಅನಂತರ ಓಂ ತ್ರಯ್ಯಾರುಣಯೇ ನಮಃ । ಓಂ ಕಶ್ಯಪಾಯ

ನಮಃ । ಓಂ ರಾಮಶಿಷ್ಯಾಯ ನಮಃ । ಓಂ ಅಕೃತವ್ರಣಾಯ ನಮಃ । ಓಂ ವೈಶಂಪಾಯನಾಯ ನಮಃ । ಓಂ ಹಾರೀತಾಯ ನಮಃ । ಎಂಬ ನಾಮಮಂತ್ರಗಳಿಂದ ತ್ರಯ್ಯಾರುಣಿಯೇ ಮುಂತಾದ ಆರು ಮಂದಿ ಪೌರಾಣಿಕರಿಗೆ ಹಿಂದಿನಂತೆ ಪೂಜೆಯನ್ನು ಸಲ್ಲಿಸಿ ಹೀಗೆ ಪ್ರಾರ್ಥಿಸುವುದು :

ತ್ರಯ್ಯಾರುಣಿಃ ಕಶ್ಯಪಶ್ಚ ರಾಮಶಿಷ್ಯೋಽಕೃತವ್ರಣಃ ।
ವೈಶಂಪಾಯನಹಾರೀತೌ ಷಡ್ವೈ ಪೌರಾಣಿಕಾ ಇಮೇ ।
ಸುಖದಾಃ ಸನ್ತು ಮೇ ನಿತ್ಯಮನಯಾ ಪೂಜಯಾರ್ಚಿತಾಃ ॥

'ಅನಯಾ ಪೂಜಯಾ ತ್ರಯ್ಯಾರುಣಿಪ್ರಭೃತಯಃ ಷಟ್ ಪೌರಾಣಿಕಾಃ ಪ್ರೀಯನ್ತಾಂ ನ ಮಮ' ಎಂದು ಪುಷ್ಪಾಂಜಲಿಯನ್ನು ಅವರಿಗೆ ಸಮರ್ಪಿಸುವುದು.

ಅನಂತರ 'ಓಂ ಭಗವತೇ ವ್ಯಾಸಾಯ ನಮಃ' ಎಂಬ ನಾಮ ಮಂತ್ರದಿಂದ ಭಗವಾನ್ ವೇದವ್ಯಾಸರನ್ನು ಸ್ಥಾಪಿಸಿ ಪೂಜಿಸಿ ಹೀಗೆ ಪ್ರಾರ್ಥಿಸಬೇಕು.

ನಮಸ್ತಸ್ಮೈ ಭಗವತೇ ವ್ಯಾಸಾಯಾಮಿತತೇಜಸೇ ।
ಪಪುರ್ಜ್ಞಾನಮಯಂ ಸೌಮ್ಯ ಯನ್ಮುಖಾಮ್ಬುರುಹಾಸವಮ್ ॥

'ಅನಯಾ ಪೂಜಯಾ ಭಗವಾನ್ ವ್ಯಾಸಃ ಪ್ರೀಯತಾಂ ನ ಮಮ' ಎಂದು ಪುಷ್ಪಾಂಜಲಿಯನ್ನು ಸಮರ್ಪಿಸುವುದು.

ಆಮೇಲೆ ಶ್ರೀಮದ್ಭಾಗವತಸಪ್ತಾಹಯಜ್ಞವನ್ನು ಉಪದೇಶಮಾಡಿದ ಸೂರ್ಯಭಗವಂತನನ್ನು ಸ್ಥಾಪಿಸಿ ಪ್ರತಿನಿತ್ಯವೂ ಅವನನ್ನು ಪೂಜಿಸಬೇಕು. ಅವನನ್ನು ಪೂಜಿಸಲು ನಾಮಮಂತ್ರ = 'ಓಂ ಸೂರ್ಯಾಯ ನಮಃ' ಪೂಜಾನಂತರ ಅವನನ್ನು ಹೀಗೆ ಪ್ರಾರ್ಥಿಸಬೇಕು :

ಲೋಕೇಶ ತ್ವಂ ಜಗಚ್ಚಕ್ಷುಃ ಸತ್ಕರ್ಮ ತವ ಭಾಷಿತಮ್ ।
ಕರೋಮಿ ತಚ್ಚ ನಿರ್ವಿಘ್ನಂ ಪೂರ್ಣಮಸ್ತು ತ್ವದರ್ಚನಾತ್ ॥

'ಅನಯಾ ಪೂಜಯಾ ಸಪ್ತಾಹಯಜ್ಞೋಪದೇಷ್ಟಾ ಭಗವಾನ್ ಸೂರ್ಯಃ ಪ್ರೀಯತಾಂ ನ ಮಮ'

ಇದರನಂತರ ಪರಮಾತ್ಮನ ದಶಾವತಾರಗಳನ್ನೂ ಶ್ರೀಶುಕಮಹಾ ಮುನಿಗಳನ್ನೂ ಸ್ಥಾಪಿಸಿ ಪೂಜಿಸಬೇಕು.

ಅಲ್ಲಿಂದ ಮುಂದೆ ನಾರದಪೀಠ ಮತ್ತು ಪುಸ್ತಕಪೀಠ–ಇವೆರಡನ್ನೂ ಒಟ್ಟಿಗೇ ಪೂಜಿಸಬೇಕು. ಮೊದಲು ಆ ಎರಡು ಪೀಠಗಳಿಗೂ ನೀರಿನಿಂದ ಅಭಿಷೇಕಮಾಡಿ ಅವುಗಳ ಮೇಲೆ ಚಂದನ ಮುಂತಾದುವುಗಳಿಂದ ಅಷ್ಟದಳ ಕಮಲವನ್ನು ರಚಿಸಬೇಕು. ಅನಂತರ ಓಂ ಆಧಾರಶಕ್ತ್ಯೈ ನಮಃ । ಓಂ ಮೂಲಪ್ರಕೃತಯೇ ನಮಃ । ಓಂ ಕ್ಷೀರಸಮುದ್ರಾಯ ನಮಃ । ಓಂ ಶ್ವೇತದ್ವೀಪಾಯ ನಮಃ । ಓಂ ಕಲ್ಪವೃಕ್ಷಾಯ ನಮಃ । ಓಂ ರತ್ನಮಂಟಪಾಯ ನಮಃ । ಓಂ ರತ್ನಸಿಂಹಾಸನಾಯ ನಮಃ । ಎಂಬ ಮಂತ್ರಗಳಿಂದ ಆ ಎರಡು ಪೀಠಗಳಲ್ಲೂ ಆಧಾರಶಕ್ತಿ ಮುಂತಾದುವು ಗಳನ್ನು ಭಾವಿಸಿ ಪೂಜಿಸಬೇಕು. ನಾಲ್ಕು ದಿಕ್ಕುಗಳಲ್ಲಿಯೂ ಪೂರ್ವದಿಕ್ಕಿ ನಿಂದಾರಂಭಿಸಿ ಕ್ರಮವಾಗಿ ( ಪ್ರದಕ್ಷಿಣವಾಗಿ ) ಓಂ ಧರ್ಮಾಯ ನಮಃ । ಓಂ ಜ್ಞಾನಾಯ ನಮಃ । ಓಂ ವೈರಾಗ್ಯಾಯ ನಮಃ । ಓಂ ಐಶ್ವರ್ಯಾಯ ನಮಃ । ಎಂಬ ಮಂತ್ರಗಳಿಂದ ಧರ್ಮಾದಿಗಳನ್ನೂ ಭಾವಿಸಿ ಪೂಜಿಸಬೇಕು. ಪೀಠದ ಮಧ್ಯಭಾಗದಲ್ಲಿ 'ಓಂ ಅನಂತಾಯ ನಾಗರಾಜಾಯ ನಮಃ' ಎಂದು ಅನಂತನನ್ನೂ, 'ಓಂ ಮಹಾಪದ್ಮಾಯ ನಮಃ' ಎಂದು ಮಹಾಪದ್ಮವನ್ನೂ ಭಾವಿಸಿ ಪೂಜಿಸಬೇಕು ಮತ್ತು ಈ ಮಹಾಪದ್ಮದ ಕಂದವು ( ಮೂಲಭಾಗವು ) ಆನಂದಮಯವಾಗಿದೆ. ಅದರ ನಾಳವು ಸಂವಿತ್ (ಜ್ಞಾನ) ಸ್ವರೂಪವಾಗಿದೆ. ಅದರ ದಳಗಳು ಪ್ರಕೃತಿ ಮಯವಾಗಿವೆ. ಅದರ ಕೇಸರಗಳು ವಿಕೃತಿರೂಪವಾಗಿವೆ. ಅದರ ಬೀಜಗಳು ಐವತ್ತು ವರ್ಣಸ್ವರೂಪಗಳಾಗಿವೆ ಮತ್ತು ಅವುಗಳಿಂದಲೇ ಆ ಮಹಾ ಪದ್ಮದ ಕರ್ಣಿಕೆಯು ಅಲಂಕೃತವಾಗಿದೆ ಎಂದು ಭಾವಿಸಬೇಕು. ಆ ಕರ್ಣಿಕೆಯಲ್ಲಿ ಸೂರ್ಯಮಂಡಲ, ಸೋಮಮಂಡಲ ಮತ್ತು ವಹ್ನಿಮಂಡಲಗಳು ಬೆಳಗುತ್ತಿವೆ. ಅಲ್ಲಿಯೇ ಪ್ರಬೋಧಾತ್ಮಕವಾದ ಸತ್ತ್ವಗುಣವೂ, ರಜೋ ಗುಣವೂ, ತಮೋಗುಣವೂ ಬೆಳಗುತ್ತಿವೆ–ಎಂದು ಭಾವಿಸಿಕೊಂಡು ಅವೆಲ್ಲಕ್ಕೂ ಪಂಚೋಪಚಾರಪೂಜೆಗಳನ್ನು ಸಮರ್ಪಿಸಬೇಕು. ಅದಕ್ಕೆ ಮಂತ್ರಗಳು : 'ಓಂ ಆನಂದಮಯಕನ್ದಾಯ ನಮಃ । ಓಂ ಸಂವಿನ್ನಾಳಾಯ

**ನಮಃ । ಓಂ ಪ್ರಕೃತಿಮಯಪತ್ರೇಭ್ಯೋ ನಮಃ । ಓಂ ವಿಕೃತಿಮಯಕೇಸರೇಭ್ಯೋ ನಮಃ । ಓಂ ಪಞ್ಚಾಶದ್ವರ್ಣಬೀಜಭೂಷಿತಾಯೈ ಕರ್ಣಿಕಾಯೈ ನಮಃ । ಓಂ ಅಂ ಅರ್ಕಮಣ್ಡಲಾಯ ನಮಃ । ಓಂ ಸಂ ಸೋಮಮಣ್ಡಲಾಯ ನಮಃ । ಓಂ ವಂ ವಹ್ನಿಮಣ್ಡಲಾಯ ನಮಃ । ಓಂ ಸಂ ಪ್ರಬೋಧಾತ್ಮನೇ ಸತ್ತ್ವಾಯ ನಮಃ । ಓಂ ರಂ ರಜಸೇ ನಮಃ । ಓಂ ತಂ ತಮಸೇ ನಮಃ ॥'**

ಹೀಗೆ ಇವೆಲ್ಲವನ್ನೂ ಪೂಜಿಸಿದನಂತರ ಕಮಲದ ಎಲ್ಲ ಕಡೆಗಳಲ್ಲೂ ಪೂರ್ವಾದಿ ಎಂಟು ದಿಕ್ಕುಗಳಲ್ಲೂ ಪ್ರದಕ್ಷಿಣಕ್ರಮವಾಗಿ '**ಓಂ ವಿಮಲಾಯೈ ನಮಃ । ಓಂ ಉತ್ಕರ್ಷಿಣ್ಯೈ ನಮಃ। ಓಂ ಜ್ಞಾನಾಯೈ ನಮಃ। ಓಂ ಕ್ರಿಯಾಯೈ ನಮಃ। ಓಂ ಯೋಗಾಯೈ ನಮಃ । ಓಂ ಪ್ರಹ್ವ್ಯೈ* ನಮಃ । ಓಂ ಸತ್ಯಾಯೈ ನಮಃ । ಓಂ ಈಶಾನಾಯೈ ನಮಃ।**' ಎಂಬ ಮಂತ್ರದಿಂದ ವಿಮಲೆಯೇ ಮುಂತಾದ ಎಂಟು ಶಕ್ತಿಗಳನ್ನೂ ಪೂಜಿಸಬೇಕು ಮತ್ತು ಕಮಲದ ಮಧ್ಯಭಾಗದಲ್ಲಿ '**ಓಂ ಅನುಗ್ರಹಾಯೈ ನಮಃ**'–ಎಂದು ಅನುಗ್ರಹಾ ಎಂಬ ಶಕ್ತಿಯನ್ನು ಪೂಜಿಸಬೇಕು. (ಇವರೆಲ್ಲರೂ ಚಾಮರಹಸ್ತೆಯರಾಗಿ ಭಗವಂತನಿಗೆ ಸೇವೆ ಸಲ್ಲಿಸುತ್ತಿದ್ದಾರೆ ಎಂದು ಭಾವಿಸಬೇಕು.) ಅನಂತರ '**ಓಂ ನಮೋ ಭಗವತೇ ವಿಷ್ಣವೇ ಸರ್ವಭೂತಾತ್ಮನೇ ವಾಸುದೇವಾಯ ಪದ್ಮಪೀಠಾತ್ಮನೇ ನಮಃ**' ಎಂಬ ಮಂತ್ರದಿಂದ ಸಂಪೂರ್ಣವಾದ ಪದ್ಮಪೀಠವನ್ನು ಪೂಜಿಸಿ ಅದರ ಮೇಲೆ ಸುಂದರವಾದ ವಸ್ತ್ರವೊಂದನ್ನು ಹಾಸಿ, ಅದರ ಮೇಲೆ ಬಿಜಯಮಾಡಿಸಲು ಶ್ರೀಮದ್ಭಾಗವತಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು '**ಓಂ ಧ್ರುವಾ ದ್ಯೌರ್ಧ್ರುವಾ ಪೃಥಿವೀ । ಧ್ರುವಾಸಃ ಪರ್ವತಾ ಇಮೇ । ಧ್ರುವಂ ವಿಶ್ವಮಿದಂ ಜಗತ್ । ಧ್ರುವೋ ರಾಜಾ ವಿಶಾಮಸಿ**' ಎಂಬ ಮಂತ್ರವನ್ನು ಹೇಳುತ್ತಾ ಅದನ್ನು ಮೇಲ್ಕಂಡ ಪೀಠದ ಮೇಲೆ ಸ್ಥಾಪಿಸಬೇಕು. '**ಓಂ ಮನೋ ಜೂತಿಃ**' ಎಂಬ ಮಂತ್ರದಿಂದ ಪುಸ್ತಕ

* ಪ್ರಭ್ವ್ಯೈ–ಎಂಬ ಪಾಠಾಂತರವೂ ಇದೆ. ಆಗಮಶಾಸ್ತ್ರದಲ್ಲಿ ಈ ಪಾಠಾಂತರವೇ ಇದೆ.

ವನ್ನು ಪ್ರತಿಷ್ಠೆಮಾಡಿ ಪುರುಷಸೂಕ್ತದ 16 ಅಥವಾ 18 ಮಂತ್ರಗಳಿಂದ ಅದಕ್ಕೆ ಉಪಚಾರಗಳನ್ನು ಸಮರ್ಪಿಸಬೇಕು. (ಶ್ರೀಮದ್ಭಾಗವತದ ಪೂಜನ ವಿಧಿಯಲ್ಲಿ ವಿವರಣೆಯನ್ನು ನೋಡಿರಿ.) ಅನಂತರ ಎರಡನೆಯ ಪೀಠವನ್ನು ಸ್ಥಾಪಿಸಿ ಅದರ ಮೇಲೆ ದೇವರ್ಷಿನಾರದರನ್ನು ಸ್ಥಾಪಿಸುವುದು ಮತ್ತು 'ಓಂ ಸುರರ್ಷಿ ನಾರದಾಯ ನಮಃ'–ಎಂಬ ಮಂತ್ರದಿಂದ ಅವರನ್ನು ವಿಧಿವತ್ತಾಗಿ ಪೂಜೆಮಾಡಿ ಹೀಗೆ ಪ್ರಾರ್ಥಿಸಬೇಕು :

**ಓಂ ನಮಸ್ತುಭ್ಯಂ ಭಗವತೇ ಜ್ಞಾನವೈರಾಗ್ಯಶಾಲಿನೇ ।**
**ನಾರದಾಯ ಸದಾ ಸರ್ವಪೂಜಿತಾಯ ಸುರರ್ಷಯೇ ॥**

**'ಓಂ ಅನಯಾ ಪೂಜಯಾ ದೇವರ್ಷಿರ್ನಾರದಃ ಪ್ರೀಯತಾಂ ನ ಮಮ**'–ಎಂದು ಪುಷ್ಪಾಂಜಲಿಯನ್ನು ಸಮರ್ಪಣೆಮಾಡುವುದು.

ಹೀಗೆ ಪೂಜೆಮಾಡಿದನಂತರ ಯಜಮಾನನು ಪುಷ್ಪ, ಗಂಧ, ತಾಂಬೂಲ, ವಸ್ತ್ರ, ದಕ್ಷಿಣೆ, ಅಡಕೆ ಮತ್ತು ರಕ್ಷಾಸೂತ್ರಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು–'**ಅದ್ಯ ಅಮುಕಗೋತ್ರಮಮುಕಪ್ರವರಮಮುಕ ಶರ್ಮಾಣಂ ಬ್ರಾಹ್ಮಣಮೇಭಿಃ ವರಣದ್ರವ್ಯೈಃ ಸರ್ವೇಶ್ವರ ಶ್ರೀಮದ್ಭಾಗವತವಕ್ತೃತ್ವೇನ ಭವನ್ತಮಹಂ ವೃಣೇ**' ಎಂದು ಹೇಳಿ ಕಥಾಪ್ರವಚನಕರ್ತೃವಾದ ಆಚಾರ್ಯನನ್ನು ವರಣಮಾಡಬೇಕು. ಅವನಿಗೆ ಆ ವರಣದ್ರವ್ಯಗಳನ್ನು ಸಮರ್ಪಿಸಬೇಕು. ಅವುಗಳನ್ನು ತೆಗೆದುಕೊಂಡು ಆಚಾರ್ಯನು '**ಓಂ ವೃತೋಽಸ್ಮಿ**'–ಎಂದು ಉತ್ತರ ಕೊಡಬೇಕು. ಆಮೇಲೆ ಪುನಃ ಅದೇ ರೀತಿಯಲ್ಲಿ ಆ ಸಾಮಗ್ರಿದ್ರವ್ಯಗಳನ್ನು ತೆಗೆದುಕೊಂಡು ಜಪಮಾಡುವ ಮತ್ತು ಪಾರಾಯಣಮಾಡುವ ಬ್ರಾಹ್ಮಣರನ್ನು ವರಣ ಮಾಡಬೇಕು. ಅದಕ್ಕೆ ಸಂಕಲ್ಪವಾಕ್ಯ '**ಅದ್ಯಾಹಂ ಅಮುಕಗೋತ್ರಾನ್ ಅಮುಕಪ್ರವರಾನ್ ಅಮುಕಶರ್ಮಣೋ ಯಥಾಸಂಖ್ಯಾಕಾನ್ ಬ್ರಾಹ್ಮಣಾನ್ ಏಭಿಃ ವರಣದ್ರವ್ಯೈಃ ಕಥಾವಿಘ್ನಾಪನೋದನಾರ್ಥಂ ಗಣೇಶ- ಗಾಯತ್ರೀ - ವಾಸುದೇವಮಹಾಮಂತ್ರಜಪಕರ್ತೃತ್ವೇನಗೀತಾ-ವಿಷ್ಣುಸಹಸ್ರನಾಮಪಾಠಕರ್ತೃತ್ವೇನ ಚ ವೋ ವಿಭಜ್ಯ ವೃಣೇ**' ಹೀಗೆ ಸಂಕಲ್ಪಮಾಡಿ ಪ್ರತಿಯೊಬ್ಬ ಬ್ರಾಹ್ಮಣನಿಗೂ ವರಣಸಾಮಗ್ರಿಗಳನ್ನು

ಸಮರ್ಪಿಸಬೇಕು. ಆ ಸಾಮಗ್ರಿಗಳನ್ನು ತೆಗೆದುಕೊಂಡು ಅವರು 'ಓಂ ವೃತಾಃಸ್ಮಃ'–ಎಂದು ಉತ್ತರಿಸಬೇಕು.

ಅನಂತರ ಮೊದಲು ಕಥಾಪ್ರವಚನಮಾಡುವ ಆಚಾರ್ಯನ ಕೈಯಲ್ಲಿ ಸಮರ್ಪಿಸಿದ್ದ ರಕ್ಷಾಸೂತ್ರವನ್ನು ತೆಗೆದುಕೊಂಡು ಅದನ್ನು ಅವನ ಹಸ್ತಕ್ಕೇ ಕಟ್ಟಬೇಕು. ಆಗ ಆಚಾರ್ಯನು ಈ ಕೆಳಗಿನ ಮಂತ್ರವನ್ನು ಹೇಳಲಿ.

**ವ್ರತೇನ ದೀಕ್ಷಾಮಾಪ್ನೋತಿ ದೀಕ್ಷಯಾಪ್ನೋತಿ ದಕ್ಷಿಣಾಮ್ ।**
**ದಕ್ಷಿಣಾ ಶ್ರದ್ಧಾಮಾಪ್ನೋತಿ ಶ್ರದ್ಧಯಾ ಸತ್ಯಮಾಪ್ಯತೇ ॥**

ಹೀಗೆ ರಕ್ಷೆಯನ್ನು ಕಟ್ಟಿದನಂತರ ಯಜಮಾನನು ಆಚಾರ್ಯನ ಹಣೆಗೆ ಕುಂಕುಮ ಮತ್ತು ಅಕ್ಷತೆಗಳಿಂದ ತಿಲಕವನ್ನಿಡಬೇಕು. ಇದೇ ಪ್ರಕಾರ ಜಪಮಾಡುವ ಮತ್ತು ಪಾರಾಯಣಮಾಡುವ ಬ್ರಾಹ್ಮಣರ ಹಸ್ತಗಳಿಗೂ ರಕ್ಷೆಯನ್ನು ಕಟ್ಟಿ ಅವರ ಹಣೆಗೆ ತಿಲಕವನ್ನಿಡಬೇಕು. ಅನಂತರ ಹಳದಿ ಅಕ್ಷತೆಗಳನ್ನು ತೆಗೆದುಕೊಂಡು ಯಜಮಾನನು ನಾಲ್ಕು ದಿಕ್ಕುಗಳಲ್ಲೂ ರಕ್ಷಣೆಗೋಸ್ಕರ ಅವುಗಳನ್ನು ಚೆಲ್ಲಬೇಕು. ಅದಕ್ಕೆ ಮಂತ್ರ :-

**ಪೂರ್ವೇ ನಾರಾಯಣಃ ಪಾತು ವಾರಿಜಾಕ್ಷಶ್ಚ ದಕ್ಷಿಣೇ ।**
**ಪಶ್ಚಿಮೇ ಪಾತು ಗೋವಿನ್ದಃ ಉತ್ತರೇ ಮಧುಸೂದನಃ ॥**

**ಐಶಾನ್ಯಾಂ ವಾಮನಃ ಪಾತು ಚಾಗ್ನೇಯ್ಯಾಂ ಚ ಜನಾರ್ದನಃ ।**
**ನೈರ್ಋತ್ಯಾಂ ಪದ್ಮನಾಭಶ್ಚ ವಾಯವ್ಯಾಂ ಮಾಧವಸ್ತಥಾ ॥**

**ಊರ್ಧ್ವಂ ಗೋವರ್ಧನಧರೋ ಹ್ಯಧಸ್ತಾಚ್ಚ ತ್ರಿವಿಕ್ರಮಃ ।**
**ರಕ್ಷಾಹೀನಂ ತು ಯತ್ ಸ್ಥಾನಂ ತತ್ಸರ್ವಂ ರಕ್ಷತಾಂ ಹರಿಃ ॥**

ಆಮೇಲೆ ಪ್ರವಚನಕಾರ ಆಚಾರ್ಯರು ಯಜಮಾನನ ಹಸ್ತಕ್ಕೆ :

**ಯೇನ ಬದ್ಧೋ ಬಲೀ ರಾಜಾ ದಾನವೇನ್ದ್ರೋ ಮಹಾಬಲಃ ।**
**ತೇನ ತ್ವಾ ಪ್ರತಿಬಧ್ನಾಮಿ ರಕ್ಷೇ ಮಾ ಚಲ ಮಾ ಚಲ ॥**

ಎಂಬ ಮಂತ್ರವನ್ನು ಕೇಳಿ ರಕ್ಷೆಯನ್ನು ಕಟ್ಟಬೇಕು. ಮತ್ತು :-

**ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ।**
**ತಿಲಕಂ ತೇ ಪ್ರಯಚ್ಛನ್ತು ಧರ್ಮಕಾಮಾರ್ಥಸಿದ್ಧಯೇ ॥**

ಎಂಬ ಮಂತ್ರದಿಂದ ಆತನ ಹಣೆಗೆ ತಿಲಕವನ್ನಿಡಬೇಕು.

ಅನಂತರ ಯಜಮಾನನು ವ್ಯಾಸಾಸನಕ್ಕೆ ಗಂಧ-ಪುಷ್ಪಾದಿಗಳಿಂದ ಪೂಜೆಮಾಡಬೇಕು. ಪೂಜೆಯ ಮಂತ್ರ : 'ಓಂ ವ್ಯಾಸಾಸನಾಯ ನಮಃ' ಎಂಬುದಾಗಿ. ಆಮೇಲೆ ಪ್ರವಚನಮಾಡುವ ಬ್ರಾಹ್ಮಣನು ಬ್ರಾಹ್ಮಣರ ಮತ್ತು ವೃದ್ಧಪುರುಷರ ಅನುಜ್ಞೆಪಡೆದು, ವಿಪ್ರವರ್ಗಕ್ಕೆ ನಮಸ್ಕರಿಸಿ, ಶ್ರೀಗುರುಚರಣಗಳನ್ನು ಧ್ಯಾನಿಸಿ ವ್ಯಾಸಾಸನದಲ್ಲಿ ಕುಳಿತುಕೊಳ್ಳಬೇಕು. ಮನಸ್ಸಿನಲ್ಲೇ ಶ್ರೀಗಣೇಶದೇವರು, ಶ್ರೀನಾರದರು ಮುಂತಾದವರನ್ನು ಸ್ಮರಿಸಿ ಪೂಜಿಸಬೇಕು. ಅನಂತರ ಯಜಮಾನನು '**ಓಂ ನಮಃ ಪುರಾಣಪುರುಷೋತ್ತಮಾಯ**' – ಎಂಬ ಮಂತ್ರದಿಂದ ಮತ್ತೊಮ್ಮೆ ಪುಸ್ತಕಕ್ಕೆ ಗಂಧ-ಪುಷ್ಪ-ತುಳಸೀದಳ ಮತ್ತು ದಕ್ಷಿಣೆ–ಇತ್ಯಾದಿಗಳಿಂದ ಪೂಜೆಮಾಡಬೇಕು. ಗಂಧ-ಪುಷ್ಪಾದಿಗಳಿಂದ ಪ್ರವಚನಕಾರ ಆಚಾರ್ಯನನ್ನು ಮತ್ತೊಮ್ಮೆ ಪೂಜಿಸುತ್ತಾ ಈ ಕೆಳಗಿನ ಶ್ಲೋಕವನ್ನು ಪಠಿಸಬೇಕು :

**ಜಯತಿ ಪರಾಶರಸೂನುಃ ಸತ್ಯವತೀಹೃದಯನನ್ದನೋ ವ್ಯಾಸಃ ।**
**ಯಸ್ಯಾಸ್ಯಕಮಲಗಲಿತಂ ವಾಙ್ಮಯಮಮೃತಂ ಜಗತ್ಪಿಬತಿ ॥**

ಮತ್ತು ಈ ಕೆಳಗಿನ ಶ್ಲೋಕಗಳನ್ನೂ ಪಠಿಸಿ ಅವನಲ್ಲಿ ಪ್ರಾರ್ಥನೆ ಮಾಡಬೇಕು.

**ಶುಕರೂಪ ಪ್ರಬೋಧಜ್ಞ ಸರ್ವಶಾಸ್ತ್ರವಿಶಾರದ ।**
**ಏತತ್ಕಥಾಪ್ರಕಾಶೇನ ಮದಜ್ಞಾನಂ ವಿನಾಶಯ ॥**

**ಸಂಸಾರಸಾಗರೇ ಮಗ್ನಂ ದೀನಂ ಮಾಂ ಕರುಣಾನಿಧೇ ।**
**ಕರ್ಮಗ್ರಾಹಗೃಹೀತಾಙ್ಗಂ ಮಾಮುದ್ಧರ ಭವಾರ್ಣವಾತ್ ॥**

ಈ ಪ್ರಾರ್ಥನಾನಂತರ ಕೆಳಗಿನ ಶ್ಲೋಕಗಳನ್ನು ಹೇಳಿ ಶ್ರೀಮದ್ಭಾಗ ವತಕ್ಕೆ ಗಂಧ, ಪುಷ್ಪ, ತೆಂಗಿನಕಾಯಿ ಮುಂತಾದುವುಗಳನ್ನು ಅರ್ಪಿಸಬೇಕು:

**ಶ್ರೀಮದ್ಭಾಗವತಾಖ್ಯೋಽಯಂ ಪ್ರತ್ಯಕ್ಷಃ ಕೃಷ್ಣ ಏವ ಹಿ ।**
**ಸ್ವೀಕೃತೋಽಸಿ ಮಯಾ ನಾಥ ಮುಕ್ತ್ಯರ್ಥಂ ಭವಸಾಗರೇ ॥**
**ಮನೋರಥೋ ಮದೀಯೋಽಯಂ ಸರ್ವಥಾ ಸಫಲಸ್ತ್ವಯಾ ।**
**ನಿರ್ವಿಘ್ನೇನೈವ ಕರ್ತವ್ಯೋ ದಾಸೋಽಹಂ ತವ ಕೇಶವ ॥**

ಕಥಾಮಂಟಪದಲ್ಲಿ ವಾಯುರೂಪದಲ್ಲಿರುವ ಅತಿವಾಹಕಶರೀರವುಳ್ಳ*

* ಅತಿವಾಹಕ : ಈ ಲೋಕದಿಂದ ಬೇರೆ ಲೋಕಕ್ಕೆ ಕರೆದುಕೊಂಡು ಹೋಗುವ.

ಜೀವವಿಶೇಷಕ್ಕಾಗಿ ಎಂಟು ಗಂಟುಗಳುಳ್ಳ ಒಂದು ಬಿದುರಿನ ಗಳುವನ್ನೂ ನೆಟ್ಟಿರಬೇಕು.

ಅನಂತರ ಪ್ರವಚನಕಾರನು ಶ್ರೀಭಗವಂತನನ್ನು ಸ್ಮರಿಸಿ ಆ ದಿವಸದಲ್ಲಿ ಶ್ರೀಮದ್‌ಭಾಗವತಮಾಹಾತ್ಮ್ಯದ ಕಥೆಯನ್ನು ಎಲ್ಲ ಶ್ರೋತೃಗಳಿಗೂ ಹೇಳಬೇಕು ಮತ್ತು ಮಾರನೆಯ ದಿವಸದಿಂದ ಪ್ರತಿದಿನವೂ ದೇವರಪೂಜೆ, ಪುಸ್ತಕಪೂಜೆ ಮತ್ತು ವ್ಯಾಸಪೂಜೆಗಳನ್ನು ಮಾಡಿದ ಬಳಿಕ ಕಥಾಪ್ರವಚನ ವನ್ನು ಪ್ರಾರಂಭಿಸಬೇಕು. ಸಂಜೆ ಕಥೆಯು ಮುಗಿದನಂತರವೂ ಪ್ರತಿದಿನವೂ ಪುಸ್ತಕಕ್ಕೂ–ಪ್ರವಚನಕಾರನಿಗೂ ಪೂಜೆ, ಆರತಿ, ಪ್ರಸಾದ, ತುಳಸೀದಳ ವಿನಿಯೋಗಗಳನ್ನು ಮಾಡಿ ಭಗವನ್ನಾಮಸಂಕೀರ್ತನೆಯನ್ನೂ, ಶಂಖಧ್ವನಿ ಯನ್ನೂ ಮಾಡಬೇಕು. ಕಥೆಯ ಪ್ರಾರಂಭದಲ್ಲೂ, ಮಧ್ಯೆ-ಮಧ್ಯೆಯೂ ಮತ್ತು ಕಥೆಯ ಪ್ರವಚನ ನಿಲ್ಲುವಾಗಲೂ ಸಮಯಾನುಸಾರ ಭಗವನ್ನಾಮ ಸಂಕೀರ್ತನೆಮಾಡಬೇಕು.

ಪ್ರವಚನಕಾರನು ಪ್ರತಿದಿನವೂ ಪ್ರವಚನಪ್ರಾರಂಭಿಸುವುದಕ್ಕೆ ಮೊದಲು 108 ಬಾರಿ ‘ಓಂ ನಮೋ ಭಗವತೇ ವಾಸುದೇವಾಯ’ ಎಂಬ ದ್ವಾದಶಾಕ್ಷರಮಹಾಮಂತ್ರವನ್ನಾಗಲೀ ಅಥವಾ ‘ಓಂ ಕ್ಲೀಂ ಕೃಷ್ಣಾಯ ಗೋವಿಂದಾಯ ಗೋಪಿಜನವಲ್ಲಭಾಯ ಸ್ವಾಹಾ’ ಎಂಬ ಗೋಪಾಲಮಂತ್ರವನ್ನಾಗಲೀ ಜಪಿಸಬೇಕು. ಅನಂತರ ಈ ಕೆಳಗಿನ ವಾಕ್ಯಗಳಿಂದ ಋಷಿ, ದೇವತೆ, ಛಂದಸ್ಸು, ವಿನಿಯೋಗಗಳನ್ನು ಹೇಳಿ ಋಷಿನ್ಯಾಸ, ಕರನ್ಯಾಸ, ಅಂಗನ್ಯಾಸಗಳನ್ನು ಮಾಡಬೇಕು.

**‘ಓಂ ಅಸ್ಯ ಶ್ರೀಮದ್ಭಾಗವತಾಖ್ಯಸ್ತೋತ್ರಮಹಾಮನ್ತ್ರಸ್ಯ। ಶ್ರೀನಾರದಋಷಿಃ। ಬೃಹತೀಛಂದಃ। ಶ್ರೀಕೃಷ್ಣಃ ಪರಮಾತ್ಮಾ ದೇವತಾ। ಓಂ ಬ್ರಹ್ಮ ಬೀಜಂ। ಭಕ್ತಿಃ ಶಕ್ತಿಃ। ಜ್ಞಾನವೈರಾಗ್ಯೇ ಕೀಲಕಂ। ಮಮ ಶ್ರೀಮದ್ಭಗವತ್‌ಪ್ರಸಾದಸಿದ್ಧ್ಯರ್ಥೇ ಪಾಠೇ ವಿನಿಯೋಗಃ।’**

**ಋಷ್ಯಾದಿನ್ಯಾಸಃ :**

**ಓಂ ನಾರದಮಹರ್ಷಯೇ ನಮಃ – ಶಿರಸಿ। ಓಂ ಬೃಹತೀ–**

ಛಂದಸೇ ನಮಃ–ಮುಖೇ । ಓಂ ಶ್ರೀಕೃಷ್ಣಪರಮಾತ್ಮದೇವತಾಯೈ ನಮಃ–ಹೃದಿ । ಓಂ ಬ್ರಹ್ಮಬೀಜಾಯ ನಮಃ-ಗುಹ್ಯೇ । ಓಂ ಭಕ್ತಿ ಶಕ್ತಯೇ ನಮಃ–ಪಾದಯೋಃ। ಓಂ ಜ್ಞಾನವೈರಾಗ್ಯಕೀಲಕಾಭ್ಯಾಂ ನಮಃ–ನಾಭೌ ।ಓಂ ಶ್ರೀಮದ್ಭಗವತ್ಪ್ರಸಾದಸಿದ್ಧ್ಯರ್ಥಕಪಾಠ ವಿನಿಯೋಗಾಯ ನಮಃ–ಸರ್ವಾಙ್ಗೇ ।

ದ್ವಾದಶಾಕ್ಷರಮಂತ್ರದಿಂದ ಕರನ್ಯಾಸ ಮತ್ತು ಅಂಗನ್ಯಾಸಗಳನ್ನು ಮಾಡಬೇಕು ಅಥವಾ ಕೆಳಗೆ ಹೇಳಿರುವಂತೆ ಅದನ್ನು ನೆರವೇರಿಸಬೇಕು.

**ಕರನ್ಯಾಸಃ :**

ಓಂ ಕ್ಲಾಂ ಅಂಗುಷ್ಠಾಭ್ಯಾಂ ನಮಃ । ಓಂ ಕ್ಲೀಂ ತರ್ಜನೀಭ್ಯಾಂ ನಮಃ। ಓಂ ಕ್ಲೂಂ ಮಧ್ಯಮಾಭ್ಯಾಂ ನಮಃ ।ಓಂ ಕ್ಲೈಂ ಅನಾಮಿಕಾಭ್ಯಾಂ ನಮಃ। ಓಂ ಕ್ಲೌಂ ಕನಿಷ್ಠಿಕಾಭ್ಯಾಂ ನಮಃ ।ಓಂ ಕ್ಲಃ ಕರತಲಕರಪೃಷ್ಠಾಭ್ಯಾಂ ನಮಃ ।

**ಅಂಗನ್ಯಾಸಃ :**

ಓಂ ಕ್ಲಾಂ ಹೃದಯಾಯ ನಮಃ ।ಓಂ ಕ್ಲೀಂ ಶಿರಸೇ ಸ್ವಾಹಾ ।ಓಂ ಕ್ಲೂಂ ಶಿಖಾಯೈ ವಷಟ್ । ಓಂ ಕ್ಲೈಂ ಕವಚಾಯ ಹುಂ ।ಓಂ ಕ್ಲೌಂ ನೇತ್ರತ್ರಯಾಯ ವೌಷಟ್ । ಓಂ ಕ್ಲಃ ವೀರ್ಯಾಯಾ ಸ್ತ್ರಾಯ ಫಟ್।

ಅನಂತರ ಕೆಳಗೆ ಹೇಳಿರುವಂತೆ ಧ್ಯಾನಮಾಡಬೇಕು.

**ಕಸ್ತೂರೀತಿಲಕಂ ಲಲಾಟಫಲಕೇ ವಕ್ಷಃಸ್ಥಲೇ ಕೌಸ್ತುಭಂ**
**ನಾಸಾಗ್ರೇ ವರಮೌಕ್ತಿಕಂ ಕರತಲೇ ವೇಣುಂ ಕರೇ ಕಙ್ಕಣಮ್ ।**
**ಸರ್ವಾಙ್ಗೇ ಹರಿಚನ್ದನಂ ಚ ಕಲಯನ್ ಕಣ್ಠೇ ಚ ಮುಕ್ತಾವಲೀ**
**ಗೋಪಸ್ತ್ರೀಪರಿವೇಷ್ಟಿತೋ ವಿಜಯತೇ ಗೋಪಾಲಚೂಡಾಮಣಿಃ ॥**

ಹಣೆಯಲ್ಲಿ ಕಸ್ತೂರೀತಿಲಕವನ್ನೂ, ವಕ್ಷಃಸ್ಥಲದಲ್ಲಿ ಕೌಸ್ತುಭಮಣಿ ಯನ್ನೂ, ಮೂಗಿನ ತುದಿಯಲ್ಲಿ ಶ್ರೇಷ್ಠವಾದ ಮುತ್ತಿನ ಮೂಗುತಿಯನ್ನೂ, ಕೈಯ್ಯಲ್ಲಿ ಕೊಳಲನ್ನೂ, ಕೈಮಣಿಕಟ್ಟಿನಲ್ಲಿ ಕಂಕಣವನ್ನೂ, ಕೊರಳಲ್ಲಿ ಮುತ್ತಿನಹಾರಗಳನ್ನೂ ಧರಿಸಿ ಸರ್ವಾಂಗಗಳಲ್ಲೂ ಹರಿಚಂದನವನ್ನು

ಲೇಪಿಸಿಕೊಂಡು ಕಂಗೊಳಿಸುತ್ತಾ ಗೋಪಸ್ತ್ರೀಯರಿಂದ ಸುತ್ತುವರಿಯಲ್ಪಟ್ಟಿರುವ ಗೋಪಾಲಬಾಲಶಿರೋಮಣಿಗೆ ಜಯ-ವಿಜಯವಾಗಲಿ ; ಅವನು ಸರ್ವೋತ್ಕೃಷ್ಟನು.

**ಅಸ್ತಿ ಸ್ವಸ್ತರುಣೀಕರಾಗ್ರವಿಲಸತ್ಕಲ್ಪಪ್ರಸೂನಾಪ್ಲುತಂ**
**ವಸ್ತು ಪ್ರಸ್ತುತವೇಣುನಾದಲಹರೀನಿರ್ವಾಣನಿರ್ವ್ಯಾಕುಲಮ್ ।**
**ಸ್ರಸ್ತಸ್ರಸ್ತನಿಬದ್ಧನೀವಿವಿಲಸದ್ಗೋಪೀಸಹಸ್ರಾವೃತಂ**
**ಹಸ್ತನ್ಯಸ್ತನತಾಪವರ್ಗಮಖಿಲೋದಾರಂ ಕಿಶೋರಾಕೃತಿ ॥**

ಸ್ವರ್ಗಲೋಕದ ಹೆಂಗಸರು ತಮ್ಮ ಕರಾಗ್ರಗಳಿಂದ ಕಲ್ಪವೃಕ್ಷದ ಪುಷ್ಪಗಳ ಮಳೆಗರೆಯುತ್ತಿದ್ದಾರೆ. ಆ ಪುಷ್ಪವೃಷ್ಟಿಯನ್ನು ಸ್ವೀಕರಿಸುತ್ತಾ ತಾನೂ ವೇಣುನಾದಾಮೃತಲಹರಿಯ ಆನಂದವೃಷ್ಟಿಯನ್ನು ಸುರಿಸುತ್ತಾ ಪ್ರಸನ್ನನಾಗಿದ್ದಾನೆ. ಪ್ರೇಮಪರವಶರಾಗಿರುವ ಸಾವಿರಾರು ಮಂದಿ ಗೋಪಸ್ತ್ರೀಯರು ಸುತ್ತಲೂ ಕಂಗೊಳಿಸುತ್ತಿದ್ದಾರೆ. ಇಂತಹ ಸುಂದರ ಸುಖ-ಶಾಂತಿಯ ಸನ್ನಿವೇಶದಲ್ಲಿ ತನಗೆ ನಮಿಸುತ್ತಿರುವ ಭಕ್ತರಿಗೆ "ಇದೋ ಕೊಳ್ಳಿರಿ!"–ಎಂದು ಕಡುಧಾರಾಳವಾಗಿ ಕೈಯ್ಯಲ್ಲಿರಿಸಿಕೊಂಡ ಮುಕ್ತಿಯನ್ನು ದಯಪಾಲಿಸುತ್ತಿರುವ ಬಾಲಗೋಪಾಲಪ್ರಭುವಿಗೆ ಜಯವಾಗಲಿ! ವಿಜಯವಾಗಲಿ!

ಹೀಗೆ ಧ್ಯಾನಿಸಿದನಂತರ ಕಥೆಯನ್ನು ಪ್ರಾರಂಭಿಸಬೇಕು. ಪ್ರತಿದಿನವೂ ಸೂರ್ಯೋದಯದಿಂದ ಪ್ರಾರಂಭಮಾಡಿ ಮೂರೂವರೆ ಪ್ರಹರ ಕಾಲದವರೆಗೂ ಕಥಾಪ್ರವಚನ ನಡೆಯಬೇಕು. ಮಧ್ಯಾಹ್ನ ಎರಡು ಘಳಿಗೆಗಳ ಕಾಲ ಕಥೆಗೆ ವಿಶ್ರಾಂತಿ. ಪ್ರಾತಃಕಾಲದಿಂದ ಮಧ್ಯಾಹ್ನದವರೆಗೆ ಮೂಲ ಭಾಗವತದ ಪಾರಾಯಣಮಾಡಬೇಕು. ಮಧ್ಯಾಹ್ನದಿಂದ ಸಾಯಂಕಾಲದ ವರೆಗೆ ಪಾರಾಯಣಮಾಡಿದಷ್ಟು ಕಥೆಯ ಭಾವಾರ್ಥವನ್ನು ಸಂಕ್ಷಿಪ್ತವಾಗಿ ದೇಶಭಾಷೆಯಲ್ಲಿ ಪ್ರವಚನಮಾಡಬೇಕು. ಮಧ್ಯಾಹ್ನದಲ್ಲಿ ವಿಶ್ರಾಂತಿಸಮಯದಲ್ಲೂ ಮತ್ತು ರಾತ್ರಿಸಮಯದಲ್ಲೂ ಭಗವನ್ನಾಮಸಂಕೀರ್ತನೆಮಾಡುವ ವ್ಯವಸ್ಥೆ ಇರಬೇಕು.

**ಕಥಾಶ್ರೋತೃಗಳ ಸ್ಥಾನ :-** ಪ್ರವಚನಕಾರರ ಮುಂದೆ ಶ್ರೋತೃ

ಗಳು ಕುಳಿತುಕೊಳ್ಳಲು ಹಿಂದೆ-ಮುಂದೆ ಏಳು ಸಾಲುಗಳನ್ನು ಮಾಡಬೇಕು. ಇವುಗಳಲ್ಲಿ ಮೊದಲನೆಯ ಸಾಲಿಗೆ **'ಸತ್ಯಲೋಕ'** ಎಂದು ಹೆಸರು. ಅದರಲ್ಲಿ ಸಾಧು-ಸಂನ್ಯಾಸಿಗಳು, ವಿರಕ್ತರಾದ ವಿಷ್ಣುಭಕ್ತರು ಮುಂತಾದವರನ್ನು ಕೂರಿಸಬೇಕು. ಎರಡನೇ ಪಂಕ್ತಿಗೆ **'ತಪೋಲೋಕ'** ಎಂದು ಹೆಸರು. ಇದರಲ್ಲಿ ವಾನಪ್ರಸ್ಥರಾದ ಶ್ರೋತೃಗಳನ್ನು ಕೂರಿಸಬೇಕು. **'ಜನೋಲೋಕ'** ಎಂದು ಕರೆಯಲ್ಪಡುವ ಮೂರನೇ ಸಾಲಿನಲ್ಲಿ ಬ್ರಹ್ಮಚಾರಿಗಳಾದ ಶ್ರೋತೃಗಳನ್ನು ಕೂರಿಸಬೇಕು. **'ಮಹರ್ಲೋಕ'** ಎಂದು ಕರೆಯಲ್ಪಡುವ ನಾಲ್ಕನೆಯ ಪಂಕ್ತಿಯು ಇತರ ಬ್ರಾಹ್ಮಣಶ್ರೋತೃಗಳ ಸ್ಥಾನ. ಐದನೇ ಪಂಕ್ತಿಗೆ **'ಸ್ವರ್ಲೋಕ'** ಎಂದು ಹೆಸರು. ಇದರಲ್ಲಿ ಕ್ಷತ್ರಿಯರಾದ ಶ್ರೋತೃಗಳು ಕುಳಿತುಕೊಳ್ಳಬೇಕು. ಆರನೆಯ ಪಂಕ್ತಿಯು **'ಭುವರ್ಲೋಕ'** ಎನ್ನಿಸುತ್ತದೆ. ಇದು ವೈಶ್ಯರಾದ ಶ್ರೋತೃಗಳ ಸ್ಥಾನ. ಏಳನೇ ಪಂಕ್ತಿಗೆ **'ಭೂರ್ಲೋಕ'** ಎಂದು ಹೆಸರು. ಇದರಲ್ಲಿ ಉಳಿದ ವರ್ಣದ ಶ್ರೋತೃಗಳು ಕೂರಿಸಲ್ಪಡಬೇಕು. ಹೆಂಗಸರು ಪ್ರವಚನಕಾರರ ಎಡಭಾಗದಲ್ಲಿ ಕುಳಿತು ಕಥೆಯನ್ನು ಕೇಳಬೇಕು. ಪ್ರತಿದಿನವೂ ನಿಯಮಪೂರ್ವಕವಾಗಿ ಕಥೆಯನ್ನು ಕೇಳುವವರಿಗೆ ಮೇಲ್ಕಂಡ ಸ್ಥಾನನಿರ್ದೇಶ. ಕಥೆಯು ಪ್ರಾರಂಭವಾದನಂತರ ಸ್ವಲ್ಪ ಹೊತ್ತು ಮಾತ್ರ ಕಥೆ ಕೇಳುವವರು ಮತ್ತು ಅನಿಯತವಾಗಿ ಬರುವವರು ಮುಂತಾದವರು ಪ್ರವಚನಕಾರನ ಬಲಭಾಗದಲ್ಲಿ ಕುಳಿತುಕೊಳ್ಳಬೇಕು.

**ಶ್ರೋತೃಗಳ ನಿಯಮಗಳು :** ಶ್ರೋತೃಗಳು ಪ್ರತಿದಿನವೂ ಒಪ್ಪತ್ತು ಮಾತ್ರ ಊಟಮಾಡಬೇಕು. ಆಗಲೂ ಹವಿಷ್ಯಾನ್ನವನ್ನೇ ತಿನ್ನಬೇಕು. ಪತಿತರು ದುರ್ಜನರು ಮುಂತಾದವರ ಸಹವಾಸ ಮಾಡದಿರುವುದು ಮಾತ್ರವಲ್ಲ ; ಅವರೊಡನೆ ಮಾತನ್ನೂ ಆಡಬಾರದು. ಬ್ರಹ್ಮಚರ್ಯಪಾಲನೆ, ನೆಲದಮೇಲೆ ಮಲಗುವಿಕೆ—ಇವುಗಳು ಎಲ್ಲರೂ ಅನುಸರಿಸಲೇಬೇಕಾದ ನಿಯಮಗಳು. ಏಕಾಗ್ರಚಿತ್ತದಿಂದ ಕುಳಿತು ಕಥೆಯನ್ನು ಕೇಳಬೇಕು. ಕಥೆಯನ್ನು ಕೇಳುವ ದಿವಸಗಳಲ್ಲಿ ಹಣ, ಹೆಂಡತಿ, ಮಕ್ಕಳು, ಮನೆ ಮುಂತಾದ ಲೌಕಿಕಲಾಭಗಳ ಎಲ್ಲ ಚಿಂತೆಯನ್ನೂ ತೊರೆಯಬೇಕು. ಹಗುರವಾದ ಆಹಾರವನ್ನು ಸೇವಿಸಬೇಕು. ಇದರಿಂದ ಮಲ-ಮೂತ್ರಗಳನ್ನು

ಹತೋಟಿಯಲ್ಲಿಟ್ಟುಕೊಳ್ಳುವುದಕ್ಕೂ ಸಹಾಯವಾಗುತ್ತದೆ. ಶಕ್ತಿಯಿದ್ದರೆ ಏಳು ದಿವಸಗಳೂ ಉಪವಾಸದಲ್ಲಿದ್ದು ಕಥೆಯನ್ನು ಕೇಳಬೇಕು. ಇಲ್ಲದಿದ್ದರೆ ಹಾಲನ್ನು ಸೇವಿಸಿ ಸುಖವಾಗಿ ಕಥೆಯನ್ನು ಕೇಳಬೇಕು. ಇದೂ ಸಾಧ್ಯವಾಗದೇ ಇದ್ದರೆ ಫಲಾಹಾರಮಾಡಬಹುದು ಅಥವಾ ಒಪ್ಪತ್ತು ಅನ್ನವನ್ನು ಭುಂಜಿಸಬಹುದು. ಹೇಗೋ ಸುಖವಾಗಿ ಕಥೆಯನ್ನು ಕೇಳುವುದಕ್ಕೆ ಅನುಕೂಲ ಮಾಡಿಕೊಳ್ಳುವುದು ಮುಖ್ಯ. ಪ್ರತಿದಿನವೂ ಕಥಾಪ್ರವಚನ ಮುಗಿದ ನಂತರವೇ ಭೋಜನಮಾಡುವುದು ಉಚಿತ. ಬೇಳೆ, ಜೇನುತುಪ್ಪ, ಎಣ್ಣೆ, ಗುರುವಾದ ಆಹಾರ, ಭಾವದೂಷಿತವಾದ ಆಹಾರ ಮತ್ತು ತಂಗಳು ಆಹಾರ ಇವು ಯಾವುದನ್ನೂ ಸೇವಿಸಬಾರದು. ಕಾಮ, ಕ್ರೋಧ, ಮದ, ಅಭಿಮಾನ, ಅಸೂಯೆ, ಲೋಭ, ದಂಭ, ಮೋಹ ಮತ್ತು ದ್ವೇಷಗಳನ್ನು ತ್ಯಜಿಸಬೇಕು. ವೇದಗಳು, ವಿಷ್ಣುಭಕ್ತರು, ಬ್ರಾಹ್ಮಣರು, ಗುರುಗಳು, ಗೋವು, ವ್ರತನಿಷ್ಠರು, ಸ್ತ್ರೀಯರು, ರಾಜರು, ಮಹಾಪುರುಷರು–ಇವರಾರನ್ನೂ ನಿಂದಿಸಬಾರದು. ರಜಸ್ವಲೆಯರು, ಚಂಡಾಲರು, ಮ್ಲೇಚ್ಛರು, ಪತಿತರು, ವ್ರತಹೀನರು, ಬ್ರಾಹ್ಮಣದ್ರೋಹಿಗಳು ಮತ್ತು ವೇದಬಹಿಷ್ಕೃತರು–ಇಂತಹ ಮನುಷ್ಯರೊಡನೆ ಮಾತನ್ನಾಡಬಾರದು. ಮನಸ್ಸಿನಲ್ಲಿ ಸತ್ಯ, ಶೌಚ, ದಯೆ, ಮೌನ, ಸರಳತೆ, ವಿನಯ, ಔದಾರ್ಯ–ಮುಂತಾದ ಗುಣಗಳಿಗೆ ಆಶ್ರಯ ಕೊಡಬೇಕು. ಶ್ರೋತೃಗಳು ಪ್ರವಚನಕಾರರಿಗಿಂತಲೂ ಉಚ್ಚವಾದ ಆಸನ ದಲ್ಲಿ ಎಂದಿಗೂ ಕುಳಿತುಕೊಳ್ಳಬಾರದು.

**ಕೆಲವು ವಿಶೇಷವಿಷಯಗಳು :-** ಪ್ರತಿಯೊಂದು ಸ್ಕಂಧದ ಸಮಾಪ್ತಿ ಆದಾಗಲೂ ಗ್ರಂಥಕ್ಕೆ ಗಂಧ, ಪುಷ್ಪ, ನೈವೇದ್ಯ–ಮುಂತಾದುವುಗಳಿಂದ ಪೂಜೆಮಾಡಿ ಆರತಿಯನ್ನು ಬೆಳಗಬೇಕು. ಶ್ರೀಶುಕಮುನಿಯ ಆಗಮನ ಮತ್ತು ಶ್ರೀಕೃಷ್ಣಪರಮಾತ್ಮನು ಪ್ರಕಟವಾಗುವಿಕೆ–ಈ ಪ್ರಸಂಗಗಳು ಬಂದಾ ಗಲೂ ಆರತಿಯನ್ನು ಬೆಳಗಬೇಕು. ಹನ್ನೆರಡನೆಯ ಸ್ಕಂಧ ಮುಗಿದನಂತರ ಪುಸ್ತಕಕ್ಕೂ ಮತ್ತು ಪ್ರವಚನಕಾರರಿಗೂ ಭಕ್ತಿಪೂರ್ವಕವಾಗಿ ಪೂಜೆ ಸಲ್ಲಿಸ ಬೇಕು. ಪ್ರವಚನಕಾರರು ಗೃಹಸ್ಥರಾಗಿದ್ದರೆ ಅವರಿಗೆ ಯಥಾಶಕ್ತಿ ಔದಾರ್ಯ ದಿಂದ ವಸ್ತ್ರ, ಒಡವೆ ಮತ್ತು ಕಾಣಿಕೆ ಸಲ್ಲಿಸಬೇಕು. ಮೃದಂಗ ಮುಂತಾದುವು ಗಳನ್ನು ಬಾರಿಸುತ್ತಾ ಗಟ್ಟಿಯಾಗಿ ಸಂಕೀರ್ತನೆಮಾಡಬೇಕು. ಜಯ-ಜಯ

ಕಾರ, ನಮಸ್ಕಾರ ಮತ್ತು ಶಂಖನಾದಗಳನ್ನೂ ಮಾಡಬೇಕು. ಬ್ರಾಹ್ಮಣರಿಗೆ ಮತ್ತು ಯಾಚಕರಿಗೆ ಅನ್ನವನ್ನೂ ಧನವನ್ನೂ ದಾನಮಾಡಬೇಕು. ಪ್ರವಚನಕಾರರ ಕೈಯಿಂದ ಶ್ರೋತೃಗಳಿಗೆ ಪ್ರಸಾದ ಮತ್ತು ತುಳಸೀದಳ ಅನುಗ್ರಹಿಸಲ್ಪಡಬೇಕು. ಪ್ರತಿದಿನವೂ ಕಥೆಯ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಆರತಿಯನ್ನು ಮಾಡಬೇಕು.

ಕಥೆಯನ್ನು ಪ್ರತಿದಿನವೂ ನಿರ್ದಿಷ್ಟವಾದ ಘಟ್ಟದಲ್ಲಿಯೇ ನಿಲ್ಲಿಸ ಬೇಕು.* ಮೊದಲನೆಯ ದಿವಸ ಮನು-ಕರ್ದಮಸಂವಾದದವರೆಗೆ, ಎರಡ ನೆಯ ದಿವಸ ಭರತನ ಚರಿತ್ರೆಯವರೆಗೆ, ಮೂರನೆಯ ದಿವಸ ಏಳನೆಯ ಸ್ಕಂಧದ ಕೊನೆಯವರೆಗೆ, ನಾಲ್ಕನೆಯ ದಿವಸ ಶ್ರೀಕೃಷ್ಣನ ಅವತಾರದವರೆಗೆ, ಐದನೆಯ ದಿವಸ ರುಕ್ಮಿಣೀವಿವಾಹದವರೆಗೆ ಮತ್ತು ಆರನೆಯ ದಿವಸ ಹಂಸೋಪಾಖ್ಯಾನದವರೆಗೆ ಕಥಾಪ್ರವಚನಮಾಡಿ ಉಳಿದ ಭಾಗವನ್ನು ಏಳನೆಯ ದಿವಸದಲ್ಲಿ ಮುಗಿಸಿಬಿಡಬೇಕು. ಸ್ಕಂಧದ ಮೊದಲನೆಯ ಮತ್ತು ಕಡೆಯ ಶ್ಲೋಕಗಳನ್ನು ಹಲವು ಬಾರಿ ಪಠಿಸಬೇಕು ಮತ್ತು ಉಚ್ಚಸ್ವರದಲ್ಲಿ ಪಠಿಸಬೇಕು. ಕಥಾಸಮಾಪ್ತಿಯಾದ ಮಾರನೇದಿನ ಅಲ್ಲಿ ಸ್ಥಾಪಿತವಾಗಿರುವ ಎಲ್ಲ ದೇವತೆಗಳನ್ನೂ ಪೂಜೆಮಾಡಿ ಹೋಮವೇದಿಯ ಮೇಲೆ ಪಂಚಭೂ ಸಂಸ್ಕಾರ, ಅಗ್ನಿಸ್ಥಾಪನೆ ಮತ್ತು ಕುಶಕಂಡಿಕೆಗಳನ್ನು ಮಾಡಬೇಕು. ಮತ್ತೆ ವಿಧಿ ಪೂರ್ವಕವಾಗಿ ವರಣಮಾಡಲ್ಪಟ್ಟ ಬ್ರಾಹ್ಮಣರ ಮೂಲಕ** ಹೋಮ, ತರ್ಪಣ ಮತ್ತು ಮಾರ್ಜನೆಗಳನ್ನು ಮಾಡಿಸಿ ಶ್ರೀಮದ್ಭಾಗವತದ ಮೆರವಣಿಗೆ

---

*** ಮನುಕರ್ದಮಸಂವಾದಪರ್ಯನ್ತಂ ಪ್ರಥಮೇSಹನಿ । ಭರತಾಖ್ಯಾನಪರ್ಯನ್ತಂ ದ್ವಿತೀಯೇSಹನಿ ವಾಚಯೇತ್ । ತೃತೀಯೇ ದಿವಸೇ ಕುರ್ಯಾತ್ ಸಪ್ತಮಸ್ಕನ್ಧ ಪೂರಣಮ್ । ಕೃಷ್ಣಾವಿರ್ಭಾವಪರ್ಯನ್ತಂ ಚತುರ್ಥೇ ದಿವಸೇ ವದೇತ್ । ರುಕ್ಮಿಣ್ಯು ದ್ವಾಹಪರ್ಯನ್ತಂ ಪಞ್ಚಮೇSಹನಿ ವಾಚಯೇತ್ । ಶ್ರೀಹಂಸಾಖ್ಯಾನಪರ್ಯನ್ತಂ ಷಷ್ಠೇSಹನಿ ವದೇತ್ಸುಧೀಃ । ಸಪ್ತಮೇ ತು ದಿನೇ ಕುರ್ಯಾತ್ ಪೂರ್ತಿಂ ಭಾಗವತಸ್ಯ ವೈ । ಏವಂ ನಿರ್ವಿಘ್ನತಾ ಸಿದ್ಧಿರ್ವಿಪರ್ಯಯ ಇತೋSನ್ಯಥಾ ।**

---

* ಆಚಾರ್ಯರನ್ನು ವರಣಮಾಡುವಾಗ ಅವರ ಜೊತೆಯಲ್ಲಿ ಒಬ್ಬ ಸಹಾಯಕ ಆಚಾರ್ಯರನ್ನೂ ವರಣಮಾಡುವ ಪದ್ಧತಿಯಿದೆ. ಇವರಿಗೆ 'ಉಪಶುಕರು' ಎಂದು ಹೆಸರು. ಇವರು ಪ್ರವಚನದಲ್ಲಿ ಆಚಾರ್ಯರಿಗೆ ಅವಶ್ಯಕ ಸಹಾಯಮಾಡಬೇಕು. ಆಚಾರ್ಯರಿಗೆ ಅಕಸ್ಮಾತ್ತಾಗಿ ಏನಾದರೂ ತೊಂದರೆ ಸಂಭವಿಸಿ ಅವರು ಕಥೆಯನ್ನು

ಮಾಡಿಸಬೇಕು. ಬ್ರಾಹ್ಮಣಭೋಜನ ಮಾಡಿಸಬೇಕು. ಜೇನುತುಪ್ಪಮಿಶ್ರವಾದ ಪಾಯಸ ಮತ್ತು ಎಳ್ಳು ಮುಂತಾದುವುಗಳಿಂದ ಭಾಗವತದಲ್ಲಿರುವ ಶ್ಲೋಕಗಳ ಹತ್ತನೆಯ ಒಂದು ಭಾಗದಷ್ಟು ಅಂದರೆ 1,800 ಆಹುತಿಗಳನ್ನು ಸಮರ್ಪಿಸಬೇಕು. ಕ್ಷೀರಾನ್ನಪಾಯಸವು ಸಾಧ್ಯವಾಗದಿದ್ದರೆ ಎಳ್ಳು, ಅಕ್ಕಿ, ಜವೆ, ಒಣಹಣ್ಣುಗಳು (ಬಾದಾಮಿ, ಖರ್ಜೂರ ಇತ್ಯಾದಿ), ಶುದ್ಧವಾದ ತುಪ್ಪ ಮತ್ತು ಸಕ್ಕರೆಗಳನ್ನು ಬೆರೆಸಿ ಹವ್ಯಪದಾರ್ಥಗಳನ್ನು ಸಿದ್ಧಪಡಿಸಬೇಕು. ಅದಕ್ಕೆ ಪಚ್ಚಕರ್ಪೂರ, ಏಲಕ್ಕಿ ಮುಂತಾದ ಸುಗಂಧದ್ರವ್ಯಗಳನ್ನು ಸೇರಿಸಬೇಕು. ಮೇಲೆ ಹೇಳಿದ 1,800 ಆಹುತಿಗಳನ್ನು ಗಾಯತ್ರೀಮಂತ್ರದಿಂದ ಅಥವಾ ದಶಮಸ್ಕಂಧದ ಪ್ರತಿಶ್ಲೋಕದಿಂದ ಸಮರ್ಪಿಸಬೇಕು. ಹೋಮಾನಂತರ ದಿಕ್ಪಾಲಕರೇ ಮುಂತಾದವರಿಗೆ ಬಲಿ, ಕ್ಷೇತ್ರಪಾಲನ ಪೂಜೆ, ಛಾಯಾ ಪಾತ್ರದಾನ, ಹೋಮದ ಹತ್ತನೆಯ ಒಂದು ಭಾಗದಷ್ಟು ಸಂಖ್ಯೆಯಿಂದ ತರ್ಪಣ, ತರ್ಪಣದ ಹತ್ತನೆಯ ಒಂದು ಭಾಗದಷ್ಟರಿಂದ ಮಾರ್ಜನೆ ಇವುಗಳನ್ನೂ ಮಾಡಬೇಕು. ಮತ್ತೆ ಆರತಿಯನಂತರ ಯಾವುದಾದರೂ ನದೀ, ಸರೋವರ ಅಥವಾ ಬಾವಿಯ ಬಳಿಗೆ ಸಾಮೂಹಿಕವಾಗಿ ವಾದ್ಯಸಹಿತ ಮೆರವಣಿಗೆಯಲ್ಲಿ ಭಜನೆ-ಕೀರ್ತನೆಮಾಡುತ್ತಾ ಹೋಗಿ ಅಲ್ಲಿ ಅವಭೃತ (ಯಜ್ಞಾಂತ ) ಸ್ನಾನವನ್ನು ಆಚರಿಸಬೇಕು. ಯಜಮಾನನು ಶ್ರೀಮದ್ಭಾಗವತ ಗ್ರಂಥವನ್ನು ತನ್ನ ತಲೆಯ ಮೇಲೆ ಇರಿಸಿಕೊಂಡು ಅದರ ಮೆರವಣಿಗೆ ಮಾಡಿಸಬೇಕು. ಮೆರವಣಿಗೆಯಲ್ಲಿ ಪ್ರವಚನಕಾರರು ಶ್ರೋತೃಗಳು ಎಲ್ಲರೂ ಸೇರಿರಬೇಕು. ತಾಳ, ಘಂಟೆ, ಜಾಗಟೆ, ಶಂಖ ಮುಂತಾದುವು ಮೊಳಗುತ್ತಿರಬೇಕು. ಪೂರ್ಣವಾಗಿ ಹವನಮಾಡಲು ಅಶಕ್ತರಾದವರು ಯಥಾಶಕ್ತಿಯಾಗಿ ಹೋಮಕ್ಕೆ ವಿಹಿತವಾಗಿರುವ ಪದಾರ್ಥಗಳನ್ನು ದಾನಮಾಡಬೇಕು. ಕೊನೆಯಲ್ಲಿ ಕಡೆಯ ಪಕ್ಷ ಹನ್ನೆರಡು ಮಂದಿ ಬ್ರಾಹ್ಮಣರಿಗೆ ಜೇನುತುಪ್ಪಮಿಶ್ರಿತ ವಾದ ಕ್ಷೀರಾನ್ನವನ್ನು ಭೋಜನಮಾಡಿಸಬೇಕು. ವ್ರತದ ಪೂರ್ತಿಗಾಗಿ ಸುವರ್ಣದಾನ–ಗೋದಾನಗಳನ್ನು ಕೊಡಬೇಕು. ಸುವರ್ಣಸಿಂಹಾಸನದ ಮೇಲೆ ರಾರಾಜಿಸುತ್ತಿರುವ, ಸುಂದರವಾದ ಅಕ್ಷರಗಳಲ್ಲಿ ಲಿಖಿತವಾಗಿರುವ

---

ಮುಂದುವರಿಸಲು ಅಶಕ್ತರಾದರೆ, ಆಗ ಈ ಉಪಶುಕರು ಶುಕರ ಕಾರ್ಯವನ್ನು ಮುಂದುವರಿಸಬೇಕು.

ಶ್ರೀಮದ್ಭಾಗವತಗ್ರಂಥವನ್ನು ಪೂಜಿಸಿ, ದಕ್ಷಿಣಾಸಹಿತವಾಗಿ ಪ್ರವಚನ ಮಾಡಿದ ಆಚಾರ್ಯನಿಗೆ ದಾನಮಾಡಬೇಕು. ಕೊನೆಯಲ್ಲಿ ಎಲ್ಲ ಕುಂದು-ಕೊರತೆಗಳ ನಿವಾರಣೆಗಾಗಿ ಪ್ರವಚನಕಾರ ಆಚಾರ್ಯರಿಂದ ವಿಷ್ಣುಸಹಸ್ರ ನಾಮಸ್ತೋತ್ರವನ್ನು ಕೇಳಬೇಕು. ವಿರಕ್ತರಾದ ಶ್ರೋತೃಗಳು ಗೀತೆಯನ್ನು ಶ್ರವಣಮಾಡಬೇಕು.

## ಸಪ್ತಾಹೋತ್ಸವದ ಪ್ರಾರಂಭದಲ್ಲಿ ಸಿದ್ಧಪಡಿಸಿ ಇಟ್ಟುಕೊಂಡಿರಬೇಕಾದ ಸಾಮಗ್ರಿಗಳ ಸೂಚೀ :-

**ಪೂಜಾಸಾಮಗ್ರಿಗಳು :-** ಗಂಗಾಜಲ, ಅರಿಸಿನ-ಕುಂಕುಮ, ರಕ್ಷಾ ಸೂತ್ರ, ಗಂಧ, ಕೇಸರಿ, ಕರ್ಪೂರ, ಪುಷ್ಪ, ಪುಷ್ಪಮಾಲೆ, ತುಳಸೀದಳ, ಬಿಲ್ವಪತ್ರ, ಗರಿಕೆ, ಧೂಪ, ಒಳ್ಳೆಯ ಊದುಬತ್ತಿ, ಪಂಚಾಮೃತ, ( ಹಾಲು, ಮೊಸರು, ತುಪ್ಪ, ಜೇನುತುಪ್ಪ ಮತ್ತು ಸಕ್ಕರೆ ), ದೀಪ (ಇದಕ್ಕೆ ಹಸುವಿನ ತುಪ್ಪವು ಶ್ರೇಷ್ಠ ), ಬತ್ತಿ, ವೀಳ್ಯದೆಲೆ, ಅಡಿಕೆ, ಯಜ್ಞೋಪವೀತ, ಏಲಕ್ಕಿ, ಲವಂಗ, ದ್ರಾಕ್ಷಿ, ಬಾದಾಮಿ, ಗೋಡಂಬಿ, ಖರ್ಜೂರ ಇತ್ಯಾದಿ. ಬೆಲ್ಲ, ಅಕ್ಕಿ, ಗೋಧಿ, ಮಣ್ಣಿನಕುಂಡಗಳು, ಹಳದಿಯ ಸಾಸುವೆ, ಸುಗಂಧದ್ರವ್ಯ ಗಳು, ಬಾಳೆಹಣ್ಣು, ಐದೈದು ಗಜ ಬಿಳೀವಸ್ತ್ರ-ಕೆಂಪುವಸ್ತ್ರ-ಹಳದಿವಸ್ತ್ರ, ರೇಷ್ಮೆವಸ್ತ್ರ ಒಂದೂವರೆ ಗಜ, ಸರ್ವತೋಭದ್ರವನ್ನು ರಚಿಸಲು ಬೇಕಾದ ಹಸಿರು-ಕೆಂಪು-ಕಪ್ಪು-ಹಳದಿ-ಗುಲಾಬಿಬಣ್ಣಗಳು, ಗೋಮಯ, ಎರಡು ಅಥವಾ ಏಳು ತೆಂಗಿನಕಾಯಿಗಳು, ಸುಗಂಧದ್ರವ್ಯಗಳು, ಪನ್ನೀರು, ದರ್ಭೆ, ಕುಂಕುಮಸಿಂಧೂರ, ರೂಪಾಯಿನಾಣ್ಯಗಳು, ಆರತಿಯಪಾತ್ರೆ, ಘಂಟೆ, ತಾಳ, ಶಂಖ, ಜಾಗಟೆ–ಇತ್ಯಾದಿ ಪೂಜಾವಾದ್ಯಗಳು, ಕಡ್ಡೀಪೆಟ್ಟಿಗೆ, ಪೀಠ ವೇದಿಕೆಗಳು ( ಸರ್ವತೋಭದ್ರರಚನೆಗೆ, ಶ್ರೀನಾರದರಿಗೆ, ನವಗ್ರಹಗಳಿಗೆ, ಷೋಡಶಮಾತೃಕೆಯರಿಗೆ, ಶ್ರೀಗಣೇಶದೇವರಿಗೆ, ಶ್ರೀವ್ಯಾಸದೇವರಿಗೆ, ಶ್ರೀ ಶುಕದೇವರಿಗೆ, ಸಪ್ತಚಿರಂಜೀವಿಗಳಿಗೆ, ಪೌರಾಣಿಕರಿಗೆ ಸನತ್ಕುಮಾರಾದಿಗಳಿಗೆ ಎಲ್ಲರಿಗೂ ಪ್ರತ್ಯೇಕವಾಗಿ )

**ಕಲಶಸ್ಥಾಪನೆಯ ಸಾಮಗ್ರಿಗಳು :-** ತಾಮ್ರದ ಕಲಶ, ತಾಮ್ರದ ಅಥವಾ ಕಂಚಿನ ಪಾತ್ರೆ, ಐದು ಮಣ್ಣಿನ ಪಾತ್ರೆಗಳು, ಸಪ್ತಧಾನ್ಯಗಳು (ಅಕ್ಕಿ, ಗೋಧಿ, ಕಡಲೆ, ಹೆಸರು, ಉದ್ದು, ತೊಗರಿ, ಹುರುಳಿ ), ಪಂಚ

ಪಲ್ಲವಗಳು (ಅರಳಿ, ಅತ್ತಿ, ಆಲ, ಮಾವು, ನೇರಳೆ,) ಗರಿಕೆ, ದರ್ಭೆ, ಅಡಿಕೆ, ಸುವರ್ಣದ ಚೂರುಗಳು (ನಾಲ್ಕು), ಪಂಚರತ್ನಗಳು (ಬಂಗಾರ, ಬೆಳ್ಳಿ, ಮುತ್ತು, ಹವಳ, ವಜ್ರ–ಇವು ಸಿಕ್ಕದಿದ್ದರೆ ಯಥಾಶಕ್ತಿ ಸುವರ್ಣ), ಗಂಧ, ಅಕ್ಷತೆ, ಪುಷ್ಪ, ತೀರ್ಥೋದಕ, ಸಮುದ್ರತೀರ್ಥ, ಸಪ್ತಮೃತ್ತಿಕೆಗಳು (ಕುದುರೆಲಾಯ, ಗಜಶಾಲೆ, ಹುತ್ತ, ಸಂಗಮ, ದನದ ಕೊಟ್ಟಿಗೆ, ಮಡು ಮತ್ತು ಚೌಕ–ಇವುಗಳ ಮಣ್ಣು. ರಾಜದ್ವಾರ ಮತ್ತು ಕೆರೆಯ ಮಣ್ಣುಗಳನ್ನು ಚೌಕ ಮತ್ತು ಮಡುವಿನ ಮಣ್ಣುಗಳ ಬದಲಿಗೆ ತೆಗೆದುಕೊಳ್ಳುವುದೂ ಉಂಟು.) ಸರ್ವೌಷಧಿ (ದಶಮೂಲ–ಅಂದರೆ ಕೂಟ, ಜಟಾಮಾಂಸಿ, ಅರಿಸಿನಕೊಂಬುಗಳು, ರಾಭಟ, ಮುರೆ, ಶೈಲೇಭ, ಚಂದನ, ಬಜೆ, ಚಂಪಕ ಮತ್ತು ನಾಗರಮೇಧಾ–ಇವು ಸಿಕ್ಕದಿದ್ದರೆ ಅರಿಸಿನದ ಕೊಂಬುಗಳು ಆಗಬಹುದು.) ನದೀಸಂಗಮತೀರ್ಥ, ಶ್ರೀಲಕ್ಷ್ಮೀನಾರಾಯಣರ ಸ್ವರ್ಣ ಪ್ರತಿಮೆ (ನಾಲ್ಕು ತೊಲ ಅಥವಾ ಯಥಾಶಕ್ತಿಪ್ರಮಾಣದ ಚಿನ್ನದ ಉಚ್ಚ ಪೀಠ, ಮಾವಿನಮರದಿಂದ ರಚಿತವಾದ ಪ್ರತಿಮೆ.)

**ಕಥಾಮಂಟಪದ ಸಾಮಗ್ರಿಗಳು :** ಮೇಲ್ಹಾವಣಿಯ ಹೊದಿಕೆಯ ಬಟ್ಟೆ, ನಾಲ್ಕು ಮೂಲೆಗಳುಳ್ಳ ಮಂಟಪ, ನಾಲ್ಕು ಬಾಳೆಕಂಬಗಳು, ಬಿದಿರಿನ ಕಂಬಗಳು, ಮಂಟಪಾಲಂಕಾರದ ಮಾಲೆಗಳು, ಪುಷ್ಪ ಮತ್ತು ಪತ್ರಗಳು, ನಾಲ್ಕುದಿಕ್ಕುಗಳಲ್ಲೂ ಬಾವುಟಗಳು, ವೇದಿಕೆಗಳು, ಸಿಂಹಾಸನ, ಪೀಠ, ದಿಂಬು, ಕಂಬಳಿ, ಪುಸ್ತಕವನ್ನು ಸುತ್ತುವ ವಸ್ತ್ರ, ಪುಸ್ತಕಕ್ಕೋಸ್ಕರ ಎಲೆಯ ತೋರಣ–ಇತ್ಯಾದಿ.

ಶ್ರೀಗಣೇಶ, ಇತರ ದೇವತೆಗಳು, ಶ್ರೀಮದ್ಭಾಗವತ ಮತ್ತು ಆಚಾರ್ಯರ ಪೂಜೆಗಾಗಿ ಪ್ರತಿದಿನವೂ ಗಂಧ, ಪುಷ್ಪ, ಮಾಲೆ, ಧೂಪ, ದೀಪ–ಇತ್ಯಾದಿ ಸಾಮಗ್ರಿಗಳು.

**ವರಣದ ಸಾಮಗ್ರಿಗಳು :–** ಪ್ರವಚನಕಾರರಿಗೆ ಹೊದೆಯುವ ವಸ್ತ್ರ, ಶಾಲು, ದುಪ್ಪಟ್ಟ, ಉಡುವ ವಸ್ತ್ರ, ಆಸನ, ದಕ್ಷಿಣೆ, ತುಳಸೀಮಾಲೆ, ರುದ್ರಾಕ್ಷಿಮಾಲೆ, ಜಲಪಾತ್ರೆ ಮತ್ತು ಜಪಮಾಡುವವರಿಗೂ ಯಥಾಶಕ್ತಿಯಾಗಿ ವಸ್ತ್ರ, ದ್ರವ್ಯ–ಇತ್ಯಾದಿ.

**ಪಾರಾಯಣದ ಪುಸ್ತಕಗಳು :** ಶ್ರೀಮದ್ಭಾಗವತ, ಶ್ರೀಮದ್ರಾಮಾಯಣ, ಭಗವದ್ಗೀತೆ, ಸಹಸ್ರನಾಮ – ಇತ್ಯಾದಿ.

**ಹವನಸಾಮಗ್ರಿಗಳು :-**ವೇದಿಕೆಗಾಗಿ ಶುದ್ಧವಾದ ಮರಳು, ಒಣಗಿದ ಸೌದೆ, ಗೋಣೀಚೀಲ, ಕುಶಸ್ತಂಬ, ಗರಿಕೆ, ಯಜ್ಞೇಶ್ವರನನ್ನು ಬಿಜಯ ಮಾಡಿಸಿಕೊಂಡು ಬರಲು ಎರಡು ಕಂಚಿನ ಪಾತ್ರೆಗಳು, ದೊಡ್ಡದಾದ ಒಂದು ಹಿತ್ತಾಳೆಯ ಪಾತ್ರೆ, ಯಜ್ಞಪಾತ್ರೆಗಳು ಪ್ರಣೀತಾ, ಪ್ರೋಕ್ಷಣೀ, ಸ್ರುಕ್, ಸ್ರುವ, ಪೂರ್ಣಾಹುತಿ ಪಾತ್ರೆ, ಚರುಸ್ಥಾಲೀ, ಆಜ್ಯಸ್ಥಾಲೀ–ಇತ್ಯಾದಿ.

ಹೋಮಸಾಮಗ್ರಿಗಳು :- ಸಮಿತ್ತು, ತುಪ್ಪ, ಚರು, ಛಾಯಾಪಾತ್ರ, (ತುಪ್ಪ ತುಂಬಿದ ಕಂಚಿನ ಬಟ್ಟಲು )

ಎಳ್ಳು 10 ಸೇರು, ಅಕ್ಕಿ 5 ಸೇರು, ಜವೇ 2 ಸೇರು, ಶುದ್ಧ ಘೃತ 4 ಸೇರು, ಶುದ್ಧವಾದ ಕಲ್ಲುಸಕ್ಕರೆ 2 ಸೇರು, ಬಾದಾಮಿ ಮುಂತಾದ ಒಣಹಣ್ಣುಗಳು 2 ಸೇರು–ಇವುಗಳೆಲ್ಲವನ್ನೂ ಸೇರಿಸಿ ಹವನದ್ರವ್ಯವನ್ನು ಮಾಡುತ್ತಾರೆ. ಇದಲ್ಲದೇ ಇದಕ್ಕೆ ಪಚ್ಚಕರ್ಪೂರ, ಅಗರು, ಚಂದನಚೂರ್ಣ ಮುಂತಾದ ಸುಗಂಧದ್ರವ್ಯಗಳನ್ನೂ ಸೇರಿಸಲಾಗುತ್ತದೆ. ಬಲಿಗೋಸ್ಕರ ಹಪ್ಪಳ, ಸಂಡಿಗೆ, ಉದ್ದು, ಮೊಸರು, ಅಕ್ಕಿ, ಬತ್ತಿ, ದಕ್ಷಿಣೆ, ಕ್ಷೇತ್ರಪಾಲಬಲಿಯ ಸಾಮಗ್ರಿಗಳು ಇತ್ಯಾದಿ ಪೂರ್ಣಾಹುತಿದ್ರವ್ಯಗಳು. ಪ್ರಸಾದದ್ರವ್ಯಗಳು, ಬ್ರಾಹ್ಮಣಭೋಜನಕ್ಕಾಗಿ ಜೇನುತುಪ್ಪಸೇರಿಸಿದ ಪಾಯಸಾನ್ನ, ಮಧುರಭಕ್ಷ್ಯಗಳು, ಹವನಮಾಡುವ ಬ್ರಾಹ್ಮಣರಿಗೆ ವರಣದ್ರವ್ಯ, ದಕ್ಷಿಣೆ – ಇತ್ಯಾದಿ.

ಕಥಾಸಮಾಪ್ತಿಯನಂತರ ಪ್ರವಚನಕಾರರಿಗೆ ಸಮರ್ಪಿಸಲು ವಸ್ತ್ರ, ಆಭರಣ, ನಗದು ಹಣ – ಇತ್ಯಾದಿ.

**ಇಲ್ಲಿಗೆ ಶ್ರೀಮದ್ಭಾಗವತಪೂಜಾವಿಧಿಯು ಮುಗಿಯಿತು.**



ಶ್ರೀಮಹಾಗಣಪತಯೇ ನಮಃ ಶ್ರೀಮಹಾಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



# ಶ್ರೀ ಮ ದ್ಭಾ ಗ ವ ತ

ಪ್ರಥಮಸ್ಕಂಧ ೧ನೆಯ ಅಧ್ಯಾಯ

**ಜನ್ಮಾದ್ಯಸ್ಯ ಯತೋಽನ್ವಯಾದಿತರತ-**
**ಶ್ಚಾರ್ಥೇಷ್ವಭಿಜ್ಞಃ ಸ್ವರಾಟ್**
**ತೇನೇ ಬ್ರಹ್ಮ ಹೃದಾ ಯ ಆದಿಕವಯೇ**
**ಮುಹ್ಯನ್ತಿ ಯತ್ಸೂರಯಃ ।**
**ತೇಜೋವಾರಿಮೃದಾಂ ಯಥಾ ವಿನಿಮಯೋ**
**ಯತ್ರ ತ್ರಿಸರ್ಗೋಽಮೃಷಾ**
**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ**
**ಸತ್ಯಂ ಪರಂ ಧೀಮಹಿ ॥ ***

**ಸೂತಪುರಾಣಿಕರನ್ನು ಕುರಿತು ಶೌನಕಾದಿ ಮಹರ್ಷಿಗಳ ಪ್ರಶ್ನೆ :-**

**"ಪರಮಸತ್ಯಸ್ವರೂಪನಾದ ಪರಮಾತ್ಮನನ್ನು ಧ್ಯಾನಮಾಡೋಣ. ಈ ವಿಶ್ವದ ಸೃಷ್ಟಿ ಮುಂತಾದುವುಗಳಿಗೆಲ್ಲಾ** ಅವನೇ ಕಾರಣನು. ಅವನ ಇರುವಿಕೆಯಿಂದಲೇ ಇವೆಲ್ಲಾ ನಡೆಯುವುದು. ಇಲ್ಲದಿದ್ದರೆ ಇದರ ನಿರ್ವಹಣೆ**

---

* ೧) ಯತ್ಸೂರಯಃ : ಪಾಠಾಂತರ–ಯಂ ಸೂರಯಃ ೨) ತ್ರಿಸರ್ಗೋಽಮೃಷಾ: ಪಾಠಾಂತರ–ತ್ರಿಸರ್ಗೋ ಮೃಷಾ ೩) ಯಥಾ ವಿನಿಮಯೋ : ಪಾಠಾಂತರ–ಯತೋ ವಿನಿಮಯೋ

** ಸೃಷ್ಟಿ ಮುಂತಾದುವು ಎಂದರೆ : ಸೃಷ್ಟಿ-ಸ್ಥಿತಿ-ಲಯಗಳು. ಇವುಗಳ ಜೊತೆಗೆ ಅನುಗ್ರಹ ಮತ್ತು ತಿರೋಧಾನ (ಮರೆಸಿಕೊಳ್ಳುವಿಕೆ) ಎಂಬಿವುಗಳನ್ನೂ ಸೇರಿಸಿಕೊಳ್ಳಬೇಕೆಂಬುದು ಆಗಮಶಾಸ್ತ್ರಗಳ ಅಭಿಪ್ರಾಯ. ಆದಿಶಬ್ದದಿಂದ ಸ್ಥಿತಿ-ಸಂಹಾರ-ನಿಯಮನ-ಜ್ಞಾನ- ಅಜ್ಞಾನ - ಬಂಧ - ಮೋಕ್ಷಗಳನ್ನು ತೆಗೆದುಕೊಳ್ಳಬೇಕೆಂದು ವಿಜಯ

ಹೇಗೆ ಸಾಧ್ಯವಾಗುತ್ತಿತ್ತು? ಸರ್ವಪ್ರಕಾರಗಳಿಂದಲೂ ಕಾರಣನವನೇ. ಆತನು ಎಲ್ಲವನ್ನೂ ಬಲ್ಲವನಾಗಿ* ತನಗೆ ತಾನೇ ಪ್ರಭುವಾಗಿ ಸ್ವಯಂಪ್ರಕಾಶ ನಾಗಿ ಬೆಳಗುತ್ತಿರುವನು. ಆದಿಕವಿಯಾದ ಬ್ರಹ್ಮದೇವರಿಗೂ** ಅತ್ಯಂತ ಪ್ರೀತಿಯಿಂದ ಮಾನಸಿಕವಾಗಿಯೇ ವೇದವನ್ನು ವಿಸ್ತಾರವಾಗಿ ಉಪದೇಶ ಮಾಡಿದವನು. ಯಾವನನ್ನು ಅರಿಯಲಾರದೇ ಮಹಾಜ್ಞಾನಿಗಳೂ ತೊಳಲಾಡುತ್ತಿರುವರೋ–ಅಂತಹ ಸರ್ವಾತೀತ, ಸರ್ವೋತ್ತಮನು. ತೇಜಸ್ಸು, ಜಲ ಮತ್ತು ಪೃಥ್ವಿಗಳ ವಿಶಿಷ್ಟವಾದ ಸೇರುವೆಯಿಂದ ಆಗಿರುವ ಮುಬ್ಬಗೆಯ ಸೃಷ್ಟಿಗೆ ಆಧಾರವಾಗಿದ್ದರೂ ಅದರ ವಿಕಾರಕ್ಕೆ ಒಳಗಾಗದ ನಿಷ್ಕಲನಿರಂಜನ ಸ್ವರೂಪಿ. ತನ್ನ ದಿವ್ಯವಾದ ತೇಜಸ್ಸಿನಿಂದ ಎಲ್ಲ ಮಾಯೆಗಳನ್ನೂ ತೊಡೆದು ಹಾಕುವವನು. ಇಂತಹ ಪರಮಸತ್ಯಸ್ವರೂಪನನ್ನು ಧ್ಯಾನಮಾಡೋಣ.[1]

---

ಧ್ವಜೀಯ ಭಾಷ್ಯ. ಅನುಪ್ರವೇಶ ಮತ್ತು ನಿಯಮನಗಳು ಸ್ಥಿತಿಯಲ್ಲೇ ಅಂತರ್ಗತ ವಾಗುತ್ತವೆ ಎಂಬುದು ಬ್ರಹ್ಮಸೂತ್ರದ ಮೇಲಣ ಶುಕಭಾಷ್ಯದ ಹೇಳಿಕೆ. 'ಜನ್ಮಾದ್ಯಸ್ಯ ಯತಃ' ಎಂಬುದು ಶ್ರೀಮದ್ಭಾಗವತದಲ್ಲಿರುವ ಮೂಲ. ಜಗತ್ತಿನ ಸೃಷ್ಟಿ ಮುಂತಾದುವುಗಳಿಗೆಲ್ಲಾ ಪರಮಾತ್ಮನೇ ಕಾರಣ. ( ಪರಮಾಣುಗಳಾಗಲೀ ಪ್ರಕೃತಿಯಾಗಲೀ ಮೂಲಕಾರಣವಲ್ಲ. ) ಶ್ರುತಿ-ಸ್ಮೃತಿ-ಬ್ರಹ್ಮಸೂತ್ರಗಳು ಸ್ಪಷ್ಟವಾಗಿ ಸಾರುವ ಈ ಅಭಿಪ್ರಾಯವನ್ನೇ ಶ್ರೀಮದ್ಭಾಗವತವು ಇಲ್ಲಿ ಮೊಳಗಿಸಿದೆ. 'ಯತೋ ವಾ ಇಮಾನಿ ಭೂತಾನಿ ಜಾಯನ್ತೇ । ಯೇನ ಜಾತಾನಿ ಜೀವನ್ತಿ । ಯತ್ಪ್ರಯನ್ತ್ಯಭಿಸಂವಿಶನ್ತಿ । '(ತೈ. ಉಪ.) 'ಅಹಂ ಸರ್ವಸ್ಯ ಪ್ರಭವಃ ಮತ್ತಃ ಸರ್ವಂ ಪ್ರವರ್ತತೇ । ' ( ಶ್ರೀಗೀತಾ ) 'ಓಂ ಜನ್ಮಾದ್ಯಸ್ಯ ಯತಃ' ( ವೇದಾನ್ತಸೂತ್ರ )

* `ಯಃ ಸರ್ವಜ್ಞಃ ಸರ್ವವಿತ್' 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ । '

**'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ । '

1 ಶ್ರೀಮದ್ಭಾಗವತವು ಗಾಯತ್ರೀಮಂತ್ರಲಿಂಗದಿಂದ ಕೂಡಿ ಗಾಯತ್ರಿಯ ಅರ್ಥವನ್ನೇ ವಿವರಿಸುವ ದಿವ್ಯಗ್ರಂಥ. ಗಾಯತ್ರಿಯ ಅರ್ಥವು ಅದರಲ್ಲಿ ಅಡಕವಾಗಿರುವುದು ಈ ಪ್ರಾರಂಭದ ಮಂಗಳಶ್ಲೋಕದಲ್ಲಿಯೇ ಎದ್ದು ಕಾಣುತ್ತದೆ. ಹೇಗೆಂದರೆ :

'ಧೀಮಹಿ' ಎಂಬ ಇದರ ಪದವು ಗಾಯತ್ರೀಮಂತ್ರವನ್ನು ಶಬ್ದ ಮತ್ತು ಅರ್ಥ

**ಧರ್ಮಃ ಪ್ರೋಜ್ಝಿತಕೈತವೋऽತ್ರ ಪರಮೋ**
**ನಿರ್ಮತ್ಸರಾಣಾಂ ಸತಾಂ**
**ವೇದ್ಯಂ ವಾಸ್ತವಮತ್ರ ವಸ್ತು ಶಿವದಂ**
**ತಾಪತ್ರಯೋನ್ಮೂಲನಮ್ ।**
**ಶ್ರೀಮದ್ಭಾಗವತೇ ಮಹಾಮುನಿಕೃತೇ**
**ಕಿಂ ವಾ ಪರೈರೀಶ್ವರಃ**
**ಸದ್ಯೋ ಹೃದ್ಯವರುಧ್ಯತೇ ಸುಕೃತಿಭಿಃ**
**ಶುಶ್ರೂಷುಭಿಸ್ತತ್ಕ್ಷಣಾತ್ ॥೨॥**

---

ಎರಡರಲ್ಲೂ ಹೋಲುತ್ತದೆ. ಗಾಯತ್ರಿಯಲ್ಲಿರುವ 'ಸವಿತುಃ ದೇವಸ್ಯ' (ಸೃಷ್ಟಿ ಕರ್ತನೂ ಜಗದುದಯ-ಪಾಲನ-ಲಯಲೀಲನೂ ಆಗಿರುವ ಸ್ವಾಮಿಯ) ಎಂಬ ಪದಗಳ ಅಭಿಪ್ರಾಯವು ಜಗತ್ಕಾರಣತ್ವಾದಿಗಳನ್ನು ಹೇಳುವ ಇಲ್ಲಿನ 'ಜನ್ಮಾದ್ಯಸ್ಯ ಯತಃ' ಎಂಬ ಪದಗಳಲ್ಲಿ ಗರ್ಭಿತವಾಗಿದೆ. ಗಾಯತ್ರಿಯ 'ಭರ್ಗಃ' (ತೇಜಸ್ಸನ್ನು) ಎಂಬ ಪದದ ಅರ್ಥವು ಇಲ್ಲಿನ 'ಸ್ವರಾಟ್' (ಸ್ವಯಂಪ್ರಕಾಶನಾದ, ಸ್ವಯಂಪ್ರಭುವಾದ) ಎಂಬ ಶಬ್ದದಲ್ಲಿ ಅಡಕವಾಗಿದೆ. 'ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ' ಎಂಬ ಪದಗಳು ಅದನ್ನೇ ವಿವರಿಸುತ್ತವೆ. ಶ್ರೀಗಾಯತ್ರೀಮಂತ್ರದಲ್ಲಿನ 'ವರೇಣ್ಯಂ' (ಶ್ರೇಷ್ಠವಾದ) ಎಂಬ ಪದದ ಅರ್ಥವು ಇಲ್ಲಿರುವ 'ಪರಂ' ಎಂಬುದರಿಂದ ಸೂಚಿತವಾಗಿದೆ. 'ಧಿಯೋ ಯೋ ನಃ ಪ್ರಚೋದಯಾತ್' (ನಮ್ಮ ಬುದ್ಧಿಗಳಿಗೆ ಪ್ರಚೋದಕವಾಗಿರುವ) ಎಂಬ ಗಾಯತ್ರೀತೃತೀಯಪಾದದ ಆಶಯವು 'ತೇನೇ ಬ್ರಹ್ಮಹೃದಾ ಯ ಆದಿಕವಯೇ' ಎಂಬ ಶ್ಲೋಕಭಾಗದಲ್ಲಿ ಮೂಡಿಬಂದಿದೆ. ಇದಲ್ಲದೇ ಈ ಶ್ಲೋಕದಲ್ಲಿರುವ 'ಸತ್ಯಂ' ಎಂಬ ಶಬ್ದವು ಶ್ರೀಗಾಯತ್ರಿಯ ಪ್ರಥಮಪಾದವಾದ ('ತತ್ಸತ್ಯಮಿತ್ಯಾಚಕ್ಷತೇ' ಎಂಬ ಶ್ರುತಿಯಂತೆಯೂ 'ಓಂ ತತ್ಸದಿತಿ ನಿರ್ದೇಶಃ' ಎಂಬ ಶ್ರೀಗೀತಾವಚನದಂತೆಯೂ) ಸತ್ಯಶಬ್ದಪರ್ಯಾಯವಾಗಿರುವ 'ತತ್' ಎಂಬ ಪದಕ್ಕೂ, ಯಾವ ಕಾರಣದಿಂದ ಎಂಬ ಅರ್ಥವುಳ್ಳ 'ಯತಃ' ಎಂಬ ಪದವು ಗಾಯತ್ರಿಯ 'ಸವಿತುಃ' ಎಂಬ ಪದಕ್ಕೂ, 'ಪರಂ ಅಭಿಜ್ಞಃ' ಎಂಬ ಶಬ್ದಗಳು ಗಾಯತ್ರಿಯಲ್ಲಿನ 'ಭರ್ಗಃ' ಎಂಬುದಕ್ಕೂ, 'ಅಸ್ಯ' ಎಂಬುದು ಗಾಯತ್ರಿಯಲ್ಲಿನ 'ದೇವಸ್ಯ' ಎಂಬ ಪದಕ್ಕೂ, 'ಹೃದಾ' ಎಂಬ ಶಬ್ದವು 'ಧಿಯಃ' ಎಂಬ ಗಾಯತ್ರಿಯಲ್ಲಿನ ಪದಕ್ಕೂ, 'ಆದಿಕವಯೇ' ಎಂಬುದು 'ನಃ' ಎಂಬ ಗಾಯತ್ರಿಯ ಪದಕ್ಕೂ, 'ತೇನೇ' ಎಂಬುದು 'ಪ್ರಚೋದಯಾತ್' ಎಂಬ ಗಾಯತ್ರಿಯ

ಈ ಶ್ರೀಮದ್ಭಾಗವತದಲ್ಲಿ ಕಪಟರಹಿತವಾದ ಪರಮಧರ್ಮವು ನಿರೂಪಿತವಾಗಿದೆ. ಇದು ಪ್ರತಿಪಾದನಮಾಡುವ ವಸ್ತು ಮಾತ್ಸರ್ಯರಹಿತರಾದ ಸಜ್ಜನರಿಗೆ ವೇದ್ಯವಾಗುವ ಪರಮಸತ್ಯ. ಪರಮಮಂಗಳಕರವಾದುದು. ಆಧ್ಯಾತ್ಮಿಕ-ಆಧಿದೈವಿಕ-ಆಧಿಭೌತಿಕಗಳೆಂಬ ಮೂರು ತಾಪಗಳನ್ನೂ ನಿರ್ಮೂಲಗೊಳಿಸುವುದು. ಮಹಾಮುನಿಗಳಾದ ವೇದವ್ಯಾಸರೇ ರಚಿಸಿರುವ ಈ ಶ್ರೀಮದ್ಭಾಗವತವಿರುವಾಗ ಬೇರೆ ಸಾಧನಗಳೇಕೆ? ಸುಕೃತಿಗಳು ಇದನ್ನು ಕೇಳಬೇಕೆಂದು ಇಚ್ಛೆಪಟ್ಟರೆ ಸಾಕು, ಒಡನೆಯೇ ತತ್ಕ್ಷಣದಲ್ಲಿಯೇ ಶ್ರೀಭಗವಂತನು ಅವರ ಹೃದಯವನ್ನು ಪ್ರವೇಶಿಸಿ ಅಲ್ಲಿಯೇ ಸೆರೆಹಿಡಿಯಲ್ಪಡುತ್ತಾನೆ.*

---

ಶಬ್ದಕ್ಕೂ ಪ್ರತಿಪದಗಳಾಗಿವೆ. ಹೀಗೆ ಶ್ರೀಗಾಯತ್ರೀಪರಬ್ರಹ್ಮವಿದ್ಯಾರೂಪವೇ ಆಗಿದೆ, ಶ್ರೀಮದ್ಭಾಗವತಮಹಾಪುರಾಣ. **'ಗಾಯತ್ರ್ಯಾಶ್ಚ ಸಮಾರಮ್ಭೋ ಯತ್ರ ಭಾಗವತಂ ವಿದುಃ' 'ಆರಭ್ಯ ಯತ್ರ ಗಾಯತ್ರೀಂ ವರ್ಣ್ಯತೇ ಧರ್ಮವಿಸ್ತರಃ' 'ಗಾಯತ್ರ್ಯುಪಕ್ರಮೋ ಯತ್ರ ತತ್ರ ಭಾಗವತಂ ವಿದುಃ'** ಎಂದು ಪುರಾಣವಾಕ್ಯಗಳು ಶ್ರೀಮದ್ಭಾಗವತದ ಬಗೆಗೆ ಹೇಳುವ ಲಕ್ಷಣವಿವರಣವಾಕ್ಯಗಳು ಇಲ್ಲಿ ಸಮರ್ಥಿತವಾಗಿವೆ–ಎಂದು ಶ್ರೀ ಶ್ರೀಧರಾ ಚಾರ್ಯರು ನಿರೂಪಿಸಿರುವುದು ಅತ್ಯಂತಪ್ರಾಮಾಣಿಕವಾಗಿದೆ. ಶ್ರೀದೇವೀಭಾಗವತದ ಮಂಗಳಶ್ಲೋಕದಲ್ಲಿಯೂ **'ಧೀಮಹಿ ಬುದ್ಧಿಂ ಯಾ ನಃ ಪ್ರಚೋದಯಾತ್'** ಎಂಬ ಪದಗಳಿಂದ ಗಾಯತ್ರಿಯು ಸೂಚಿತವಾಗಿರುವುದು ಗಮನೀಯ.

ಮಂಗಳಶ್ಲೋಕದ ರಚನೆಗೆ ಉದ್ದೇಶಗಳು :- ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಗೊಳ್ಳಲಿ ಎಂಬುದು ಮತ್ತು ಸಂತರಿಗೂ ಶಿಷ್ಯರಿಗೂ ಸಂಪ್ರದಾಯದ ಶಿಕ್ಷಣವಾಗಲಿ ಎಂಬುದು. ಗ್ರಂಥಕರ್ತರಾದ ವೇದವ್ಯಾಸರು ಬ್ರಹ್ಮಾಪರೋಕ್ಷಜ್ಞಾನಿಗಳು. ಶ್ರೀಮನ್ನಾರಾಯಣನ ಅವತಾರವೂ ಆಗಿದ್ದಾರೆ. ಅವರಿಗೆ ವಿಘ್ನದ ಸಂಭಾವನೆಯೇ ಇಲ್ಲವಲ್ಲಾ? ಎಂದರೆ : ಶಿಷ್ಯಜನರ ಮತ್ತು ಸತ್ಪುರುಷರ ತಿಳಿವಳಿಕೆಗಾಗಿಯಾದರೂ ಅದು ಬೇಕಾಗುತ್ತದೆ. ಮಂಗಳಶ್ಲೋಕವನ್ನು ರಚಿಸಿ ಅದರಲ್ಲಿ ಸರ್ವದೇವತೆಯಾದ ಶ್ರೀಭಗವಂತನನ್ನು ಸ್ಮರಿಸುವುದು ಮೇಲ್ಕಂಡ ಮತ್ತು ಇನ್ನೂ ಇತರ ನಾನಾಪ್ರಯೋಜನಗಳಿಗಾಗಿ–ಎಂದು ಸಂಪ್ರದಾಯವಿದರು ಹೇಳುತ್ತಾರೆ. **'ನಿರನ್ತರಾಯೋಽಪಿ ಪ್ರೇಕ್ಷಾವಚ್ಛಿಕ್ಷಾಯೈ ಮಂಗಳಾಚರಣಾದ್ಯನೇಕಪ್ರಯೋಜನಾಯ ಚ ಸರ್ವದೇವತಾಂ ನಾರಾಯಣಾಖ್ಯಂ ಅನುಸ್ಮರತಿ'**

* **ಪ್ರೋಜ್ಝಿತಕೈತವಃ** = ಕಪಟರಹಿತವಾದ, ಫಲಾಭಿಸಂಧಿಯೆಂಬ ಕಪಟರಹಿತವಾದ. ಮೋಕ್ಷಾಭಿಸಂಧಿಯೂ ಇಲ್ಲದೆ ಕೇವಲ ಈಶ್ವರಾರಾಧನಲಕ್ಷಣವಾದ (ಶ್ರೀಧರೀಯ)

**ನಿಗಮಕಲ್ಪತರೋರ್ಗಲಿತಂ ಫಲಂ**
**ಶುಕಮುಖಾದಮೃತದ್ರವಸಂಯುತಮ್ ।**
**ಪಿಬತ ಭಾಗವತಂ ರಸಮಾಲಯಂ**
**ಮುಹುರಹೋ ರಸಿಕಾ ಭುವಿ ಭಾವುಕಾಃ ॥೩॥**

ವೇದವೆಂಬ ಕಲ್ಪವೃಕ್ಷದಿಂದ ಜಾರಿರುವ ಹಣ್ಣು. ಶುಕಮುನಿಯೆಂಬ ಶುಕಪಕ್ಷಿಯ ಮುಖದ ಸಂಬಂಧದಿಂದ ಪರಮಾನಂದಾಮೃತದ್ರವದಿಂದ ಪರಿಪೂರ್ಣವಾಗಿರುವ ಹಣ್ಣು. ಸಿಪ್ಪೆ, ತಿರುಳು ಇತ್ಯಾದಿಗಳಿಲ್ಲದೇ ಕೇವಲ ರಸರೂಪವೇ ಆಗಿರುವ ಹಣ್ಣು. ಭೂಮಿಯಲ್ಲಿ ಸುಲಭವಾಗಿ ದೊರಕಿರುವ

---

ಪರಮಧರ್ಮ – ಎಂದರೆ ಶ್ರೇಷ್ಠತಮವಾದ ಧರ್ಮ. ಪರಮಾತ್ಮಸಾಕ್ಷಾತ್ಕಾರ ಧರ್ಮ. ಭಕ್ತಿಸ್ತೋತ್ರ. 'ಅಯಂ ವಃ ಪರಮೋ ಧರ್ಮಃ ಯದ್ಯೋಗೇನಾತ್ಮ ದರ್ಶನಮ್' (ಯಾಜ್ಞವಲ್ಕ್ಯಸ್ಮೃತಿ) "ಏಷ ಮೇ ಸರ್ವಧರ್ಮಾಣಾಂ **ಧರ್ಮೋಽಧಿಕತಮೋ ಮತಃ । ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಃ ಸದಾ॥**"

ಶ್ರೀಮತಿ ಭಾಗವತೇ = ಮುಮುಕ್ಷುಗಳಿಗೆ ಅತಿರಮಣೀಯವಾಗಿರುವ ಭಾಗವತದಲ್ಲಿ ಕೇಳುವುದಕ್ಕೆ ಮತ್ತು ಅರ್ಥಪರ್ಯಾಲೋಚನೆಗೆ ತೆಗೆದುಕೊಂಡಾಗ ಅತ್ಯಂತ ಸುಂದರವಾಗಿದ್ದು ಆ ವಿಷಯದಲ್ಲಿ ಉಳಿದ ಎಲ್ಲ ಗ್ರಂಥಗಳಿಗಿಂತಲೂ ಅತಿಶಯ ವಾಗಿರುವ ಭಾಗವತದಲ್ಲಿ **"ರಾಜನ್ತೇ ತಾವದನ್ಯಾನಿ ಪುರಾಣಾನಿ ಸತಾಂ ಗಣೇ । ಯಾವನ್ನ ದೃಶ್ಯತೇ ಸಾಕ್ಷಾತ್ ಶ್ರೀಮದ್ಭಾಗವತಂ ಪರಮ್ ॥"**

**ಮಹಾಮುನಿಕೃತೇ** = ಇದರ ಶೈಲಿ ಮತ್ತು ವಿಷಯಗಳು ಶ್ರೇಷ್ಠತಮವಾಗಿರು ವುದು ಮಾತ್ರವಲ್ಲದೇ ಇದರ ಕರ್ತೃವೂ ಶ್ರೇಷ್ಠತಮನೇ. ಅವನು ಮಹಾಮುನಿ. ಮಹಾಮುನಿ ಎಂದರೆ 'ಮುನೀನಾಮಪ್ಯಹಂ ವ್ಯಾಸಃ' ಎಂದು ಶ್ರೀಗೀತೆಯಲ್ಲಿ ವರ್ಣಿತರಾಗಿರುವ ವೇದವ್ಯಾಸಮುನಿಗಳು. ಇದನ್ನು ಮೊಟ್ಟಮೊದಲು ಸಂಕ್ಷಿಪ್ತವಾಗಿ ರಚಿಸಿದವನು 'ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ' ಎಂದು ಶ್ರುತಿಗಳು ವರ್ಣಿಸಿರುವ ಆದಿಮಹರ್ಷಿ ನಾರಾಯಣಮುನಿ. ದ್ರಾವಿಡದಿವ್ಯ ಪ್ರಬಂಧಗಳಲ್ಲಿಯೂ ನಾರಾಯಣನು 'ಮುನಿ' ಎಂದು ಕರೆಯಲ್ಪಟ್ಟಿದ್ದಾನೆ. 'ಮುನಿಯೇ ನಾನ್ಮುಕನೇ ಮುಕ್ಕಣ್ಣಪ್ಪಾ' ಅವನ ಅವತಾರವಾಗಿ ಅನಂತರ ಶ್ರೀಮದ್ಭಾಗವತವನ್ನು ರಚಿಸಿದವನೂ ವೇದವ್ಯಾಸಮಹಾಮುನಿ.

**ತತ್ಕ್ಷಣಾತ್** = ಆ ಕ್ಷಣದಲ್ಲಿಯೇ ಅಥವಾ ಆ ಉತ್ಸವದಿಂದ ಭಗವಂತನ ಕರುಣೆಯಿಂದುಂಟಾದ ಆನಂದೋತ್ಸವದಿಂದ (ಭಾಗವತಚಂದ್ರಿಕಾ)

ಹಣ್ಣು. ಶ್ರೀಮದ್ಭಾಗವತವೆಂಬ ಹಣ್ಣು. ಈ ರಸವನ್ನು ದೇಹಲಯ ಆಗುವವರೆಗೂ, ಸಮಾಧಿಯಲ್ಲಿ ಮನೋಲಯ ಆಗುವವರೆಗೂ ಮತ್ತು ಲಯಾವಸ್ಥೆಯಾದ ಮುಕ್ತಿಯಲ್ಲೂ ಕೂಡ ಕುಡಿಯುತ್ತಿರಿ, ಎಲೈ ರಸಿಕ ಭಕ್ತರೇ!*

## ಕಥೆಯ ಪ್ರಾರಂಭ

ಒಂದು ಬಾರಿ ಶೌನಕಾದಿಮಹರ್ಷಿಗಳು ಶಾಶ್ವತಸುಖಮಯವಾದ

---

* ಶ್ರೀಮದ್ಭಾಗವತವೆಂಬ ರಸಮಯವಾದ ಫಲದ ಅತಿಶಯವನ್ನು ಇಲ್ಲಿ ರಸಪೂರ್ಣವಾಗಿ ಸ್ತುತಿಸಿದೆ. ವೇದವೆಂಬುದು ಕಲ್ಪವೃಕ್ಷ. ಸಕಲಪುರುಷಾರ್ಥಪ್ರದವಾದ ದೇವವೃಕ್ಷ. ಅದರ ಪರಿಪಕ್ವವಾದ ಫಲ ಶ್ರೀಮದ್ಭಾಗವತ. ಆ ದಿವ್ಯವೃಕ್ಷಕ್ಕೆ ಹತ್ತಿ ಹಣ್ಣನ್ನು ಕಿತ್ತುಕೊಳ್ಳಲು ನಮಗೆ ಆಗುವುದಿಲ್ಲ. ಆದರೆ ಆ ಹಣ್ಣು ಅಲ್ಲಿಂದ ಭೂಮಿಗೆ ಜಾರಿರುವುದರಿಂದ ನಾವು ಸುಲಭವಾಗಿ ತೆಗೆದುಕೊಳ್ಳಬಹುದು. ವೈಕುಂಠದಲ್ಲಿದ್ದ ಆ ಹಣ್ಣನ್ನು ನಾರದರು ನನಗೆ (ವ್ಯಾಸಮಹರ್ಷಿಗೆ) ಕೊಡಲು ನಾನು ಅದನ್ನು ನನ್ನ ಪ್ರಿಯಪುತ್ರನಾದ ಶುಕನ ಮುಖಕ್ಕೆ ಇಟ್ಟೆನು. ಆ ಶುಕಮುನಿಯೆಂಬ ಶುಕಪಕ್ಷಿಯ ಮುಖದಿಂದ ಜಾರಿ ಭೂಮಿಗೆ ಇಳಿದುಬಂದಿದೆ ಭಾಗವತಫಲ. ಗಿಳಿಕಚ್ಚಿದ ಹಣ್ಣು ತುಂಬಾ ರಸಪೂರ್ಣವಾಗಿರುತ್ತದೆ ಎಂಬುದು ಪ್ರಸಿದ್ಧವಾದ ವಿಷಯ. ಅಷ್ಟು ಎತ್ತರ ದಿಂದ ಬಿದ್ದರೂ ಒಡೆದುಹೋಗದೆ ಅಖಂಡಾಮೃತರಸಪೂರ್ಣವಾಗಿಯೇ ಇದೆ. ಪರಮಾನಂದವೇ ಆ ಅಮೃತ. ಅದು ದ್ರವ, ರಸರೂಪ. 'ರಸೋ ವೈ ಸಃ। ರಸಗ್ಂ ಹ್ಯೇವಾಯಂ ಲಬ್ಧ್ವಾನನ್ದೀ ಭವತಿ ॥' ಇದನ್ನು ರಸಿಕಭಕ್ತರಾದ ನೀವು ಕುಡಿಯುತ್ತಿರಿ. ಹಣ್ಣನ್ನು ತಿನ್ನಬಹುದು-ಕುಡಿಯುವುದು ಹೇಗೆ? ಎಂದರೆ : ಇದು ವಿಚಿತ್ರವಾದ ಹಣ್ಣು. ಸಿಪ್ಪೆ, ತಿರುಳು ಇತ್ಯಾದಿಗಳಿಲ್ಲದೆ ಕೇವಲ ರಸವೇ ಆಗಿರುವ ಹಣ್ಣು. ಕೇವಲ ಹಣ್ಣು ಎಂದರೆ ಕುಡಿಯಲು ಬರುವುದಿಲ್ಲ. ಅದಕ್ಕಾಗಿ 'ರಸ'ವೆಂದು ಕರೆದಿದೆ. ಕೇವಲ 'ರಸ' ಎಂದರೆ ಭೂಮಿಯಲ್ಲಿ ಸೋರಿಹೋದ ರಸವನ್ನು ಕುಡಿಯಲಿಕ್ಕಾಗುವುದಿಲ್ಲ. ಅದಕ್ಕಾಗಿ 'ಫಲ'ವೆಂದೂ ಕರೆದಿದೆ. ಈ ರಸವನ್ನು ದೇಹಲಯಪರ್ಯಂತ ಕುಡಿಯುತ್ತಿರಬೇಕು. ಮೋಕ್ಷದಶೆಯಲ್ಲೂ ಕುಡಿಯಬಹುದು. ಅದಕ್ಕಾಗಿ 'ಆಲಯಂ' ಎಂದು ಹೇಳಿದೆ. ಇಲ್ಲಿ 'ಲಯ' ಎಂದರೆ ಮೋಕ್ಷ. ಇಂತಹ ದಿವ್ಯಫಲವು ಭೂಮಿಯಲ್ಲಿ ದೊರೆತಿರುವುದು ಅಲಭ್ಯಲಾಭವೇ ಸರಿ. 'ಲಯ = ಲಿಂಗಶರೀರ ಮೋಕ್ಷ' ಎಂದು ವಿಜಯಧ್ವಜೀಯ. ಇದು ಎಲ್ಲ ಶಾಸ್ತ್ರಗಳಿಗಿಂತಲೂ ಶ್ರೇಷ್ಠವಾದ ಶಾಸ್ತ್ರ ಮಾತ್ರವಲ್ಲ; ಫಲರೂಪವೇ ಆಗಿದೆ. 'ನ ಕೇವಲಂ ಸರ್ವಶಾಸ್ತ್ರೇಭ್ಯಃ ಶ್ರೇಷ್ಠತ್ವಾದಸ್ಯ ಶ್ರವಣಂ ವಿಧೀಯತೇ। ಅಪಿ ತು ಸರ್ವಶಾಸ್ತ್ರ ಫಲಮಿದಂ' (ಶ್ರೀಧರೀಯ)

ಲೋಕವನ್ನು ಪಡೆಯಲು ದೇವತಾಕ್ಷೇತ್ರವಾದ ನೈಮಿಷಾರಣ್ಯದಲ್ಲಿ* ಸಹಸ್ರ ವರ್ಷ ನಡೆಸಬೇಕಾದ ಒಂದು ಸತ್ರಯಾಗವನ್ನು ಕೈಗೊಂಡರು. ಒಂದು ಬಾರಿ ಅವರು ಪ್ರಾತಃಕಾಲ ಅಗ್ನಿಹೋತ್ರವೇ ಮುಂತಾದ ನಿತ್ಯಕರ್ಮಗಳನ್ನು ಮುಗಿಸಿಕೊಂಡ ಬಳಿಕ ಸೂತಪುರಾಣಿಕರನ್ನು ಸತ್ಕರಿಸಿ ಸುಖಾಸೀನರಾಗಿದ್ದ ಅವರನ್ನು ಹೀಗೆ ಪ್ರಶ್ನಿಸಿದರು : ( ಶ್ಲೋಕ 1-5 )

ಋಷಿಗಳು ಹೇಳಿದ್ದು :

"ಎಲೈ ಅನಘನೇ! ನೀನು ಎಲ್ಲ ಪುರಾಣಗಳನ್ನೂ, ಇತಿಹಾಸಗಳನ್ನೂ ಮತ್ತು ಧರ್ಮಶಾಸ್ತ್ರಗಳನ್ನೂ ವಿಧಿಪೂರ್ವಕವಾಗಿ ಅಧ್ಯಯನಮಾಡಿದ್ದೀಯೆ ಮತ್ತು ಅವುಗಳನ್ನು ಕುರಿತು ಪ್ರವಚನಗಳನ್ನೂ ಮಾಡಿದ್ದೀಯೆ. ವೇದಜ್ಞರಲ್ಲಿ ಶ್ರೇಷ್ಠನಾದ ಶ್ರೀವ್ಯಾಸಭಗವಂತನೂ ಮತ್ತು ಪರಮಾತ್ಮತತ್ತ್ವವನ್ನರಿತ ಇತರ ಮುನಿಗಳೂ ಯಾವುದನ್ನು ಅರಿತಿದ್ದಾರೋ ಅವೆಲ್ಲವನ್ನೂ ನೀನು ಅವರ ಅನುಗ್ರಹದಿಂದ ಯಥಾವತ್ತಾಗಿ ತಿಳಿದಿರುವೆ.

---

ಆಲಯಂ = ಶರೀರಪಾತಪರ್ಯಂತವಾಗಿ (ಭಾಗವತಚಂದ್ರಿಕಾ) ; ಮುಕ್ತಿದಶೆಯನ್ನೂ ವ್ಯಾಪಿಸಿ, ಅಲ್ಲಿಯೂ ಕೂಡ (ಶ್ರೀಧರೀಯ) ; ಲಿಂಗಶರೀರಪಾತಪರ್ಯಂತವಾಗಿ (ವಿಜಯಧ್ವಜೀಯ ) ಅಮೃತದ್ರವಸಂಯುತಂ = ಕೈವಲ್ಯಗತಿಯಿಂದ ಕೂಡಿದ್ದು. ಅಮೃತಂ = ಕೈವಲ್ಯಂ, ತಸ್ಯ ದ್ರವಃ ಗತಿಃ, ತೇನ ಯುಕ್ತಂ ( ವಿಜಯಧ್ವಜೀಯ ) ; ಭಕ್ತಿರಸಸಹಿತವಾದ (ಅಮೃತೇ = ಮೋಕ್ಷೇ ಚಿತ್ತಸ್ಯ ಯೋ ದ್ರವಃ ಮುಕ್ತಿ ಸಾಧನೀಭೂತಭಕ್ತಿರಸಃ ತತ್ಸಹಿತಂ) ( ಭಾಗವತಚಂದ್ರಿಕಾ )

* ನೈಮಿಷಾರಣ್ಯ–ಗೋಮತೀತೀರದಲ್ಲಿರುವ ಒಂದು ಪವಿತ್ರತಮವಾದ ತೀರ್ಥಕ್ಷೇತ್ರ. ಬ್ರಹ್ಮದೇವರ ರಥಚಕ್ರದ ನೇಮಿಯು ( ಪಟ್ಟಿಯು) ಮುರಿದುಬಿದ್ದ ಸ್ಥಳವಾದ್ದರಿಂದ ಇದಕ್ಕೆ ಈ ಹೆಸರು. ನೇಮಿಃ ಶೀರ್ಯತೇ ಇತಿ ನೇಮಿಶಂ. ನೇಮಿಶಮೇವ ನೈಮಿಶಂ ಎಂದು ವ್ಯುತ್ಪತ್ತಿ. ಹಿಂದೆ ಮಹರ್ಷಿಗಳು ತಮಗೆ ತಪೋಯೋಗ್ಯವಾದ ಸ್ಥಾನ ಯಾವುದು?– ಎಂದು ಬ್ರಹ್ಮದೇವರನ್ನು ಪ್ರಾರ್ಥಿಸಿದಾಗ ಅವರು ಒಂದು ಮನೋಮಯವಾದ ಚಕ್ರವನ್ನು ನಿರ್ಮಿಸಿ ಭೂಲೋಕದ ಕಡೆಗೆ ತಿರುಗಿಸಿ ಬಿಟ್ಟು ಇದರ ನೇಮಿಯು (ಪಟ್ಟಿಯು ) ಎಲ್ಲಿ ಮುರಿದುಬೀಳುವುದೋ–ಅದೇ ಶ್ರೇಷ್ಠತಮವಾದ ಸ್ಥಳ–ಎಂದು ತಿಳಿಸಿದರು. ಋಷಿಗಳು ಅದರಂತೆ ಅದನ್ನು ಹಿಂಬಾಲಿಸಿದಾಗ ಆ ರಥನೇಮಿಯು ಇಲ್ಲಿ ಮುರಿದು ನಿಂತಿದ್ದರಿಂದ ಈ ತೀರ್ಥಕ್ಕೆ ಈ ಹೆಸರು – ಎಂದು ವಾಯುಪುರಾಣವಚನ. 'ಏತನ್ಮನೋಮಯಂ ಚಕ್ರಂ ಮಯಾ ಯತ್ರ ವಿಸೃಜ್ಯತೇ । ಯತ್ರಾಸ್ಯ ಶೀರ್ಯತೇ ನೇಮಿಃ ಸದೇಶಸ್ತಪಸಃ ಶುಭಃ........ ಪ್ರಯುಕ್ತಸ್ಯ ಚಕ್ರಸ್ಯ

ಎಲೈ ಸೌಮ್ಯನೇ! ಶುದ್ಧಾತ್ಮನಾದ ನೀನು ಅವರ ಪ್ರಿಯಶಿಷ್ಯನು. ಗುರುಗಳು ತಮ್ಮ ಭಕ್ತರಾದ ಶಿಷ್ಯರಿಗೆ ಎಂತಹ ಪರಮರಹಸ್ಯವನ್ನೂ ಹೇಳದೇ ಇರುವುದಿಲ್ಲ.

**ಬ್ರೂಯುಃ ಸ್ನಿಗ್ಧಸ್ಯ ಶಿಷ್ಯಸ್ಯ ಗುರವೋ ಗುಹ್ಯಮಪ್ಯುತ ॥೮॥**

ಅವೆಲ್ಲವನ್ನೂ ತಿಳಿದುಕೊಂಡಿರುವ ನೀನು ಎಲ್ಲ ಶಾಸ್ತ್ರಗಳಲ್ಲೂ, ಪುರಾಣಗಳಲ್ಲೂ, ಗುರುಜನರ ಉಪದೇಶಗಳಲ್ಲೂ ಯಾವುದನ್ನು ಜೀವ ವರ್ಗಕ್ಕೆ ಪರಮಶ್ರೇಯಸ್ಸಿನ ಸಾಧನವೆಂದು ನಿಶ್ಚಯಿಸಿದ್ದೀಯೆ? ಹೇಳು ; ಆಯುಷ್ಮಂತನೇ! ಎಲೈ ಸಭ್ಯನೇ! ಈ ಕಲಿಯುಗದಲ್ಲಿ ಜನರು ಸಾಮಾನ್ಯ ವಾಗಿ ಅಲ್ಪಾಯುಸ್ಸುಳ್ಳವರು ; ಮಂದಗಾಮಿಗಳು ; ಮೂಢಬುದ್ಧಿಯುಳ್ಳ ವರು ; ಭಾಗ್ಯಹೀನರು ; ಬಗೆ-ಬಗೆಯ ಪೀಡೆಗಳಿಗೆ ತುತ್ತಾಗಿ ನರಳುತ್ತಿದ್ದಾರೆ. ಆದರೆ ತಿಳಿಯಬೇಕಾದ ಮಹತ್ತಾದ ವಿಷಯಗಳು, ಕರ್ತವ್ಯಗಳು ಮತ್ತು ಅವುಗಳ ವಿಭಾಗಗಳು ತುಂಬಾ ಇವೆ. ಆದ್ದರಿಂದ ಅವುಗಳಲ್ಲಿ ಸಾರಭೂತ ವಾದುದು ಯಾವುದು ಎಂಬುದನ್ನು ನಿನ್ನ ಬುದ್ಧಿಯಿಂದ ನಿಶ್ಚಯಿಸಿ ಹೇಳು. ಯಾವುದರಿಂದ ಅಂತರಾತ್ಮವು ಶುದ್ಧವಾಗುತ್ತದೆಯೋ ಅದನ್ನು ನಮಗೆ ತಿಳಿಸು; ನಾವು ಶ್ರದ್ಧಾವಂತರು.” (ಶ್ಲೋ॰ 6-11)

---

**ಯತ್ರ ನೇಮಿರ್ವ್ಯಶೀರ್ಯತ । ತದ್ವನಂ ತೇನ ವಿಖ್ಯಾತಂ ನೈಮಿಶಂ ಮುನಿ ಪೂಜಿತಮ್ ।**' ನೈಮಿಷಾರಣ್ಯ–ಎಂದೂ ಇದನ್ನು ಹೇಳುವುದುಂಟು. 'ಈ ಅರಣ್ಯದಲ್ಲಿ ನಾನು ದಾನವಸೈನ್ಯವನ್ನು ನಿಮಿಷಮಾತ್ರದಲ್ಲಿ ಸಂಹರಿಸಿದ್ದರಿಂದ ಇದಕ್ಕೆ ನೈಮಿಷಾರಣ್ಯ ವೆಂದು ಹೆಸರಾಗಲಿ'–ಎಂದು ಶ್ರೀಭಗವಂತನು ಗೌರಮುಖನೆಂಬ ಋಷಿಗೆ ಹೇಳಿದ್ದರಿಂದ ಇದಕ್ಕೆ ಈ ನಾಮಧೇಯ ಎಂದು ವರಾಹಪುರಾಣ ಹೇಳುತ್ತದೆ. '**ಏವಂ ಕೃತ್ವಾ ತತೋ ದೇವೋ ಮುನಿಂ ಗೌರಮುಖಂ ತದಾ । ಉವಾಚ ನಿಮಿಷೇಣೇದಂ ನಿಹತಂ ದಾನವಂ ಬಲಮ್ । ಅರಣ್ಯೇಽಸ್ಮಿನ್ ತತಸ್ತ್ವೇತನ್ನೈಮಿಷಾರಣ್ಯ ಸಂಜ್ಞಿತಮ್ ॥**' ಅಥವಾ ಅನಿಮಿಷಕ್ಷೇತ್ರೇ–ಎಂದು ಪದವಿಭಾಗಮಾಡಿ ದೇವತಾಕ್ಷೇತ್ರದಲ್ಲಿ, ನಾರಾಯಣಕ್ಷೇತ್ರದಲ್ಲಿ–ಎಂದೂ ಅರ್ಥಮಾಡುವುದುಂಟು. ದೇವತೆಗಳಿಗೆ ಕಣ್ಣುರೆಪ್ಪೆಯ ಬಡಿದಾಟವಿಲ್ಲದ್ದರಿಂದ ಅವರು 'ಅನಿಮಿಷರು'; ಸದಾ ಜಾಗ್ರತವಾಗಿ ಸದಾ ಸರ್ವಸಾಕ್ಷಿಯಾಗಿರುವುದರಿಂದ ನಾರಾಯಣನೂ 'ಅನಿಮಿಷ' ಎನಿಸುತ್ತಾನೆ. '**ಕ್ಷೇತ್ರೇಽಸ್ಮಿನ್ ವೈಷ್ಣವೇ ವಯಂ**'–ಎಂದು ಇದೇ ಅಧ್ಯಾಯದಲ್ಲಿ ಋಷಿಗಳು ಹೇಳುತ್ತಾರೆ.

"ನಿನಗೆ ಮಂಗಳವಾಗಲಿ ಸೂತಪುರಾಣಿಕ! ಯಾದವರ ರಕ್ಷಕನಾದ, ಭಕ್ತವತ್ಸಲನಾದ ಭಗವಾನ್ ಶ್ರೀಕೃಷ್ಣನು ಯಾವ ಕೆಲಸಮಾಡಬೇಕೆಂದು ವಸುದೇವಪುತ್ರನಾಗಿ ಅವನ ಧರ್ಮಪತ್ನೀ ದೇವಕೀದೇವಿಯಲ್ಲಿ ಅವತರಿಸಿದ ನೆಂಬುದು ನಿನಗೆ ತಿಳಿದಿದೆ. ಅದನ್ನು ನಾವು ಕೇಳಬಯಸುತ್ತೇವೆ ; ದಯವಿಟ್ಟು ತಿಳಿಸು. ಭಗವಂತನ ಅವತಾರಗಳು ಆಗುವುದು ಜೀವಗಳ ಕ್ಷೇಮಕ್ಕಾಗಿ ಮತ್ತು ಮಂಗಳಕ್ಕಾಗಿ. ಈ ಘೋರವಾದ ಸಂಸಾರಚಕ್ರದಲ್ಲಿ ಸಿಕ್ಕಿಹಾಕಿಕೊಂಡಿರುವ ಜೀವನು ಆ ಭಗವಂತನ ಮಂಗಳಮಯವಾದ ನಾಮವನ್ನು ಯಾವುದೋ ಜ್ಞಾನದಲ್ಲಿ ಎಂದಾದರೂ ಉಚ್ಚರಿಸಿದರೂ ಅವನು ಒಡನೆಯೇ ಅದರಿಂದ ಬಿಡುಗಡೆಹೊಂದಿಬಿಡುತ್ತಾನೆ ; ಅದರ ಭಯ ಅವನಿಗೆ ಹೋಗಿಬಿಡುತ್ತದೆ. ಏಕೆಂದರೆ : ಭಯವೇ ಆ ಭಗವಂತನಿಗೆ ಭಯ ಪಡುವುದು. ಪರಮವಿರಕ್ತರೂ, ಪ್ರಶಾಂತರೂ ಆದ ಮುನಿಗಳು ಆತನ ಚರಣಾರವಿಂದಗಳನ್ನು ಆಶ್ರಯಿಸಿ ಪವಿತ್ರರಾಗಿ ತಮ್ಮ ಸ್ಪರ್ಶಮಾತ್ರದಿಂದ ಇತರರನ್ನೂ ಒಡನೆಯೇ ಪವಿತ್ರಗೊಳಿಸುತ್ತಾರೆ. ಗಂಗಾತೀರ್ಥವಾದರೋ ಬಹಳ ದಿನಗಳು ಸೇವೆಮಾಡಿದರೆ ಮಾತ್ರವೇ ಪವಿತ್ರತೆಯನ್ನುಂಟುಮಾಡು ವುದು. ಪುಣ್ಯಕೀರ್ತಿಯಾಗಿ ಸ್ತೋತ್ರಾರ್ಹವಾದ ದಿವ್ಯಲೀಲೆಗಳನ್ನು ನಡೆಸಿದ ಅಂತಹ ಭಗವಂತನ ಕಲಿಕಲ್ಮಷಹರವಾದ ಪವಿತ್ರವಾದ ಕೀರ್ತಿಯನ್ನು– ಆತ್ಮಶುದ್ಧಿಯನ್ನು ಬಯಸುವ ಯಾವನು ತಾನೇ–ಶ್ರವಣಮಾಡುವುದಿಲ್ಲ? ಲೀಲೆಯಿಂದ ತನ್ನ ಕಲೆಗಳನ್ನು ಧರಿಸಿ ಅವತಾರಮಾಡಿ ಮಹಾಜ್ಞಾನಿಗಳಿಂದ ಗಾನಮಾಡಲ್ಪಡುವ, ಉದಾರಕರ್ಮಗಳುಳ್ಳ ಆತನ ದಿವ್ಯಲೀಲೆಗಳನ್ನು ಶ್ರದ್ಧಾಳುಗಳಾಗಿರುವ ನಮಗೆ ತಿಳಿಸು, ಮಹಾತ್ಮನೇ! (ಶ್ಲೋಕ 12-17)

---

ಸತ್ರಂ ಸ್ವರ್ಗಾಯ ಲೋಕಾಯ =ಸತ್ರ ಎನ್ನುವುದು ಒಂದು ಬಗೆಯ ಯಜ್ಞ– ಇದರಲ್ಲಿ ಋತ್ವಿಕ್ಕುಗಳೇ ಯಜಮಾನರಾಗಿರುತ್ತಾರೆ. 'ಋತ್ವಿಜ ಏವ ಯತ್ರ ಯಜಮಾನಾ ತತ್ಸತ್ರಂ' ಸ್ವರ್ಗಾಯ ಲೋಕಾಯ – ಎಂಬಲ್ಲಿ ಹೇಳಲ್ಪಟ್ಟಿರುವ ಸ್ವರ್ಗವು ಇಂದ್ರನ ಸ್ವರ್ಗಲೋಕವಲ್ಲ. ಶಾಶ್ವತಸುಖಮಯವಾದ ಪರಮಪದ. ನಿರತಿಶಯಾನಂದ ಮಯವಾದ ಸ್ಥಾನ, ಮಹಾವಿಷ್ಣುಲೋಕ–ಎಂದು ವ್ಯಾಖ್ಯಾನಕಾರರ ಅಭಿಪ್ರಾಯ. 'ಸ್ವರ್ಗೋ ನಿರತಿಶಯಾನನ್ದಃ ತಾದೃಗ್ರೂಪೋ ಲೋಕಃ ಪರಮಪದಂ ಸ್ವರ್ಗೇ ಗೀಯತೇ ಇತಿ ವಿಷ್ಣುಃ, ಸ್ವರ್ಗಾಯಃ ತಸ್ಯ ಲೋಕಃ '

ಓ ಧೀಮಂತನೇ! ಸರ್ವಸಮರ್ಥನಾದ ಆ ಪ್ರಭುವು ತನ್ನ ಯೋಗ ಮಾಯಾಪ್ರಭಾವದಿಂದ ಸ್ವೇಚ್ಛೆಯಿಂದಲೇ ಈ ಲೀಲೆಗಳನ್ನು ಮಾಡುತ್ತಾನೆ. ಅವನ ಅಂತಹ ಮಂಗಳಕರವಾದ ಅವತಾರಕಥೆಗಳನ್ನು ವರ್ಣಿಸುವವನಾಗು. ಪುಣ್ಯಶ್ಲೋಕನಾದ ಆ ಭಗವಂತನ ದಿವ್ಯವಿಕ್ರಮಕಥೆಗಳನ್ನು ಎಷ್ಟು ಕೇಳಿದರೂ ನಮಗೆ ಸಾಕು ಎನಿಸುವುದಿಲ್ಲ. ಏಕೆಂದರೆ : ರಸಜ್ಞರಾದ ಶ್ರೋತೃಗಳಿಗೆ ಅವನ ದಿವ್ಯಲೀಲೆಗಳಲ್ಲಿ ಹೆಜ್ಜೆ-ಹೆಜ್ಜೆಗಳಲ್ಲಿಯೂ ಹೊಸ-ಹೊಸ ರಸಾನುಭವ ಉಂಟಾಗುತ್ತಿರುತ್ತದೆ. ಆ ಕೇಶವನು ತನ್ನ ನಿಜಸ್ವರೂಪವನ್ನು ಮರೆಸಿಕೊಂಡು ಮನುಷ್ಯನಂತೆ ನಟಿಸುತ್ತಿದ್ದನು. ಆದರೂ ಬಲರಾಮ ದೇವರೊಡನೆ ಕೂಡಿ ಆತನು ಅತಿಮಾನುಷವಾದ ಅನೇಕ ಲೀಲೆ-ಪರಾಕ್ರಮಗಳನ್ನೂ ಪ್ರಕಟಿಸಿದನಲ್ಲವೇ? ಅವುಗಳನ್ನು ನಮಗೆ ವರ್ಣಿಸು. ಕಲಿಯುಗ ಬಂದಿರುವುದನ್ನು ಗಮನಿಸಿ ನಾವು ಈ ವೈಷ್ಣವಕ್ಷೇತ್ರದಲ್ಲಿ ದೀರ್ಘಕಾಲ ನಡೆಸಲ್ಪಡುವ ಒಂದು ಸತ್ರಯಾಗವನ್ನು ಮಾಡಲು ಸಂಕಲ್ಪಮಾಡಿ ಕುಳಿತಿದ್ದೇವೆ. ಶ್ರೀಹರಿಯ ಕಥೆಯನ್ನು ಕೇಳಲು ಅವಕಾಶಪಡೆದಿದ್ದೇವೆ. ಈ ಕಲಿಯುಗವಾದರೋ ಮನುಷ್ಯರ ಪಾವಿತ್ರ್ಯ ಮತ್ತು ಶಕ್ತಿಗಳನ್ನು ಕಸಿದು ಕೊಳ್ಳುವುದು. ಇದನ್ನು ದಾಟಿಹೋಗುವುದು ತುಂಬಾ ಕಷ್ಟ. ಸಮುದ್ರ ವನ್ನು ದಾಟಲು ಬಯಸುವವರಿಗೆ ನಾವಿಕನನ್ನು ಹೇಗೋ ಹಾಗೆ ನಿನ್ನನ್ನು ನಮಗೆ ಬ್ರಹ್ಮನು ತೋರಿಸಿಕೊಟ್ಟಿದ್ದಾನೆ. ಮಹಾಯೋಗೇಶ್ವರನೂ, ವೇದ-ತತ್ತ್ವ-ತಪಸ್ಸುಗಳಲ್ಲಿ ನಿಷ್ಠೆಯುಳ್ಳ ಬ್ರಾಹ್ಮಣರಿಗೆ ಹಿತಕಾರಿಯೂ, ಧರ್ಮ ಸಂರಕ್ಷಕನೂ ಆದ ಶ್ರೀಕೃಷ್ಣಪರಮಾತ್ಮನು ತನ್ನ ಧಾಮವನ್ನು ಸೇರಿಕೊಂಡ ಬಳಿಕ ಧರ್ಮವು ಯಾರನ್ನು ಶರಣುಹೊಂದಿತು? ಹೇಳಪ್ಪಾ!"

ಮಹಾಪುರಾಣವೂ ಪಾರಮಹಂಸ್ಯಸಂಹಿತೆಯೂ ಆಗಿರುವ
ಶ್ರೀಮದ್ಭಾಗವತದಲ್ಲಿ ಪ್ರಥಮಸ್ಕಂಧದ ೧ನೆಯ ಅಧ್ಯಾಯವು ಮುಗಿಯಿತು.

---

## ಪ್ರಥಮಸ್ಕಂಧದ ಪ್ರಥಮಶ್ಲೋಕದಲ್ಲಿರುವ ವಿಶೇಷ ವಿಷಯಗಳು

[ ಈ ಶ್ಲೋಕವನ್ನು ನಿರ್ವಿಶೇಷಾದ್ವೈತ ( ಅದ್ವೈತ ), ಸವಿಶೇಷಾದ್ವೈತ (ವಿಶಿಷ್ಟಾದ್ವೈತ ), ದ್ವೈತ–ಇತ್ಯಾದಿ ಸಿದ್ಧಾಂತಗಳಿಗನುಗುಣವಾಗಿ ಪೂರ್ವಾಚಾರ್ಯರು ವ್ಯಾಖ್ಯಾನಿಸಿದ್ದಾರೆ. ಆ ಅಭಿಪ್ರಾಯಗಳನ್ನು ಇಲ್ಲಿ ಹೀಗೆ ಸಂಕ್ಷೇಪಿಸಬಹುದು :

1) **ಅದ್ವೈತ :-** 'ಸತ್ಯಂ ಪರಂ ಧೀಮಹೀ' ಪರಮಸತ್ಯವನ್ನೇ ಧ್ಯಾನಿಸೋಣ. 'ಸತ್ಯಂ' ಎಂಬುದು ಪರಮಾತ್ಮನ ಸ್ವರೂಪಲಕ್ಷಣ. ಅವನೊಬ್ಬನೇ ಸತ್ಯ. ತ್ರಿಸರ್ಗವು ಅಂದರೆ ತಮಸ್ಸು-ರಜಸ್ಸು-ಸತ್ತ್ವಗಳೆಂಬ ತ್ರಿಗುಣಗಳಿಂದ ಆಗಿರುವ ಈ (ಭೂತ-ಇಂದ್ರಿಯ-ದೇವತಾರೂಪವಾದ) ಮುಬ್ಬಗೆಯ ಮಾಯಾಸೃಷ್ಟಿಯು ಅಸತ್ಯ. ಆದರೂ ಏಕಮಾತ್ರಸತ್ಯವಾಗಿರುವ ಅವನಲ್ಲಿ ಆಧಾರಿತವಾಗಿ ತಾನೂ ಸತ್ಯದಂತೆ ತೋರಿಬರುತ್ತದೆ. ಇದಕ್ಕೆ ದೃಷ್ಟಾಂತವೇನು? ಎಂದರೆ : ತೇಜಸ್ಸು, ನೀರು ಮತ್ತು ಪೃಥಿವಿಗಳ ವಿನಿಮಯ. ಅವು ಒಂದರಲ್ಲಿ ಮತ್ತೊಂದು ಭ್ರಾಂತಿಯಿಂದ ತೋರಿಬರುತ್ತವೆ. ಉದಾ :- ಮರುಭೂಮಿಯ ಮರೀಚಿಕೆಯಲ್ಲಿ ನಿಜವಾಗಿ ಇರುವುದು ತೇಜಸ್ಸೇ ಆದರೂ ಅದರಲ್ಲಿ ನೀರು ಇರುವಂತೆ ಕಾಣುತ್ತದೆ. ಹಾಗೆಯೇ ಗಾಜಿನಲ್ಲಿ ನೀರು ತೋರಿಬರುತ್ತದೆ. ನೀರಿನಲ್ಲಿ ಗಾಜಿನ ತೋರಿಕೆಯನ್ನು ನೋಡುತ್ತೇವೆ. '**ತ್ರಿಸರ್ಗಃ ಅಮೃಷಾ**' ಎಂಬ ಪದವಿಭಾಗದಂತೆ ಈ ಅರ್ಥ. '**ತ್ರಿಸರ್ಗಃ ಮೃಷಾ**' ಎಂದು ಪದವಿಭಾಗಮಾಡಿದರೆ ಈ ಮುಬ್ಬಗೆಯ ಮಾಯಾಸೃಷ್ಟಿಯೆಂಬ ಕಾರ್ಯವು ಮಿಥ್ಯೆಯೇ ಆಗಿದೆ. ಪರಮಾತ್ಮನೊಬ್ಬನೇ ಪಾರಮಾರ್ಥಿಕಸತ್ಯ–ಎಂಬ ಆಶಯವು ಇನ್ನೂ ಸ್ಪಷ್ಟವಾಗುತ್ತದೆ. ಇಂತಹ ಸತ್ಯಸ್ವರೂಪನಾದ ಪರಮಾತ್ಮನು ಈ ಸಮಸ್ತಮಾಯಾಮಯ ಕುಹಕವೆಂಬ ಉಪಾಧಿಯನ್ನು ದಾಟಿ ತಾನೇ ತಾನಾಗಿ ಬೆಳಗುತ್ತಿದ್ದಾನೆ.

"ಜನ್ಮಾದ್ಯಸ್ಯ ಯತಃ" ಎಂಬುದು ಪರಬ್ರಹ್ಮದ ಜಗತ್ಕಾರಣತ್ವವೆಂಬ ಲಕ್ಷಣವನ್ನು ಹೇಳುತ್ತದೆ. ಈ ಜಗತ್ಕಾರಣತ್ವವು ಬ್ರಹ್ಮನ ಸ್ವರೂಪವನ್ನು ಹೇಳುವ ಲಕ್ಷಣವಲ್ಲ ; **ತಟಸ್ಥಲಕ್ಷಣ**. ಅಂದರೆ ವಸ್ತುಸ್ವರೂಪ

ಕ್ಕಿಂತಲೂ ಭಿನ್ನವಾಗಿದ್ದು ವಸ್ತುಸ್ವರೂಪವನ್ನು ಸೂಚಿಸುವ ಲಕ್ಷಣ. ಆ ಪರಬ್ರಹ್ಮವು ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣವೆಂಬುದು ಹೇಗೆ? ಎಂದರೆ : ಅನ್ವಯದಿಂದ ಮತ್ತು **'ಇತರತಃ'** ವ್ಯತಿರೇಕದಿಂದ ಅದು ಸಿದ್ಧವಾಗುತ್ತದೆ. ಎಲ್ಲ ಕಾರ್ಯಗಳಲ್ಲೂ ಸದ್ರೂಪದಿಂದ ಅವನೇ ಅನ್ವಯಿಸಿದ್ದಾನೆ. ಉಳಿದುದು **'ಅಸತ್'**. ಆದ್ದರಿಂದ ಅವನು ಅವುಗಳಿಂದ **ವ್ಯತಿರಿಕ್ತ**ನಾಗಿದ್ದಾನೆ. ಅನ್ವಯ ಮತ್ತು ವ್ಯತಿರೇಕ ಎಂಬಿವು ಶಾಸ್ತ್ರಗಳಲ್ಲಿ ಪಾರಿಭಾಷಿಕಶಬ್ದಗಳು. ಯಾವುದು ಇದ್ದಾಗ ಯಾವುದು ಇರುವುದೋ, ಯಾವುದು ಇಲ್ಲದೇ ಇರುವಾಗ ಅದೂ ಇಲ್ಲದೇ ಹೋಗುವುದೋ–ಅಂತಹ ಸಂಬಂಧಕ್ಕೆ **'ಅನ್ವಯ–ವ್ಯತಿರೇಕ'** ಎಂದು ಹೆಸರು. **'ಯತ್ಸತ್ತ್ವೇ ಯತ್ಸತ್ತ್ವಂ' ಯದಭಾವೇ ಯದಭಾವಃ'** ಕಾರ್ಯ-ಕಾರಣಗಳಲ್ಲಿ ಕಾರಣವಿದ್ದರೆ ಮಾತ್ರವೇ ಕಾರ್ಯವಾಗುವುದು. ಆದ್ದರಿಂದ ಕಾರಣವು ಮಾತ್ರ ಸತ್ಯ. ಈ ಅಸತ್ಯವಾದ ಜಗತ್ತೆಂಬ ಕಾರ್ಯಕ್ಕೆ ಕಾರಣವಾಗಿ ಸತ್ಯರೂಪನಾದ ಆ ಪರಮಾತ್ಮನು ಇದ್ದೇ ಇರಬೇಕು. ಇದಲ್ಲದೇ ಅನ್ವಯ ಎಂಬುದಕ್ಕೆ **ಅನುವೃತ್ತಿ** ಎಂದೂ ವ್ಯತಿರೇಕ ಎಂಬುದಕ್ಕೆ ವ್ಯಾವೃತ್ತಿ ಎಂದೂ ಅರ್ಥವಾಗುತ್ತದೆ. ಬಗೆ-ಬಗೆಯ ಮಡಕೆ-ಕುಡಿಕೆಗಳಲ್ಲಿ ಜೇಡಿಮಣ್ಣು ಎಂಬುದು ಮಾತ್ರವೇ **ಅನುವರ್ತಿಸುತ್ತದೆ**. ಆದರೆ ವಿವಿಧರೂಪಗಳು ಅನುವರ್ತಿಸುವುದಿಲ್ಲ. (ವ್ಯಾವೃತ್ತಿ ಹೊಂದುತ್ತವೆ.) ಇವುಗಳಲ್ಲಿ ಅನುವರ್ತಿಸುವುದು ಕಾರಣ. ವ್ಯಾವೃತ್ತಿ ಹೊಂದುವುದು ಕಾರ್ಯ. ವೈವಿಧ್ಯವನ್ನು ಹೊಂದುತ್ತಿರುವ ಈ ಜಗತ್ತು ಕಾರ್ಯ. ಅದರ ಹಿಂದೆ ಏಕಮಾತ್ರವಾಗಿ ಅನುವರ್ತಿಸುವ ಪರಬ್ರಹ್ಮವು ಕಾರಣ. ಅಥವಾ ಜಗತ್ತು ಅವಯವಸಹಿತವಾಗಿರುವುದರಿಂದ ಕಾರ್ಯವಾಗಿದೆ. ಇದಕ್ಕೆ ಕಾರಣವಸ್ತು ಇರಲೇಬೇಕು. ಕಾರಣವಿಲ್ಲದೇ ಈ ಕಾರ್ಯ ಆಗುವಂತಿಲ್ಲ ಎಂಬ ಅನ್ವಯ-ವ್ಯತಿರೇಕಗಳಿಂದಲೂ ಜಗತ್ಕಾರಣವಾದ ಬ್ರಹ್ಮವು ಸಿದ್ಧಿಸುತ್ತದೆ. ಪ್ರಕೃತಿಯು ಅಚೇತನವಾದ್ದರಿಂದ ಅಂತಹ ಕಾರಣವಾಗಲಾರದು. ಪರಮಾತ್ಮನು ಅಭಿಜ್ಞ(ಸರ್ವಜ್ಞ) ನಾಗಿರುವುದರಿಂದ ಈ ಅದ್ಭುತವಾದ ಜಗತ್ತಿನ ವ್ಯಾಪಾರಗಳ ಕರ್ತೃತ್ವವು ಅವನಿಗೇ ಹೊಂದಿಕೆಯಾಗುವುದು. ಅವನು ತಾನೇ ಸ್ವಯಂಪ್ರಕಾಶ (ಸ್ವರಾಟ್). ಜೀವನು ಪರಮಾತ್ಮಾಧೀನಪ್ರಕಾಶನಾಗಿರುವುದರಿಂದ ಅವನಿಗೆ ಜಗತ್ಕರ್ತೃತ್ವ

ಹೊಂದುವುದಿಲ್ಲ. ಆದಿಕವಿಯಾದ ಚತುರ್ಮುಖನೂ ಸ್ವತಃ ಸೃಷ್ಟಿಕರ್ತನಲ್ಲ. ಅವನಿಗೂ ಬುದ್ಧಿಪ್ರವರ್ತಕನಾದವನು ಪರಮಾತ್ಮ. ಯಾವ ಶಬ್ದಬ್ರಹ್ಮ ರೂಪವಾದ ವೇದದ ವಿಷಯದಲ್ಲಿ ಜ್ಞಾನಿಗಳೂ ಮೋಹಗೊಳ್ಳುತ್ತಾರೋ– ಅಂತಹ ವೇದವನ್ನು ಸಂಕಲ್ಪಮಾತ್ರದಿಂದ ಮಾನಸಿಕವಾಗಿ ಬ್ರಹ್ಮದೇವನಿಗೆ ಉಪದೇಶಮಾಡಿದವನು ಆ ಪರಮಾತ್ಮನೇ. ಅಂತಹ ಪರಮಸತ್-ಪರಮ ಚಿತ್-ಏಕೈಕಸತ್-ಏಕೈಕಚಿತ್ ಆಗಿರುವ ಪರಬ್ರಹ್ಮವನ್ನು ಧ್ಯಾನಿಸೋಣ.

ಈ ವಿವರಣೆಯು ಶ್ರೀಧರೀಯವ್ಯಾಖ್ಯಾನಕ್ಕೆ ಅನುಗುಣವಾಗಿದೆ.

2) **ವಿಶಿಷ್ಟಾದ್ವೈತ** :- ಅನ್ವಯ ಮತ್ತು ವ್ಯತಿರೇಕ–ಎರಡು ಸಂಬಂಧ ಗಳಿಂದಲೂ ಈ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ ಪರಮಾತ್ಮನೇ ಕಾರಣ ನೆಂಬುದು ಸಿದ್ಧವಾಗುತ್ತದೆ. ಏಕೆಂದರೆ : ಶ್ರುತಿಯು ಅವನೇ ಜಗತ್ಕಾರಣ ನೆಂದು ಹೇಳುವಂತೆಯೇ ಅವನಿಲ್ಲದಿದ್ದರೆ ಯಾವ ಸೃಷ್ಟಿಯೂ ಇಲ್ಲ ; ಯಾರ ಉಸಿರಾಟವೂ ಇಲ್ಲ–ಎಂದೂ ಸಾರುತ್ತದೆ. "**ಯತೋ ವಾ ಇಮಾನಿ ಭೂತಾನಿ ಜಾಯನ್ತೇ**" ಇತ್ಯಾದಿ ಶ್ರುತಿಗಳು ಅವನಿಂದಲೇ ಸೃಷ್ಟ್ಯಾದಿ ಗಳೆಂದು ಅನ್ವಯದಿಂದ ಸಾರಿದರೆ "**ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾತ್**" ಇತ್ಯಾದಿ ಶ್ರುತಿಗಳು ಅವನಿಲ್ಲದೇ ಯಾವ ಜೀವವೂ ಇಲ್ಲ ಎಂದು ವ್ಯತಿರೇಕದಿಂದ ಸಾರುತ್ತವೆ. ಅಥವಾ **ಅನ್ವಯದಿಂದ** ಅಂದರೆ ಎಲ್ಲ ವಸ್ತುಗಳಲ್ಲೂ ಅನುಪ್ರವೇಶಮಾಡಿರುವುದರಿಂದ ಮತ್ತು ಇನ್ನೊಂದು ರೀತಿಯಲ್ಲಿ ಅಂದರೆ ಜಗತ್ತಿಗೆ ಕರ್ತೃಸ್ವರೂಪನೂ ಆಗಿರುವುದರಿಂದ ಈ ಜಗತ್ತಿಗೆ ಸರ್ವಪ್ರಕಾರಗಳಲ್ಲೂ ಅವನೇ ಕಾರಣನಾಗಿದ್ದಾನೆ. ಜಗತ್ತಿಗೆ ಉಪಾದಾನ ಕಾರಣನೂ ಅವನೇ, ನಿಮಿತ್ತಕಾರಣವೂ ಅವನೇ. "**ಐತದಾತ್ಮ್ಯಮಿದಂ ಸರ್ವಂ, ಸರ್ವಂ ಖಲ್ವಿದಂ ಬ್ರಹ್ಮ**" (ಅವನೇ ಎಲ್ಲಕ್ಕೂ ಆತ್ಮವು. ಇವೆಲ್ಲವೂ ಬ್ರಹ್ಮವೇ ಆಗಿದೆ ) ಮುಂತಾದ ಶ್ರುತಿಗಳು ಅವನ ಅನ್ವಯಸಂಬಂಧವನ್ನು ಪ್ರತಿಪಾದಿಸುತ್ತಾ ಅವನೇ ಉಪಾದಾನಕಾರಣವೆಂದು ಘೋಷಿಸುತ್ತವೆ.

**ಯ ಆತ್ಮನಿ ತಿಷ್ಠನ್ ಆತ್ಮನೋऽನ್ತರೋ ಯಮಾತ್ಮಾ ನ ವೇದ ।**
**ಯಸ್ಯಾತ್ಮಶರೀರಂ ಯ ಆತ್ಮಾನಮನ್ತರೋ ಯಮಯತಿ ॥**

(ಯಾವನು ಆತ್ಮನಿಗಿಂತಲೂ ವ್ಯತಿರಿಕ್ತನಾಗಿ ಅದರಲ್ಲಿ ಅಂತರ್ಯಾಮಿಯಾಗಿದ್ದರೂ ಆತ್ಮವು ಯಾವನನ್ನು ಅರಿಯುತ್ತಿಲ್ಲವೋ, ಯಾವನು ಆತ್ಮವನ್ನು ಶರೀರವನ್ನಾಗಿ ಹೊಂದಿ ಒಳಗಡೆಯಿಂದ ಅದನ್ನು ಪ್ರೇರಿಸುತ್ತಾನೆಯೋ) ಮುಂತಾದ ಶ್ರುತಿಗಳು ಜಗತ್ತಿನಿಂದ ಅವನ ವ್ಯತಿರೇಕವನ್ನು ತಿಳಿಸುತ್ತಾ ಅವನು ಜಗತ್ತಿಗೆ ನಿಮಿತ್ತಕಾರಣನೆಂಬುದನ್ನು ಪ್ರತಿಪಾದಿಸುತ್ತವೆ. ನಿಮಿತ್ತಕಾರಣ, ಉಪಾದಾನಕಾರಣ ಎಂದರೇನು?–ಎಂಬುದಕ್ಕೆ ಉದಾಹರಣೆಗೆ : ಕುಂಬಾರನು ಮಣ್ಣಿನಿಂದ ಮಡಕೆಯನ್ನು ನಿರ್ಮಿಸುತ್ತಾನೆ. ಇಲ್ಲಿ ಮಡಕೆಯೆಂಬ ಕಾರ್ಯದ ಬಗೆಗೆ ಕುಂಬಾರನು ನಿಮಿತ್ತಕಾರಣ ಮತ್ತು ಮಣ್ಣು ಉಪಾದಾನಕಾರಣ. ಹಾಗೆಯೇ ಜಗತ್ತನ್ನು ನಿರ್ಮಿಸುವುದರಿಂದ ಪರಮಾತ್ಮನು ಜಗತ್ತಿಗೆ ನಿಮಿತ್ತಕಾರಣನಾಗುತ್ತಾನೆ. ಇಷ್ಟು ಮಾತ್ರವಲ್ಲದೇ ಪ್ರಕೃತಿಯು ಪರಮಾತ್ಮನಿಗೆ ಶರೀರದಂತೆ ಇದೆ. ಕಾರ್ಯರೂಪವಾದ ಜಗತ್ತಿನಲ್ಲಿಯೂ ಪರಮಾತ್ಮನು ಸೇರಿರುತ್ತಾನೆ. ಆದ್ದರಿಂದ ಜಗತ್ತಿಗೆ ಉಪಾದಾನಕಾರಣನೂ ಅವನೇ. ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ಮಡಕೆಗೆ ನಿಮಿತ್ತಕಾರಣನಾಗಿರುವ ಕುಂಬಾರನಿಗೆ ಮಡಕೆಯನ್ನು ನಿರ್ಮಿಸಲು ಜೇಡಿಮಣ್ಣು ಎಂಬ ಉಪಾದಾನಕಾರಣ ಬೇಕು. ಹಾಗೆಯೇ ಪರಮಾತ್ಮನಿಗೂ ಜಗತ್ತನ್ನು ನಿರ್ಮಿಸಲು ಆತನಿಂದ ಬೇರೆಯಾದ ಮತ್ತೊಂದು ಉಪಾದಾನಕಾರಣ ಬೇಕಲ್ಲವೇ? ಒಬ್ಬನೇ ಎರಡೂ ಬಗೆಯ ಕಾರಣಗಳಾಗಿರಲು ಹೇಗೆ ಸಾಧ್ಯ?–ಎಂದರೆ : ಭಗವಂತನು ಕುಂಬಾರನಂತೆ ಅಲ್ಪಜ್ಞನಲ್ಲ. ಅಲ್ಪಶಕ್ತನಲ್ಲ, ಪರಾಧೀನನಲ್ಲ. ಅವನು ಅಭಿಜ್ಞಃ –(ಸರ್ವಜ್ಞನು) ಮತ್ತು ಸ್ವರಾಟ್–(ಸ್ವಯಂಪ್ರಭು ಮತ್ತು ಸ್ವಯಂಪ್ರಕಾಶನು) ಆಗಿದ್ದಾನೆ ಮತ್ತು ಪ್ರಕೃತಿಯು ಆತನಿಗೆ ಶರೀರಭೂತವೇ ಆಗಿದೆ. ಆದ್ದರಿಂದ ಇದು ಸಾಧ್ಯವಾಗುತ್ತದೆ. ಅವನು ಎಂತಹ ಸರ್ವಜ್ಞನೆಂದರೆ : ಆದಿಕವಿಯಾದ ಬ್ರಹ್ಮದೇವರಿಗೂ ವೇದವನ್ನು ಉಪದೇಶಮಾಡಿದವನು ಅವನೇ. ಆಪ್ತಕಾಮನಾದ ಅವನು ಯಾವ ಪ್ರಯೋಜನಕ್ಕಾಗಿ ಆ ವೇದೋಪದೇಶ ಮಾಡಿದ? ಎಂದರೆ : ಲೋಕಹಿತಕ್ಕಾಗಿ ; ಲೋಕಕ್ಕೆ ಒಳ್ಳೆಯದಾಗಲಿ ಎಂದು ಪ್ರೀತಿ ಸಹಿತವಾದ ಹೃದಯದಿಂದ ಅದನ್ನು ಬ್ರಹ್ಮದೇವರಿಗೆ ಬೋಧನೆಮಾಡಿದ. ಆದಿಕವಿಯಾದ ಬ್ರಹ್ಮದೇವರಿಗೆ ತಾವೇ ವೇದವನ್ನು ತಿಳಿದುಕೊಳ್ಳಲು ಏಕೆ

ಸಾಧ್ಯವಾಗಲಿಲ್ಲ?–ಎಂದರೆ : ವೇದಗಳು ಅನಂತ ; ಅವುಗಳ ಅರ್ಥವನ್ನು ತಿಳಿಯುವುದು ಬಲು ಕಷ್ಟ. ಸೂರಿ ( ಮಹಾಯೋಗಿ )ಗಳೂ ಕೂಡ ಅದರ ಬಗೆಗೆ ಮೋಹಗೊಳ್ಳುತ್ತಾರೆ. ಆದ್ದರಿಂದ ಸರ್ವಜ್ಞನಾದ ಶ್ರೀಭಗವಂತನೇ ಅವುಗಳನ್ನು ಬ್ರಹ್ಮದೇವರಿಗೆ ವಿಸ್ತರಿಸಿ ಹೇಳಬೇಕಾಯಿತು. ( ಅಥವಾ ಪರಮಾತ್ಮನ ನಿರತಿಶಯವಾದ ಸೌಂದರ್ಯಾದಿಗಳನ್ನು ಕಂಡು ಸೂರಿಗಳೂ ಕೂಡ ಅದರ ವಿಷಯದಲ್ಲಿ ಮೋಹಗೊಳ್ಳುತ್ತಾರೆ ಎಂದೂ ಅರ್ಥೈಸ ಬಹುದು.) ಅಂಡಸೃಷ್ಟಿಗೆ ಮೊದಲು ಪೃಥಿವೀ, ಅಪ್, ತೇಜಸ್ಸುಗಳನ್ನು ಸೃಷ್ಟಿಕಾರ್ಯಕ್ಕೆ ಉಪಯೋಗವಾಗುವಂತೆ ವಿಶಿಷ್ಟವಾದ ರೀತಿಯಲ್ಲಿ ಮಿಶ್ರಣ ಮಾಡಿದವನೂ ಆ ಭಗವಂತನೇ. ಈ 'ತ್ರಿವೃತ್ಕರಣ'ವು ಅವನಿಂದಲೇ ಆಯಿತು. (ಅನಂತರ ಅಂಡಸೃಷ್ಟಿಯನ್ನು ಭಗವಂತನು ಕೊಟ್ಟ ಶಕ್ತಿಯಿಂದ, ಅವನು ಉಪದೇಶಮಾಡಿದ ವೇದಗಳ ಸಹಾಯದಿಂದ–ಬ್ರಹ್ಮದೇವರು ಮಾಡಿದರು.) ಹೀಗೆ 'ತ್ರಿವೃತ್ಕರಣ' ರೂಪವಾದ ಸೃಷ್ಟಿಯಲ್ಲಿ ಭಾಗವಹಿಸಿ ಅದರಲ್ಲಿ ಒಳಹೊಕ್ಕಿರುವುದರಿಂದ ಅವನಿಗೆ ಸೃಷ್ಟಿಸಂಬಂಧವಾದ ವಿಕಾರಗಳು ಸಂಭವಿಸುವುದಿಲ್ಲವೇ?–ಎಂದರೆ: ಅವನ ವಿಷಯದಲ್ಲಿ ಈ ಮೂರೆಳೆಯ ಸೃಷ್ಟಿಯು ಮೃಷಾಭೂತವಾಗುವುದು. ಸುಳ್ಳಿನಂತೆ ಆಗುವುದು. ಯಾವ ಪ್ರಭಾವವನ್ನೂ ಬೀರುವುದಿಲ್ಲ. ಏಕೆಂದರೆ : ಅವನು ತನ್ನ ತೇಜಸ್ಸಿನಿಂದಲೇ ಎಲ್ಲ ದೋಷಗಳನ್ನೂ ನಾಶಪಡಿಸುವವನು. '**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ**' ಅಂತಹ ಜಗತ್ತಿಗೆ ಸರ್ವವಿಧಕಾರಣನಾದ, ಸರ್ವಜ್ಞನೂ, ಸರ್ವಶಕ್ತನೂ, ಸ್ವಯಂಪ್ರಭುವೂ, ಸ್ವಯಂಪ್ರಕಾಶನೂ, ಬ್ರಹ್ಮದೇವರಿಗೂ ಗುರುವಾದವನೂ, ಸರ್ವರನ್ನೂ ಮೋಹಗೊಳಿಸುವ ದಿವ್ಯಸೌಂದರ್ಯ ಸಂಪನ್ನನೂ, ಕಲ್ಯಾಣಗುಣಪರಿಪೂರ್ಣನೂ, ಹೇಯರಹಿತನೂ, ದೋಷ ವಿಧ್ವಂಸಕನೂ, ನಿಷ್ಕಲನಿರಂಜನನೂ ಆಗಿರುವ ಪರಮಸತ್ಯಸ್ವರೂಪನಾದ ಸ್ವಾಮಿಯನ್ನು ಧ್ಯಾನಿಸೋಣ. ( ಈ ವಿವರಣೆಯು ಶ್ರೀವೀರರಾಘವೀಯ ಮತ್ತು ಶ್ರೀವೆಂಕಟಕೃಷ್ಣಮಾಚಾರ್ಯ ರಚಿತ ವ್ಯಾಖ್ಯಾನಗಳನ್ನು ಆಧರಿಸಿದೆ.)

3) **ದ್ವೈತಪರ :- ಸತ್ಯಂ ಪರಂ** = ಸತ್ಯಮಹಿಮನೂ, ನಿರ್ದುಃಖ ನಿತ್ಯ ನಿರತಿಶಯಾನಂದಾದ್ಯನುಭವರೂಪನೂ, ಕಲ್ಯಾಣಗುಣಪರಿಪೂರ್ಣನೂ

ಆಗಿರುವ ನಾರಾಯಣನನ್ನು ಧ್ಯಾನಿಸೋಣ. ಈ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳೆಲ್ಲಾ ಅವನಿಂದಲೇ ಆಗುವುದು. ಶ್ರುತಿ-ಸ್ಮೃತ್ಯಾದಿಗಳಂತೆ ಜಗತ್ಕಾರಣತ್ವವು ಅವನಿಗೇ ಅನ್ವಯಿಸುವುದರಿಂದಲೂ, ಉಪಕ್ರಮ-ಉಪಸಂಹಾರವೇ ಮುಂತಾದ ತಾತ್ಪರ್ಯ-ಲಿಂಗಗಳಿಂದಲೂ ಅವನೇ ಜಗತ್ಕಾರಣ ಎಂದು ಪ್ರಮಾಣಿತ ವಾಗುವುದು. ಹಾಗೆಯೇ ಪ್ರತ್ಯಕ್ಷ ಮತ್ತು ಆಗಮಗಳಿಂದ ಅನುಗೃಹೀತವಾದ ತರ್ಕದಿಂದಲೂ ಆ ಪರಬ್ರಹ್ಮನೇ ಜಗತ್ಕಾರಣನೆಂದು ಸಿದ್ಧವಾಗುವುದು. ಪರಮಾಣುಗಳು ಜಡವಸ್ತುಗಳಾದ್ದರಿಂದ ಅವು ಜಗತ್ಕಾರಣವಾಗಲಾರವು. ಪರಮಾಣುಗಳಲ್ಲಿ ಜಡ-ಚೇತನ ಎಂಬ ಎರಡು ವಿಭಾಗಗಳುಂಟೆಂದು ಹೇಳಿದರೂ ಅವೆರಡನ್ನೂ ಸೇರಿಸುವುದಕ್ಕೆ ಮತ್ತೊಂದು ಕಾರಣವನ್ನು ಅಂಗೀಕರಿಸಬೇಕಾಗುತ್ತದೆ. ಪ್ರಕೃತಿಯು ಅಚೇತನವಾದ್ದರಿಂದ ಬುದ್ಧಿ ಪೂರ್ವಕವಾಗಿರುವ ಈ ಸೃಷ್ಟಿಯನ್ನು ಅದು ತಾನೇ ಮಾಡಲು ಸಮರ್ಥ ವಲ್ಲ. ಹೀಗೆ ಇಲ್ಲಿ **'ಓಂ ಅಥಾತೋ ಬ್ರಹ್ಮಜಿಜ್ಞಾಸಾ । ಜನ್ಮಾದ್ಯಸ್ಯ ಯತಃ । ಶಾಸ್ತ್ರಯೋನಿತ್ವಾತ್ । ತತ್ತು ಸಮನ್ವಯಾತ್ ।'**–ಎಂಬ ವೇದಾಂತ ಚತುಸ್ಸೂತ್ರೀಯ ಅಭಿಪ್ರಾಯವು ಮೂಡಿಬಂದಿದೆ. **'ಯಃ ಸರ್ವಜ್ಞಃ ಸರ್ವವಿತ್' 'ತಾನ್ಯಹಂ ವೇದ ಸರ್ವಾಣಿ'**–ಎಂದು ಶ್ರುತಿ- ಸ್ಮೃತಿಗಳು ಮೊಳಗುವಂತೆ ಆ ಮಹಾವಿಷ್ಣುವೇ ಅಭಿಜ್ಞ (ಸರ್ವಜ್ಞ)ನು. ತನಗೆ ತಾನೇ ರಾಜನಾದವನು ಮತ್ತು ಸ್ವಯಂಪ್ರಕಾಶನು. (ಬ್ರಹ್ಮಾ- ರುದ್ರಾದಿಗಳು ಮಹಾಜ್ಞಾನಿಗಳಾದರೂ ಅವರ ಜ್ಞಾನವು ಅನನ್ಯಾಧೀನವಲ್ಲ. ಪರಿಪೂರ್ಣವಲ್ಲ.) ಆದಿಕವಿಯಾದ ಬ್ರಹ್ಮದೇವರಿಗೆ ಸಾಂಗವಾದ ವೇದವನ್ನು ಸ್ನೇಹದಿಂದ ವಿಸ್ತಾರಪಡಿಸಿದವನು ಅವನೇ ಆದ್ದರಿಂದ ಅವನೇ ಸರ್ವೋ ತ್ತಮನು. ಅವನ ಅನುಗ್ರಹವಿಲ್ಲದಿದ್ದರೆ ಬ್ರಹ್ಮಾದಿಸೂರಿಗಳಿಗೂ ಮೋಹ ವುಂಟಾಗುತ್ತ ದೆ. ಪೃಥಿವೀ-ಜಲ-ತೇಜಸ್ಸುಗಳ ಕಾರ್ಯದಂತೆ ಈತ್ರಿಸರ್ಗವು-ಜೀವ-ಈಶ್ವರ-ಜಡಗಳೆಂಬ ಮುಬ್ಬಗೆಯ ಸೃಷ್ಟಿಯು–ಅವನಲ್ಲಿ ಸುಳ್ಳಾಗು ತ್ತದೆ ; ಅಂದರೆ-ವಿಫಲವಾಗುತ್ತದೆ. ಹಿಂದೆ ಇಲ್ಲದೇ ಇದ್ದ ಯಾವ ಹೊಸ ಪ್ರಯೋಜನವನ್ನೂ ಅವನಿಗೆ ಉಂಟುಮಾಡುವುದಿಲ್ಲ. ಏಕೆಂದರೆ : ಅವನು ಆಪ್ತಸಮಸ್ತಕಾಮ. ( **ದೇವಸ್ಯೈಷ ಸ್ವಭಾವೋಽಯಂ ಆತ್ಮಕಾಮಸ್ಯ**

ಕಾ ಸ್ಪೃಹಾ) 'ತ್ರಿಸರ್ಗಃ ಅಮೃಷಾ'–ಎಂದು ಪದವಿಭಾಗಮಾಡಿದರೆ ಬರುವ ಅರ್ಥ : ತೇಜಸ್ಸು, ಜಲ ಮತ್ತು ಪೃಥಿವೀ–ಇವುಗಳ ಕಾರ್ಯವು ಅರ್ಥಕ್ರಿಯಾಕಾರಿಯಾಗಿರುವುದರಿಂದ ಸತ್ಯವಾಗಿರುವಂತೆಯೇ ಈ ಮುಬ್ಬಗೆಯ ಸೃಷ್ಟಿಯೂ ಸತ್ಯವಾದುದೇ ; ಅದು ಮಾಯಾಮಯವಲ್ಲ. ತನ್ನ ಸ್ವರೂಪಜ್ಞಾನಮಹಿಮೆಯಿಂದ ಎಲ್ಲ ಇಂದ್ರಜಾಲಾದಿಮಾಯೆಗಳನ್ನೂ ತೊಡೆದುಹಾಕುವ ಪ್ರಭು ಅವನು. ಅಸಮರ್ಥನಾದವನು ಇಂದ್ರಜಾಲಾದಿ ಕುಹಕಗಳನ್ನು ಮಾಡಬೇಕು. ನಿತ್ಯಪರಿಪೂರ್ಣಶಕ್ತಿಯುಳ್ಳ ವಿಷ್ಣುವು ಹಾಗೇಕೆ ಮಾಡಬೇಕು? ಮುಕ್ತಾತ್ಮರು ತಮ್ಮ ಮುಕ್ತಿಗೆ ಮೊದಲು ಕುಹಕಕ್ಕೆ ಒಳಗಾಗಿದ್ದರು. ಶ್ರೀಭಗವಂತನಾದರೋ ಸದಾ ಕುಹಕಗಳನ್ನು ತೊಡೆದುಹಾಕುವವನಾದ್ದರಿಂದ ಅವರಿಗಿಂತಲೂ ಶ್ರೇಷ್ಠನು. ಇಂತಹ ಸರ್ವಜ್ಞ, ಸರ್ವಶಕ್ತ, ಸರ್ವಹೇಯವಿದೂರ, ಸರ್ವಕಲ್ಯಾಣಗುಣಪರಿಪೂರ್ಣ, ಸರ್ವೋತ್ತಮ ನಾದ ಶ್ರೀಹರಿಯನ್ನು ಧ್ಯಾನಿಸೋಣ. (ಈ ವಿವರಣೆಯು ವಿಜಯಧ್ವಜೀಯ ವ್ಯಾಖ್ಯಾನವನ್ನು ಆಧರಿಸಿದೆ.)

ಪ್ರಥಮಸ್ಕಂಧ — ೨ನೆಯ ಅಧ್ಯಾಯ

## ಸೂತಪುರಾಣಿಕರ ಪ್ರವಚನ :
## ಭಗವತ್ಕಥೆ ಮತ್ತು ಭಗವದ್ಭಕ್ತಿಯ ಮಾಹಾತ್ಮ್ಯ

**ಇತಿ ಸಂಪ್ರಶ್ನಸಂಹೃಷ್ಟೋ ವಿಪ್ರಾಣಾಂ ರೌಮಹರ್ಷಣಿಃ ।**
**ಪ್ರತಿಪೂಜ್ಯ ವಚಸ್ತೇಷಾಂ ಪ್ರವಕ್ತುಮುಪಚಕ್ರಮೇ ॥೧॥**

ವ್ಯಾಸರು ಹೇಳುತ್ತಾರೆ :

ಶೌನಕಾದಿಮಹರ್ಷಿಗಳ ಆ ಪ್ರಶ್ನೆಯನ್ನು ಕೇಳಿ ರೋಮಹರ್ಷಣರ ಪುತ್ರ-ಉಗ್ರಶ್ರವಪುರಾಣಿಕನಿಗೆ ತುಂಬಾ ಆನಂದವಾಯಿತು. ಅವನು ಋಷಿಗಳ ಮಾತನ್ನು ಅಭಿನಂದಿಸಿ ಶ್ರೀಗುರುದೇವತಾನಮಸ್ಕಾರಪೂರ್ವಕ ಅವರಿಗೆ ಹೀಗೆ ಉತ್ತರನೀಡಿದನು :

"ಶುಕಮಹಾಮುನಿಗೆ ನಮಸ್ಕಾರವು. ಸಂಸಾರಸಂಬಂಧವನ್ನು ಕೂಡಿಕೊಳ್ಳದೇ ಎಲ್ಲ ಕರ್ಮಗಳಿಂದಲೂ ಬಿಡುಗಡೆಹೊಂದಿದ್ದ ಜ್ಞಾನ-ವೈರಾಗ್ಯನಿಧಿ

ಯಾದ ಈ ಮಹಾತ್ಮನು ಸರ್ವಸಂಗಪರಿತ್ಯಾಗಮಾಡಿ ಒಬ್ಬಂಟಿಗನಾಗಿ ಮನೆಯಿಂದ ಹೊರಟುಬಿಟ್ಟಾಗ ತಂದೆಯಾದ ವೇದವ್ಯಾಸರು ಪುತ್ರವಿಯೋಗದಿಂದ ತಲ್ಲಣಿಸುತ್ತಾ 'ಓ ಪುತ್ರ! ಓ ಪುತ್ರ'–ಎಂದು ಕೂಗತೊಡಗಿದರು. ಆಗ ಮಾರ್ಗದಲ್ಲಿದ್ದ ವೃಕ್ಷಗಳೇ ತನ್ಮಯತೆಯಿಂದ ಕೂಡಿ ಅವನ ಪರವಾಗಿ "ಭೋಃ!' ಎಂದು ಓಗೊಟ್ಟಿದುವು. ಇಂತಹ ಸರ್ವಭೂತಗಳಿಗೂ ಹೃದಯಪ್ರಿಯನಾಗಿ ಸರ್ವಭೂತಹೃದಯಾಂತವರ್ತಿಯಾದ, ಪರಮಾತ್ಮನಲ್ಲಿ ತನ್ಮಯತೆ ಹೊಂದಿದ್ದ, ಸರ್ವಭೂತಹೃದಯನಾದ ಗುರುದೇವ ಶ್ರೀಶುಕಮಹರ್ಷಿಗೆ ನಮೋ ನಮಃ*

ಯಾವನು ಸಮಸ್ತಶ್ರುತಿಗಳ ಸಾರವೂ, ಅಜ್ಞಾನವೆಂಬ ಕತ್ತಲೆಯನ್ನು ದಾಟಲು ಬಯಸುವ ಸಂಸಾರಿಜೀವರಿಗೆ ಅಧ್ಯಾತ್ಮತತ್ತ್ವಗಳನ್ನು ಪ್ರಕಾಶನಪಡಿಸುವ ಅದ್ವಿತೀಯವಾದ ದೀಪವೂ ಆಗಿರುವ ರಹಸ್ಯಾರ್ಥಪೂರ್ಣವಾದ ಈ ಪುರಾಣವನ್ನು ತಾನು ಅನುಭವಿಸಿ, ಪರಮಕರುಣೆಯಿಂದ ಲೋಕಕ್ಕೆ

---

* **ಅನುಪೇತಂ ಅಪೇತಕೃತ್ಯಂ** = ಸಂಸಾರಸಂಬಂಧವನ್ನು ಕೂಡಿಕೊಳ್ಳದೇ ಸರ್ವಕರ್ಮಗಳಿಂದಲೂ ಮುಕ್ತನಾಗಿದ್ದ, **'ಅನುಪೇತಂ'** ಎಂಬ ಪದಕ್ಕೆ ಉಪನಯನ ಸಂಸ್ಕಾರವನ್ನೂ ಹೊಂದದೇ ಕಡುಬಾಲ್ಯದಲ್ಲೇ ಮನೆಯಿಂದ ಹೊರಟುಬಿಟ್ಟ–ಎಂದು ಕೆಲವರು ವ್ಯಾಖ್ಯಾನಮಾಡುತ್ತಾರೆ. ಶುಕರು ಹುಟ್ಟುಜ್ಞಾನಿಯಾಗಿದ್ದುದರಿಂದ ಕೃತಕೃತ್ಯರಾಗಿದ್ದ ಅವರಿಗೆ ಉಪನಯನಸಂಸ್ಕಾರವೂ ಬೇಕಾಗಿರಲಿಲ್ಲ. ಹಾಗೆಯೇ ಅವರು ಪರಿವ್ರಾಜಕರಾದರು-ಎಂದು ಸ್ಪಷ್ಟಪಡಿಸುವುದರಲ್ಲಿ ಅವರಿಗೆ ತಾತ್ಪರ್ಯ. **"ಮಾಂ ಉಪನಯನಸ್ಯ ಇತಿ ಉಪನಯನಾರ್ಥಂ ಆಚಾರ್ಯಸಮೀಪಂ ಅನುಪಪನ್ನಂ–ಉಪನಯನ ಕರ್ಮಣೋಽಪ್ಯನರ್ಹವಯಸ್ಕತ್ವಾದ್ವಿಶೇಷತೋ ಬಾಲಂ"**. ಆದರೆ ಅವರು ಪರೀಕ್ಷಿದ್ರಾಜನಿಗೆ ಶ್ರೀಮದ್ಭಾಗವತವನ್ನು ಉಪದೇಶಮಾಡಿದಾಗ ಅವರಿಗೆ ಹದಿನಾರು ವರ್ಷ ವಯಸ್ಸು ಆಗಿತ್ತು ಎಂದು ಶ್ರೀಮದ್ಭಾಗವತವೇ ಮುಂದೆ ಸಾರುತ್ತದೆ. **"ತಂ ದ್ವ್ಯಷ್ಟವರ್ಷಂ ಸುಕುಮಾರಪಾದಕರೋರುಬಾಹ್ವಂ ಸಕಪೋಲಗಾತ್ರಂ"** ಇದಲ್ಲದೇ ಶ್ರೀಮದ್ಭಾಗವತಮಾಹಾತ್ಮ್ಯದ ಟಿಪ್ಪಣಿಯಲ್ಲಿ ಈ ಹಿಂದೆಯೇ ನಾವು ಗಮನಿಸಿರುವಂತೆ ಅವರಿಗೆ ಉಪನಯನಸಂಸ್ಕಾರವೂ ಆಗಿತ್ತು. ವೇದ-ಶಾಸ್ತ್ರಾಧ್ಯಯನ ಮತ್ತು ಸಮಾವರ್ತನಸಂಸ್ಕಾರವೂ ಆಗಿತ್ತು–ಎಂದು ಶ್ರೀಮನ್ಮಹಾಭಾರತವು ಸ್ಪಷ್ಟವಾಗಿ ಸಾರುತ್ತದೆ. ಆದ್ದರಿಂದ 'ಅನುಪೇತಂ' ಎಂಬ ಪದಕ್ಕೆ ಸಂಸಾರಸಂಬಂಧವನ್ನು ಹೊಂದದೇ ಇದ್ದ, ಗೃಹಸ್ಥಾಶ್ರಮವನ್ನು ಸ್ವೀಕರಿಸದೇ ಇದ್ದ ಅಥವಾ ಯಾರ ಜೊತೆಯಲ್ಲಿಯೂ ಕೂಡಿಕೊಳ್ಳದೇ ಒಬ್ಬಂಟಿಗನಾಗಿ ಹೊರಟ – ಎಂಬ ಅರ್ಥವೇ ಸಂಗತವಾಗುತ್ತದೆ.

ಉಪದೇಶಿಸಿದನೋ–ಅಂತಹ ಋಷಿಗಳಿಗೂ ಗುರುವಾದ ಗುರುದೇವ-ಶುಕ ಮಹರ್ಷಿಯನ್ನು ಶರಣುಹೊಂದುತ್ತೇನೆ. ಶ್ರೀಮನ್ನಾರಾಯಣನನ್ನೂ, ಆತನ ಅವತಾರವಾಗಿರುವ ನರ-ನಾರಾಯಣಮುನಿಗಳನ್ನೂ, ಶ್ರೀಸರಸ್ವತೀದೇವಿ ಯನ್ನೂ ಮತ್ತು ಗುರುದೇವ ಶ್ರೀವೇದವ್ಯಾಸರನ್ನೂ ನಮಸ್ಕರಿಸಿ ಅನಂತರ 'ಜಯ' ಎಂಬ ಬಿರುದಿನಿಂದ ಅಂಕಿತವಾಗಿರುವ ಈ ಪುರಾಣವನ್ನು ವಾಚನ ಮಾಡಬೇಕು.*

ಮಹರ್ಷಿಗಳೇ! ನೀವು ತುಂಬಾ ಒಳ್ಳೆಯ ಪ್ರಶ್ನೆಯನ್ನೇ ಕೇಳಿದಿರಿ. ಯಾವುದರಿಂದ ಎಲ್ಲ ಲೋಕಗಳಿಗೂ ಮಂಗಳವಾಗುವುದೋ–ಅಂತಹ ಸುಂದರವಾದ ಪ್ರಶ್ನೆಯನ್ನೇ ಕೇಳಿದ್ದೀರಿ. ಏಕೆಂದರೆ : ನೀವು ಪ್ರಶ್ನೆಮಾಡಿರು ವುದು ಶ್ರೀಕೃಷ್ಣನ ವಿಷಯವಾಗಿ. ಅದರಿಂದ ಆತ್ಮ-ಮನೋಬುದ್ಧಿಗಳೆಲ್ಲವೂ ಪರಿಶುದ್ಧವಾಗಿ ಪ್ರಸನ್ನವಾಗುವುವು.

---

* ಕೇನಾಪ್ಯನುಪೇತಂ ಅನನುಗತಂ, ಏಕಾಕಿನಂ ಇತ್ಯರ್ಥಃ'–ಎಂದು ವೈಕಲ್ಪಿಕವಾದ ಅರ್ಥವನ್ನು ಶ್ರೀಧರಾಚಾರ್ಯರು ಹೇಳುತ್ತಾರೆ.

ಸರ್ವಭೂತಹೃದಯಂ = ತನ್ನ ಯೋಗಬಲದಿಂದ ಎಲ್ಲ ಭೂತಗಳ ಹೃದಯವನ್ನೂ ಪ್ರವೇಶಮಾಡಿದ್ದ ಶುಕಮಹರ್ಷಿಯು ತಾನೇ ವೃಕ್ಷರೂಪದಿಂದ ತಂದೆಗೆ ಪ್ರತ್ಯುತ್ತರ ನೀಡಿದನು – ಎಂದು ಶ್ರೀಧರಾಚಾರ್ಯರ ವ್ಯಾಖ್ಯಾನ. "ಸರ್ವಭೂತಾನಾಂ ಹೃತ್ ಅಯತೇ ಯೋಗಬಲೇನ ಪ್ರವಿಶತಿ ಸರ್ವಭೂತಹೃದಯಃ । ತಂ ಪಿತುಃ ಸ್ನೇಹಾನು ಬಂಧಪರಿಹಾರಾಯ ಯೋ ವೃಕ್ಷರೂಪೇಣ ಉತ್ತರಂ ದತ್ತವಾನ್ ಇತ್ಯರ್ಥಃ ॥"

ಸ್ವಾನುಭಾವಂ = ತನ್ನ ಅನುಭವರೂಪವಾಗಿರುವ, ಆತ್ಮಾನುಭವರೂಪವಾಗಿರುವ, 'ಅಸಾಧಾರಣಪ್ರಭಾವದಿಂದ ಕೂಡಿದ'–ಎಂದು ಶ್ರೀಧರೀಯವ್ಯಾಖ್ಯಾನ.

* ಭಗವದವತಾರವಾಗಿ ಮನುಷ್ಯಶ್ರೇಷ್ಠರಾಗಿರುವ ನಾರಾಯಣಮುನಿ ಮತ್ತು ನರಮುನಿಗಳನ್ನೂ-ಎಂಬುದಾಗಿಯೂ, 'ನಾರಾಯಣಮುನಿಯನ್ನೂ ಮತ್ತು ನರ ಶ್ರೇಷ್ಠನಾದ ನರಮಹರ್ಷಿಯನ್ನೂ'–ಎಂಬುದಾಗಿಯೂ, 'ಶ್ರೀಮನ್ನಾರಾಯಣನನ್ನೂ, ನರಮಹರ್ಷಿಯನ್ನೂ, ಪುರುಷೋತ್ತಮನನ್ನೂ'–ಎಂಬುದಾಗಿಯೂ, 'ನಾರಾಯಣ-ನರಮಹರ್ಷಿಗಳನ್ನೂ ಜೀವೋತ್ತಮನಾದ ವಾಯುದೇವರನ್ನೂ'– ಎಂಬುದಾಗಿಯೂ ಅನೇಕವಿಧವಾಗಿ ಇಲ್ಲಿ ಯೋಜನೆ-ಭಾಷಾಂತರಗಳನ್ನು ಮಾಡುವುದುಂಟು. ಈ ಶ್ಲೋಕವು ವ್ಯಾಸಕೃತವೇ ಆಗಿದ್ದೆಂದು ತಿಳಿಯುವಾಗ ' ವ್ಯಾಸಂ ' ಎಂಬುದರ ಬದಲಿಗೆ 'ಚ-ಏವ' ಎಂಬ ಪದಗಳನ್ನು ಹೇಳಬೇಕಾಗುತ್ತದೆ. ಅಥವಾ

ಯಾವುದರಿಂದ ಶ್ರೀಕೃಷ್ಣನಲ್ಲಿ ನಿರ್ವ್ಯಾಜವೂ, ನಿತ್ಯನಿರಂತರವೂ, ದೃಢವೂ ಆದ ಭಕ್ತಿಯುಂಟಾಗಿ ಆತ್ಮವು ಸುಪ್ರಸನ್ನವಾಗುವುದೋ–ಅದು ತಾನೇ ಮನುಷ್ಯರಿಗೆ ಪರಮಧರ್ಮ? ಭಗವಂತನಾದ ಪರವಾಸುದೇವನಲ್ಲಿ ಆ ಭಕ್ತಿಯೋಗವನ್ನು ಆಚರಿಸಿದರೆ ಅದರಿಂದ ಶೀಘ್ರವಾಗಿಯೇ ನಿರುಪಾಧಿಕ ವಾದ ವೈರಾಗ್ಯವೂ ಮತ್ತು ಜ್ಞಾನವೂ ಉಂಟಾಗುವುವು.

**ಸ ವೈ ಪುಂಸಾಂ ಪರೋ ಧರ್ಮೋ ಯತೋ ಭಕ್ತಿರಧೋಕ್ಷಜೇ ।**
**ಅಹೈತುಕ್ಯಪ್ರತಿಹತಾ ಯಯಾತ್ಮಾ ಸಂಪ್ರಸೀದತಿ ॥೬॥**

**ವಾಸುದೇವೇ ಭಗವತಿ ಭಕ್ತಿಯೋಗಃ ಪ್ರಯೋಜಿತಃ ।**
**ಜನಯತ್ಯಾಶು ವೈರಾಗ್ಯಂ ಜ್ಞಾನಂ ಚ ಯದಹೈತುಕಮ್ ॥೭॥**

ಯಾವ ಧರ್ಮವನ್ನು ಸರಿಯಾಗಿ ಆಚರಿಸಿದರೂ ಅದರಿಂದ ಮನುಷ್ಯ ರಿಗೆ ಶ್ರೀಭಗವಂತನ ದಿವ್ಯಕಥೆಗಳಲ್ಲಿ ಅಭಿರುಚಿಯುಂಟಾಗುವುದಿಲ್ಲವೋ ಅದು ಧರ್ಮವೇ ಅಲ್ಲ ; ಕೇವಲ ಶ್ರಮವಷ್ಟೇ. ಭಕ್ತಿಯಿಲ್ಲದೇ ಉಪನಿಷತ್ತು ಪ್ರತಿಪಾದಿಸುವ ತತ್ತ್ವವನ್ನು ಕೇಳಿದರೂ ಅದು ಶ್ರೀಭಗವತ್ಕಥೆಯೆಂಬ ಅಮೃತದಿಂದ ದೂರದಲ್ಲಿಯೇ ಉಳಿಯುತ್ತದೆ. ಏಕೆಂದರೆ : ಅದರಲ್ಲಿ ಮನಸ್ಸು

---

ವೇದವ್ಯಾಸರೇ ವ್ಯಾಸಪದವಿಗೆ ನಮಸ್ಕರಿಸುತ್ತಾರೆ–ಎಂಬ ಭಾವವನ್ನು ಇಟ್ಟುಕೊಂಡರೆ ಅಲ್ಲಿಯೂ 'ವ್ಯಾಸಂ' ಎಂದೇ ಇಟ್ಟುಕೊಳ್ಳಬಹುದು. ಶ್ಲೋಕವನ್ನು ವ್ಯಾಸಶಿಷ್ಯರು ಪಠಿಸುವಾಗ ತಮ್ಮ ಗುರುವರ್ಯರಾಗಿರುವ ವೇದವ್ಯಾಸರನ್ನು 'ವ್ಯಾಸ' ಶಬ್ದದಿಂದ ಸ್ಮರಿಸಬಹುದು. ಒಟ್ಟಿನಲ್ಲಿ ಇದು ದೇವತಾ-ಗುರುನಮಸ್ಕಾರರೂಪವಾದ ಶ್ಲೋಕರತ್ನ. ಶ್ರೀಮನ್ಮಹಾಭಾರತಕ್ಕೂ ಮಂಗಳಶ್ಲೋಕವಾಗಿ ಪಠಿಸಲ್ಪಟ್ಟಿದೆ. ವ್ಯಾಸಕೃತವಾದ ಅಥವಾ ವ್ಯಾಸರಿಂದ ಸಂಸ್ಕರಿಸಲ್ಪಟ್ಟ ಎಲ್ಲ ಗ್ರಂಥಗಳ ಪ್ರಾರಂಭದಲ್ಲೂ ಇದನ್ನು ಪಠಿಸಬಹುದು. ಜಯಂ = ಈ ಬಿರುದಾಂಕಿತಕ್ಕೆ ಅರ್ಥ ; "ಸಂಸಾರಜಯಕ್ಕೆ ಅಥವಾ ದುರಿತಜಯಕ್ಕೆ ಕಾರಣವಾದುದು." "ಜಯತ್ಯನೇನ ಸಂಸಾರಮಿತಿ ಜಯಃ । ಜಯತ್ಯನೇನ ದುರಿತಂ ಇತಿ ಜಯಃ ॥" ಮಹಾಭಾರತ-ರಾಮಾಯಣ, ಹದಿನೆಂಟು ಪುರಾಣಗಳು, ವಿಷ್ಣುಧರ್ಮ-ಶಿವಧರ್ಮಾದಿಶಾಸ್ತ್ರಗಳು–ಇವುಗಳಿಗೆಲ್ಲಾ ಈ ಬಿರುದಾಂಕಿತವು ಸಲ್ಲುತ್ತದೆ ಯೆಂದು ಭವಿಷ್ಯಪುರಾಣವು ಹೇಳುತ್ತದೆ. "ಅಷ್ಟಾದಶ ಪುರಾಣಾನಿ ರಾಮಸ್ಯ ಚರಿತಂ ತಥಾ । ವಿಷ್ಣುಧರ್ಮಾದಿಶಾಸ್ತ್ರಾಣಿ ಶಿವಧರ್ಮಾಶ್ಚ ಭಾರತ ॥ ಕಾರ್ಷ್ಣ್ಯಂ ಚ ಪಞ್ಚಮಂ ವೇದಂ ಯನ್ಮಹಾಭಾರತಂ ಸ್ಮೃತಮ್ । ಜಯೇತಿ ನಾಮ ಏತೇಷಾಂ ಪ್ರವದನ್ತಿ ಮನೀಷಿಣಃ ॥ "

ಕರಗಿ ಆನಂದಬಾಷ್ಪ ಸುರಿಯುವುದು, ಮೈ ನವಿರೇಳುವುದು–ಮುಂತಾದ ಭಕ್ತಿರಸದ ಲಕ್ಷಣ ಕಾಣುವುದಿಲ್ಲ.

**ಧರ್ಮಃ ಸ್ವನುಷ್ಠಿತಃ ಪುಂಸಾಂ ವಿಷ್ವಕ್ಸೇನಕಥಾಸು ಯಃ ।**
**ನೋತ್ಪಾದಯೇದ್ಯದಿ ರತಿಂ ಶ್ರಮ ಏವ ಹಿ ಕೇವಲಮ್ ॥೮॥**

**[ಶ್ರುತಮಪ್ಯೌಪನಿಷದಂ ದೂರೇ ಹರಿಕಥಾಮೃತಾತ್ ।**
**ಯನ್ನ ಸನ್ತಿ ದ್ರವಚ್ಚಿತ್ತಪ್ರೇಮಾಶ್ರುಪುಲಕೋದ್ಗಮಾಃ ॥]**

ವಾಸ್ತವವಾಗಿ ಧರ್ಮಕ್ಕೆ ಮೋಕ್ಷವೇ ಫಲವು. ಸಂಪತ್ತಿನ ಸಂಪಾದನೆ ಖಂಡಿತವಾಗಿಯೂ ಧರ್ಮದ ಪ್ರಯೋಜನವಲ್ಲ. ಸಂಪತ್ತೂ ಧರ್ಮಕ್ಕೇ ಸಾಧನ. ಕಾಮವು ಅದರ ಪ್ರಯೋಜನವಲ್ಲ. ಕಾಮಕ್ಕೂ ಇಂದ್ರಿಯಗಳನ್ನು ತೃಪ್ತಿಪಡಿಸುವುದೇ ಫಲವಲ್ಲ. ಬದುಕಿರುವುದಕ್ಕೆ, ಜೀವನವನ್ನು ನಿರ್ವಹಿಸುವುದಕ್ಕೆ–ಎಷ್ಟು ಬೇಕೋ ಅಷ್ಟು ಮಾತ್ರವೇ ಅದರ ಉಪಯೋಗ. ಆ ಬದುಕಿಗೆ ಫಲವೇನು? ಎಂದರೆ : ತತ್ತ್ವದರ್ಶನ. ಅದಕ್ಕಾಗಿ ತತ್ತ್ವಜಿಜ್ಞಾಸೆ. ಕರ್ಮಗಳನ್ನು ಮಾಡಿ ಅವುಗಳಿಂದ ಇಹಲೋಕ-ಪರಲೋಕಗಳಲ್ಲಿ ಲಭಿಸುವ ಫಲಗಳನ್ನು ಪಡೆಯುವುದೇ ಬದುಕಿನ ಗುರಿಯಲ್ಲ.

*** ಧರ್ಮಸ್ಯ ಹ್ಯಾಪವರ್ಗಸ್ಯ ನಾರ್ಥೋಽರ್ಥಾಯೋಪಕಲ್ಪತೇ ।**
**ನಾರ್ಥಸ್ಯ ಧರ್ಮೈಕಾನ್ತಸ್ಯ ಕಾಮೋ ಲಾಭಾಯ ಹಿ ಸ್ಮೃತಃ ॥೯॥**

---

* ತತ್ತ್ವದರ್ಶನವೇ ಜೀವನದ ಪರಮಪ್ರಯೋಜನ–ಎಂಬುದನ್ನು ಇಲ್ಲಿ ಪ್ರತಿಪಾದನೆ ಮಾಡಿದೆ. ಪುರುಷಾರ್ಥಗಳು ಧರ್ಮ-ಅರ್ಥ-ಕಾಮ-ಮೋಕ್ಷಗಳೆಂದು ನಾಲ್ಕು. ಇವುಗಳಲ್ಲಿ ಧರ್ಮ-ಅರ್ಥ-ಕಾಮಗಳಿಗೆ ತ್ರಿವರ್ಗ ಎಂದು ಹೆಸರು. ಈ ತ್ರಿವರ್ಗದಲ್ಲಿ "ಧರ್ಮವಿರುವುದು ಅರ್ಥ (ಸಂಪತ್ತಿನ) ಸಂಪಾದನೆಗಾಗಿ. ಅರ್ಥವನ್ನು ಸಂಪಾದಿಸುವುದು ಕಾಮಕ್ಕಾಗಿ. ಕಾಮವು ಇರುವುದು ಇಂದ್ರಿಯತೃಪ್ತಿಗಾಗಿ"–ಎಂದು ಪಾಮರರು ಭಾವಿಸುತ್ತಾರೆ. ಆದರೆ ಆಳವಾಗಿ ವಿಚಾರಮಾಡಿದರೆ ಅರ್ಥವು ಇರುವುದು ಧರ್ಮಸಾಧನೆಗಾಗಿ ಮತ್ತು ಧರ್ಮವನ್ನು ಆಚರಿಸುವುದು ಮೋಕ್ಷಪ್ರಾಪ್ತಿಗಾಗಿ–ಎಂಬುದು ವಿವೇಕಿಗಳ ಸಿದ್ಧಾಂತ. ಕಾಮವು ಇರುವುದು ಪ್ರಕೃತಿಯಲ್ಲಿ ಅನಿವಾರ್ಯವಾಗಿರುವ ಹಸಿವು, ಬಾಯಾರಿಕೆ–ಮುಂತಾದ ವೇಗಗಳ ಶಮನಕ್ಕಾಗಿ. 'ಜೀವನಪರ್ಯಾಪ್ತ ಏವ ಕಾಮಃ ಸೇವ್ಯಃ' ಇವುಗಳ ಶಮನವಾದರೆ ಸುಲಭವಾಗಿ ಮೋಕ್ಷವನ್ನು ಸಾಧಿಸಬಹುದು. ಹೀಗೆ ಧರ್ಮ-ಅರ್ಥ-ಕಾಮಗಳೆಂಬ ತ್ರಿವರ್ಗಕ್ಕೂ ಮೋಕ್ಷಪ್ರಾಪ್ತಿಯೇ ಫಲ. ಜೀವನದ ಲಕ್ಷ್ಯ ತತ್ತ್ವದರ್ಶನವೇ ಹೊರತು ಕರ್ಮಗಳಿಂದ ಸಾಧ್ಯವಾದ

**ಕಾಮಸ್ಯ ನೇನ್ದ್ರಿಯಪ್ರೀತಿರ್ಲಾಭೋ ಜೀವೇತ ಯಾವತಾ ।**
**ಜೀವಸ್ಯ ತತ್ತ್ವಜಿಜ್ಞಾಸಾ ನಾರ್ಥೋ ಯಶ್ಚೇಹ ಕರ್ಮಭಿಃ ॥೧೦॥**

ಜೀವನದ ಪರಮಲಕ್ಷ್ಯವಾದ ಆ ಪರಮತತ್ತ್ವ ಯಾವುದು? ಎಂದರೆ ಅದು ಅದ್ವಿತೀಯಜ್ಞಾನಸ್ವರೂಪ ಎಂದು ತತ್ತ್ವಜ್ಞರು ಹೇಳುತ್ತಾರೆ. ಅದನ್ನೇ 'ಪರಬ್ರಹ್ಮ'ವೆಂದೂ, 'ಪರಮಾತ್ಮ'ನೆಂದೂ, 'ಭಗವಾನ್' ಎಂಬುದಾಗಿಯೂ ಕರೆಯುತ್ತಾರೆ.

**ವದನ್ತಿ ತತ್ತತ್ತ್ವವಿದಸ್ತತ್ತ್ವಂ ಯಜ್ಜ್ಞಾನಮದ್ವಯಮ್ ।***
**ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ (ಕಥ್ಯತೇ) ॥೧೧॥**

---

ಐಹಿಕ-ಪಾರಲೌಕಿಕಸುಖಗಳನ್ನು ಪಡೆಯುವುದಲ್ಲ–ಎಂಬುದು '**ಧರ್ಮಸ್ಯ ಹ್ಯಾಪವರ್ಗಸ್ಯ.... ಯಶ್ಚೇಹ ಕರ್ಮಭಿಃ**' ಎಂಬೆರಡು ಮುಂದಿನ ಶ್ಲೋಕಗಳ ತಾತ್ಪರ್ಯ.

"ಧನವೇ ಮುಂತಾದ ಅರ್ಥವು ಮುಕ್ತಿಸಾಧನವಾದ ಭಕ್ತಿರೂಪಧರ್ಮಕ್ಕೆ ಪ್ರಯೋಜನವಾದ ಮೋಕ್ಷಕ್ಕೆ ಸಾಧನವಾಗುವುದಿಲ್ಲ. ಹಾಗೆಯೇ ಬ್ರಾಹ್ಮಣರ ಹಣದ ಪ್ರಯೋಜನವಾದ ಯಾಗಾದಿಧರ್ಮವು ಮೋಕ್ಷಧರ್ಮದ ಅರ್ಥವಾದ ಮುಕ್ತಿಗೆ ಸಾಧನವಾಗುವುದಿಲ್ಲ. ಕಾಮವೂ ಭಕ್ತ್ಯಾದಿರೂಪವಾದ ಮೋಕ್ಷಧರ್ಮದ ಲಾಭ (ಫಲ) ವಾದ ಮುಕ್ತಿಗೆ ಸಾಧನವಾಗುವುದಿಲ್ಲ. '**ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ**' ಎಂದು ತೈತ್ತಿರೀಯೋಪನಿಷತ್ತು ಈ ಅಭಿಪ್ರಾಯ ವನ್ನು ಪುಷ್ಟೀಕರಿಸುತ್ತದೆ"–ಎಂಬುದು ವಿಜಯಧ್ವಜೀಯ ಯೋಜನೆಯ ಆಶಯ.

* '**ಅದ್ವಯಂ**' ಎಂಬ ಪದದ ಬದಲಿಗೆ '**ಅವ್ಯಯಂ**' ಎಂಬ ಪಾಠಾಂತರವಿದೆ. ಇದರ ಪ್ರಕಾರ 'ನಿರ್ವಿಕಾರವಾದ ಜ್ಞಾನಸ್ವರೂಪ' ಎಂದು ಅನುವಾದವಾಗುತ್ತದೆ. ಪರಮಾತ್ಮನು ಜ್ಞಾನಸ್ವರೂಪ. ಅವನು ಅದ್ವಯ, ಅದ್ವಿತೀಯ–ಎಂದರೆ : ಸಜಾತೀಯ-ವಿಜಾತೀಯ-ಸ್ವಗತಭೇದವಿಲ್ಲದವನು. ಅವನೊಬ್ಬನೇ ತತ್ತ್ವ–ಎಂಬುದು ಅದ್ವೈತಪರವಾದ ಅರ್ಥ. ಅವನು ಅದ್ವಯ–ಎಂದರೆ : ಪರಮಾತ್ಮನು ಒಬ್ಬನೇ ಇರುವವನು ; ಅನೇಕ ಪರಮಾತ್ಮರಿಲ್ಲ ; ಅವನಿಗೆ ಎಣೆಯಾದವರು ಯಾರೂ ಇಲ್ಲ. '**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ**' ಎಂದು ಕೆಲವರು ಅರ್ಥೈಸುವರು. 'ಅವ್ಯಯವಾದ ಜ್ಞಾನವೇ ಪರಮಾತ್ಮ'–ಎಂದು ಹೇಳಿದ್ದರಿಂದ 'ಜ್ಞಾನವು ಕ್ಷಣಿಕ' ಎಂಬ ಕ್ಷಣಿಕವಿಜ್ಞಾನವಾದಿ (ಬೌದ್ಧರ) ಮತವು ಖಂಡಿತವಾಗುತ್ತದೆ. ನಿತ್ಯನೂ, ಅದ್ವಯನೂ ಆದ ಆ ಜ್ಞಾನಸ್ವರೂಪನನ್ನು ಔಪನಿಷದರು 'ಬ್ರಹ್ಮ'ವೆಂದೂ, ಯೋಗ

ಆ ಪರಮಾತ್ಮತತ್ತ್ವದಲ್ಲಿ ಶ್ರದ್ಧೆಯುಳ್ಳವರಾಗಿ ಮುನಿಗಳು ಗುರೂಪದೇಶದಿಂದ ಪಡೆದ ಜ್ಞಾನ-ವೈರಾಗ್ಯಯುಕ್ತವಾದ ಭಕ್ತಿಯಿಂದ ಅದನ್ನು ತಮ್ಮೊಳಗೆ ಕಂಡುಕೊಳ್ಳುತ್ತಾರೆ. ಆದುದರಿಂದ, ಎಲೈ ವಿಪ್ರೋತ್ತಮರೇ! ಮಾನವರು ತಮ್ಮ-ತಮ್ಮ ವರ್ಣಾಶ್ರಮಗಳಿಗೆ ಅನುಗುಣವಾಗಿ ಆಚರಿಸುವ ಧರ್ಮಕ್ಕೆ ಆ ಅಚ್ಯುತನನ್ನು ಪ್ರಸನ್ನಗೊಳಿಸುವುದೇ ಪರಮಫಲವು ಮತ್ತು ಏಕಾಗ್ರವಾದ ಮನಸ್ಸಿನಿಂದ ಭಕ್ತವತ್ಸಲನಾದ ಆ ಭಗವಂತನ ಶ್ರವಣ-ಕೀರ್ತನ-ಧ್ಯಾನ-ಆರಾಧನೆಗಳನ್ನೇ ಯಾವಾಗಲೂ ಎಲ್ಲೆಡೆಗಳಲ್ಲೂ ಮಾಡಬೇಕು. ಕರ್ಮಗಳ ಕಗ್ಗಂಟು ಬಹಳ ಬಿಗಿಯಾದುದು. ಆದರೆ ಕುಶಲರಾದ ಮನುಷ್ಯರು ಆ ಭಗವಂತನ ಧ್ಯಾನವೆಂಬ ಕತ್ತಿಯಿಂದ ಅದನ್ನು ಕತ್ತರಿಸಿ ಹಾಕಿಬಿಡಬಹುದು. ಅಂತಹ ಅದ್ಭುತಶಕ್ತಿ ಮತ್ತು ವಾತ್ಸಲ್ಯಗಳುಳ್ಳ ಶ್ರೀಭಗವಂತನ ಕಥೆಗಳಲ್ಲಿ ಯಾರಿಗೆ ತಾನೇ ಅಭಿರುಚಿಯುಂಟಾಗುವುದಿಲ್ಲ!
(ಶ್ಲೋಕ 12-15)

ಮಹರ್ಷಿಗಳೇ! ಮಹಾತ್ಮರ ಸೇವೆ ಮತ್ತು ಪುಣ್ಯತೀರ್ಥಗಳ ಸೇವನೆ ಮಾಡುವುದರಿಂದ ಮನುಷ್ಯರಿಗೆ ಶ್ರೀವಾಸುದೇವನ ಕಥೆಗಳನ್ನು ಕೇಳುವ ಇಚ್ಛೆಯುಂಟಾಗುವುದು. ಅದರಲ್ಲಿ ಶ್ರದ್ಧೆಯುಂಟಾಗುವುದು. ಮತ್ತೆ-ಮತ್ತೆ

---

ಮತ (ಹೈರಣ್ಯಗರ್ಭದರ್ಶನ) ದವರು 'ಪರಮಾತ್ಮ'ನೆಂದೂ, ಸಾತ್ವತರು 'ಭಗವಾನ್' ಎಂದೂ ಕರೆಯುತ್ತಾರೆ." – ಶ್ರೀಧರೀಯವ್ಯಾಖ್ಯಾನ.

'ಅದ್ವಯಂ'–ಎಂದರೆ ಅವಯವಭೇದರಹಿತ ಅಥವಾ ಜಾತ್ಯಾದಿ ಭೇದರಹಿತ ಭಗವಂತನೇ ಬ್ರಹ್ಮ, ಪರಮಾತ್ಮ, ಅದ್ವಯಜ್ಞಾನೈಕರೂಪ ಎಂದು ಕರೆಯಲ್ಪಡುತ್ತಾನೆ. ವಿಷ್ಣುವೇ ಆ ಭಗವಾನ್ ಎಂದು ತಿಳಿಯಬೇಕು. "ವಿಷ್ಣುರ್ನಾಮಾ ಸ ವೇದೇಷು ವೇದಾನ್ತೇಷು ಚ ಗೀಯತೇ । ಏಷ ಏವ ಮಹಾನ್ ಶಬ್ದೋ ಮೈತ್ರೇಯ ಭಗವಾನಿತಿ॥" "ಪರಮಬ್ರಹ್ಮಭೂತಸ್ಯ ವಾಸುದೇವಸ್ಯ ನಾನ್ಯಗಃ । ಶಬ್ದೋಽಯಂ ನೋಪಚಾರೇಣ ಹ್ಯನ್ಯತ್ರ ಹ್ಯುಪಚಾರತಃ ।' "ನಾರಾಯಣಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ" ಇತ್ಯಾದಿಯಾಗಿ ಪುರಾಣಗಳೂ ಶ್ರುತಿಗಳೂ ಮೊಳಗುವಂತೆ ನಾರಾಯಣನೇ 'ಭಗವಾನ್' ಎಂಬ ಶಬ್ದಕ್ಕೆ ಮುಖ್ಯವಾಗಿ ಅರ್ಥವಾಗುತ್ತಾನೆ. ಉಳಿದ ಮಹಾತ್ಮರಿಗೆ ಆ ಶಬ್ದವು ಔಪಚಾರಿಕವಾದ ಅರ್ಥದಲ್ಲಿ ಮಾತ್ರ ಸಲ್ಲುತ್ತದೆ. ಬ್ರಹ್ಮ, ಪರಮಾತ್ಮ, ವಾಸುದೇವ–ಮುಂತಾದ ಪರ್ಯಾಯಪದಗಳಿಂದ ಹೇಳಲ್ಪಡುವವನು ಅವನೇ–ಎಂದು ವಿಜಯಧ್ವಜೀಯ ವಿವರಣೆ.

ಅಧಿಕವಾದ ಅಭಿರುಚಿಯುಂಟಾಗುವುದು. ಅವನ ಕಥೆಗಳ ಶ್ರವಣ-ಕೀರ್ತನೆಗಳು ಅತ್ಯಂತ ಪುಣ್ಯಕರವಾದುವು. ಅವುಗಳನ್ನು ಯಾರು ಕೇಳುತ್ತಾರೆಯೋ ಅಂತಹ ಸುಕೃತಿಗಳ ಹೃದಯದೊಳಗೆ ಸತ್ಪುರುಷರ ಸುಹೃತ್ತಾಗಿರುವ ಸ್ವಾಮಿಯು ಕುಳಿತು ಅವರ ಎಲ್ಲ ಅಶುಭಗಳನ್ನೂ ಧ್ವಂಸಮಾಡುವನು. ಹೀಗೆ ಎಲ್ಲ ಅಶುಭಗಳೂ ಶ್ರೀಭಗವಂತನ, ಆತನ ಭಕ್ತರ ಮತ್ತು ಆತನ ದಿವ್ಯಕಥೆಗಳ ಸೇವನೆಯಿಂದ ತೊಲಗಿದರೆ, ಆಗ ಪುಣ್ಯಕೀರ್ತಿಯಾದ ಕೃಷ್ಣ ಪರಮಾತ್ಮನಲ್ಲಿ ಸ್ಥಿರವಾದ ಭಕ್ತಿಯುಂಟಾಗುವುದು. ಆಗ ರಜೋಗುಣ- ತಮೋಗುಣಗಳ ಭಾವಗಳಾದ ಕಾಮ, ಲೋಭ ಮುಂತಾದ ಎಲ್ಲ ವಿಕಾರಗಳನ್ನೂ ಕಳೆದುಕೊಂಡ ಮನಸ್ಸು ಸತ್ತ್ವದಲ್ಲಿ ನೆಲೆಸಿ ಪ್ರಸನ್ನವಾಗುವುದು. ಹೀಗೆ ಭಗವಂತನ ಭಕ್ತಿಯೋಗದಿಂದ ಮನಸ್ಸು ಪ್ರಸನ್ನವಾಗಿ ನಿಸ್ಸಂಗನಾದವನಿಗೆ ಶ್ರೀಭಗವತ್ತತ್ತ್ವದ ಅನುಭವಜ್ಞಾನ ತಾನಾಗಿಯೇ ಉಂಟಾಗುವುದು. ಸರ್ವೇಶ್ವರನಾದ ಆ ಪರಮಾತ್ಮನ ಸಾಕ್ಷಾತ್ಕಾರವಾದೊಡನೆಯೇ ಹೃದಯದ ಗಂಟು ಕತ್ತರಿಸಿಹೋಗುವುದು. ಎಲ್ಲ ಸಂಶಯಗಳೂ ಧ್ವಂಸಹೊಂದುವುವು ಮತ್ತು ಅವನ ಎಲ್ಲ ಕರ್ಮಗಳೂ ನಶಿಸಿಹೋಗುವುವು.

**ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವಸಂಶಯಾಃ ।**
**ಕ್ಷೀಯನ್ತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ॥೨೧॥**

ಆದ್ದರಿಂದಲೇ ಬುದ್ಧಿವಂತರು ಭಗವಂತನಾದ ವಾಸುದೇವನಲ್ಲಿ ಆತ್ಮಪ್ರಸನ್ನತೆಯನ್ನುಂಟುಮಾಡುವ ಭಕ್ತಿಯೋಗವನ್ನು ಪರಮಸಂತೋಷದಿಂದ ಆಚರಿಸುತ್ತಾರೆ.

ಸತ್ತ್ವ-ರಜಸ್ಸು-ತಮಸ್ಸು ಎಂಬಿವು ಪ್ರಕೃತಿಯ ಗುಣಗಳು. ಇವುಗಳನ್ನು ಸ್ವೀಕರಿಸಿ ಒಬ್ಬನೇ ಪರಮಪುರುಷನೇ ಈ ವಿಶ್ವದ ಸೃಷ್ಟಿ-ಸ್ಥಿತಿ ಮತ್ತು ಪ್ರಳಯಕಾರ್ಯಗಳನ್ನು ಮಾಡುವುದಕ್ಕಾಗಿ ಕ್ರಮವಾಗಿ ವಿಷ್ಣು, ಬ್ರಹ್ಮ ಮತ್ತು ರುದ್ರ–ಎಂಬ ಹೆಸರುಗಳನ್ನು ಹೊಂದುತ್ತಾನೆ. ಆದರೂ ಅವುಗಳಲ್ಲಿ ಸತ್ತ್ವಗುಣಗಳನ್ನು ಸ್ವೀಕರಿಸುವ ವಿಷ್ಣುಮೂರ್ತಿಯಿಂದಲೇ ಮನುಷ್ಯರಿಗೆ ಪರಮಶ್ರೇಯಸ್ಸು ಉಂಟಾಗುವುದು.

**ಸತ್ತ್ವಂ ರಜಸ್ತಮ ಇತಿ ಪ್ರಕೃತೇರ್ಗುಣಾಸ್ತೈ-**
**ರ್ಯುಕ್ತಃ ಪರಃ ಪುರುಷ ಏಕ ಇಹಾಸ್ಯ ಧತ್ತೇ ।**

ಸ್ಥಿತ್ಯಾದಯೇ ಹರಿವಿರಿಞ್ಚಿಹರೇತಿ ಸಂಜ್ಞಾಃ
ಶ್ರೇಯಾಂಸಿ ತತ್ರ ಖಲು ಸತ್ತ್ವತನೋರ್ನೃಣಾಂ ಸ್ಯುಃ ॥

ಭೂಮಿಯ ವಿಕಾರವಾದ ಕಟ್ಟಿಗೆಗಿಂತಲೂ ಅದರಿಂದ ಉಂಟಾಗುವ ಹೊಗೆಯು ಶ್ರೇಷ್ಠ. ಅದಕ್ಕಿಂತಲೂ ಅದರ ಅನಂತರ ಕಾಣಿಸಿಕೊಳ್ಳುವ ವೈದಿಕಕರ್ಮಸಾಧನವಾಗಿರುವ ಅಗ್ನಿಯು ಶ್ರೇಷ್ಠವಲ್ಲವೇ? ಹಾಗೆಯೇ ತಮೋಗುಣಕ್ಕಿಂತಲೂ ರಜೋಗುಣವು ಶ್ರೇಷ್ಠ ಮತ್ತು ಸತ್ತ್ವಗುಣವು ಆ ರಜೋಗುಣಕ್ಕಿಂತಲೂ ಶ್ರೇಷ್ಠ. ಏಕೆಂದರೆ : ಅದು ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಾಗುವುದು. ಆದುದರಿಂದಲೇ ಮುನಿಗಳು ಆತ್ಮಕ್ಷೇಮಕ್ಕಾಗಿ ಪ್ರಾಚೀನಯುಗದಲ್ಲಿ ಶುದ್ಧಸತ್ತ್ವಮಯನಾದ ಭಗವಾನ್ ಮಹಾವಿಷ್ಣುವನ್ನೇ ಸೇವಿಸುತ್ತಿದ್ದರು. ಈಗಲೂ ಆ ಋಷಿಗಳನ್ನು ಹಿಂಬಾಲಿಸುವ ಜನರು ಅವರಂತೆಯೇ ಆತ್ಮಕಲ್ಯಾಣವನ್ನು ಪಡೆಯಲು ಸಮರ್ಥರಾಗುತ್ತಾರೆ.

ಪಾರ್ಥಿವಾದ್ದಾರುಣೋ ಧೂಮಸ್ತಸ್ಮಾದಗ್ನಿಸ್ತ್ರಯೀಮಯಃ ।
ತಮಸಸ್ತು ರಜಸ್ತಸ್ಮಾತ್ಸತ್ತ್ವಂ ಯದ್ಬ್ರಹ್ಮದರ್ಶನಮ್ ॥೨೪॥

ಭೇಜಿರೇ ಮುನಯೋಽಥಾಗ್ರೇ ಭಗವನ್ತಮಧೋಕ್ಷಜಮ್ ।
ಸತ್ತ್ವಂ ವಿಶುದ್ಧಂ ಕ್ಷೇಮಾಯ ಕಲ್ಪನ್ತೇ ಯೇಽನು ತಾಮಿಹ ॥೨೫॥*

---

* ಪೃಥಿವಿಯ ಪರಿಣಾಮವಾದ ಕಟ್ಟಿಗೆಯಿಂದ ಕ್ಲೇಶವನ್ನು ಉಂಟುಮಾಡುವ ಹೊಗೆಯು ಮೊದಲು ಹುಟ್ಟಿಕೊಳ್ಳುತ್ತದೆ. ಅದರಿಂದ (ಅನಂತರ) ವೈದಿಕಕರ್ಮಗಳಿಗೆ ಸಾಕ್ಷಾತ್ತಾಗಿ ಸಾಧನವಾಗಿರುವ ಅಗ್ನಿಯು ಉಂಟಾಗುತ್ತದೆ. ಹಾಗೆಯೇ ತಮೋಗುಣದಿಂದ ರಜೋಗುಣವು ಉಂಟಾಗುತ್ತದೆ. ಆ ರಜೋಗುಣದ ದೆಸೆಯಿಂದ ಬ್ರಹ್ಮದರ್ಶನವನ್ನು ಮಾಡಿಸಲು ಕಾರಣವಾದ ಸತ್ತ್ವಗುಣವು ಅನಂತರ ಉಂಟಾಗುತ್ತದೆ. ಶ್ಲೋಕದ ಅಭಿಪ್ರಾಯ ಏನೆಂದರೆ :- ಸತ್ತ್ವ, ರಜಸ್ಸು, ತಮಸ್ಸು–ಇವು ಮೂರೂ ಸಮಾನವಾಗಿ ಪ್ರಕೃತಿಯ ಗುಣಗಳೇ ಆಗಿದ್ದರೂ ಸತ್ತ್ವವೊಂದೇ ಏಕೆ ಮೋಕ್ಷಸಾಧಕವಾಗುತ್ತದೆ? ಇತರ ಗುಣಗಳು ಏಕೆ ಮೋಕ್ಷಸಾಧಕವಾಗುವುದಿಲ್ಲ?–ಎಂಬುದನ್ನು ಇಲ್ಲಿ ದೃಷ್ಟಾಂತಸಹಿತ ಉಪಪಾದನೆಮಾಡಿದೆ. ಹೊಗೆ ಮತ್ತು ಅಗ್ನಿ ಇವೆರಡೂ ಪಾರ್ಥಿವವಾದ ಕಟ್ಟಿಗೆಗಳಿಂದಲೇ ಉಂಟಾಗಿದ್ದರೂ ಅವುಗಳಲ್ಲಿ ಹೊಗೆಯು ಪ್ರಕಾಶಿಸುವುದಿಲ್ಲ. ಸ್ವರ್ಗಸಿದ್ಧಿಗೆ ಸಹಾಯವನ್ನೂ ಉಂಟುಮಾಡು ವುದಿಲ್ಲ. ಅಗ್ನಿಯಾದರೋ ಪ್ರಕಾಶಕವೂ ಆಗಿದೆ. ವೇದಪ್ರತಿಪಾದ್ಯವಾದ ತ್ರೇತಾಗ್ನಿರೂಪ ದಿಂದ ಸ್ವರ್ಗಪ್ರಾಪ್ತಿಗೂ ಸಹಾಯಕವಾಗುತ್ತದೆ. ಹಾಗೆಯೇ ಮೂರು ಗುಣಗಳೂ ಪ್ರಕೃತಿಯವೇ ಆಗಿದ್ದರೂ ಅವುಗಳಲ್ಲಿ ಸತ್ತ್ವವೊಂದು ಮಾತ್ರ ಪ್ರಕಾಶಕವಾಗಿ ಬ್ರಹ್ಮದರ್ಶ

ಆದುದರಿಂದ ಪೂರ್ವಕಾಲದ ಮಹರ್ಷಿಗಳು ತಮ್ಮ ಸರ್ವಕ್ಷೇಮಕ್ಕಾಗಿ ವಿಶುದ್ಧಸತ್ತ್ವಮಯನಾದ ಮಹಾವಿಷ್ಣುವನ್ನು ಪ್ರಧಾನವಾಗಿ ಉಪಾಸನೆ ಮಾಡುತ್ತಾ ಬಂದರು. ಈಗಲೂ ಅವರ ಉದಾಹರಣೆಯಂತೆ ನಡೆಯುವವರು ಅವರಂತೆಯೇ ಮಂಗಳಭಾಜನರಾಗುತ್ತಾರೆ. ಮೋಕ್ಷವನ್ನು ಬಯಸುವವರು ಘೋರರೂಪಿಗಳಾದ ಭೂತಪತಿಗಳನ್ನು ಭಜಿಸದೇ ಅಸೂಯಾರಹಿತರಾಗಿ ಪ್ರಶಾಂತವಾದ ನಾರಾಯಣನ ಕಲೆಗಳನ್ನು ಮಾತ್ರವೇ ಮುಖ್ಯವಾಗಿ ಭಜಿಸುತ್ತಾರೆ. ಹೀಗಿದ್ದರೂ ಕೆಲವರು ಸಂಪತ್ತು, ಐಶ್ವರ್ಯ ಮತ್ತು ಸಂತಾನಗಳನ್ನು ಪಡೆಯುವ ಅಪೇಕ್ಷೆಯಿಂದ ಪಿತೃಪತಿ, ಭೂತಪತಿ ಮತ್ತು ಪ್ರಜಾಪತಿಗಳನ್ನು ಭಜಿಸುತ್ತಾರೆ. ಇದಕ್ಕೆ ಕಾರಣ ಅವರವರ ಸ್ವಭಾವ.

---

ನಕ್ಕೆ ಕಾರಣವಾಗುತ್ತದೆ. ನಿದ್ರೆಮಾಡುತ್ತಿರುವ ಮನುಷ್ಯನಲ್ಲಿ ತಮೋಗುಣದ ಆವರಣವಿರುತ್ತದೆ. ಅನಂತರ ಕಾರ್ಯಪ್ರವರ್ತಕವಾದ ರಜೋಗುಣವು ಅವನಲ್ಲಿ ಕಾಣಿಸಿಕೊಳ್ಳುವುದು. ಅದಾದನಂತರ ಮನಸ್ಸಿನ ನಿರ್ಮಲತೆಯನ್ನುಂಟುಮಾಡುವ ಸತ್ತ್ವಗುಣದ ಪ್ರಾದುರ್ಭಾವ ಉಂಟಾಗುವುದು. ಈ ಸತ್ತ್ವಗುಣವು ತಾನೇ ಬ್ರಹ್ಮದರ್ಶನಕ್ಕೆ ಸಾಧನವಾಗುವುದು. (ವೀರರಾಘವೀಯ)

"ಲಯಾತ್ಮಕವಾದ ತಮಸ್ಸಿನಿಂದ ಉಂಟಾಗುವ ರಜೋಗುಣವು ಸೋಪಾಧಿಕವಾದ ಜ್ಞಾನಕ್ಕೆ ಕಾರಣವಾಗುತ್ತದೆ. ಅದು ಸ್ವಲ್ಪಮಟ್ಟಿಗೆ ಬ್ರಹ್ಮದರ್ಶನಕ್ಕೆ ಹತ್ತಿರವಾಗುತ್ತದೆಯೇ ಹೊರತು ಬ್ರಹ್ಮವನ್ನು ಸಾಕ್ಷಾತ್ತಾಗಿ ಮತ್ತು ಚೆನ್ನಾಗಿ ತೋರಿಸಲು ಕಾರಣವಾಗುವುದಿಲ್ಲ. ಅನಂತರ ಬರುವ ಸತ್ತ್ವಗುಣವು ಪ್ರಕಾಶಸ್ವಭಾವವೇ ಆಗಿರುವುದರಿಂದ ಸಾಕ್ಷಾತ್ತಾಗಿ ಬ್ರಹ್ಮದರ್ಶನಮಾಡಿಸಲು ಕಾರಣವಾಗಬಹುದು." (ಶ್ರೀಧರೀಯ)

---

'ತಮಸ್ಸಿನ ಕೆಲಸ ಆವರಣ ; ಎಲ್ಲದರ ಸಂಹಾರ ; ಪ್ರಳಯ.' ಅದರಲ್ಲಿ ಯಾವ ಚಲನೆಯೂ ಇರುವುದಿಲ್ಲ. ಅದರಿಂದ ರಜೋಗುಣವುಂಟಾದಾಗ ಅದರ ಕೆಲಸವಾದ ಸೃಷ್ಟಿಯು ನಡೆಯುತ್ತದೆ. ಚಲನೆ ಪ್ರಾರಂಭವಾಗುತ್ತದೆ. ಇದು ಮುಂದುವರಿದರೆ ಸತ್ತ್ವಗುಣವು ಕಾಣಿಸಿಕೊಂಡು ಅದರ ಕಾರ್ಯವಾದ ಪ್ರಕಾಶವುಂಟಾಗುತ್ತದೆ. ಅದರಿಂದ ಬ್ರಹ್ಮದರ್ಶನವಾಗುವುದು. ಈ ತ್ರಿಗುಣಗಳಲ್ಲಿ ತಮಸ್ಸು, ರಜಸ್ಸು ಮತ್ತು ಸತ್ತ್ವಗಳಿಗೆ ಕ್ರಮವಾಗಿ ರುದ್ರದೇವರು, ಬ್ರಹ್ಮದೇವರು ಮತ್ತು ಮಹಾವಿಷ್ಣು– ಇವರು ಅಧಿಷ್ಠಾತೃದೇವತೆಗಳು. ಇವರಲ್ಲಿ ಸತ್ತ್ವಮೂರ್ತಿಯಾದ ವಿಷ್ಣುವಿನ ಉಪಾಸನೆ ಹೆಚ್ಚು ಶ್ರೇಯಸ್ಕರ ಮತ್ತು ಮೋಕ್ಷಕ್ಕೆ ನೇರವಾಗಿ ಸಾಧಕ. 'ಮೋಕ್ಷಮಿಚ್ಛೇಜ್ಜನಾರ್ದನಾತ್' ಇಲ್ಲಿ ವಿಷ್ಣುವಿಗೆ ಪ್ರಾಧಾನ್ಯ. ರುದ್ರದೇವರು ತಮೋ

ತಮ್ಮ ರಜೋಗುಣ ಮತ್ತು ತಮೋಗುಣಪ್ರಕೃತಿಗಳಿಗೆ ತಕ್ಕಂತೆ ಅವರು ರಜೋಗುಣ-ತಮೋಗುಣಪ್ರಕೃತಿಕಾರ್ಯಗಳನ್ನು ಮಾಡುವ ದೇವತೆಗಳನ್ನು ಭಜಿಸುತ್ತಾರೆ.*

ವೇದಗಳು, ಯಜ್ಞಗಳು, ಯೋಗಗಳು, ಕರ್ಮಗಳು, ಜ್ಞಾನ, ತಪಸ್ಸು, ಧರ್ಮ ಮತ್ತು ಗತಿ–ಎಲ್ಲಕ್ಕೂ ಶ್ರೀವಾಸುದೇವನಲ್ಲಿಯೇ ತಾತ್ಪರ್ಯ. ವೇದಗಳು ವಾಸುದೇವಪರವಾಗಿವೆ. ಯಜ್ಞಗಳು ವಾಸುದೇವ ಪರ. ಯೋಗಗಳಿಗೆ ಉದ್ದೇಶವಾಗಿರುವವನೂ ವಾಸುದೇವನು. ಎಲ್ಲ ಕರ್ಮಗಳಿಗೂ ವಾಸುದೇವನಲ್ಲಿಯೇ ಪರಿಸಮಾಪ್ತಿ. ಜ್ಞಾನಕ್ಕೆ ವಾಸುದೇವನೇ ಲಕ್ಷ್ಯ. ತಪಸ್ಸನ್ನು ಆಚರಿಸುವುದೂ ವಾಸುದೇವನಿಗಾಗಿ. ಧರ್ಮಾನುಷ್ಠಾನಕ್ಕೆ ವಾಸುದೇವನೇ ತಾತ್ಪರ್ಯ. ಎಲ್ಲ ಗತಿ-ಮತಿಗಳೂ ಶ್ರೀವಾಸುದೇವನೇ.

**ವಾಸುದೇವಪರಾ ವೇದಾ ವಾಸುದೇವಪರಾ ಮಖಾಃ ।**
**ವಾಸುದೇವಪರಾ ಯೋಗಾ ವಾಸುದೇವಪರಾಃ ಕ್ರಿಯಾಃ ॥೨೮॥**

**ವಾಸುದೇವಪರಂ ಜ್ಞಾನಂ ವಾಸುದೇವಪರಂ ತಪಃ ।**
**ವಾಸುದೇವಪರೋ ಧರ್ಮೋ ವಾಸುದೇವಪರಾ ಗತಿಃ ॥೨೯॥**

---

ಮಯರು ಎಂಬುದು ಇಲ್ಲಿ ಅಭಿಪ್ರಾಯವಲ್ಲ. ಅವರು ತಮೋಗುಣಕ್ಕೆ ಅಧಿಷ್ಠಾತೃ ದೇವತೆ ಎಂದಷ್ಟೇ ಅರ್ಥ. 'ಜ್ಞಾನಮಿಚ್ಛೇನ್ಮಹೇಶ್ವರಾತ್' ಎಂಬಂತೆ ಅವರು ಜ್ಞಾನಪ್ರದರಾಗಿ ಮೋಕ್ಷಕ್ಕೆ ಕಾರಣರಾದ ದೇವರು. ಅವರಿಂದ ಜ್ಞಾನವನ್ನು ಪಡೆದ ಸುಕೃತಿಗಳ ಉದಾಹರಣೆ ಶ್ರೀಮದ್ಭಾಗವತದಲ್ಲೇ ಮುಂದೆ ದೊರೆಯುವುದು.

**ದಾರುಣಃ** = ಕಟ್ಟಿಗೆಯ ದೆಸೆಯಿಂದ ; 'ದಾರುಣಃ' ಎಂಬ ಶಬ್ದವನ್ನು ಪ್ರಥಮಾಂತವಾಗಿ ತೆಗೆದುಕೊಂಡು ಧೂಮಕ್ಕೆ ವಿಶೇಷಣವಾಗಿಸಿ ಕ್ಲೇಶಕರವಾದ ಧೂಮವು ಎಂದೂ ಅರ್ಥಮಾಡುವುದುಂಟು.

* **ನಾರಾಯಣಕಲಾಃ ಶಾನ್ತಾಃ** = ನಾರಾಯಣನು ಶಾಂತಮೂರ್ತಿ. ಅವನ ಅಂಶ-ಅವತಾರಗಳೂ ಪ್ರಧಾನವಾಗಿ ಶಾಂತವಾದುವು. ಇದು ನಿಜವೇ. ಆದರೆ ಶಿವನಮೂರ್ತಿಗಳೆಲ್ಲವೂ ಘೋರ ಎಂದು ಅರ್ಥವಲ್ಲ. ರುದ್ರನಿಗೆ ಅಘೋರ ಮತ್ತು ಘೋರ–ಎಂಬ ಎರಡು ರೂಪಗಳೂ ಉಂಟು. ಅವುಗಳಲ್ಲಿ ಘೋರರೂಪಗಳನ್ನು ಆಸುರೀಪ್ರಕೃತಿಯವರು ಭಜಿಸುತ್ತಾರೆ. ಶಾಂತರೂಪಗಳನ್ನು ಸಾತ್ತ್ವಿಕಪ್ರಕೃತಿಯವರು ಭಜಿಸುತ್ತಾರೆ. '**ಯಾ ತೇ ರುದ್ರ ಶಿವಾ ತನೂರಘೋರಾऽಪಾಪಕಾಶಿನೀ**'

ನಾರಾಯಣನನ್ನು ಭಜಿಸುವ ಮುಮುಕ್ಷುಗಳು ಅಸೂಯಾರಹಿತರಾಗಿರಬೇಕು.

ತ್ರಿಗುಣಾತೀತನಾದ ಆ ಪರವಾಸುದೇವನೇ ಹಿಂದೆ ವ್ಯಕ್ತಾವ್ಯಕ್ತ ಸ್ವರೂಪವಾದ, ತ್ರಿಗುಣಾತ್ಮಕವಾದ ತನ್ನ ಮಾಯೆಯಿಂದ ಈ ಜಗತ್ತನ್ನು ಸೃಷ್ಟಿಮಾಡಿದನು. ತನ್ನ ಆ ಮಾಯಾಪ್ರಕೃತಿಯಿಂದ ವಿಕಾಸಗೊಂಡ ಈ ತ್ರಿಗುಣಗಳಲ್ಲಿ ಒಳಹೋಗುವುದರಿಂದ ಅವನು ಗುಣಾತೀತನಾಗಿದ್ದರೂ ಗುಣಯುಕ್ತನಾಗಿರುವಂತೆ ತೋರುತ್ತಾನೆ. ಅಗ್ನಿಯು ವಾಸ್ತವವಾಗಿ ಒಂದೇ ಆಗಿದ್ದರೂ ತನಗೆ ಆಶ್ರಯವಾಗಿರುವ ಬೇರೆ-ಬೇರೆ ಕಟ್ಟಿಗೆ ಮುಂತಾದ ವಸ್ತುಗಳಿಗೆ ತಕ್ಕಂತೆ ಹೆಸರು, ಆಕಾರ ಮುಂತಾದುವುಗಳಲ್ಲಿ ಬೇರೆ-ಬೇರೆ ಯಾಗಿರುವಂತೆ ಕಾಣುತ್ತದೆ. ಹಾಗೆಯೇ ಎಲ್ಲಕ್ಕೂ ಆತ್ಮರೂಪನಾಗಿರುವ ಭಗವಂತನು ಒಬ್ಬನೇ ಆಗಿದ್ದರೂ ಅನೇಕ ಪ್ರಾಣಿಗಳಲ್ಲಿ ಅಂತರ್ಯಾಮಿ ಯಾಗಿರುವುದರಿಂದ ತಾನು ಅನೇಕವಾಗಿರುವಂತೆ ಕಾಣಿಸುತ್ತಾನೆ. ಆ ನಾಮ-ರೂಪಭೇದಗಳೆಲ್ಲವೂ ಆ ಶರೀರಗಳಿಗೆ ಮಾತ್ರವೇ ಅನ್ವಯಿಸುತ್ತವೆ. ಎಲ್ಲ ರಿಗೂ ಅಂತರಾತ್ಮನಾಗಿರುವ ಭಗವಂತನಿಗೆ ಆ ಕರ್ಮಗಳು, ಸುಖ- ದುಃಖಾದಿ ಅನುಭವಗಳು–ಇವುಗಳ ಸಂಬಂಧವಿರುವುದಿಲ್ಲ. ಆ ಭಗವಂತನೇ ಗುಣಮಯಗಳಾಗಿರುವ ತನ್ಮಾತ್ರೆಗಳು, ಇಂದ್ರಿಯಗಳು ಮತ್ತು ಅಂತಃಕರಣ ಮುಂತಾದ ಗುಣಗಳ ವಿಕಾರವಾದ ಭಾವಗಳ ಮೂಲಕ ಬಗೆ-ಬಗೆಯ ಯೋನಿಗಳನ್ನು ಸೃಷ್ಟಿಸುತ್ತಾನೆ ಮತ್ತು ಆ ಪ್ರಾಣಿವರ್ಗದಲ್ಲಿ ಒಳಹೊಕ್ಕು

---

'ಅನಸೂಯವಃ' ಎಂಬ ಈ ವಿಶೇಷಣ ಅರ್ಥಪೂರ್ಣವಾಗಿದೆ. ವೈಷ್ಣವರು ವಿಷ್ಣುವನ್ನು ಅನನ್ಯಭಕ್ತಿಯಿಂದ ಪೂಜಿಸಬೇಕೇ ಹೊರತು ದೇವತಾಂತರಗಳಲ್ಲಾಗಲೀ–ದೇವ ತಾಂತರಭಕ್ತರಲ್ಲಾಗಲೀ ಅಸೂಯೆಹೊಂದಿರಬಾರದು. ಏಕೆಂದರೆ : ಪರವಾಸುದೇವನೇ ಸರ್ವದೇವತೆಗಳಿಗೂ ಮೂಲ. ಆಯಾ ದೇವತೆಗಳ ಮೂಲಕ ಫಲಗಳನ್ನು ಕೊಡು ವವನು ಅವನೇ. ಯಾವ ದೇವತೆಯನ್ನು ನಿಂದಿಸಿದರೂ ಅದು ಆ ಪರವಾಸುದೇವ ನನ್ನು ನಿಂದಿಸಿದಂತೆಯೇ ಆಗುವುದು. ಇಲ್ಲಿ ಹೇಳಿರುವ 'ಅನಸೂಯವಃ' (ಇತರ ದೇವತೆಗಳಲ್ಲಿ ಅಸೂಯಾರಹಿತರಾಗಿ ) ಎಂಬ ವಿಶೇಷಣವು ಶಿವ-ಗಣೇಶ ಇತ್ಯಾದಿ ಇತರ ದೇವತೆಗಳನ್ನು ಭಜಿಸುವವರಿಗೂ ಇದೇ ಅರ್ಥದಲ್ಲಿ ಹೊಂದಿಕೆಯಾಗುತ್ತದೆ. ಅವರೂ ಇತರ ದೇವತೆಗಳನ್ನಾಗಲೀ, ಆ ದೇವತೆಗಳ ಭಕ್ತರನ್ನಾಗಲೀ, ಹೀಯಾಳಿಸ ಬಾರದು. ಸೃಷ್ಟಿ-ಸ್ಥಿತಿ-ಲಯಗಳನ್ನು ತ್ರಿಮೂರ್ತಿಯಾಗಿ ತ್ರಿಗುಣೋಪಾಧಿಗಳಿಂದ ಮಾಡುವವನು ಸತ್ಯಸ್ವರೂಪನಾದ ಒಬ್ಬನೇ ಪರಮಾತ್ಮ. 'ಜನ್ಮಾದ್ಯಸ್ಯ ಯತಃ' ಎಂದು ಹಿಂದೆ ಮಂಗಳಶ್ಲೋಕದಲ್ಲಿ ಸ್ಪಷ್ಟವಾಗಿಯೇ ಹೇಳಿದೆ. ಆದ್ದರಿಂದ

ಆ ಯೋನಿಗಳಿಗೆ ಅನುರೂಪವಾದ ಭೋಗಗಳನ್ನು ಅನುಭವಿಸುವಂತೆ ಕಾಣುತ್ತಾನೆ. ಆ ಪ್ರಾಣಿಗಳ ದ್ವಾರದಿಂದ ಅವನಿಗೆ ಈ ವಿಷಯಾನುಭವದ ಸಂಬಂಧವೇ ಹೊರತು ವಾಸ್ತವವಾಗಿ ಅವನಿಗೆ ಇದಾವುದರ ಸಂಬಂಧವೂ ಇರುವುದಿಲ್ಲ. ಈ ನಾಮ-ರೂಪಾದಿ ಭೇದಗಳು ಪ್ರಕೃತಿಗೆ ಸಂಬಂಧಪಟ್ಟುವುಗಳು. ಹೀಗೆ ಜಗತ್ಸೃಷ್ಟಿಗೆ ಕಾರಣನಾದ ಭಗವಂತನೇ ದೇವತೆ, ಪಶು-ಪಕ್ಷಿ-ಮನುಷ್ಯ–ಮುಂತಾದ ಯೋನಿಗಳಲ್ಲಿ ಲೀಲೆಯಿಂದಲೇ ಅವತಾರ ಮಾಡುವವನಾಗಿ ಸತ್ತ್ವಗುಣದ ಮೂಲಕ ಲೋಕಗಳನ್ನು ಕಾಪಾಡುತ್ತಾನೆ.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ಪ್ರಥಮಸ್ಕಂಧದ ೨ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೩ನೆಯ ಅಧ್ಯಾಯ

## ಭಗವಂತನ ಅವತಾರಗಳ ವರ್ಣನೆ

**ಜಗೃಹೇ ಪೌರುಷಂ ರೂಪಂ ಭಗವಾನ್ಮಹದಾದಿಭಿಃ ।**
**ಸಮ್ಭೂತಂ ಷೋಡಶಕಲಮಾದೌ ಲೋಕಸಿಸೃಕ್ಷಯಾ* ॥೧॥**

ಪ್ರಾರಂಭದಲ್ಲಿ ಭಗವಂತನಿಗೆ–ಲೋಕಗಳನ್ನು ಸೃಷ್ಟಿಸಬೇಕು–ಎಂಬ

---

ಶ್ರೀಭಗವಂತನ ಯಾವುದೇ ದೇವತಾರೂಪದಲ್ಲೂ ಅಸೂಯೆತೋರಬಾರದು. 'ಅಸೂಯೆ' ಎಂದರೆ ಗುಣಗಳಲ್ಲಿ ದೋಷವನ್ನು ಆರೋಪಿಸುವುದು. ನಾರಾಯಣನ ನಿಜವಾದ ಭಕ್ತರಿಗೆ ಯಾವ ವಿಷಯದಲ್ಲೂ ಕ್ರೋಧ, ಮಾತ್ಸರ್ಯಾದಿಗಳು ಇಲ್ಲವೆಂದು ವಿಷ್ಣುಸಹಸ್ರನಾಮದ ಫಲಶ್ರುತಿಯು ಹೇಳುವುದನ್ನೂ ಗಮನಿಸಬೇಕು.

ನ ಕ್ರೋಧೋ ನ ಚ ಮಾತ್ಸರ್ಯಂ ನ ಲೋಭೋ ನಾಶುಭಾ ಮತಿಃ ।
ಭವನ್ತಿ ಕೃತಪುಣ್ಯಾನಾಂ ಭಕ್ತಾನಾಂ ಪುರುಷೋತ್ತಮೇ ॥

* 'ಭಗವಂತನ ಶುಭವಾದ ನಾನಾ ಅವತಾರಕಥೆಗಳನ್ನು ದಯವಿಟ್ಟು ಹೇಳಬೇಕು' ಎಂಬ ಮಹರ್ಷಿಗಳ ಪ್ರಾರ್ಥನೆಯಂತೆ ಅವತಾರಕಥೆಗಳನ್ನು ಹೇಳಲು ತೊಡಗಿದ ಪುರಾಣಿಕರು ಪ್ರಾರಂಭದಲ್ಲಿ ಪುರುಷಾವತಾರವನ್ನು ಇಲ್ಲಿ ಹೇಳುತ್ತಾರೆ. ಮೊದಲ ನೆಯ ಐದು ಶ್ಲೋಕಗಳಲ್ಲಿ ಈ ಅವತಾರವು ವರ್ಣಿತವಾಗಿದೆ. ಶ್ರೀಭಗವಂತನ ದಿವ್ಯಮಂಗಳವಿಗ್ರಹವು ಅಪ್ರಾಕೃತವಾದುದು. ಆದರೂ ಇಲ್ಲಿ ಅವನ ಪೌರುಷ ರೂಪವು ಮಹತ್ತತ್ತ್ವ ಮುಂತಾದುವುಗಳಿಂದಲೂ, ಹದಿನಾರು ಕಲೆಗಳಿಂದಲೂ ಕೂಡಿದೆಯೆಂದು ಏಕೆ ಹೇಳಿದೆ? ಎಂದರೆ : ಇಲ್ಲಿ ಹೇಳಿರುವುದು ವಿರಾಡ್ದೇಹ.

ಇಚ್ಛೆಯುಂಟಾಯಿತು. ಒಡನೆಯೇ ಆತನು ಮಹತ್ತತ್ತ್ವ, ಅಹಂಕಾರ ಮತ್ತು ಪಂಚತನ್ಮಾತ್ರೆಗಳಿಂದ ನಿರ್ಮಿತವಾದ, ಹತ್ತು ಇಂದ್ರಿಯಗಳು, ಮನಸ್ಸು ಮತ್ತು ಪಂಚಭೂತಗಳು ಎಂಬ ಹದಿನಾರು ಕಲೆಗಳಿಂದ ಕೂಡಿದ ವಿರಾಟ್ಪುರುಷರೂಪವನ್ನು ಸ್ವೀಕರಿಸಿದನು.

ಸೃಷ್ಟಿಗೆ ಕಾರಣವಾದ ಜಲದಲ್ಲಿ ಪವಡಿಸಿ ಯೋಗನಿದ್ರೆಯನ್ನು ಮಾಡುತ್ತಿದ್ದ ಆತನ ನಾಭಿಸರೋವರದಲ್ಲಿ ಹುಟ್ಟಿದ ಕಮಲದಿಂದಲೇ ಪ್ರಜಾಪತಿಗಳಿಗೆಲ್ಲಾ ಅಧಿಪತಿಯಾದ ಬ್ರಹ್ಮದೇವರು ಹುಟ್ಟಿದರು. ಆತನ ಅಂಗ-ಉಪಾಂಗಗಳ ವಿನ್ಯಾಸದಿಂದಲೇ ಸಮಸ್ತಲೋಕಗಳ ಕಲ್ಪನೆಯಾಯಿತು. ಇಂತಹ ಭಗವಂತನ ಆ ವಿರಾಟ್ಪುರುಷರೂಪವು ಪರಮಶ್ರೇಷ್ಠವಾದುದು ; ವಿಶುದ್ಧ ಸತ್ತ್ವಮಯವಾದುದು. ಸಾವಿರಾರು ಪಾದಗಳು, ತೊಡೆಗಳು, ತೋಳುಗಳು ಮತ್ತು ಮುಖಗಳಿಂದ ಕೂಡಿ ಅದ್ಭುತವಾಗಿ–ಸಾವಿರಾರು ತಲೆಗಳು, ಕಿವಿಗಳು, ಕಣ್ಣುಗಳು ಮತ್ತು ಮೂಗುಗಳಿಂದ ವಿರಾಜಮಾನವಾಗಿ–ಸಾವಿರಾರು ಕಿರೀಟಗಳು, ವಸ್ತ್ರಗಳು ಮತ್ತು ಕುಂಡಲಗಳಿಂದ ಕಂಗೊಳಿಸುತ್ತಿರುವ ಆ ದಿವ್ಯರೂಪವನ್ನು ಯೋಗಿಗಳು ತಮ್ಮ ಪೂರ್ಣಜ್ಞಾನಮಯವಾದ ದೃಷ್ಟಿಯಿಂದ ಸಂದರ್ಶಿಸುತ್ತಾರೆ. ಇದೇ ನಾನಾ ಅವತಾರಗಳಿಗೆ ಶಾಶ್ವತವಾದ ಮೂಲಕಾರಣವು. ಇದರಿಂದಲೇ ಎಲ್ಲ ಅವತಾರಗಳೂ ಪ್ರಕಟವಾಗುವುವು. ಇದರ ಅಂಶದ ತುಣುಕುಗಳಿಂದಲೇ ದೇವತೆಗಳು, ಪಶು-ಪಕ್ಷಿ ಮುಂತಾದ

---

ಅದರಲ್ಲಿ ಅಂತರ್ಯಾಮಿಯಾಗಿರುವ ಭಗವಂತನನ್ನು ವಿರಾಡ್ರೂಪದಿಂದ ಉಪಾಸನೆ ಮಾಡಲು ಹೀಗೆ ಹೇಳಿದೆ. (ಶ್ರೀಧರೀಯ)

ಭಗವಂತನ ಅವತಾರಗಳಲ್ಲಿ ಅನುಪ್ರವೇಶಾವತಾರ ಮತ್ತು ಸ್ವರೂಪದ ಅವತಾರ ಎಂದು ಎರಡು ಬಗೆಗಳು. (ಇವೆರಡೂ ಭಗವಂತನ ಸಂಕಲ್ಪದಿಂದ ಆದುದೇ ಹೊರತು ಕರ್ಮಜನಿತವಲ್ಲ.) ಇವುಗಳಲ್ಲಿ ಮೊದಲನೆಯದು ಪ್ರಕೃತಿ-ಪ್ರಾಕೃತರೂಪವಾದುದು ; ಮತ್ತೊಂದು ಶುದ್ಧಸತ್ತ್ವಮಯವಾದ ಪರರೂಪ. ಮೊದಲಿಗೆ ಪ್ರಕೃತಿ-ಪ್ರಾಕೃತಾತ್ಮಕವಾದ ಪೌರುಷರೂಪವನ್ನು ವರ್ಣಿಸಿದೆ. ಪುರುಷರು ಎಂದರೆ ಕ್ಷೇತ್ರಜ್ಞ–ಜೀವರು. ಅವರೊಡನೆ ಮಿಶ್ರವಾದ ದೇಹಕ್ಕೆ ಪೌರುಷರೂಪ ಎಂದು ಹೆಸರು. ಅದು ಮಹತ್ತತ್ತ್ವ ಮತ್ತು ಷೋಡಶಕಲೆಗಳಿಂದ ನಿರ್ಮಿತವಾದುದು. 'ಯಾವನ ನಾಭಿಸರೋವರದ ಕಮಲದಿಂದ ಬ್ರಹ್ಮದೇವರು ಹುಟ್ಟಿದರೋ'–ಎಂದು ಹೇಳಲ್ಪಟ್ಟಿರುವುದು ಭಗವಂತನ ಶುದ್ಧ ಸತ್ತ್ವಮಯವಾದ ಅಸಾಧಾರಣ ರೂಪ. (ವೀರರಾಘವೀಯ)

ತಿರ್ಯಕ್ ಪ್ರಾಣಿಗಳು ಮತ್ತು ಮನುಷ್ಯರೇ ಮುಂತಾದ ಯೋನಿಗಳ ಸೃಷ್ಟಿ ಯಾಗುವುದು. (ಶ್ಲೋಕ 1-5)

ಆ ಮಹಾಪ್ರಭುವೇ ಮೊದಲು 'ಕೌಮಾರ'ವೆಂಬ ಸೃಷ್ಟಿಯನ್ನು ಕೈಗೊಂಡು ಸನಕ, ಸನಂದನ, ಸನಾತನ ಮತ್ತು ಸನತ್ಕುಮಾರರೆಂಬ ರೂಪ ದಲ್ಲಿ ಅವತರಿಸಿ ಅತ್ಯಂತಕಠಿನವೂ, ಅಖಂಡವೂ ಆದ ಬ್ರಹ್ಮಚರ್ಯವನ್ನು ಆಚರಿಸಿದನು. ಎರಡನೆಯ ಅವತಾರವಾಗಿ ಆ ಯಜ್ಞೇಶನು ಲೋಕಕಲ್ಯಾಣ ಕ್ಕಾಗಿ, ಪಾತಾಳದಲ್ಲಿ ಹುದುಗಿಹೋಗಿದ್ದ ಭೂಮಿಯನ್ನು ಉದ್ಧರಿಸುವುದಕ್ಕಾಗಿ ವರಾಹರೂಪವನ್ನು ತಾಳಿದನು. ಮೂರನೆಯದು ಋಷಿಸೃಷ್ಟಿ. ಇದರಲ್ಲಿ ಆತನು ದೇವರ್ಷಿನಾರದರ ರೂಪದಲ್ಲಿ ಅವತಾರಮಾಡಿ ನಿಷ್ಕಾಮ ಕರ್ಮದ ಆಚರಣೆಯಿಂದ ಮುಕ್ತಿಯನ್ನು ಬೋಧಿಸುವ, ನಾರದ ಪಂಚರಾತ್ರ ಎಂದು ಪ್ರಸಿದ್ಧವಾಗಿರುವ ಪಂಚರಾತ್ರತಂತ್ರವನ್ನು ಉಪದೇಶಮಾಡಿದನು. ನಾಲ್ಕನೆಯದಾದ ಧರ್ಮಕಲೆಯೆಂಬ ಸೃಷ್ಟಿಯಲ್ಲಿ ಭಗವಂತನು ಧರ್ಮನ ಪತ್ನಿಯಾದ ಮೂರ್ತಿ ಎಂಬಾಕೆಯ ಗರ್ಭದಿಂದ ನರ-ನಾರಾಯಣಮಹರ್ಷಿ ಗಳ ರೂಪದಲ್ಲಿ ಅವತರಿಸಿದನು. ಮನಸ್ಸು-ಇಂದ್ರಿಯಗಳ ಸಂಯಮದ ಆತ್ಮ ಶಾಂತಿಯೊಡನೆ ಅತಿಕಠಿನವಾದ ತಪಸ್ಸನ್ನು ಮಾಡಿ ತೋರಿಸಿದ ಅವತಾರ ವಿದು. ಐದನೆಯದು ಕಪಿಲಾವತಾರ. ಮಹಾಸಿದ್ಧರಿಗೆ ಸ್ವಾಮಿಯಾದ ಈ ಕಪಿಲಾವತಾರಿಯಾದ ಸ್ವಾಮಿಯು ಕಾಲಮಹಿಮೆಯಿಂದ ಲುಪ್ತವಾಗಿ ಹೋಗಿದ್ದ ತತ್ತ್ವಸಮೂಹಗಳ ಸ್ವರೂಪವನ್ನು ನಿರ್ಣಯಿಸುವ ಸಾಂಖ್ಯವೆಂಬ ಶಾಸ್ತ್ರವನ್ನು 'ಆಸುರಿ' ಎಂಬಾತನಿಗೆ ಉಪದೇಶಮಾಡಿದ. ಆರನೆಯ ಅವತಾರವಾಗಿ ಆತನು ಅನಸೂಯಾದೇವಿಯ ವರದ ಬೇಡಿಕೆಯನ್ನು ಈಡೇರಿಸುತ್ತಾ ಅತ್ರಿಪುತ್ರನಾದ ದತ್ತಾತ್ರೇಯನಾಗಿ ಕಾಣಿಸಿಕೊಂಡು ಅಲರ್ಕ, ಪ್ರಹ್ಲಾದ–ಮುಂತಾದವರಿಗೆ ಬ್ರಹ್ಮಜ್ಞಾನವನ್ನು ಉಪದೇಶಿಸಿದನು. ಏಳನೆ ಯದು ಆತನ ಯಜ್ಞಾವತಾರ. ಇದರಲ್ಲಿ ಆತನು ರುಚಿಯೆಂಬ ಪ್ರಜಾಪತಿಗೆ ಆಕೂತಿಯೆಂಬ ಪತ್ನಿಯ ಗರ್ಭದಲ್ಲಿ ಜನಿಸಿ ತನ್ನ ಪುತ್ರರಾದ 'ಯಾಮ' ಮುಂತಾದ ದೇವತೆಗಳೊಡನೆ ಸ್ವಾಯಂಭುವಮನ್ವಂತರದಲ್ಲಿ ಜಗತ್ತನ್ನು ರಕ್ಷಿಸಿದನು. ಎಂಟನೆಯ ಅವತಾರದಲ್ಲಿ ಭಗವಂತನು ನಾಭಿರಾಜನ ಧರ್ಮ ಪತ್ನಿಯಾದ ಮೇರುದೇವಿಯ ಗರ್ಭದಲ್ಲಿ ಋಷಭದೇವನ ರೂಪದಲ್ಲಿ ಜನಿಸಿ,

ಎಲ್ಲ ಆಶ್ರಮಗಳಿಗೂ ವಂದನೀಯವಾಗಿರುವ ಪರಮಹಂಸರ ಮಾರ್ಗವನ್ನು ತೋರಿಸಿಕೊಟ್ಟನು. ಋಷಿಗಳ ಪ್ರಾರ್ಥನೆಯಂತೆ ಆತನು ತನ್ನ ಒಂಬತ್ತನೆಯ ಅವತಾರವಾಗಿ ಪೃಥುಮಹಾರಾಜನ ರೂಪದಲ್ಲಿ ಕಾಣಿಸಿಕೊಂಡನು. ಪೃಥ್ವಿಯಿಂದ ಸಮಸ್ತ ಓಷಧಿಗಳನ್ನೂ ಕರೆದು ಜಗತ್ತಿಗೆ ಅತ್ಯಂತಕಲ್ಯಾಣವನ್ನು ಉಂಟುಮಾಡಿದ ಅವತಾರವಿದು. ಚಾಕ್ಷುಷಮನ್ವಂತರದ ಕೊನೆಯಲ್ಲಿ ತ್ರಿಲೋಕಗಳೂ ಸಮುದ್ರದಲ್ಲಿ ಮುಳುಗಿಹೋಗುತ್ತಿದ್ದಾಗ ಆತನು ಮತ್ಸ್ಯ ರೂಪದಲ್ಲಿ ತನ್ನ ಹತ್ತನೆಯ ಅವತಾರವನ್ನು ಕೈಗೊಂಡನು. ಮುಂದಿನ ಮನ್ವಂತರದ ಅಧಿಪತಿಯಾದ ವೈವಸ್ವತಮನುವನ್ನು ಪೃಥ್ವೀರೂಪವಾದ ನೌಕೆಯಲ್ಲಿ ಕುಳ್ಳಿರಿಸಿ ಕಾಪಾಡಿದ ಅವತಾರವಿದು. ದೇವತೆಗಳೂ ಮತ್ತು ದೈತ್ಯರೂ ಸಮುದ್ರವನ್ನು ಕಡೆಯುತ್ತಿದ್ದಾಗ ಭಗವಂತನು ಹನ್ನೊಂದನೆಯ ಅವತಾರವಾಗಿ 'ಕೂರ್ಮ' ರೂಪದಲ್ಲಿ ಕಾಣಿಸಿಕೊಂಡು ಮಂದರಪರ್ವತ ವನ್ನು ತನ್ನ ಬೆನ್ನಿನ ಮೇಲೆ ಧರಿಸಿಕೊಂಡನು. ಹನ್ನೆರಡನೆಯದು ಧನ್ವಂತರೀ ಅವತಾರ. ಈ ಅವತಾರದಲ್ಲಿ ಸ್ವಾಮಿಯು ಅಮೃತಹಸ್ತನಾಗಿ ಸಮುದ್ರದಿಂದ ಪ್ರಕಟಗೊಂಡನು. ಅನಂತರ ಹದಿಮೂರನೆಯ ಅವತಾರವಾಗಿ ಮೋಹಿನೀ ರೂಪದಲ್ಲಿ ಕಾಣಿಸಿಕೊಂಡು ದೈತ್ಯರನ್ನು ಮೋಹವಶರನ್ನಾಗಿಮಾಡಿ ದೇವತೆಗಳಿಗೆ ಅಮೃತಪಾನಮಾಡಿಸಿದನು. ಹದಿನಾಲ್ಕನೆಯದು ಭಗವಂತನ ನರಸಿಂಹಾವತಾರ. ನರಸಿಂಹರೂಪದಲ್ಲಿ ಅವತರಿಸಿದ ಸ್ವಾಮಿಯು ಮಹಾ ಬಲಶಾಲಿಯಾದ, ದೈತ್ಯರಾಜನಾದ ಹಿರಣ್ಯಕಶಿಪುವಿನ ಎದೆಯನ್ನು–ಚಾಪೆ ನೇಯುವವನು ಜೊಂಡನ್ನು ಸೀಳುವಂತೆ–ತನ್ನ ಉಗುರುಗಳಿಂದ ಅನಾಯಾಸವಾಗಿ ಸೀಳಿಹಾಕಿದನು. ಹದಿನೈದನೆಯ ಅವತಾರದಲ್ಲಿ ಆತನು ವಾಮನರೂಪವನ್ನು ಧರಿಸಿ ದೈತ್ಯರಾಜನಾದ ಬಲಿಯ ಯಜ್ಞಭೂಮಿಗೆ ದಯಮಾಡಿಸಿದನು. ಮೂರು ಲೋಕಗಳ ರಾಜ್ಯವನ್ನು ತೆಗೆದುಕೊಳ್ಳುವ ಅಪೇಕ್ಷೆಯಿದ್ದರೂ ಕೇವಲ ಮೂರು ಹೆಜ್ಜೆಯಷ್ಟು ಭೂಮಿಯನ್ನು ಮಾತ್ರ ಭಗವಂತನು ಈ ಅವತಾರದಲ್ಲಿ ಆತನಿಂದ ಪ್ರಾರ್ಥಿಸಿದನು. ಹದಿನಾರನೆಯ ಅವತಾರವೇ ಪರಶುರಾಮಾವತಾರ. ರಾಜರು ಬ್ರಾಹ್ಮಣದ್ರೋಹಿಗಳಾಗಿ ಬಿಟ್ಟಿದ್ದನ್ನು ಕಂಡು ಕ್ರುದ್ಧನಾದ ಭಗವಂತನು ಭೂಮಿಯನ್ನು ಇಪ್ಪತ್ತೊಂದು ಬಾರಿ ಪ್ರದಕ್ಷಿಣೆಮಾಡಿ ಅದು ದುಷ್ಟಕ್ಷತ್ರಿಯಶೂನ್ಯವಾಗುವಂತೆ ಮಾಡಿದನು.

ಇದಾದನಂತರ ಹದಿನೇಳನೆಯ ಅವತಾರದಲ್ಲಿ ಆತನು ಪರಾಶರರ ಮೂಲಕ ಸತ್ಯವತೀದೇವಿಯ ಗರ್ಭದಲ್ಲಿ ವೇದವ್ಯಾಸರೂಪದಲ್ಲಿ ಜನಿಸಿದನು. ಜನರ ಜ್ಞಾನ ಮತ್ತು ಧಾರಣಾಶಕ್ತಿಗಳು ಕಡಿಮೆಯಾಗಿಬಿಟ್ಟಿದ್ದನ್ನು ಕಂಡು ವೇದ ವೃಕ್ಷವನ್ನು ನಾನಾಶಾಖೆಗಳ ರೂಪದಲ್ಲಿ ವಿಂಗಡಿಸಿದ ಅವತಾರವಿದು. ಹದಿನೆಂಟನೆಯದೇ ಭಗವಂತನ ಶ್ರೀರಾಮಾವತಾರ. ಇದರಲ್ಲಿ ಭಗವಂತನು ದೇವತೆಗಳ ಕಾರ್ಯವನ್ನು ಸಂಪನ್ನಗೊಳಿಸುವುದಕ್ಕಾಗಿ ರಾಮನ ರೂಪದಲ್ಲಿ ಪ್ರಕಟಗೊಂಡು ಸೇತುಬಂಧನ, ರಾವಣವಧೆಯೇ ಮುಂತಾದ ಮಹಾಪರಾಕ್ರಮದ ಕಾರ್ಯಲೀಲೆಗಳನ್ನು ಮಾಡಿತೋರಿಸಿದನು. ಹತ್ತೊಂಬತ್ತನೆಯ ಮತ್ತು ಇಪ್ಪತ್ತನೆಯ ಅವತಾರಗಳಲ್ಲಿ ಆತನು ಯದುವಂಶದಲ್ಲಿ ಬಲರಾಮ ಮತ್ತು ಶ್ರೀಕೃಷ್ಣ ಎಂಬ ಹೆಸರುಗಳಿಂದ ಪ್ರಕಟಗೊಂಡು ಭೂಮಿಯ ಭಾರವನ್ನು ಇಳಿಸಿದನು. ಇದರನಂತರ ಕಲಿಯುಗವು ಬಂದಾಗ ಆತನು ಮಗಧ ದೇಶದಲ್ಲಿ ದೇವದ್ವೇಷಿಗಳಾದ ದೈತ್ಯರನ್ನು ಮೋಹಗೊಳಿಸುವುದಕ್ಕಾಗಿ ಅಜನನ* ಪುತ್ರರೂಪದಲ್ಲಿ ಬುದ್ಧಾವತಾರವನ್ನು ಮಾಡುವನು.

ಇದು ಕಳೆದ ಬಹಳ ದಿನಗಳನಂತರ ಕಲಿಯುಗದ ಕೊನೆಗಾಲದಲ್ಲಿ (ಕಲಿಯುಗ-ಕೃತಯುಗಗಳ ಸಂಧಿಕಾಲದಲ್ಲಿ ) ರಾಜರೆಲ್ಲರೂ ಸಾಮಾನ್ಯವಾಗಿ ಲೂಟಿಗಾರರಂತೆ ಆಗಿಬಿಡುವರು. ಆಗ ಜಗತ್ತಿನ ರಕ್ಷಕನಾದ ಭಗವಂತನು ಧರ್ಮಸೇತುವಿನ ರಕ್ಷಣೆಗಾಗಿ ವಿಷ್ಣುಯಶಸ್ಸು ಎಂಬ ಬ್ರಾಹ್ಮಣನ ಮನೆಯಲ್ಲಿ ಕಲ್ಕಿಯ ರೂಪದಲ್ಲಿ ಅವತಾರಮಾಡುವನು.** (ಶ್ಲೋಕ 6-25)

ಎಲೈ ಮಹರ್ಷಿಗಳೇ! ಇಷ್ಟು ಮಾತ್ರವೇ ಅವನ ಅವತಾರಗಳೆಂದು ತಿಳಿಯಬೇಡಿರಿ. ವಾಸ್ತವವಾಗಿ ಅವನ ಅವತಾರಗಳಿಗೆ ಲೆಕ್ಕವೇ ಇಲ್ಲ.

---

* ಜಿನಸುತಃ ( ಜಿನಪುತ್ರನಾಗಿ ) ಎಂದು ಇಲ್ಲಿ ಪಾಠಾಂತರವಿದೆ.

** ಇಲ್ಲಿ ಇಪ್ಪತ್ತೆರಡು ಅವತಾರಗಳನ್ನು ಮಾತ್ರ ಲೆಕ್ಕಿಸಿದೆ. ಆದರೆ ಭಗವಂತನ ಅವತಾರಗಳು ಇಪ್ಪತ್ತನಾಲ್ಕು ಎಂದು ಪ್ರಸಿದ್ಧವಾಗಿದೆ. ಹಾಗಾದರೆ ಇನ್ನುಳಿದ ಎರಡು ಅವತಾರಗಳು ಯಾವುವು? ಎಂದರೆ : ಹಂಸ ಮತ್ತು ಹಯಗ್ರೀವಾವತಾರಗಳು. (ಕೆಲವು ವಿದ್ವಾಂಸರ ಅಭಿಪ್ರಾಯದಲ್ಲಿ ಮೇಲ್ಕಂಡ ಇಪ್ಪತ್ತೆರಡು ಅವತಾರಗಳಲ್ಲಿ ರಾಮ-ಕೃಷ್ಣರನ್ನು ಬಿಟ್ಟು ಉಳಿದ ಇಪ್ಪತ್ತು ಅವತಾರಗಳೊಡನೆ ಅವತಾರಮೂಲವಾದ ಶ್ರೀಕೃಷ್ಣಪರಮಾತ್ಮನ ಕೇಶವಾವತಾರ, ಸುತಪಾ ಮತ್ತು ಪೃಶ್ನಿದೇವಿಯರನ್ನು

ಎಂದೂ ಬತ್ತದೇ ಇರುವ ಅಗಾಧವಾದ ಸರೋವರದಿಂದ ಸಾವಿರಾರು ಕಾಲುವೆಗಳು ಹರಿದುಬರುವುದಿಲ್ಲವೇ? ಹಾಗೆಯೇ ಸತ್ತ್ವಗುಣಕ್ಕೆ ನಿಧಿಯಾದ ಶ್ರೀಹರಿಯಿಂದ ಅಸಂಖ್ಯಾವತಾರಗಳು ಉಂಟಾಗುವುವು.

**ಅವತಾರಾ ಹ್ಯಸಂಖ್ಯೇಯಾ ಹರೇಃ ಸತ್ತ್ವನಿಧೇರ್ದ್ವಿಜಾಃ ।**
**ಯಥಾವಿದಾಸಿನಃ ಕುಲ್ಯಾಃ ಸರಸಃ ಸ್ಯುಃ ಸಹಸ್ರಶಃ ॥೨೬॥**

ಋಷಿಗಳು, ಮನುಗಳು, ದೇವತೆಗಳು, ಪ್ರಜಾಪತಿಗಳು, ಮನು ಪುತ್ರರು ಮತ್ತು ಮಹಾಶಕ್ತಿಶಾಲಿಗಳು ಯಾರು-ಯಾರುಂಟೋ–ಇವರೆಲ್ಲರೂ ಕೂಡ ಶ್ರೀಹರಿಯ ಅಂಗಗಳೇ ಆಗಿದ್ದಾರೆ. ಆದರೆ ಇವರಿಗೂ ಶ್ರೀಕೃಷ್ಣನಿಗೂ ವ್ಯತ್ಯಾಸವೇನೆಂದರೆ : ಇವರೆಲ್ಲರೂ ಆತನ ಅಂಶಾವತಾರ-ಕಲಾವತಾರಗಳು. ಶ್ರೀಕೃಷ್ಣನಾದರೋ ಅವತಾರಮಾಡಿದ ಸಾಕ್ಷಾದ್ಭಗವಂತನೇ ಆಗಿದ್ದಾನೆ.*

**ಋಷಯೋ ಮನವೋ ದೇವಾ ಮನುಪುತ್ರಾ ಮಹೌಜಸಃ ।**
**ಕಲಾಃ ಸರ್ವೇ ಹರೇರೇವ ಸಪ್ರಜಾಪತಯಸ್ತಥಾ ॥೨೭॥**

**ಏತೇ ಚಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್ ।**

ಜನರು ದೈತ್ಯರ ಅತ್ಯಾಚಾರದಿಂದ ಪೀಡಿತರಾದಾಗ ಭಗವಂತನು ಯುಗ-ಯುಗದಲ್ಲೂ ಮೇಲ್ಕಂಡ ನಾನಾರೂಪಗಳಿಂದ ಪ್ರಕಟಗೊಂಡು ಅವರಿಗೆ ಸುಖವನ್ನುಂಟುಮಾಡುವನು. ಯಾವ ಮನುಷ್ಯನು ಶ್ರೀಭಗವಂತನ ಈ ರಹಸ್ಯಮಯವಾದ ದಿವ್ಯಾವತಾರಗಳನ್ನು ಏಕಾಗ್ರವಾದಚಿತ್ತದಿಂದ ಭಕ್ತಿಪೂರ್ವಕವಾಗಿ ಪಠಿಸುತ್ತಾನೆಯೋ–ಅವನು ಸಕಲದುಃಖಗಳಿಂದಲೂ ಬಿಡುಗಡೆಹೊಂದುವನು.

---

ಅನುಗ್ರಹಿಸಿದ ಅವತಾರ, ಬಲರಾಮಾವತಾರ ಮತ್ತು ಪರಬ್ರಹ್ಮಾವತಾರ–ಎಂಬ ನಾಲ್ಕು ಅವತಾರಗಳನ್ನು ಸೇರಿಸಿ ಇಪ್ಪತ್ತನಾಲ್ಕು ಅವತಾರಗಳ ಪರಿಗಣನೆ. ಶ್ರೀಕೃಷ್ಣನು ಅವತಾರವೇ ಅಲ್ಲ, ಅವನು ಸಾಕ್ಷಾತ್ ಪರಮಾತ್ಮ; ಪರವಾಸುದೇವ.)

* ಋಷಿಗಳೇ ಮುಂತಾದವರು ಭಗವಂತನ ವಿಭೂತಿಗಳು. ಕೆಲವರು ಪರಮ ಪುರುಷನ ಅಂಶಗಳು. ಇನ್ನು ಕೆಲವರು ಆತನ ಕಲೆಗಳು. ಮತ್ತೆ ಕೆಲವರು ಆತನ ವಿಭೂತಿಗಳು. ಮತ್ಸ್ಯ-ಕೂರ್ಮ–ಮುಂತಾದುವುಗಳೆಲ್ಲವೂ ಆತನ ಅವತಾರಗಳೇ ಆಗಿ ಸರ್ವಜ್ಞತ್ವ-ಸರ್ವಶಕ್ತಿತ್ವ–ಮುಂತಾದ ಈಶ್ವರನ ಅಸಾಧಾರಣ ಗುಣ-ಶಕ್ತಿ

ಪ್ರಾಕೃತರೂಪರಹಿತನಾಗಿ ಜ್ಞಾನಸ್ವರೂಪನೇ ಆಗಿರುವ ಭಗವಂತನ ಈ ಸ್ಥೂಲಜಗದಾಕಾರವಾದ ರೂಪವು ಪ್ರಕೃತಿಯ ತ್ರಿಗುಣಗಳಿಂದ ಆಗಿರುವ ಮಹತ್ತತ್ತ್ವವೇ ಮುಂತಾದುವುಗಳಿಂದ ತನ್ನಲ್ಲೇ ರಚಿತವಾಗಿದೆ. ಆಕಾಶದಲ್ಲಿ ಮೋಡಗಳ ರಾಶಿಗಳೂ, ಗಾಳಿಯಲ್ಲಿ ಧೂಳುಗಳೂ ಇರುವಂತೆ–ಈ ದೃಶ್ಯವಾದ ಆಕಾರಗಳು ಸಾಕ್ಷಿಯಾಗಿರುವ ಪರಮಾತ್ಮನಲ್ಲಿ ಆಧಾರಗೊಂಡಿವೆ. ತಿಳಿವಳಿಕೆಯಿಲ್ಲದ ಜನರು ಇವುಗಳನ್ನು ಆತನ ನಿಜಸ್ವರೂಪವೆಂದು ಆರೋಪಿಸುತ್ತಾರೆ. ಆಕಾಶ ಮತ್ತು ಗಾಳಿಗಳಿಗೆ ಸ್ವತಃ ಆಕಾರವಿಲ್ಲ. ಆದರೆ ಆಕಾಶದಲ್ಲಿ ಮೋಡಗಳೂ, ಗಾಳಿಯಲ್ಲಿ ಧೂಳೂ ಸೇರಿ ಚಲಿಸುವಾಗ ಆಕಾಶಕ್ಕೆ ಮೇಘಾಕಾರವೂ, ಗಾಳಿಗೆ ಧೂಳಿನ ಆಕಾರವೂ ಇರುವಂತೆ ಪಾಮರರಿಗೆ ತೋರುತ್ತದೆ. ಹಾಗೆಯೇ ಸಾಕ್ಷಿಸ್ವರೂಪನಾಗಿರುವ ಪರಮಾತ್ಮನಿಗೆ ಈ ಪ್ರಾಕೃತವಾಗಿರುವ ದೃಶ್ಯಾಕಾರವು ನಿಜವಾಗಿಯೂ ಇಲ್ಲದಿದ್ದರೂ ಇದು ಅವನ ಆಕಾರವೇ ಎಂದು ಅವಿವೇಕಿಗಳು ಆರೋಪಿಸುತ್ತಾರೆ. ವಾಸ್ತವ

---

ಗಳನ್ನು ಹೊಂದಿದ್ದರೂ, ಉಪಯೋಗಕ್ಕೆ ತಕ್ಕಂತೆ ಮಾತ್ರ ಜ್ಞಾನ-ಕ್ರಿಯಾಶಕ್ತಿಗಳನ್ನು ಪ್ರಕಟಪಡಿಸಿಕೊಳ್ಳುತ್ತವೆ. ಸನತ್ಕುಮಾರಾದಿಗಳು, ನಾರದಾದಿಗಳು ಮುಂತಾದ ಅಧಿಕಾರಿಕಮಹಾಪುರುಷರಲ್ಲಿ ಉಪಯೋಗಕ್ಕೆ ತಕ್ಕಂತೆ ಅಂಶಕಲೆಯ ಆವೇಶವಾಗುತ್ತದೆ. ಉದಾಹರಣೆಗೆ : ಸನತ್ಕುಮಾರಾದಿಗಳಲ್ಲಿ ಜ್ಞಾನದ ಆವೇಶ ; ಪೃಥುಮಹಾರಾಜ ಮುಂತಾದವರಲ್ಲಿ ಶಕ್ತಿಯ ಆವೇಶ ಇತ್ಯಾದಿಗಳು. ಶ್ರೀಕೃಷ್ಣನಾದರೋ ಸರ್ವಜ್ಞಾನ-ಸರ್ವಶಕ್ತಿಗಳನ್ನೂ ಪ್ರಕಟಪಡಿಸಿದ್ದರಿಂದ ಸಾಕ್ಷಾನ್ನಾರಾಯಣ ನೆಂದೇ ತಿಳಿಯಬೇಕು. (ಶ್ರೀಧರೀಯ)

**'ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ । ತತ್ತದೇವಾವಗಚ್ಛತ್ವಂ ಮಮ ತೇಜೋಽಂಶಸಮ್ಭವಮ್ ॥'** ಎಂದು ಶ್ರೀಗೀತಾಚಾರ್ಯರು ಅಪ್ಪಣೆ ಕೊಡಿಸಿರುವಂತೆ ಋಷಿಗಳು ಮುಂತಾದವರೆಲ್ಲರೂ ಶ್ರೀಭಗವಂತನ ವಿಭೂತಿಗಳು ; ಅನಿರುದ್ಧಪುರುಷನ ಅಂಶಕಲೆಗಳು ; ಅಂಶಾಂಶಗಳು. ಶ್ರೀಕೃಷ್ಣನಾದರೋ 'ಪೂರ್ಣಾವತಾರ'–ಎಲ್ಲ ವಿಭೂತಿಗಳಿಗೂ ಮೂಲವಾಗಿರುವ ಪರಿಪೂರ್ಣಪರಬ್ರಹ್ಮ-ಷಾಡ್ಗುಣ್ಯಪರಿಪೂರ್ಣವಾದ ತನ್ನ ಸ್ವರೂಪದಿಂದ ಸಾಕ್ಷಾತ್ತಾಗಿ ಅವತರಿಸಿರುವುದರಿಂದ ಅವನು ಪೂರ್ಣಾವತಾರ. ಋಷಿಗಳೇ ಮುಂತಾದ ವಿಭೂತಿಗಳು ಆತನ ಅಂಶಾಂಶಸಂಭೂತರು. ಎಂದರೆ : ಆಯಾ ಜೀವಿಗಳಲ್ಲಿ ಅಂತರಾತ್ಮನಾಗಿರುವ, ಷಾಡ್ಗುಣ್ಯಪರಿಪೂರ್ಣನಾಗಿರುವ ಭಗವಂತನೇ ಯಾವುದೋ ಕೆಲವು ಐಶ್ವರ್ಯ,

ವಾಗಿ ಆತನು ಕೇವಲ ಜ್ಞಾನಸ್ವರೂಪನು. ಈ ಸ್ಥೂಲವಾದ ದೃಶ್ಯ ಪ್ರಪಂಚಕ್ಕಿಂತಲೂ ಬೇರೆಯಾಗಿ ಸೂಕ್ಷ್ಮವೂ-ಅವ್ಯಕ್ತವೂ ಆದ ರೂಪ ವೊಂದುಂಟು. ಸ್ಥೂಲಕ್ಕೆ ಇರುವಂತೆ ಆಕಾರಗಳಿಲ್ಲದ್ದೂ, ಕಂಡು ಕೇಳರಿ ಯದ ವಸ್ತುವೂ ಆಗಿರುವುದರಿಂದ ಅದನ್ನು ಅವ್ಯಕ್ತವೆಂದು ಕರೆಯುತ್ತಾರೆ. ಅದು ಗುಣ-ವಿಭಾಗರಹಿತವಾದರೂ ಗುಣಯೋಗವನ್ನು ಹೊಂದಿದಾಗ–ಮತ್ತೆ-ಮತ್ತೆ ಜನ್ಮವನ್ನು ಹೊಂದುವುದರಿಂದ ಆ ಚೇತನವನ್ನು 'ಜೀವ' ಎಂದು ಕರೆಯುತ್ತಾರೆ. ಅವಿದ್ಯೆಯಿಂದ ತೋರುತ್ತಿರುವ ಈ ಸ್ಥೂಲ-ಸೂಕ್ಷ್ಮ ರೂಪಗಳೆರಡನ್ನೂ ಆತ್ಮಸ್ವರೂಪಜ್ಞಾನದಿಂದ ಕಳೆದುಕೊಂಡಾಗ ತನ್ನೊಳಗೇ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ. ಈ ದೈವೀಮಾಯೆಯು ನಿವೃತ್ತವಾದರೆ ಆಗ ಬುದ್ಧಿಯು ಪ್ರಸನ್ನವಾಗುತ್ತದೆ. ಇಂತಹ ಸ್ಥಿತಿಯನ್ನು ಪಡೆದವನನ್ನು 'ಕೃತಕೃತ್ಯ', 'ಸಂಪನ್ನ'–ಎಂದು ಜ್ಞಾನಿಗಳು ತಿಳಿಯುತ್ತಾರೆ. ಆಗ ಆತ್ಮನು ತನ್ನ ಸ್ವರೂಪಮಹಿಮೆಯಲ್ಲಿ ಪ್ರತಿಷ್ಠಿತನಾಗಿ ಬೆಳಗುತ್ತಾನೆ. ವಾಸ್ತವವಾಗಿ ಜನ್ಮರಹಿತನೂ–ಕರ್ಮರಹಿತನೂ ಆಗಿರುವ ಹೃದಯಸ್ವಾಮಿಯಾದ ಶ್ರೀಭಗವಂತನ ವೇದಪ್ರತಿಪಾದ್ಯರಹಸ್ಯವಾದ, ಅಪ್ರಾಕೃತವಾದ, ಜನ್ಮ-ಕರ್ಮಗಳನ್ನು ತತ್ತ್ವಜ್ಞಾನಿಗಳು ಹೀಗೆ ವರ್ಣಿಸುತ್ತಾರೆ.*

(ಶ್ಲೋಕ 30-35)

---

ವೀರ್ಯ–ಮುಂತಾದ ಗುಣಲೇಶಗಳನ್ನು ಆಯಾ ಜೀವಿಗಳ ದ್ವಾರಾ ಪ್ರಕಟಗೊಳಿಸು ತ್ತಾನೆಂದು ಅರ್ಥ. ಏಕೆಂದರೆ : ಪರಮಾತ್ಮನು ಅಖಂಡ ; ತನ್ನ ಸ್ವರೂಪದ ಏಕದೇಶದಿಂದ ಅವನು ಆವಿರ್ಭವಿಸುವುದು ಸಾಧ್ಯವಿಲ್ಲ. (ವೀರರಾಘವೀಯ)

ಇಲ್ಲಿ ಗಮನಿಸಬೇಕಾದ ಒಂದು ಮುಖ್ಯವಿಷಯ : "ಕೆಲವರು ಇಲ್ಲಿನ ಪೂರ್ಣ ಶ್ಲೋಕಗಳನ್ನು ಪರಿಶೀಲಿಸದೇ 'ಏತೇ ಚಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಂ' ಎಂಬಿಷ್ಟು ಭಾಗವನ್ನು ಮಾತ್ರ ತೆಗೆದುಕೊಂಡು ಶ್ರೀಕೃಷ್ಣನು ಮಾತ್ರ ಪೂರ್ಣಾವತಾರ ; ಶ್ರೀರಾಮ-ಶ್ರೀನರಸಿಂಹ ಮುಂತಾದವರು ಅಂಶಕಲೆಗಳು"–ಎಂದು ವ್ಯಾಖ್ಯಾನಿಸುತ್ತಾರೆ. ಶ್ರೀರಾಮ-ಶ್ರೀನರಸಿಂಹಾದಿಗಳೂ ಶ್ರೀಕೃಷ್ಣನಂತೆಯೇ ಪೂರ್ಣಾವತಾರಗಳೇ. ಅಂಶಕಲೆ ಗಳೆಂದು ಕರೆದಿರುವುದು ಋಷಿಗಳು, ಮನುಗಳು–ಮುಂತಾದವರನ್ನು. ಶ್ರೀಕೃಷ್ಣನು ಸಾಕ್ಷಾದ್ಭಗವಂತ. ಋಷಿಗಳೇ ಮುಂತಾದ ವಿಭೂತಿಗಳು ಆತನ ಅಂಶಕಲೆಗಳು–ಎಂದಷ್ಟೇ ತಾತ್ಪರ್ಯ.

* ಸ್ಥೂಲ, ಸೂಕ್ಷ್ಮ–ಎಂದರೆ : ಕಾರ್ಯ-ಕಾರಣರೂಪವಾದ ಈ ಸದಸತ್ತುಗಳು

**ಸ ವಾ ಇದಂ ವಿಶ್ವಮಮೋಘಲೀಲಃ**
**ಸೃಜತ್ಯವತ್ಯತ್ತಿ ನ ಸಜ್ಜತೇಽಸ್ಮಿನ್ ।**
**ಭೂತೇಷು ಚಾನ್ತರ್ಹಿತ ಆತ್ಮತನ್ತ್ರಃ**
**ಷಾಡ್ವರ್ಗಿಕಂ ಜಿಘ್ರತಿ ಷಡ್ಗುಣೇಶಃ ॥೩೬॥**

ಜ್ಞಾನ-ಬಲ-ಐಶ್ವರ್ಯ-ವೀರ್ಯ-ಶಕ್ತಿ-ತೇಜಸ್ಸುಗಳೆಂಬ ಈ ಆರು ಅಸಾಧಾರಣಗುಣಗಳಿಂದ ಸಂಪನ್ನನಾಗಿ ಅಮೋಘವಾದ ಲೀಲೆಗಳನ್ನು ನಡೆಸುವ ಆ ಭಗವಂತನೇ ಲೀಲಾಜಾಲವಾಗಿ ಈ ವಿಶ್ವವೆಲ್ಲವನ್ನೂ ಸೃಷ್ಟಿಸುತ್ತಾನೆ ; ರಕ್ಷಿಸುತ್ತಾನೆ ಮತ್ತು ಸಂಹರಿಸುತ್ತಾನೆ. ಆದರೂ ಇದರಲ್ಲಿ ಅಂಟಿಕೊಳ್ಳುವುದಿಲ್ಲ. ಅವನು ಸ್ವತಂತ್ರನು. ಪ್ರಾಣಿಗಳ ಹೃದಯದಲ್ಲಿ ಅಡಗಿದ್ದು ಆರು ಇಂದ್ರಿಯಗಳ ವಿಷಯಗಳನ್ನು ಅವನೇ ಅನುಭವಿಸುತ್ತಾನೆ.*

---

ದೃಶ್ಯಜಗತ್ತು ಮತ್ತು ಜೀವ-ಭಾವಗಳೆರಡೂ ಬ್ರಹ್ಮದಲ್ಲಿ ಅವಿದ್ಯೆಯಿಂದ ಕಲ್ಪಿತವಾಗಿವೆ. ಶ್ರವಣ-ಮನನಾದಿ ಭಕ್ತಿಯಿಂದ ಸ್ವರೂಪಜ್ಞಾನವುಂಟಾದಾಗ ಕಳೆದುಹೋಗುತ್ತವೆ. ಆಗ ಜೀವನು ಜ್ಞಾನೈಕಸ್ವರೂಪನಾದ ಬ್ರಹ್ಮನೇ ಆಗಿಬಿಡುತ್ತಾನೆ. ಸ್ಥೂಲ ಶರೀರ ಮತ್ತು ಜೀವೋಪಾಧಿಯಾದ ಲಿಂಗಶರೀರಗಳೆರಡೂ ಶುದ್ಧಬ್ರಹ್ಮದಲ್ಲಿ ಆರೋಪಿತವಾಗಿವೆ. ಭಕ್ತಿಯಿಂದ ಸ್ವರೂಪಜ್ಞಾನವನ್ನು ಪಡೆದಾಗ ಈ ಆರೋಪಿತವಾದದ್ದು ತೊಲಗಿ ಪಾರಮಾರ್ಥಿಕವಾದ ಬ್ರಹ್ಮಸ್ವರೂಪದ ಸಾಕ್ಷಾತ್ಕಾರವಾಗುತ್ತದೆ. (ಶ್ರೀಧರೀಯ)

'ಸತ್-ಅಸತ್' ಶಬ್ದಗಳು ಕಾರ್ಯ-ಕಾರಣಗಳನ್ನು ಹೇಳುತ್ತವೆ. ಅಚಿತ್ತಿನಲ್ಲಿರುವ ಈ ಸದಸದ್ರೂಪಗಳು ಅಂದರೆ : ಉತ್ಪತ್ತಿ-ವಿನಾಶಗಳು ಆತ್ಮನಲ್ಲಿ ಅಜ್ಞಾನದಿಂದ ಆರೋಪಿತವಾಗಿವೆ. ತನಗೆ ಆತ್ಮಭೂತನಾಗಿರುವ ಪರಮಾತ್ಮವಿಷಯಕವಾದ ಸುಜ್ಞಾನದಿಂದ ಅವು ನಿವೃತ್ತವಾಗುತ್ತವೆ. (ಈ ಪರಮಾತ್ಮಜ್ಞಾನವೇ ಪುನರ್ಜನ್ಮ ನಿವೃತ್ತಿಗೆ ಕಾರಣವಾದುದು. ) ಈ ಪ್ರಕೃತಿವಿಯುಕ್ತವಾದ ಪರಿಶುದ್ಧಜೀವಾತ್ಮಸ್ವರೂಪದ ಜ್ಞಾನವು ಬ್ರಹ್ಮ ( ಮುಕ್ತಾತ್ಮ ) ಸ್ವರೂಪವನ್ನು ಹೊಂದಿಸುತ್ತದೆ. ಬ್ರಹ್ಮ–ಎಂದರೆ : ಇಲ್ಲಿ ಮುಕ್ತಾತ್ಮ ಎಂದರ್ಥ. 'ಬ್ರಹ್ಮಣೋ ಹಿ ಪ್ರತಿಷ್ಠಾಹಂ'–ಎಂಬ ಗೀತಾವಚನದಂತೆ. (ವೀರರಾಘವೀಯ)

* **ಷಡ್ಗುಣೇಶಃ** = ಜ್ಞಾನ , ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸು–ಎಂಬ ಈ ಆರು ಗುಣಗಳಿಗೆ ಅಧಿಪತಿಯಾದವನು. 'ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು – ಇವುಗಳಿಗೆ ಅಧಿಪತಿಯಾದವನು'–ಎಂದು ಶ್ರೀಧರೀಯರ ಭಾಷ್ಯ. ಷಾಡ್ವರ್ಗಿಕಂ = ಆರು ಇಂದ್ರಿಯಗಳ ವಿಷಯಗಳಾದ ಶಬ್ದ-ಸ್ಪರ್ಶಾದಿಗಳನ್ನು.

**ನ ಚಾಸ್ಯ ಕಶ್ಚಿನ್ನಿಪುಣೇನ ಧಾತು-**
**ರವೈತಿ ಜನ್ತುಃ ಕುಮನೀಷ ಊತೀಃ ।**
**ನಾಮಾನಿ ರೂಪಾಣಿ ಮನೋವಚೋಭಿಃ**
**ಸನ್ತನ್ವತೋ ನಟಚರ್ಯಾಮಿವಾಜ್ಞಃ ॥೩೭॥**

ಐಂದ್ರಜಾಲಿಕನು ಅಥವಾ ನಟನು ತನ್ನ ಸಂಕಲ್ಪದಿಂದಲೂ, ಮಾತುಗಳಿಂದಲೂ ಮಾಡುವ ಅದ್ಭುತವಾದ ಚಮತ್ಕಾರಗಳನ್ನು ಮೂರ್ಖ ಮನುಷ್ಯನು ಅರಿಯಲಾರನಷ್ಟೇ! ಹಾಗೆಯೇ ದುರ್ಬುದ್ಧಿಯುಳ್ಳ ಜೀವರು, ಭಗವಂತನು ತನ್ನ ಸಂಕಲ್ಪದಿಂದಲೂ, ವೇದವಚನದಿಂದಲೂ ಪ್ರಕಟಪಡಿಸುವ ನಾನಾ ನಾಮಗಳನ್ನೂ, ರೂಪಗಳನ್ನೂ, ಲೀಲೆಗಳನ್ನೂ ತಮ್ಮ ಮನಸ್ಸು-ಮಾತುಗಳಿಂದಲೂ, ಬುದ್ಧಿಸೂಕ್ಷ್ಮತೆಯಿಂದಲೂ ತಿಳಿಯಲಾರರು.

**ಸ ವೇದ ಧಾತುಃ ಪದವೀಂ ಪರಸ್ಯ**
**ದುರನ್ತವೀರ್ಯಸ್ಯ ರಥಾಙ್ಗಪಾಣೇಃ ।**
**ಯೋಽಮಾಯಯಾ ಸನ್ತತಯಾನುವೃತ್ತ್ಯಾ**
**ಭಜೇತ ತತ್ಪಾದಸರೋಜಗನ್ಧಮ್ ॥೩೮॥**

ಹಾಗಾದರೆ ಆ ಭಗವದ್ರಹಸ್ಯಗಳನ್ನು ಯಾರು ತಿಳಿಯಲು ಸಾಧ್ಯ? ಹೇಗೆ ತಿಳಿಯಲು ಸಾಧ್ಯ?–ಎಂದರೆ : ನಿಷ್ಕಪಟಭಾವದಿಂದ ನಿತ್ಯನಿರಂತರವಾಗಿ ಅವನ ಅಡಿದಾವರೆಗಳ ಗಂಧವನ್ನು ಯಾವನು ಸೇವಿಸುತ್ತಾನೋ–ಆ ಭಕ್ತಶ್ರೇಷ್ಠನು ತಾನೇ ಆ ಎಲ್ಲೆಯಿಲ್ಲದ ವೀರ್ಯದಿಂದ ಸಂಪನ್ನವಾಗಿರುವ ಚಕ್ರಪಾಣಿಯ ರಹಸ್ಯವನ್ನೂ, ಲೀಲಾರಹಸ್ಯವನ್ನೂ ಅರಿಯಬಲ್ಲನು!

ಆದ್ದರಿಂದ ಈ ಲೋಕದಲ್ಲಿ ಪೂಜ್ಯರಾದ ನೀವೇ ಧನ್ಯರು ; ಅತಿಧನ್ಯರು, ಮಹರ್ಷಿಗಳೇ! ಏಕೆಂದರೆ ನೀವು ಅಖಿಲಲೋಕಗಳಿಗೂ ಒಡೆಯ

---

ಶ್ರೀಭಗವಂತನು ಆ ಶಬ್ದಾದಿವಿಷಯಗಳನ್ನು ಮೂಸಿನೋಡುತ್ತಾನೆ. ದೂರದಿಂದಲೇ ಗಂಧವನ್ನು ಹೇಗೋ ಹಾಗೆ ತೆಗೆದುಕೊಳ್ಳುತ್ತಾನೆಯೇ ಹೊರತು ಅವುಗಳಿಗೆ ಅಂಟಿಕೊಳ್ಳುವುದಿಲ್ಲ. (ಶ್ರೀಧರಭಾಷ್ಯ) ಭೂತೇಷು = 'ಪ್ರಾಣಿಗಳಲ್ಲಿ', 'ಪಂಚಭೂತಗಳಲ್ಲಿ'–ಎಂದೂ ಅರ್ಥಮಾಡಬಹುದು. ಶ್ರೀಭಗವಂತನು ಎಲ್ಲ ಪ್ರಾಣಿಗಳ ಅಂತಃಕರಣದಲ್ಲಿ ಅಡಗಿದ್ದಾನೆ ಅಥವಾ ಪಂಚಭೂತಗಳಲ್ಲಿ ಮರೆಯಾಗಿದ್ದಾನೆ.

ನಾದ ಆ ಪರವಾಸುದೇವನಲ್ಲೇ ಸರ್ವಪ್ರಕಾರಗಳಿಂದಲೂ ಆತ್ಮಭಾವ ಸಮರ್ಪಣೆಮಾಡಿದ್ದೀರಿ. ಹೀಗೆ ಮಾಡುವವರಿಗೆ ಈ ಭಯಂಕರವಾದ ಸಂಸಾರದಲ್ಲಿ ಮರುಹುಟ್ಟು ಇರುವುದಿಲ್ಲ.

ಪುಣ್ಯಶ್ಲೋಕನಾದ ಪರಮಾತ್ಮನ ಚರಿತ್ರೆಯಾಗಿ ಪರಬ್ರಹ್ಮಭಾವ ಪರಿಪೂರ್ಣವಾಗಿ, ವೇದಗಳಿಗೆ ಎಣೆಯಾಗಿರುವ ಈ ಭಾಗವತವೆಂಬ ಪುರಾಣವನ್ನು ರಚಿಸಿದವರು ಭಗವಾನ್ ವೇದವ್ಯಾಸಮುನೀಂದ್ರರು. ಅವರು ಅತ್ಯಂತ ಮಹತ್ತ್ವಪೂರ್ಣವೂ, ಮಂಗಳಕರವೂ ಆಗಿರುವ ಈ ಧನ್ಯವಾದ ಗ್ರಂಥರತ್ನವನ್ನು ಲೋಕದ ಪರಮಕಲ್ಯಾಣಕ್ಕಾಗಿ ಆತ್ಮಜ್ಞಾನಿಗಳಲ್ಲಿ ಶ್ರೇಷ್ಠ ನಾದ, ತಮ್ಮ ಸುಪುತ್ರನಾದ ಶುಕಮಹರ್ಷಿಗೆ ಬೋಧಿಸಿದರು. ಆ ಮಹಾತ್ಮನಾದರೋ ಸರ್ವವೇದಗಳ ಮತ್ತು ಇತಿಹಾಸಗಳ ಸಾರರೂಪವಾದ ಭಾಗಗಳಿಂದ ರಚಿತವಾಗಿರುವ ಇದನ್ನು ಗಂಗಾತೀರದಲ್ಲಿ ಪ್ರಾಯೋಪವೇಶಮಾಡಿ ಕುಳಿತು ಮಹರ್ಷಿಗಳಿಂದ ಸುತ್ತುವರಿಯಲ್ಪಟ್ಟಿದ್ದ ಮಹಾರಾಜ ಪರೀಕ್ಷಿತನಿಗೆ ಶ್ರವಣಮಾಡಿಸಿದನು. ಶ್ರೀಕೃಷ್ಣಪರಮಾತ್ಮನು ಧರ್ಮ-ಜ್ಞಾನ-ವೈರಾಗ್ಯ–ಮುಂತಾದುವುಗಳೊಂದಿಗೆ ತನ್ನ ನಿಜಧಾಮಕ್ಕೆ ತೆರಳಿದ ಬಳಿಕ ಕಲಿಯುಗದಲ್ಲಿ ದೃಷ್ಟಿಯನ್ನು ಕಳೆದುಕೊಂಡ ಜನರಿಗಾಗಿ ಈ ಪುರಾಣವೆಂಬ ಸೂರ್ಯನು ಈಗ ಉದಯಿಸಿದ್ದಾನೆ.

ಎಲೈ ವಿಪ್ರರೇ! ಅಲ್ಲೇ ಕುಳಿತಿದ್ದ ನಾನೂ ಕೂಡ–ಅಲ್ಲಿ ಅದನ್ನು ಹೇಳುತ್ತಿದ್ದ ಪರಮತೇಜೋಮೂರ್ತಿಯಾದ ಆ ಶುಕಬ್ರಹ್ಮರ್ಷಿಯ ಅನುಗ್ರಹಬಲದಿಂದ–ಮನದಟ್ಟುಮಾಡಿಕೊಂಡೆನು. ನಾನು ಅದನ್ನು ಅಲ್ಲಿ ಹೇಗೆ ಅಧ್ಯಯನಮಾಡಿದ್ದೆನೋ ಹಾಗೆಯೇ ನಿಮಗೆ ಯಥಾಮತಿಯಾಗಿ ಹೇಳುವೆನು ; ಕೇಳಿರಿ."

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೩ನೆಯ ಅಧ್ಯಾಯವು ಮುಗಿಯಿತು.

---

## ವೇದವ್ಯಾಸರ ವಿಷಾದ: ಅವರ ಬಳಿಗೆ ನಾರದರ ಆಗಮನ

**ಇತಿ ಬ್ರುವಾಣಂ ಸಂಸ್ತೂಯ ಮುನೀನಾಂ ದೀರ್ಘಸತ್ರಿಣಾಮ್ ।**
**ವೃದ್ಧಃ ಕುಲಪತಿಃ ಸೂತಂ ಬಹ್ವೃಚಃ ಶೌನಕೋಽಬ್ರವೀತ್ ॥೧॥**

ವ್ಯಾಸರು ಹೇಳುತ್ತಾರೆ :*

ಆ ದೀರ್ಘಕಾಲದ ಸತ್ರಯಾಗದಲ್ಲಿ ನೆರೆದಿದ್ದ ಮುನಿಗಳಲ್ಲಿ ಜ್ಞಾನದಲ್ಲೂ–ವಯಸ್ಸಿನಲ್ಲೂ ವೃದ್ಧರಾಗಿದ್ದ ಋಗ್ವೇದಿ-ಕುಲಪತಿ** ಶೌನಕರು ಅಲ್ಲಿ ಪ್ರವಚನಮಾಡುತ್ತಿದ್ದ ಸೂತಪುರಾಣಿಕರನ್ನು ಅಭಿನಂದಿಸಿ ಅವರನ್ನು ಹೀಗೆ ಪ್ರಾರ್ಥನೆಮಾಡಿದರು :

ಸೂತಪುರಾಣಿಕರನ್ನು ಕುರಿತು ಶೌನಕಾದಿಮಹರ್ಷಿಗಳ ಪ್ರಶ್ನೆ :

"ಓ ಮಹಾಭಾಗ್ಯಶಾಲಿಯೇ! ಪ್ರವಚನಕಲಾಪಂಡಿತನೇ! ಸೂತಪುರಾಣಿಕನೇ! ಭಗವಾನ್ ಶುಕಮಹರ್ಷಿಯು ಯಾವ ಪುಣ್ಯವಾದ ಶ್ರೀಮದ್ಭಾಗವತಕಥೆಯನ್ನು ಹೇಳಿದನೋ ಅದನ್ನೇ ನಮಗೂ ಹೇಳು. ಈ ಕಥಾಪ್ರವಚನ ನಡೆದದ್ದು ಯಾವ ಯುಗದಲ್ಲಿ? ಯಾವ ಜಾಗದಲ್ಲಿ?

---

* ಇಡೀ ಭಾಗವತವೇ ವ್ಯಾಸರಿಂದ ರಚನೆಯಾಗಿರುವಾಗ ಕೆಲವು ಕಡೆ ಮಾತ್ರ 'ವ್ಯಾಸ ಉವಾಚ' ಎಂಬ ವಾಕ್ಯವನ್ನು ಏಕೆ ಹೇಳಿದೆ? ಎಂದರೆ : ಇದು ಪರೀಕ್ಷಿದ್ರಾಜ-ಶುಕ ಮತ್ತು ಶೌನಕ-ಸೂತಪುರಾಣಿಕರ ಪ್ರಶ್ನೋತ್ತರರೂಪದಲ್ಲಿ ರಚಿತವಾಗಿರುವ ಪ್ರಬಂಧ. ಅದಕ್ಕಾಗಿ 'ರಾಜನು ಹೇಳಿದ', 'ಶುಕರು ಹೇಳಿದರು', ಶೌನಕರು ಹೇಳಿದರು', 'ಸೂತಪುರಾಣಿಕರು ಉತ್ತರಿಸಿದರು'–ಎಂದು ಮಧ್ಯೇ-ಮಧ್ಯೇ ಬಂದಿರುವುದು ಉಚಿತವಾಗಿದೆ. ಆದರೆ ಎಲ್ಲಕ್ಕೂ ಮೊದಲು ಈ ಕಥೆಯನ್ನು ಹೇಳಿದವರು ವ್ಯಾಸರೆಂದು ಚೆನ್ನಾಗಿ ಜ್ಞಾಪಿಸಲು 'ವ್ಯಾಸರು ಹೇಳಿದರು' ಎಂಬ ವಾಕ್ಯವನ್ನು ಮಧ್ಯೇ-ಮಧ್ಯೇ ಸೇರಿಸಿದೆ. ಇಂತಹ ವಾಕ್ಯಗಳನ್ನು ಹೇಳದೇ ಇರುವ ಜಾಗಗಳಲ್ಲೂ ಅವುಗಳನ್ನು ಆವಶ್ಯಕವಾದ ಜಾಗಗಳಲ್ಲಿ ನಾವು ಊಹಿಸಿಕೊಳ್ಳಬೇಕು. ಇಲ್ಲಿ ಬೇರೆ ಯಾವ ಚೋದ್ಯಕ್ಕೂ ಅವಕಾಶವಿಲ್ಲ. (ವೀರರಾಘವೀಯ)

** **ಕುಲಪತಿಃ** = ಮುನಿಗಳ ಕುಲಕ್ಕೆ ಅಧಿಪತಿಯಾದ ಮಹಾಮುನಿ ಅಥವಾ ಹತ್ತು ಸಾವಿರ ಮುನಿಗಳಿಗೆ ಅನ್ನ-ವಸ್ತ್ರಾದಿಗಳನ್ನು ಕೊಟ್ಟು ವಿದ್ಯಾಪ್ರದಾನವನ್ನೂ ಮಾಡುವ ವ್ಯವಸ್ಥಾಪಕರಾದ ಬ್ರಹ್ಮರ್ಷಿಶ್ರೇಷ್ಠರು. '**ಮುನೀನಾಂ ದಶಸಾಹಸ್ರಂ ಯೋಽನ್ನ-ವಸ್ತ್ರಾದಿದಾನತಃ । ಅಧ್ಯಾಪಯತಿ ವಿಪ್ರರ್ಷಿರಸೌ ಕುಲಪತಿಃ ಸ್ಮೃತಃ ॥**'

ಏತಕ್ಕಾಗಿ ಈ ಪ್ರವಚನ ನಡೆಯಿತು? ಯಾರ ಪ್ರೇರಣೆಯಂತೆ ಮುನಿಶ್ರೇಷ್ಠರಾದ ಕೃಷ್ಣದ್ವೈಪಾಯನರು ಈ ಪುರಾಣಸಂಹಿತೆಯನ್ನು ರಚಿಸಿದರು?

**ತಸ್ಯ ಪುತ್ರೋ ಮಹಾಯೋಗೀ ಸಮದೃಙ್ ನಿರ್ವಿಕಲ್ಪಕಃ ।**
**ಏಕಾನ್ತಮತಿರುನ್ನಿದ್ರೋ ಗೂಢೋ ಮೂಢ ಇವೇಯತೇ ॥೪॥***

ಅವರ ಸುಪುತ್ರನಾದ ಶುಕಮಹರ್ಷಿಯಾದರೋ ಮಹಾಯೋಗಿ : ಸಮದೃಷ್ಟಿಯುಳ್ಳವನು ; ಬುದ್ಧಿವಿಕಲ್ಪವಿಲ್ಲದವನು ; ಭೇದಭಾವರಹಿತನು ; ಅಜ್ಞಾನನಿದ್ರೆಯಿಂದ ಎಚ್ಚೆತ್ತವನು ; ತನ್ನ ಮಹಿಮೆಯನ್ನು ಪ್ರಕಟಪಡಿಸಿಕೊಳ್ಳದೇ ಮೂಢನಂತೆ ಕಾಣಿಸಿಕೊಳ್ಳುತ್ತಿದ್ದವನು ; ಪ್ರಾಕೃತವಾದ ಸ್ತ್ರೀ-ಪುರುಷ ಭೇದವನ್ನೇ ಕಾಣದಿದ್ದ ಅಧ್ಯಾತ್ಮವಿವೇಕಿ.

**ದೃಷ್ಟ್ವಾನುಯಾನ್ತಮೃಷಿಮಾತ್ಮಜಮಪ್ಯನಗ್ನಂ**
**ದೇವ್ಯೋ ಹ್ರಿಯಾ ಪರಿದಧುರ್ನ ಸುತಸ್ಯ ಚಿತ್ರಮ್ ।**
**ತದ್ವೀಕ್ಷ್ಯ ಪೃಚ್ಛತಿ ಮುನೌ ಜಗದುಸ್ತವಾಸ್ತಿ**
**ಸ್ತ್ರೀಪುಮ್ಭಿದಾ ನ ತು ಸುತಸ್ಯ ವಿವಿಕ್ತದೃಷ್ಟೇಃ ॥೫॥**

ಆತನು ಪರಿವ್ರಾಜಕನಾಗಿ ಮನೆಯಿಂದ ಹೊರಟುಬಿಟ್ಟಾಗ ತಂದೆ ವೇದವ್ಯಾಸಮಹರ್ಷಿಗಳೂ ಅಗಲಿರಲಾರದೇ ಆತನನ್ನು ಹಿಂಬಾಲಿಸಿದರು. ಆಗ ಮಾರ್ಗದಲ್ಲಿ ದೇವತಾಸ್ತ್ರೀಯರು ಸ್ನಾನಮಾಡುತ್ತಿದ್ದರು. ಆಗ ಒಂದು ವಿಚಿತ್ರ ಸಂಗತಿ ನಡೆಯಿತು. ತರುಣನಾದ ಶುಕಮಹರ್ಷಿಯು ದಿಗಂಬರನಾಗಿ ಹೋಗುತ್ತಿದ್ದನು. ಆ ಸ್ತ್ರೀಯರು ಬಟ್ಟೆಯನ್ನುಟ್ಟುಕೊಳ್ಳಲಿಲ್ಲ. ಆದರೆ ವಸ್ತ್ರ ಧರಿಸಿದ್ದ ವೃದ್ಧರಾದ ವ್ಯಾಸರನ್ನು ನೋಡಿದೊಡನೆಯೇ ಅವರು ಲಜ್ಜೆಯಿಂದ ವಸ್ತ್ರಗಳನ್ನುಟ್ಟುಕೊಂಡರು. 'ಏಕೆ ನಿಮ್ಮ ಈ ವಿಚಿತ್ರ

---

* **ಸಮದೃಕ್** = ಸಮವಾಗಿರುವ ಬ್ರಹ್ಮವನ್ನು ಎಲ್ಲೆಲ್ಲಿಯೂ ನೋಡುವವನು. (ಶ್ರೀಧರೀಯ) 'ನಿರ್ದೋಷಂ ಹಿ ಸಮಂ ಬ್ರಹ್ಮ' (ಶ್ರೀಗೀತಾ) ಸಾಮ್ಯಗಳನ್ನು ನೋಡುವವನು. ದೇವ-ಮನುಷ್ಯಾದಿಶರೀರಗಳೆಲ್ಲವೂ ಪ್ರಕೃತಿಪರಿಣಾಮಗಳಾಗಿರುವುದರಿಂದ ಸಮ. ಎಲ್ಲ ಜೀವಿಗಳೂ ಜ್ಞಾನಾಕಾರವಾಗಿರುವುದರಿಂದ ಸಮ ಮತ್ತು ಪರಮಾತ್ಮನು ಎಲ್ಲದರಲ್ಲೂ ಅನುಸ್ಯೂತನಾಗಿರುವುದರಿಂದಲೂ, ಸತ್ಯ-ಜ್ಞಾನಾದಿಕಲಾ ಪರಿಪೂರ್ಣನಾಗಿರುವುದರಿಂದಲೂ ಸಮ. ಇಂತಹ ಸಮತ್ವವನ್ನು ಶ್ರೀಗೀತೆಯಲ್ಲಿ 'ವಿದ್ಯಾವಿನಯಸಂಪನ್ನೇ.... ಪಂಡಿತಾಃ ಸಮದರ್ಶಿನಃ' ಎಂಬಲ್ಲಿ ಹೇಳಿದೆ. (ವೀರರಾಘವೀಯ) ಸರ್ವದೇಶ- ಸರ್ವಕಾಲ- ಸರ್ವವಸ್ತುಗಳಲ್ಲಿಯೂ ಜ್ಞಾನಾದಿಸರ್ವಗುಣ

ವ್ಯವಹಾರ?'–ಎಂದು ವ್ಯಾಸರು ಅವರನ್ನು ಪ್ರಶ್ನಿಸಿದಾಗ–ಅವರು 'ಮಹಾತ್ಮರೇ! ತಮಗೆ ಸ್ತ್ರೀ-ಪುರುಷಭೇದ ತೋರುತ್ತಿದೆ. ತಮ್ಮ ಪುತ್ರನಾದರೋ ಆ ಭೇದವನ್ನೇ ಕಾಣದೇ ಇರುವ ವಿವೇಕಿ' ಎಂದು ಹೇಳಿದರಲ್ಲವೇ?

ಇಂತಹ ಆತ್ಮೈಕದೃಷ್ಟಿಯುಳ್ಳ ಮಹಾತ್ಮನು ಹುಚ್ಚನಂತೆಯೂ, ಮೂಗನಂತೆಯೂ, ಜಡನಂತೆಯೂ ಕುರುಜಾಂಗಲದೇಶವನ್ನು ಸೇರಿ ಹಸ್ತಿನಾವತಿಯಲ್ಲಿ ಓಡಾಡುತ್ತಿದ್ದಾಗ ಅಲ್ಲಿನ ಪುರವಾಸಿಗಳಿಗೆ ಈತನು ಪತ್ತೆಯಾದದ್ದಾದರೂ ಹೇಗೆ? ಪಾಂಡವನಂದನನಾದ ರಾಜರ್ಷಿ ಪರೀಕ್ಷಿತನಿಗೂ ಈ ಮೌನಿಗೂ ಸಂಭಾಷಣೆ ಹೇಗೆ ಉಂಟಾಯಿತು? ಆ ಸಂವಾದದಲ್ಲಿ ಶ್ರುತಿಸಮಾನವಾದ ಈ ಭಾಗವತಸಂಹಿತೆ ಹೇಗೆ ಸೇರಿತು? ಹೇಳು ಮಹಾತ್ಮ! ಆ ಮಹಾಪುರುಷನು ಭಿಕ್ಷೆಯ ನೆಪದಲ್ಲಿ ಗೃಹಸ್ಥರ ಮನೆಗಳನ್ನು ಪುಣ್ಯತೀರ್ಥಗಳಂತೆ ಪವಿತ್ರಗೊಳಿಸುವುದಕ್ಕಾಗಿ ಅಲ್ಲಿಗೆ ಕೆಲವೊಮ್ಮೆ ಹೋದರೂ ಅಲ್ಲಿ ಹಸುವು ಹಾಲು ಕರೆಯುವಷ್ಟು ಕಾಲ ಮಾತ್ರ ನಿಲ್ಲುತ್ತಿದ್ದನು. ಆದರೆ ಈ ಪರೀಕ್ಷಿದ್ರಾಜನ ಮನೆಯಲ್ಲಿ ಶ್ರೀಮದ್ಭಾಗವತಪ್ರವಚನಮಾಡುವಷ್ಟು ದೀರ್ಘಕಾಲ ಹೇಗೆ ನಿಂತನು? ಇದೂ ಅಲ್ಲದೇ ಆ ಅಭಿಮನ್ಯುಪುತ್ರನು ಪರಮಭಾಗವತೋತ್ತಮನೆಂದು ಕೇಳಿದ್ದೇವೆ. ಆ ಮಹಾತ್ಮನ ಅದ್ಭುತವಾದ ಜನ್ಮ ಮತ್ತು ಕರ್ಮಗಳನ್ನೂ ನಮಗೆ ವರ್ಣಿಸುವವನಾಗು. ಪಾಂಡವ

---

ಗಳಿಂದಲೂ ಸಮವಾಗಿ ಅಂದರೆ : ಏಕಪ್ರಕಾರವಾಗಿ ಇರುವ ಬ್ರಹ್ಮವನ್ನು ನೋಡುವವನು. ಅಥವಾ ಮಾಯಾ = ಶ್ರೀದೇವಿಯೊಡನೆ ಕೂಡಿರುವವನು. ಸಮಃ = ಮಹಾವಿಷ್ಣು. ಅವನನ್ನೇ ಸರ್ವತ್ರ ನೋಡುವವನು. (ವಿಜಯಧ್ವಜೀಯ)

ನಿರ್ವಿಕಲ್ಪಕಃ = ಭೇದವನ್ನು ತೊಲಗಿಸಿದವನು ( ನಿರಸ್ತಭೇದಃ ) ಅಥವಾ ಸಂಶಯಾತ್ಮಕಜ್ಞಾನವಿಲ್ಲದೇ ನಿಶ್ಚಿತವಾದ ಬುದ್ಧಿಯುಳ್ಳವನು. (ಶ್ರೀಧರೀಯ) ಭೇದಾನುಸಂಧಾನವಿಲ್ಲದವನು ಅಥವಾ ದೇಹಗತವಾದ ದೇವತ್ವ-ಮನುಷ್ಯತ್ವಾದಿ ವಿಕಲ್ಪಗಳನ್ನು ಆತ್ಮನಲ್ಲಿ ಆರೋಪಣೆಮಾಡದೇ ಇರುವವನು ಅಥವಾ ಅಬ್ರಹ್ಮಾತ್ಮವಾಗಿ ಸ್ವತಂತ್ರ ವಸ್ತುವಿದೆಯೆಂಬ ಜ್ಞಾನವಿಲ್ಲದವನು. (ವೀರರಾಘವೀಯ) ಇದು ತನ್ನದು-ಮತ್ತೊಬ್ಬನದು–ಎಂಬ ಭೇದಬುದ್ಧಿಯನ್ನು ಬಿಟ್ಟು ಎಲ್ಲವೂ ಈಶ್ವರಾಧೀನವೆಂದು ತಿಳಿಯುವವನು. (ವಿಜಯಧ್ವಜೀಯ)

ಏಕಾನ್ತಮತಿಃ = ನಿರ್ಜನಪ್ರದೇಶದಲ್ಲಿ ವಾಸಮಾಡುವುದರಲ್ಲಿ ಆಸಕ್ತಿಯುಳ್ಳವನು. (ಶ್ರೀಧರೀಯ ) ಅವ್ಯಭಿಚಾರವಾದ ಅಂದರೆ : ನಿಶ್ಚಿತವಾದ ಬುದ್ಧಿಯುಳ್ಳವನು.

ಕುಲತಿಲಕನಾದ ಆ ಪರೀಕ್ಷಿದ್ರಾಜನಾದರೋ ಚಕ್ರವರ್ತಿಯಾಗಿದ್ದವನು. ಅಂತಹವನು ಸಾಮ್ರಾಜ್ಯಲಕ್ಷ್ಮಿಯನ್ನು ತೊರೆದು ಗಂಗಾತೀರದಲ್ಲಿ ಮರಣಾಂತ ಉಪವಾಸವ್ರತಮಾಡುವ ಪ್ರಸಂಗವು ಏಕೆ ಒದಗಿತು? ಆತನು ಅದ್ಭುತವಾದ ಪರಾಕ್ರಮ, ಸಿರಿ-ಸಂಪತ್ತು, ಅಧಿಕಾರಗಳಿಗೆ ನೆಲೆಯಾಗಿದ್ದನು. ಮಹಾಪರಾಕ್ರಮಿಗಳಾದ ಶತ್ರುರಾಜರೂ ತಮ್ಮ ಒಳಿತಿಗಾಗಿ ರಾಶಿ-ರಾಶಿ ಧನವನ್ನು ತಂದೊಪ್ಪಿಸಿ ಆತನ ಪಾದಪೀಠಗಳಿಗೆ ನಮಸ್ಕಾರಮಾಡುತ್ತಿದ್ದರು. ಇನ್ನೂ ಪ್ರಾಯದ ವಯಸ್ಸಿನಲ್ಲಿದ್ದ ಮಹಾವೀರನವನು. ಹೀಗಿದ್ದರೂ ಆತನು-ತೊರೆಯಲು ಕಷ್ಟವಾದ, ಅಖಂಡವಾದ ಐಶ್ವರ್ಯವನ್ನೂ ಮತ್ತು ಪ್ರಾಣವನ್ನೂ ತೊರೆದುಬಿಡಲು ಏಕೆ ನಿಶ್ಚಯಮಾಡಿದನು? ಇದು ತುಂಬಾ ಅಚ್ಚರಿಯ ವಿಷಯವಾಗಿದೆ.

**ಶಿವಾಯ ಲೋಕಸ್ಯ ಭವಾಯ ಭೂತಯೇ**
**ಯ ಉತ್ತಮಶ್ಲೋಕಪರಾಯಣಾ ಜನಾಃ ।**
**ಜೀವನ್ತಿ ನಾತ್ಮಾರ್ಥಮಸೌ ಪರಾಶ್ರಯಂ**
**ಮುಮೋಚ ನಿರ್ವಿದ್ಯ ಕುತಃ ಕಲೇವರಮ್ ॥೧೨॥**

ಪರಮಾತ್ಮಪರಾಯಣರಾದ ಸತ್ಪುರುಷರು ಜಗತ್ತಿನ ಮಂಗಳ, ಶ್ರೇಯಸ್ಸು ಮತ್ತು ಅಭ್ಯುದಯಗಳಿಗಾಗಿಯೇ ಬಾಳುವವರು ; ಸ್ವಾರ್ಥ ಕ್ಕೋಸ್ಕರವಲ್ಲ. ಹೀಗೆ ಪರೋಪಕಾರಕ್ಕೇ ಮೀಸಲಾಗಿದ್ದ ತನ್ನ ಪವಿತ್ರವಾದ ದೇಹದಲ್ಲೂ ಬೇಸರಗೊಂಡು ಅದನ್ನವನು ಏಕೆ ತ್ಯಾಗಮಾಡಿದನು?

---

( ವೀರರಾಘವೀಯ ) ಏಕಾಂತವಾಗಿರುವ ಶ್ರೀಹರಿಯಲ್ಲಿ ಸತತಮನೋಗತಿಯುಳ್ಳವನು ; ಏಕಮನಸ್ಸುಳ್ಳವನು. ( ವಿಜಯಧ್ವಜೀಯ ) **'ದೃಷ್ಟ್ವಾನುಯಾನ್ತಂ'** ಇತ್ಯಾದಿ. ವಿಜಯಧ್ವಜೀಯದಲ್ಲಿ ಈ ಶ್ಲೋಕವಿಲ್ಲ.

**ವಿವಿಕ್ತದೃಷ್ಟೇಃ** = ಪವಿತ್ರವಾದ ದೃಷ್ಟಿಯುಳ್ಳ. ( ಶ್ರೀಧರೀಯ ) ಪ್ರಕೃತಿ-ಪುರುಷ ವಿವಿಕ್ತ (ವಿಲಕ್ಷಣ)ನಾದ ಪರಮಾತ್ಮನಲ್ಲೇ ಆಸಕ್ತವಾದ ದೃಷ್ಟಿಯುಳ್ಳ. (ವೀರರಾಘವೀಯ) ಸ್ತ್ರೀ-ಪುರುಷಾದಿ ಭೇದಗಳು ವಾಸ್ತವವಾಗಿ ಆತ್ಮನಿಗೆ ಇಲ್ಲ ; ಅವು ಪ್ರಕೃತಿಕೃತವಾದುವು–ಎಂಬ ವಿವೇಕದ ದೃಷ್ಟಿಯುಳ್ಳ. 'ಆತ್ಮಜಮಪ್ಯನಗ್ನಂ' ಎನ್ನುವುದರ ಬದಲಿಗೆ 'ಆತ್ಮಜಮಪ್ಸು ನಗ್ನಾಃ' – ಎಂಬ ಪಾಠಾಂತರವೂ ಉಂಟು. ಇದರ ಪ್ರಕಾರ 'ನೀರಿನಲ್ಲಿ ನಗ್ನರಾಗಿ ವಿಹರಿಸುತ್ತಿದ್ದ ದೇವತಾಸ್ತ್ರೀಯರು'–ಎಂದು ಅರ್ಥವಾಗುತ್ತದೆ.

ನಮ್ಮ ಈ ಎಲ್ಲ ಪ್ರಶ್ನೆಗಳಿಗೂ ಉತ್ತರಕೊಡು, ಮಹಾತ್ಮ! ನೀನು ವೇದವಾಙ್ಮಯವೊಂದನ್ನು ಬಿಟ್ಟು ಉಳಿದ ಎಲ್ಲ ಶಾಸ್ತ್ರಗಳಲ್ಲೂ ಪಾರಂಗತನಾಗಿರುವೆಯೆಂದು ನಾವು ಬಲ್ಲೆವು."*

ಸೂತಪುರಾಣಿಕರ ಉತ್ತರ :

"ಮಹರ್ಷಿಗಳೇ! ಈ ಚತುರ್ಯುಗಚಕ್ರದಲ್ಲಿ ಮೂರನೆಯದಾದ ದ್ವಾಪರಯುಗದಲ್ಲಿ ಶ್ರೀಭಗವಂತನ ಕಲಾವತಾರವಾದ ಮಹಾಯೋಗಿ ವೇದವ್ಯಾಸರು ಪರಾಶರರಿಂದ ಸತ್ಯವತಿಯ ಗರ್ಭದಲ್ಲಿ ಜನ್ಮತಾಳಿದರು. ಅವರು ಒಂದು ದಿನ ಸೂರ್ಯೋದಯದ ಸಮಯದಲ್ಲಿ ಸರಸ್ವತೀನದಿಯ ಪವಿತ್ರವಾದ ತೀರ್ಥದಲ್ಲಿ ಸ್ನಾನಾಹ್ನಿಕಗಳನ್ನು ಮುಗಿಸಿ ಏಕಾಂತವಾದ ಜಾಗದಲ್ಲಿ ಕುಳಿತಿದ್ದರು. ಪರಾವರತತ್ತ್ವಗಳನ್ನೂ, ಭೂತ-ಭವಿಷ್ಯಗಳನ್ನೂ ಅರಿತಿದ್ದ ಆ ಮಹರ್ಷಿಗಳು–ಕಾಲದ ವೇಗದಿಂದ ಪ್ರತಿಯೊಂದು ಯುಗದಲ್ಲೂ ಧರ್ಮಸಾಂಕರ್ಯವುಂಟಾಗುತ್ತಿರುವುದು, ಇದರ ಪ್ರಭಾವದಿಂದ ಭೌತಿಕವಸ್ತುಗಳಲ್ಲಿ ಅವುಗಳ ಸಹಜಶಕ್ತಿಯು ಕುಂದುತ್ತಿರುವುದು, ಮನುಷ್ಯರಲ್ಲಿ ಅಶ್ರದ್ಧೆ, ಸತ್ತ್ವಹೀನತೆ, ಬುದ್ಧಿಹೀನತೆ, ಅಲ್ಪಾಯುಸ್ಸು ಮತ್ತು ಭಾಗ್ಯಹೀನತೆಗಳುಂಟಾಗುತ್ತಿರುವುದು–ಸಾಮಾನ್ಯರಿಂದ ತಿಳಿಯಲು ಅಸಾಧ್ಯವಾಗಿರುವ ಇವುಗಳನ್ನೆಲ್ಲಾ ತಮ್ಮ ದಿವ್ಯಜ್ಞಾನದಿಂದ ಗಮನಿಸಿದರು. ಇಂತಹ ಸ್ಥಿತಿಯಲ್ಲಿ ಎಲ್ಲ ವರ್ಣಗಳ, ಎಲ್ಲ ಆಶ್ರಮಗಳ ಜನರಿಗೂ ಹಿತವನ್ನುಂಟುಮಾಡುವ ನಿಲುವು ಯಾವುದು?–ಎಂಬುದನ್ನು ಆಲೋಚಿಸತೊಡಗಿದರು. ವೇದೋಕ್ತವಾದ ನಾಲ್ಕು ಹೋತೃಗಳಿಂದ ಕೂಡಿದ ಯಜ್ಞಕರ್ಮವನ್ನು ಆಚರಿಸಿದರೆ ಜನರ ಹೃದಯ ಶುದ್ಧವಾಗುತ್ತದೆ–ಎಂದು ಯೋಚಿಸಿ ಅವರು ಯಜ್ಞಗಳನ್ನು ವಿಸ್ತಾರವಾಗಿ ಅನುಷ್ಠಾನಕ್ಕೆ ತರಲು ಸಹಾಯಕವಾಗಲೆಂದು ಅಖಂಡವಾಗಿದ್ದ ವೇದವನ್ನು ಋಕ್ಕು, ಯಜುಸ್ಸು, ಸಾಮ, ಅಥರ್ವ–ಎಂದು ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸಿದರು. ಇತಿಹಾಸ ಮತ್ತು ಪುರಾಣಗಳು ಐದನೆಯ ವೇದವೆನಿಸುತ್ತವೆ. ಇವುಗಳಲ್ಲಿ ಋಗ್ವೇದವನ್ನು ಪೈಲರು ವಿಶೇಷವಾಗಿ ಅಧ್ಯಯನ ಮಾಡಿ ಅದರ ಪ್ರವರ್ತಕರಾದರು. ಯಜುರ್ವೇದವನ್ನು ವೈಶಂಪಾಯನರು

---

* ಸ್ನಾತಮನ್ಯತ್ರ ಛಾನ್ದಸಾತ್, ತ್ರೈವರ್ಣಿಕರಲ್ಲಿ ಸೇರಿಲ್ಲವಾದ್ದರಿಂದ ಸೂತಪುರಾಣಿಕರಿಗೆ ವೇದವಾಙ್ಮಯದಲ್ಲಿ ಮಾತ್ರ ಅಧಿಕಾರವಿಲ್ಲ. ಉಳಿದ ಎಲ್ಲ ಶಾಸ್ತ್ರಗಳಲ್ಲೂ ಅವರು ಪಾರಂಗತರು.

ಅಧ್ಯಯನಮಾಡಿ ಅದರಲ್ಲಿ ಪಾರಂಗತರಾದರು. ವಿದ್ವಾಂಸರಾದ ಜೈಮಿನಿಗಳು ಸಾಮವೇದದಲ್ಲಿ ನಿಷ್ಣಾತರಾದರು. ದರುಣಪುತ್ರರಾದ ಸುಮಂತು ಮುನಿಗಳು ಅಥರ್ವವೇದದಲ್ಲಿ ಪ್ರವೀಣರಾಗಿ ಅದರ ಪ್ರವರ್ತಕರಾದರು. ನನ್ನ ತಂದೆಯವರಾದ ರೋಮಹರ್ಷಣರು ಇತಿಹಾಸ ಮತ್ತು ಪುರಾಣಗಳಲ್ಲಿ ಪ್ರಾವೀಣ್ಯವನ್ನು ಪಡೆದು ಅವುಗಳ ಪ್ರವರ್ತಕರಾದರು. ಈ ಎಲ್ಲ ಮಹರ್ಷಿಗಳೂ ತಮ್ಮ-ತಮ್ಮ ವೇದಶಾಖೆಗಳನ್ನು ಇನ್ನೂ ಅನೇಕಶಾಖೆಗಳನ್ನಾಗಿ ವಿಭಜಿಸಿದರು. ಹೀಗೆ ಶಿಷ್ಯ-ಪ್ರಶಿಷ್ಯರು ಮತ್ತು ಅವರ ಶಿಷ್ಯರ ಮೂಲಕ ವೇದಗಳಿಗೆ ಬಹುಶಾಖೆಗಳಾದುವು. ದೀನವತ್ಸಲರೂ, ಪರಮ ಪೂಜ್ಯರೂ ಆದ ಭಗವಾನ್ ವೇದವ್ಯಾಸರು ಸ್ಮರಣೆ-ಧಾರಣೆಗಳ ಶಕ್ತಿಯು ಅತಿ ಕಡಿಮೆಯಾಗಿರುವ ಜನರೂ ಅವುಗಳನ್ನು ಧರಿಸಿ ಕೃತಾರ್ಥರಾಗುವಂತೆ ವೇದವಾಙ್ಮಯವನ್ನು ವಿಭಾಗಮಾಡಿದರು.* (ಶ್ಲೋಕ 13-24)

ಸ್ತ್ರೀಯರು, ಶೂದ್ರರು ಮತ್ತು ಪತಿತದ್ವಿಜರು ವೇದಶ್ರವಣಕ್ಕೆ ಅಧಿಕಾರಿಗಳಲ್ಲದ್ದರಿಂದ ವೈದಿಕಕರ್ಮಗಳನ್ನು ಆಚರಿಸಲಾರದೇ ತಮ್ಮ ಶ್ರೇಯಸ್ಸನ್ನು ಸಾಧಿಸಿಕೊಳ್ಳುವ ಬಗೆಗೆ ಮೂರ್ಖರಾಗುತ್ತಾರಲ್ಲಾ! ಇವರಿಗೂ

---

* ವಾಸವ್ಯಾಂ = ಉಪರಿಚರವಸುವಿನ ಪುತ್ರಿಯಾಗಿದ್ದ ಸತ್ಯವತಿಯಲ್ಲಿ.

ಪರಾವರಜ್ಞಃ = ಪರತತ್ತ್ವವಾದ ಪರಮಾತ್ಮನನ್ನೂ ಅದಕ್ಕಿಂತಲೂ ನಿಕೃಷ್ಟತತ್ತ್ವಗಳಾದ ಪುರುಷ ಮತ್ತು ಪ್ರಕೃತಿತತ್ತ್ವಗಳನ್ನೂ ತಿಳಿದವನಾದ ಅಥವಾ ಕಾಲತ್ರಯ ಜ್ಞಾನಿಯಾದ.

ಚಾತುರ್ಹೋತ್ರಂ = ಹೋತಾ, ಅಧ್ವರ್ಯು, ಉದ್ಗಾತೃ ಮತ್ತು ಬ್ರಹ್ಮ–ಎಂಬ ನಾಲ್ಕು ಮಂದಿ ಋತ್ವಿಕ್ಕುಗಳಿಂದ ಸಂಪನ್ನವಾಗುವ ಕರ್ಮ ಅಥವಾ ದಶಹೋತ್ರಾದಿಯಾಗಿ ಚಾತುರ್ಹೋತ್ರಪರ್ಯಂತವಾದ ಮಂತ್ರಗಳಿಂದ ಪ್ರಕಾಶಪಡಿಸಲ್ಪಡುವ ಅಗ್ನಿಷ್ಟೋಮಕರ್ಮ.

ದಾರುಣಃ ಮುನಿಃ = ದರುಣ ಎಂಬ ಮುನಿಯ ಪುತ್ರರು ಸುಮಂತುಮಹರ್ಷಿಗಳು. (ವೀರರಾಘವೀಯ) ಅಭಿಚಾರಕವೇ ಮುಂತಾದ ಅಥರ್ವವೇದಪ್ರೋಕ್ತಕರ್ಮಗಳಲ್ಲಿ ಪ್ರವೃತ್ತನಾದ್ದರಿಂದ ದಾರುಣನಾದನು–ಸುಮಂತಮಹರ್ಷಿ. (ಶ್ರೀಧರೀಯ)

ರೋಮಹರ್ಷಣಃ= ಸೂತಪುರಾಣಿಕರ ಈ ನಾಮಧೇಯವು ಅತ್ಯಂತ ಅನ್ವರ್ಥವಾಗಿದೆ. ಭಗವತ್ಕಥೆಗಳನ್ನು ಹೇಳುವಾಗ ರೋಮಾಂಚಿತರಾಗುವ ಮತ್ತು ಶ್ರೋತೃಗಳಿಗೆ ರೋಮಾಂಚನವನ್ನುಂಟುಮಾಡುವ ಭಾವುಕರಸಿಕರಾದ ಪ್ರವಚನಕಲಾಪ್ರವೀಣರಾದ ಭಕ್ತೋತ್ತಮರು.

ಮಂಗಳವನ್ನುಂಟುಮಾಡಲು ಏನು ಮಾಡೋಣ? ಎಂದು ಯೋಚಿಸಿ, ಅದಕ್ಕಾಗಿ ಪರಮಕರುಣೆಯಿಂದ ವ್ಯಾಸಮುನೀಂದ್ರರು ಮಹಾಭಾರತವೆಂಬ ಇತಿಹಾಸವನ್ನು ರಚಿಸಿದರು. ಎಲೈ ಮಹರ್ಷಿಗಳೇ! ಹೀಗೆ ಅವರು ತಮ್ಮ ಸರ್ವಶಕ್ತಿಗಳಿಂದಲೂ ಸದಾ ಪ್ರಾಣಿಗಳ ಹಿತವನ್ನು ಸಾಧಿಸುವುದರಲ್ಲೇ ತತ್ಪರರಾಗಿದ್ದರೂ ಅವರ ಮನಸ್ಸಿಗೆ ಸಂಪೂರ್ಣವಾದ ನೆಮ್ಮದಿ ಉಂಟಾಗ ಲಿಲ್ಲ. ಹೆಚ್ಚು ಪ್ರಸನ್ನತೆಯಿಲ್ಲದೇ ಖೇದಗೊಂಡಿದ್ದ ಆ ಧರ್ಮಜ್ಞರು ಸರಸ್ವತೀ ನದಿಯ ಪವಿತ್ರವಾದ ದಡದ ಏಕಾಂತವಾದ ಜಾಗದಲ್ಲಿ ಕುಳಿತು ವಿಚಾರ ಚಿಂತನೆಮಾಡುತ್ತಾ ಹೀಗೆ ಹೇಳಿಕೊಂಡರು : "ನಾನು ನಿಷ್ಕಪಟಭಾವದಿಂದ ಬ್ರಹ್ಮಚರ್ಯಾದಿವ್ರತಗಳನ್ನು ಪಾಲಿಸುತ್ತಾ ವೇದಗಳನ್ನೂ, ಗುರುಜನರನ್ನೂ ಮತ್ತು ಅಗ್ನಿಗಳನ್ನೂ ಗೌರವದಿಂದ ಉಪಾಸನೆಮಾಡಿದ್ದೇನೆ. ಅವರ ಆಜ್ಞೆಯನ್ನೂ ಶಿರಸಾವಹಿಸಿದ್ದೇನೆ. ಮಹಾಭಾರತವನ್ನು ರಚಿಸುವುದರ ಮೂಲಕ ಸ್ತ್ರೀಯರು, ಶೂದ್ರರು–ಮುಂತಾದವರು ಕೂಡ ತಮ್ಮ-ತಮ್ಮ ಧರ್ಮ-ಕರ್ಮಗಳ ಅರಿವನ್ನು ಪಡೆದುಕೊಳ್ಳುವಂತೆ ವೇದಾರ್ಥಗಳನ್ನು ಪ್ರಕಾಶಪಡಿಸಿದ್ದೇನೆ. ಬ್ರಹ್ಮವರ್ಚಸ್ವಿಗಳಲ್ಲಿ ಶ್ರೇಷ್ಠನೂ ಆಗಿದ್ದೇನೆ. ಇಷ್ಟೆಲ್ಲ ಇದ್ದರೂ ನನ್ನ ದೇಹದಲ್ಲಿರುವ ಆತ್ಮವು ಪೂರ್ಣತೃಪ್ತಿಯನ್ನು ಪಡೆದಿಲ್ಲವೆಂಬಂತೆ ಅನುಭವವಾಗುತ್ತಿದೆಯಲ್ಲಾ! ಪ್ರಾಯಶಃ ನಾನು ಪರಮಹಂಸರಿಗೆ ಪ್ರಿಯವಾಗಿರುವ ಭಾಗವತಧರ್ಮಗಳನ್ನು ಪ್ರತಿಪಾದನೆ ಮಾಡಿಲ್ಲ. ಆ ಧರ್ಮಗಳು ತಾನೇ ಅಚ್ಯುತನಿಗೂ ಪ್ರಿಯವಾಗಿರುವುದು! ಇವುಗಳನ್ನು ಪ್ರಧಾನವಾಗಿ ಪ್ರತಿಪಾದನೆಮಾಡದೇ ಇರುವುದೇ ನನ್ನ ಅತೃಪ್ತಿಗೆ ಕಾರಣವಾಗಿರಬಹುದೇ?"–ಹೀಗೆ ತಮ್ಮನ್ನು ಅಪೂರ್ಣರೆಂಬಂತೆ ಭಾವಿಸಿಕೊಂಡು ಶ್ರೀಕೃಷ್ಣದ್ವೈಪಾಯನರು ಖೇದಪಡುತ್ತಿದ್ದಂತೆಯೇ ಆ ಆಶ್ರಮಕ್ಕೆ ದೇವರ್ಷಿ ನಾರದರು ದಯಮಾಡಿಸಿದರು. ಹಾಗೆ ದಯಮಾಡಿಸಿದ ಅವರನ್ನು ಕಂಡೊಡನೆಯೇ ವ್ಯಾಸಮುನೀಂದ್ರರು ಸಂಭ್ರಮದಿಂದ ಎದ್ದುನಿಂತು ದೇವತೆಗಳಿಂದಲೂ ಪೂಜಿತರಾದ ದೇವರ್ಷಿ ನಾರದರಿಗೆ ವಿಧಿಪೂರ್ವಕವಾಗಿ ಸತ್ಕಾರಮಾಡಿದರು."

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೪ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೫ನೆಯ ಅಧ್ಯಾಯ

## ವ್ಯಾಸ-ನಾರದರ ಸಂವಾದ : ನಾರದರ ಪೂರ್ವಜನ್ಮವೃತ್ತಾಂತ

**ಅಥ ತಂ ಸುಖಮಾಸೀನ ಉಪಾಸೀನಂ ಬೃಹಚ್ಛ್ರವಾಃ ।**
**ದೇವರ್ಷಿಃ ಪ್ರಾಹ ವಿಪ್ರರ್ಷಿಂ ವೀಣಾಪಾಣಿಃ ಸ್ಮಯನ್ನಿವ ॥೧॥**

ಸೂತಪುರಾಣಿಕರು ಹೇಳುತ್ತಾರೆ :

ಅನಂತರ ಮಹಾಯಶಸ್ವಿಗಳಾದ, ವೀಣಾಪಾಣಿಗಳಾದ ದೇವರ್ಷಿ ನಾರದರು ನಸುನಗುತ್ತಾ ಸುಖಾಸೀನರಾಗಿ, ತಮ್ಮ ಬಳಿಯಲ್ಲೇ ಕುಳಿತುಕೊಂಡ ಬ್ರಹ್ಮರ್ಷಿ ವೇದವ್ಯಾಸರನ್ನು ಹೀಗೆ ಕೇಳಿದರು :

"ಎಲೈ ಮಹಾಭಾಗರೇ! ಪರಾಶರಪುತ್ರರೇ! ನಿಮ್ಮ ಶರೀರ ಮತ್ತು ಮನಸ್ಸುಗಳು ತಮ್ಮ ಕರ್ಮಗಳಿಂದ ಸಂತುಷ್ಟವಾಗಿವೆಯಷ್ಟೇ? ಏಕೆಂದರೆ : ನೀವು ಎಲ್ಲ ಪುರುಷಾರ್ಥಗಳಿಂದಲೂ ಪರಿಪೂರ್ಣವಾಗಿರುವ, ಪರಮಾದ್ಭುತವಾದ ಮಹಾಭಾರತವನ್ನು ರಚಿಸಿ ಮುಗಿಸಿದ್ದೀರಿ. ಇದರಿಂದ ನಿಮ್ಮ ಆಕಾಂಕ್ಷೆಯು ಪೂರ್ಣವಾಗಿ ಕೈಗೂಡಿರಬೇಕು. ಇದಲ್ಲದೇ ನೀವು ಸನಾತನವಾದ ಬ್ರಹ್ಮತತ್ತ್ವವನ್ನು ಕುರಿತು ವೇದಾಂತಸೂತ್ರಗಳಲ್ಲಿ ಬಹಳಷ್ಟು ವಿಚಾರಮಾಡಿ ಅದನ್ನು ಚೆನ್ನಾಗಿ ಅರಿತೂ ಇರುವಿರಿ. ಹಾಗಿದ್ದರೂ ಏಕೆ ನೀವು ಒಬ್ಬ ಕೃತಕೃತ್ಯರಾಗದೇ ಇರುವ ಸಾಧಾರಣಪಾಮರನಂತೆ ಸ್ವವಿಷಯದಲ್ಲಿ ಶೋಕಿಸುತ್ತಿದ್ದೀರಿ?"* (ಶ್ಲೋಕ 1-4)

---

* ಶಾರೀರಃ = ಶರೀರಾಭಿಮಾನಿಯಾದ ಆತ್ಮ. ಮಾನಸಃ = ಮನೋಭಿಮಾನಿಯಾದ ಆತ್ಮ (ಶ್ರೀಧರೀಯ) ಶಾರೀರಃ ಆತ್ಮಾ = ಕ್ಷೇತ್ರಜ್ಞನು. ಮಾನಸಃ ಆತ್ಮಾ = ಮನಸ್ಸನ್ನು ಕರಣವನ್ನಾಗಿ ಹೊಂದಿರುವ ಆತ್ಮ. (ವೀರರಾಘವೀಯ)

ಜಿಜ್ಞಾಸಿತಂ = ವೇದಾಂತಸೂತ್ರಗಳಲ್ಲಿ ನೀವು ಬ್ರಹ್ಮವನ್ನು ಕುರಿತು ಚೆನ್ನಾಗಿ ವಿಚಾರಮಾಡಿದ್ದೀರಿ.

ಪ್ರಭೋ = ಪ್ರಭೂತವಾದ ಜ್ಞಾನವುಳ್ಳವರೇ. (ವಿಜಯಧ್ವಜೀಯ) ವ್ಯಾಸರು ಅಪರಿಮಿತಜ್ಞಾನಶಕ್ತಿಸ್ವರೂಪರು ; ಆಪ್ತಕಾಮರು. ಅವತಾರಕಾರ್ಯವನ್ನು ಮಾಡಿಯಾಗಿದ್ದರೂ ಕೃತಾರ್ಥರಲ್ಲದವರಂತೆ ತಮ್ಮನ್ನು ಪ್ರಕಟಪಡಿಸಿಕೊಳ್ಳುತ್ತಾರೆ. ಸರ್ವಜ್ಞರಾಗಿದ್ದರೂ ದುಷ್ಟಜನರನ್ನು ಮೋಹಗೊಳಿಸುವುದಕ್ಕೋಸ್ಕರ ಅರಿಯದವರಂತೆ ನಾರದರನ್ನು ಪ್ರಶ್ನೆಮಾಡುತ್ತಿದ್ದಾರೆ. (ವಿಜಯಧ್ವಜೀಯ)

ನಾರದರ ಪ್ರಶ್ನೆಗೆ ವ್ಯಾಸರು ಹೀಗೆ ಉತ್ತರಿಸಿದರು :

"ನೀವು ನನ್ನ ವಿಷಯದಲ್ಲಿ ಏನು ಹೇಳಿದಿರೋ ಅವೆಲ್ಲವೂ ನಿಜವೇ. ಅದರಲ್ಲಿ ಏನೂ ಸಂಶಯವಿಲ್ಲ. ಆದರೂ ನನ್ನ ಹೃದಯವು ಸಂತುಷ್ಟಿಯನ್ನು ಪಡೆದಿಲ್ಲ. ಇದಕ್ಕೇನು ಕಾರಣವೆಂದು ತಿಳಿಯುತ್ತಿಲ್ಲ. ಆದ್ದರಿಂದ ಅಗಾಧ ಜ್ಞಾನಿಗಳೂ, ಬ್ರಹ್ಮದೇವರ ಮಾನಸಪುತ್ರರೂ ಆದ ತಮ್ಮನ್ನೇ ಆ ಬಗೆಗೆ ಕೇಳುತ್ತಿದ್ದೇನೆ. ತಾವು ಅದನ್ನು ತಿಳಿಸಬೇಕು. ಓ ನಾರದರೇ! ತಾವು ಎಲ್ಲ ರಹಸ್ಯಗಳನ್ನೂ ಬಲ್ಲವರು. ಏಕೆಂದರೆ : ಪರಾವರತತ್ತ್ವಗಳ ಸ್ವಾಮಿಯಾಗಿ ಸಂಸಾರದ ಸೃಷ್ಟಿ-ಸ್ಥಿತಿ-ಲಯಗಳನ್ನು ಅದರ ಗುಣಗಳಿಗೆ ಅಂಟಿಕೊಳ್ಳದೆಯೇ ತನ್ನ ಸಂಕಲ್ಪಮಾತ್ರದಿಂದಲೇ ಮಾಡುತ್ತಿರುವ ಪುರಾಣಪುರುಷನನ್ನು ತಾವು ಉಪಾಸನೆಮಾಡಿದ್ದೀರಿ. ಇದಲ್ಲದೇ ಸೂರ್ಯನಂತೆ ಸಂಚರಿಸುತ್ತಿರುವವರು ಮತ್ತು ಯೋಗಬಲದಿಂದ ಪ್ರಾಣವಾಯುವಿನಂತೆ ಎಲ್ಲರ ಒಳಗಡೆಯೂ ಇದ್ದು ಎಲ್ಲವನ್ನೂ ನೋಡುತ್ತಿರುವವರು ತಾವು. ಧಾರ್ಮಿಕವಾದ ವ್ರತ-ನಿಯಮ-ನಿಷ್ಠೆಗಳಿಂದ ಪರಬ್ರಹ್ಮ ಮತ್ತು ಶಬ್ದಬ್ರಹ್ಮಗಳೆರಡರಲ್ಲೂ ನಿಷ್ಣಾತರಾಗಿರುವ ತಾವು, ನನಗೂ ಏಕೆ ಈ ಕಳವಳ, ಕೊರತೆ ಉಂಟಾಗಿದೆ? ದಯವಿಟ್ಟು ತಿಳಿಸಿರಿ.*" (ಶ್ಲೋಕ 5-7)

---

* ಪೃಚ್ಛಾಮಹೇ = ಇಲ್ಲಿ 'ಸಂ' ಎಂಬ ಉಪಸರ್ಗವಿಲ್ಲದೇ ಪೃಚ್‌ಧಾತುವು ಆತ್ಮನೇಪದವಾಗಿದೆ. ಆದ್ದರಿಂದ ನಾರದರ ಜ್ಞಾನವು ಪರಿಮಿತವಾದುದು. ವ್ಯಾಸರ ಜ್ಞಾನವು ಪ್ರಳಯಸಮುದ್ರದಂತೆ ಅಪರಿಮಿತವಾದುದು–ಎಂಬ ಅಭಿಪ್ರಾಯವು ಶಬ್ದಾರ್ಥಗಳನ್ನು ಬಲ್ಲವನಿಗೆ ಮಾತ್ರವೇ ತಿಳಿಯುತ್ತದೆ. (ವಿಜಯಧ್ವಜೀಯ)

ಪರಾವರೇಶಃ = ಕಾರ್ಯ-ಕಾರಣಗಳಿಗೆ ನಿಯಾಮಕನಾದ ಭಗವಂತ. (ಶ್ರೀಧರೀಯ) ಉತ್ಕೃಷ್ಟರಾದ ಬ್ರಹ್ಮ-ರುದ್ರಾದಿಗಳಿಗೂ ನಿಕೃಷ್ಟರಾಗಿರುವ ಇಂದ್ರಾದಿಗಳಿಗೂ ನಿಯಾಮಕನಾಗಿರುವ ಶ್ರೀಮನ್ನಾರಾಯಣ. (ಭಾಗವತಚಂದ್ರಿಕಾ) ಶ್ರೇಷ್ಠರಾದ ಬ್ರಹ್ಮಾದಿಗಳೂ ಯಾವನಿಗಿಂತ ನಿಕೃಷ್ಟರಾಗಿದ್ದಾರೆಯೋ ಅಂತಹ ಶ್ರೀಮನ್ನಾರಾಯಣ. (ವೀರರಾಘವೀಯ) ಶ್ರೇಷ್ಠರಾದ ಮುಕ್ತಾತ್ಮರ ಪ್ರಪಂಚ ಮತ್ತು ನಿಕೃಷ್ಟರಾದ ಬದ್ಧರ ಪ್ರಪಂಚ–ಇವೆರಡಕ್ಕೂ ಈಶ್ವರನಾದ ನಾರಾಯಣ.

ಪರಾವರೇ ಬ್ರಹ್ಮಣಿ ಸ್ನಾತಸ್ಯ = ಪರಬ್ರಹ್ಮ ಮತ್ತು ಅದಕ್ಕೆ ಕೆಳಗಿನದಾದ ಶಬ್ದ ಬ್ರಹ್ಮರೂಪವಾದ ವೇದಶಾಸ್ತ್ರ–ಇವೆರಡರಲ್ಲೂ ನಿಷ್ಣಾತನಾಗಿರುವ, ಯೋಗಧರ್ಮ ದಿಂದ ಪರಬ್ರಹ್ಮದಲ್ಲೂ ಮತ್ತು ಅದನ್ನು ಪ್ರತಿಪಾದಿಸುವ ವೇದದಲ್ಲೂ ನಿಷ್ಣಾತನಾಗಿ

ನಾರದರು ವ್ಯಾಸರಿಗೆ ಉತ್ತರಿಸಿದರು :

"ಮಹರ್ಷಿಗಳೇ! ನೀವು ಬಹುಮಟ್ಟಿಗೆ ಶ್ರೀಭಗವಂತನ ಪರಿಶುದ್ಧವಾದ ಕೀರ್ತಿಯನ್ನು ವರ್ಣಿಸಿಲ್ಲವೆಂದೇ ತೋರುತ್ತದೆ. ಭಗವಂತನು ಸಂತೋಷಪಡುವುದು ಆ ಕೀರ್ತಿಯ ವರ್ಣನೆಯಿಂದಲೇ. ಅದನ್ನು ಬಿಟ್ಟು ಬೇರೆ ಯಾವ ದರ್ಶನದಿಂದಲೂ ಅವನಿಗೆ ಸಂತೋಷವಾಗುವುದಿಲ್ಲ. ಅವನಿಗೆ ಯಾವುದರಿಂದ ಸಂತೋಷವುಂಟಾಗುವುದಿಲ್ಲವೋ–ಆ ದರ್ಶನ ವೆಲ್ಲಾ ಶೂನ್ಯವೆಂದೇ ನನ್ನ ಭಾವನೆ. ಓ ಮುನಿವರ್ಯರೇ! ನೀವು ಧರ್ಮವೇ ಮುಂತಾದ ಪುರುಷಾರ್ಥಗಳನ್ನು ಎಷ್ಟು ವಿಸ್ತಾರವಾಗಿ ವರ್ಣಿಸಿರುವಿರೋ ಅಷ್ಟು ವಿಸ್ತಾರವಾಗಿ ವಾಸುದೇವನ ಮಹಿಮೆಯನ್ನು ವರ್ಣಿಸಿಲ್ಲವಷ್ಟೇ!

(ಶ್ಲೋಕ 8-9)

**ನ ಯದ್ವಚಶ್ಚಿತ್ರಪದಂ ಹರೇರ್ಯಶೋ**
**ಜಗತ್ಪವಿತ್ರಂ ಪ್ರಗೃಣೀತ ಕರ್ಹಿಚಿತ್ ।**
**ತದ್ವಾಯಸಂ ತೀರ್ಥಮುಶನ್ತಿ ಮಾನಸಾ**
**ನ ಯತ್ರ ಹಂಸಾ ನಿರಮನ್ತ್ಯುಶಿಕ್ಷಯಾಃ ॥೧೦॥**
**ತದ್ವಾಗ್ವಿಸರ್ಗೋ ಜನತಾಘವಿಪ್ಲವೋ**
**ಯಸ್ಮಿನ್ ಪ್ರತಿಶ್ಲೋಕಮಬದ್ಧವತ್ಯಪಿ ।**
**ನಾಮಾನ್ಯನನ್ತಸ್ಯ ಯಶೋಽಙ್ಕಿತಾನಿ ಯತ್**
**ಶೃಣ್ವನ್ತಿ ಗಾಯನ್ತಿ ಗೃಣನ್ತಿ ಸಾಧವಃ ॥೧೧॥**

ಒಂದು ಸಾಹಿತ್ಯವು ಪದ ಮತ್ತು ಅಕ್ಷರಗಳ ವಿಚಿತ್ರವಾದ ವಿನ್ಯಾಸ, ರಸ, ಅಲಂಕಾರ–ಇತ್ಯಾದಿಗಳಿಂದ ಕೂಡಿ ಅತ್ಯಂತ ಆಕರ್ಷಕವಾಗಿರಬಹುದು. ಆದರೆ ಜಗತ್ತನ್ನೇ ಪಾವನಗೊಳಿಸುವ ಪರಮಾತ್ಮನ ಕೀರ್ತಿಯನ್ನು ಎಲ್ಲಿಯೂ ಕೊಂಡಾಡದೇ ಇದ್ದರೆ ಅದು ಅಪವಿತ್ರವೇ. ಯಾವ ಜಲಾಶಯದಲ್ಲಿ ಮಾನಸ ಸರೋವರದ ಹಂಸಗಳು ವಿಹರಿಸುವುದಿಲ್ಲವೋ–ಅದನ್ನು ಕಾಕತೀರ್ಥವೆಂದು ಭಾವಿಸುತ್ತಾರಲ್ಲವೇ? ಭಾವುಕರಾದ ಪರಮಹಂಸರು ರಮಿಸದೇ ಇರುವ ಸಾಹಿತ್ಯವು ಅದಕ್ಕೆ ಸಮವೆನಿಸುವುದು. ಇದಕ್ಕೆ ಪ್ರತಿಯಾಗಿ ಯಾವು

---

ರುವ. ನಿರ್ಗುಣಬ್ರಹ್ಮ ಮತ್ತು ಸಗುಣಬ್ರಹ್ಮ–ಇವೆರಡನ್ನೂ ಯೋಗಬಲದಿಂದ ಚೆನ್ನಾಗಿ ತಿಳಿದಿರುವ–ಎಂದು ಅದ್ವೈತಪರವಾಗಿ ಅರ್ಥೈಸಬಹುದು.

ದಾದರೂ ಒಂದು ವಾಕ್ಯರಚನೆಯಲ್ಲಿ ಲೋಕದೃಷ್ಟಿಯಿಂದ ಪ್ರತಿಯೊಂದು ಶ್ಲೋಕದಲ್ಲಿಯೂ ಅಬದ್ಧವೇ ಇದ್ದರೂ ಅದರಲ್ಲಿ ಅಚ್ಯುತನ ಕೀರ್ತಿಯನ್ನು ಗುರುತಿಸುವ ಹೆಸರುಗಳು ಇದ್ದರೆ, ಸಾಧುಗಳು ಕೇಳುವ-ಹಾಡುವ-ಹೇಳುವ ಹೆಸರುಗಳು ಇದ್ದರೆ–ಅವು ಜನರ ಸರ್ವಪಾಪಗಳನ್ನೂ ತೊಳೆದುಹಾಕುತ್ತವೆ. ಅತಿಪವಿತ್ರವೆನಿಸುತ್ತವೆ.*

ನೈಷ್ಕರ್ಮ್ಯಮಪ್ಯಚ್ಯುತಭಾವವರ್ಜಿತಂ
ನ ಶೋಭತೇ ಜ್ಞಾನಮಲಂ ನಿರಞ್ಜನಮ್ ।
ಕುತಃ ಪುನಃ ಶಶ್ವದಭದ್ರಮೀಶ್ವರೇ
ನ ಚಾರ್ಪಿತಂ ಕರ್ಮ ಯದಪ್ಯಕಾರಣಮ್ ॥೧೨॥

ಅಚ್ಯುತನಲ್ಲಿ ಭಕ್ತಿಭಾವರಹಿತವಾಗಿದ್ದರೆ ಅಂತಹ ಸಕಲಕರ್ಮ ಮೋಚಕವಾದ, ಮೋಕ್ಷಪ್ರದವೇ ಆದ, ನಿರ್ಮಲವಾದ ಜ್ಞಾನವೂ ಸಹ ಶೋಭಿಸುವುದಿಲ್ಲ. ಹೀಗಿರುವಾಗ ಸಾಧನಸ್ಥಿತಿ-ಸಿದ್ಧಿಸ್ಥಿತಿ ಎರಡರಲ್ಲಿ ಸದಾ ಅಮಂಗಳರೂಪವಾಗಿರುವ ಕಾಮ್ಯಕರ್ಮ ಮತ್ತು ಭಗವಂತನಿಗೆ ಅರ್ಪಣೆ ಮಾಡಲ್ಪಡದೇ ಇರುವ ನಿಷ್ಕಾಮಕರ್ಮಗಳಾದರೂ ಹೇಗೆ ಶೋಭಿಸಿಯಾವು?"

"ಓ ಮಹಾಭಾಗರೇ! ತಾವು ಅಮೋಘವಾದ ದೃಷ್ಟಿಯುಳ್ಳವರು ; ಪವಿತ್ರವಾದ ಕೀರ್ತಿಯನ್ನು ಗಳಿಸಿದವರು ; ಸತ್ಯಪರಾಯಣರು ; ದೃಢವಾದ ವ್ರತವುಳ್ಳವರು. ಆದುದರಿಂದ ಸಮಸ್ತಜೀವಿಗಳನ್ನೂ ಬಂಧನದಿಂದ ಬಿಡಿಸುವುದಕ್ಕಾಗಿ ಆ ಭಗವಂತನ ಲೀಲೆಗಳನ್ನು ಸಮಾಧಿಯಲ್ಲಿ ಅನುಸಂಧಾನ ಮಾಡಿರಿ. ಭಗವಂತನನ್ನು ವರ್ಣಿಸದೇ ಬೇರೆ ಯಾವುದನ್ನೋ ವರ್ಣಿಸಲು ಬಯಸುವವನು ತನ್ನ ಆ ಇಚ್ಛೆಯಿಂದ ನಿರ್ಮಿತವಾದ ನಾನಾನಾಮ-ರೂಪಗಳ ಸುಳಿಗೆ ಸಿಕ್ಕಿಹಾಕಿಕೊಳ್ಳುತ್ತಾನೆ. ಅವನ ಬುದ್ಧಿಯು ಭೇದಭಾವದಿಂದ ಭರಿತವಾಗುವುದು. ಅದು ದುಃಸ್ಥಿತಿಗೆ ಒಳಗಾಗಿ ಬಿರುಗಾಳಿಗೆ ಸಿಕ್ಕಿದ ಹಡಗಿನಂತೆ ಎಂದೂ–ಎಲ್ಲಿಯೂ ನೆಲೆಯನ್ನು ಪಡೆಯದೇ ಹೋಗುವುದು. ಸಂಸಾರಿಗಳಾದ ಜನರು ಸ್ವಾಭಾವಿಕವಾಗಿಯೇ ವಿಷಯಗಳಲ್ಲಿ ಆಸಕ್ತರಾಗಿರುತ್ತಾರೆ.

* ವಾಯಸಂ ತೀರ್ಥಂ = ಕಾಗೆಗಳು ನೀರಾಟವಾಡುವ ಅಪವಿತ್ರಜಲಾಶಯ.

ಅವರಿಗೆ ನೀವು ಪ್ರವೃತ್ತಿಧರ್ಮವನ್ನು–ಅನುಸರಿಸಬಹುದಾದ ಧರ್ಮವೆಂದೇ ಸಾರಿಬಿಟ್ಟಿರುವುದರಿಂದ ಸಾಮಾನ್ಯಜನರು ಅದನ್ನು ಮುಖ್ಯಧರ್ಮವೆಂದೇ ಭಾವಿಸಿ ನಿವೃತ್ತಿಧರ್ಮವನ್ನು ಸ್ವೀಕರಿಸಲು ಯೋಚನೆಮಾಡುವುದೇ ಇಲ್ಲ. ಜನರಿಗೆ ಧರ್ಮದಲ್ಲಿ ಶ್ರದ್ಧೆಯನ್ನುಂಟುಮಾಡುವುದಕ್ಕಾಗಿ ನೀವು ಧರ್ಮ ವನ್ನು ಅರ್ಥ-ಕಾಮಗಳಿಗೆ ಸಾಧನವೆಂದು ಹೇಳಿರುವಿರಿ. ಸಾಧುಜನರಿಗೆ ಹೇವರಿಕೆಯನ್ನುಂಟುಮಾಡುವ ರೀತಿಯಲ್ಲಿ ಇಂತಹ ಕೆಲಸವನ್ನು ಮಾಡಿ ದ್ದೀರಿ. ಇದರಿಂದ ಧರ್ಮದ ಸ್ವರೂಪವನ್ನೇ ಅದಲು-ಬದಲು ಮಾಡಿದಂತಾ ಗಿದೆ. ಪರಮಾತ್ಮನ ಅಪಾರವಾದ ಆನಂದಮಯಸ್ವರೂಪವನ್ನು ವಿವೇಕಿಗಳಿಗೆ ಮಾತ್ರವೇ ನಿವೃತ್ತಿಮಾರ್ಗದಿಂದ ತಿಳಿಯಲು ಸಾಧ್ಯವಾಗುತ್ತದೆ. ಆದುದ ರಿಂದ ಪ್ರಕೃತಿಯ ಗುಣಗಳಿಂದ ಕುಣಿದಾಡಿಸಲ್ಪಡುತ್ತ ಪರಮಾರ್ಥಬುದ್ಧಿ ರಹಿತರಾಗಿರುವ ಜನರ ಕಣ್ಣುಗಳನ್ನು ತೆರೆಯಿಸಲು ನೀವು ಪರಮಾತ್ಮನ ದಿವ್ಯಲೀಲೆಗಳನ್ನು ವರ್ಣನೆಮಾಡಿರಿ. ತನ್ನ ಧರ್ಮವನ್ನು ತ್ಯಾಗಮಾಡಿ ಭಗವಂತನ ಚರಣಕಮಲಗಳ ಧ್ಯಾನ-ಸೇವೆಗಳನ್ನೇ ಮಾಡುತ್ತಿರುವ ಸಾಧಕನು ತನ್ನ ಭಜನೆಯು ಪರಿಪಕ್ವವಾಗುವುದಕ್ಕೆ ಮೊದಲೇ ಭಜನೆಯಿಂದ ಜಾರಿದರೂ ಅವನಿಗೆ ಹೆಚ್ಚು ಅನರ್ಥವೇನೂ ಆಗುವುದಿಲ್ಲ. ಭಗವಂತನನ್ನು ಭಜನೆಮಾಡದೇ ಕೇವಲ ಸ್ವಧರ್ಮಾಚರಣೆಮಾಡುವವನಿಗೆ ಉಂಟಾಗುವ ಮಹಾಲಾಭವಾದರೂ ಏನು? ಇವನಿಗಿಂತಲೂ ಹಿಂದಿನವನೇ ಎಷ್ಟೋ ಮೇಲು. ಪ್ರವೃತ್ತಿಮಾರ್ಗದಲ್ಲಿಯೇ ಇದ್ದು ಆಶಾಭಂಗ-ಅಶಾಂತಿಗಳನ್ನು ಅನುಭವಿಸುವ ಪಾಡು ಅವನಿಗಿಲ್ಲವಷ್ಟೇ? ಮೇಲಿನ ಯೋನಿಗಳಲ್ಲೂ– ಕೆಳ ಗಿನ ಯೋನಿಗಳಲ್ಲೂ ಕರ್ಮಫಲಸ್ವರೂಪವಾಗಿ ಎಷ್ಟೇ ಸುತ್ತಾಡುತ್ತಿದ್ದರೂ ಯಾವುದು ಸಾಧನೆಯಿಲ್ಲದೇ ತಾನಾಗಿಯೇ ದೊರೆಯುವುದಿಲ್ಲವೋ– ಅಂತಹ ಪರಮಸುಖದ ಪ್ರಾಪ್ತಿಗಾಗಿಯೇ ಬುದ್ಧಿವಂತರು ಪ್ರಯತ್ನಮಾಡ ಬೇಕು. ವಿಷಯಸುಖಕ್ಕಾಗಿ ಮಹಾಪ್ರಯತ್ನಪಡಬೇಕಾಗಿಲ್ಲ. ಅಚಿಂತ್ಯವಾದ ವೇಗದಿಂದ ತಿರುಗುತ್ತಿರುವ ಕಾಲವು ಜನರಿಗೆ ಅವರ ಕರ್ಮಫಲಸ್ವರೂಪ ವಾಗಿ ಸ್ವಾಭಾವಿಕವಾಗಿಯೇ ದುಃಖವನ್ನು ತರುವಂತೆ ವಿಷಯಸುಖವನ್ನೂ ತಂದುಕೊಡುತ್ತದೆ. ಮಹರ್ಷಿಗಳೇ! ಶ್ರೀಕೃಷ್ಣಪರಮಾತ್ಮನ ಪಾದಾರವಿಂದಗಳನ್ನು

ಸೇವಿಸುವವನು ಎಂದಿಗೂ, ಯಾವ ರೀತಿಯಲ್ಲೂ ಇತರ ಕರ್ಮಿಗಳಂತೆ ಈ ಸಂಸಾರದ ಕಟ್ಟಿಗೆ ಸಿಕ್ಕಿಹಾಕಿಕೊಳ್ಳುವುದೇ ಇಲ್ಲ. ಒಂದು ಸಲ ಭಕ್ತಿರಸದ ಸವಿಯ ಅನುಭವವಾದರೆ ಸಾಕು. ಅವನು ಅದನ್ನು ಎಂದಿಗೂ ಬಿಡಲು ಇಚ್ಛಿಸುವುದಿಲ್ಲ. ಮುಕುಂದನ ಅಡಿದಾವರೆಗಳ ಆಲಿಂಗನವನ್ನು ಸ್ಮರಿಸುತ್ತಲೇ ಇರುತ್ತಾನೆ. ಈ ಜಗತ್ತಿನ ಉತ್ಪತ್ತಿ, ಸ್ಥಿತಿ ಮತ್ತು ಪ್ರಳಯಗಳಿಗೆ ಯಾವ ಭಗವಂತನು ಕಾರಣನಾಗಿದ್ದಾನೆಯೋ–ಅವನೇ ಈ ವಿಶ್ವದ ರೂಪ ದಲ್ಲಿಯೂ ಇದ್ದಾನೆ. ಭಗವಂತನಿಂದ ಸೃಷ್ಟಿಸಲ್ಪಟ್ಟಿರುವುದರಿಂದ ಈ ಜಗತ್ತೂ ಸಹ ಮತ್ತೊಬ್ಬ ಭಗವಂತನಂತೆಯೇ ಇದೆ. ಆದರೂ ಭಗವಂತನು ಇದಕ್ಕಿಂತಲೂ ವಿಲಕ್ಷಣನಾಗಿದ್ದಾನೆ. ಈ ವಿಷಯ ನಿಮಗೂ ತಿಳಿದೇ ಇದೆ. ನಾನು ಸ್ವಲ್ಪಮಟ್ಟಿಗೆ ಮಾರ್ಗಸೂಚನೆಮಾಡಿದ್ದೇನೆ ; ಅಷ್ಟೇ. ಓ ಮಹಾ ಮಹಿಮರೇ! ನಿಮ್ಮ ದೃಷ್ಟಿಯು ಅಮೋಘವಾದುದು. ಆ ಪರಮಪುರುಷ-ಪರಮಾತ್ಮನ ಕಲಾವತಾರವೇ ನೀವಾಗಿದ್ದೀರಿ. ಜನ್ಮರಹಿತನಾದ ಆತನೇ ಈ ಜಗತ್ತಿನ ಕಲ್ಯಾಣಕ್ಕಾಗಿ ನಿಮ್ಮ ರೂಪದಲ್ಲಿ ಬಂದಿರುತ್ತಾನೆಂಬುದನ್ನು ತಿಳಿಯಿರಿ. ನಿಮ್ಮ ಈ ಅಗ್ಗಳಿಕೆಯನ್ನು ಸ್ಮರಿಸಿಕೊಂಡು ಆತನ ದಿವ್ಯಲೀಲೆಗಳನ್ನು ವಿಶೇಷವಾಗಿ ಕೀರ್ತನೆಮಾಡಿರಿ. ಪುಣ್ಯಕೀರ್ತಿಯಾದ ಶ್ರೀಭಗವಂತನ ದಿವ್ಯಗುಣಗಳನ್ನೂ, ಲೀಲೆಗಳನ್ನೂ ವರ್ಣನೆಮಾಡುವುದೇ–ಮನುಷ್ಯರು ಆಚರಿಸುವ ತಪಸ್ಸು, ವೇದಾಧ್ಯಯನ, ಯಜ್ಞಾನುಷ್ಠಾನ, ಸದುಕ್ತಿ, ಜ್ಞಾನ ಮತ್ತು ದಾನ–ಇವೆಲ್ಲಕ್ಕೂ ಪರಮಪ್ರಯೋಜನವೆಂದು ಜ್ಞಾನಿಗಳು ನಿರೂಪಣೆಮಾಡಿದ್ದಾರೆ.* (ಶ್ಲೋಕ 8-22)

---

* ದುಃಖವು ಪುರಾತನಕರ್ಮಫಲವಾಗಿ ತಾನಾಗಿಯೇ ಬರುವಂತೆ ಸುಖವೂ ಕರ್ಮ ಫಲವಾಗಿ ತಾನಾಗಿಯೇ ಬರುವುದು. ಅದಕ್ಕಾಗಿ ವಿಶೇಷವಾದ ಸಾಧನೆಯು ಬೇಕಾಗಿಲ್ಲ. ಸಾಧನೆಯನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕಾಗಿರುವುದು ಮೋಕ್ಷಪ್ರಾಪ್ತಿ ಗೋಸ್ಕರವಾಗಿಯೇ. ಧರ್ಮದಿಂದಲೇ ಅರ್ಥ-ಕಾಮಗಳೂ ಸಿದ್ಧಿಸುತ್ತವೆ. ಹೀಗಿರುವಾಗ ಜನರು ಅದನ್ನು ಏಕೆ ಸೇವಿಸುವುದಿಲ್ಲವೋ ನಾಕಾಣೆ. **'ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ'**–ಎಂದು ನೀವು ಮಹಾಭಾರತದ ಕೊನೆಯ ಭಾಗದಲ್ಲಿ ಸಾರಿದ್ದೀರಿ ; ಇದು ಜನರಿಗೆ ಆಕರ್ಷಕವಾದ ಮಾತು. ಅವರು ಸ್ವಾಭಾವಿಕ ವಾಗಿಯೇ ಅರ್ಥ-ಕಾಮಗಳಲ್ಲಿ ಆಸಕ್ತರಾಗಿರುತ್ತಾರೆ. 'ಧರ್ಮವೂ ಅದಕ್ಕೆ ಸಾಧನ' ಎಂದು ನಿಮ್ಮ ಮಾತಿನಿಂದ ಸ್ಫೂರ್ತಿಪಡೆದು ಅವರು ಅರ್ಥ-ಕಾಮಗಳನ್ನೇ ಸೇವಿಸು

ಮಹಾಮುನಿಗಳೇ! ಭಗವಂತನ ಗುಣಗಾನ, ಶ್ರವಣ–ಮುಂತಾದುವು ಗಳಿಂದಲೇ ಆ ಪರಮಾತ್ಮನ ಪ್ರಾಪ್ತಿಯಾಗುವುದೆಂಬುದಕ್ಕೆ ನನ್ನ ಚರಿತ್ರೆಯೇ ಒಂದು ಉದಾಹರಣೆಯಾಗಿದೆ. ನಾನು ಹಿಂದಿನ ಕಲ್ಪದಲ್ಲಿ ವೇದವಾದಿಗಳಾದ ಬ್ರಾಹ್ಮಣರ ದಾಸಿಯೊಬ್ಬಳ ಪುತ್ರನಾಗಿದ್ದೆನು. ನಾನು ಬಾಲಕನಾಗಿರುವಾಗಲೇ ನನ್ನ ತಾಯಿಯು ನನ್ನನ್ನು ವರ್ಷರ್ತುವೊಂದರಲ್ಲಿ ಒಂದು ಕಡೆ ಚಾತುರ್ಮಾಸ್ಯಮಾಡುತ್ತಿದ್ದ ಕೆಲವು ಯೋಗಿಗಳ ಶುಶ್ರೂಷೆಗಾಗಿ ನೇಮಿಸಿದಳು. ನಾನು ಬಾಲಕನಾಗಿದ್ದರೂ ಚಾಪಲ್ಯರಹಿತನಾಗಿದ್ದು ಶಾಂತ ಸ್ವಭಾವದವನಾಗಿದ್ದೆನು. ಆಟ-ಪಾಠಗಳಲ್ಲಿ ಆಸಕ್ತಿಯಿಲ್ಲದೇ ಮಿತಭಾಷಿ ಯಾಗಿ, ಅವರನ್ನು ಎಲ್ಲ ವಿಧಗಳಿಂದಲೂ ಹಿಂಬಾಲಿಸುತ್ತಾ ಅವರ ಸೇವೆ ಯನ್ನು ಮಾಡುತ್ತಿದ್ದುದರಿಂದ, ಆ ಯೋಗಿಗಳು ಸಮದರ್ಶಿಗಳಾಗಿದ್ದರೂ ನನ್ನ ಮೇಲೆ ಅತ್ಯಂತ ಅನುಗ್ರಹಮಾಡಿದರು. **'ಚಕ್ರುಃ ಕೃಪಾಂ ಯದ್ಯಪಿ ತುಲ್ಯದರ್ಶನಾಃ ।** ' ನಾನು ಅವರ ಅನುಮತಿಯನ್ನು ಪಡೆದು ಅವರ ಅಡಿಗೆಯ ಪಾತ್ರೆಯಲ್ಲಿ ಅಂಟಿಕೊಂಡಿದ್ದ ಉಚ್ಛಿಷ್ಟವನ್ನು ಪ್ರಸಾದವೆಂದು ಭಾವಿಸಿ ದಿನಕ್ಕೆ ಒಂದು ಬಾರಿ ಮಾತ್ರ ಸೇವಿಸುತ್ತಿದ್ದೆನು. ಅದರಿಂದ ನನ್ನ ಪಾಪಗಳೆಲ್ಲವೂ ತೊಳೆದುಹೋದುವು. ಈ ರೀತಿಯಲ್ಲಿ ಅವರ ಸೇವೆ-ಶುಶ್ರೂಷೆಗಳನ್ನು ಮಾಡುತ್ತಾ ಮಾಡುತ್ತಾ ನನ್ನ ಹೃದಯವು ಶುದ್ಧವಾಗಿ ಅವರು ಆಚರಿಸುತ್ತಿದ್ದ ಯೋಗಧರ್ಮದಲ್ಲೇ ನನಗೆ ಹೃದಯಪೂರ್ವಕವಾದ ಅಭಿರುಚಿಯುಂಟಾಗತೊಡಗಿತು. ಮಹರ್ಷಿಗಳೇ! ಆ ಸತ್ಸಂಗದಲ್ಲಿ ಪ್ರತಿ ದಿನವೂ ಶ್ರೀಭಗವತ್ಕಥೆಯನ್ನು ಉಕ್ಕೇರಿದ ಭಕ್ತಿಯಿಂದ ಗಾನಮಾಡುತ್ತಿದ್ದ ಆ ಮಹಾತ್ಮರ ಅನುಗ್ರಹದಿಂದ ನಾನೂ ರಮಣೀಯವಾದ ಶ್ರೀಕೃಷ್ಣನ ಕಥೆಗಳನ್ನು ಕೇಳಿದೆನು. ಶ್ರದ್ಧಾಪೂರ್ವಕವಾಗಿ ಅವುಗಳನ್ನು ತಪ್ಪದೇ ಕೇಳುತ್ತಿದ್ದ ನನ್ನ ಬುದ್ಧಿಯು ಕಾಲಕ್ರಮದಲ್ಲಿ, ಮನೋಹರವಾದ ಕೀರ್ತಿ ಯುಳ್ಳ ಸ್ತೋತ್ರಪ್ರಿಯನಾದ ಆ ಮಹಾಪ್ರಭುವಿನಲ್ಲಿ ನಿಶ್ಚಲವಾಗಿ ನೆಲೆಸಿ

---

ತ್ತಾರೆ ; ಪರಮಾತ್ಮನನ್ನು ಭಜಿಸುವುದೇ ಇಲ್ಲ. ಇದರಿಂದ ನೀವು ಜನರನ್ನು ತಪ್ಪು ದಾರಿಗೆ ಎಳೆದಂತಾಗಿದೆ. ಯಾವುದಾದರೂ ವಿಷಯವು 'ಅಧರ್ಮ' ಎಂದು ತಿಳಿದರೂ ಜನರು ಅದನ್ನು ಬಿಡಲಾರರು. ಇನ್ನು ನೀವು ಅದಕ್ಕೆ ಧರ್ಮದ ಬಣ್ಣವನ್ನೂ ಕೊಟ್ಟುಬಿಟ್ಟರೆ ಅವರು ಅದನ್ನು ಕೈಬಿಟ್ಟಾರೆಯೇ? ಭಗವಂತನನ್ನು ಭಜಿಸುತ್ತಾರೆಯೇ?

ಬಿಟ್ಟಿತು. ಹಾಗೆ ನೆಲೆಸಿದಾಗ ನನಗೆ ಈ ಸದಸದಾತ್ಮಕವಾದ ಜಗತ್ತೆಲ್ಲವೂ ಪರಬ್ರಹ್ಮಸ್ವರೂಪವಾದ ನನ್ನ ಆತ್ಮದಲ್ಲೇ ಮಾಯೆಯಿಂದ ರಚಿತವಾಗಿರುವುದು ಕಾಣತೊಡಗಿತು. ಹೀಗೆ ಮಹಾತ್ಮರಾದ ಆ ಮಹರ್ಷಿಗಳು ಶರದೃತುವಿನ ಎರಡು ತಿಂಗಳು ಮತ್ತು ವರ್ಷರ್ತುವಿನ ಎರಡು ತಿಂಗಳು–ಒಟ್ಟು ನಾಲ್ಕು ತಿಂಗಳ ಅವಧಿಯಲ್ಲಿ ಪ್ರತಿದಿನವೂ ಮೂರು ಸಂಧ್ಯಾಸಮಯಗಳಲ್ಲೂ ಮಾಡುತ್ತಿದ್ದ ಭಗವಂತನ ಪವಿತ್ರವಾದ ಕೀರ್ತಿಯ ಗಾನವನ್ನು ಅತ್ಯಂತಪ್ರೇಮದಿಂದ ಕೇಳುತ್ತಿದ್ದ ನನ್ನ ಚಿತ್ತದಲ್ಲಿ ರಜೋಗುಣ-ತಮೋಗುಣಗಳನ್ನು ನಾಶಮಾಡುವ ಭಕ್ತಿಯು ಉದಯಿಸಿತು. ನಾನು ಆ ಯೋಗಿಗಳಲ್ಲಿ ಅತ್ಯಂತ ಅನುರಕ್ತನಾಗಿದ್ದೆನು ; ವಿನಯಶಾಲಿಯಾಗಿದ್ದೆನು. ಅವರ ಸೇವೆಯಿಂದ ನನ್ನ ಪಾಪಗಳೆಲ್ಲವೂ ನಾಶಹೊಂದಿದುವು. ನನ್ನ ಹೃದಯದಲ್ಲಿ ಶ್ರದ್ಧೆಯೂ, ಇಂದ್ರಿಯಗಳಲ್ಲಿ ಶಮ-ದಮಾದಿಗಳೂ ತುಂಬಿ, ಮನಸ್ಸು-ಮಾತು ಮತ್ತು ದೇಹಗಳೆಂಬ ತ್ರಿಕರಣಗಳಿಂದಲೂ ನಾನು ಅವರಿಗೆ ಅತ್ಯಂತ ವಿಧೇಯನಾಗಿರಲು, ದೀನವತ್ಸಲರಾದ ಆ ಮಹಾತ್ಮರು-ಸ್ವಯಂ ಭಗವಂತನೇ ತನ್ನ ಮುಖದಿಂದ ಉಪದೇಶಮಾಡಿದ ರಹಸ್ಯವಾದ ಯಾವ ಜ್ಞಾನವುಂಟೋ–ಆ ಜ್ಞಾನವನ್ನು ತಾವು ಅಲ್ಲಿಂದ ಹೊರಡುವ ಸಮಯದಲ್ಲಿ ನನಗೆ ಪರಮಕೃಪೆಯಿಂದ ಉಪದೇಶಮಾಡಿದರು. ಆ ಉಪದೇಶದಿಂದಲೇ ಜಗನ್ಮೂಲನೂ, ಸದಸದ್ವ್ಯಾಪಿಯೂ ಆಗಿರುವ ಶ್ರೀಕೃಷ್ಣಪರಮಾತ್ಮನ ಮಾಯೆಯ ಪ್ರಭಾವವನ್ನು ಅರಿತೆನು. ಅದನ್ನರಿತರೆ ತಾನೇ ಅವನ ಪರಮಪದದ ಪ್ರಾಪ್ತಿಯಾಗುವುದು!* (ಶ್ಲೋಕ 23-31)

---

* ಸ್ವಮಾಯಯಾ ಪಶ್ಯೇ ಮಯಿ ಬ್ರಹ್ಮಣಿ ಕಲ್ಪಿತಂ ಪರೇ = ಪ್ರಪಂಚಾತೀತನಾಗಿ ಪರಬ್ರಹ್ಮಸ್ವರೂಪನಾಗಿರುವ ನನ್ನಲ್ಲೇ ಕಲ್ಪಿತವಾಗಿದೆ. ಇದು ವಾಸ್ತವವಲ್ಲ. ಅವಿದ್ಯೆಯಿಂದ ನನ್ನಲ್ಲಿ ಕಲ್ಪಿತವಾಗಿದೆ–ಎಂದು ಕಂಡುಬರತೊಡಗಿತು. (ಶ್ರೀಧರೀಯ) ಪರಮಾತ್ಮನಿಂದ ಧಾರ್ಯನಾದ ನನ್ನಲ್ಲಿ ಈ ಸದಸದಾತ್ಮಕ (ಕಾರ್ಯ-ಕಾರಣರೂಪ) ವಾದ ಜಗತ್ತು ನನ್ನ ಪ್ರಕೃತಿಯಿಂದ ನಿಷ್ಪನ್ನವಾಗಿದೆ. ಸ್ವತಃ ನಿಷ್ಪನ್ನವಾಗಿಲ್ಲ. ಪ್ರಕೃತಿಯು ಚೇತನಧಾರ್ಯವಾಗಿದೆ. ಚೇತನನು ಪರಮಾತ್ಮಧಾರ್ಯನಾಗಿದ್ದಾನೆ–ಎಂಬುದನ್ನು ತಿಳಿದುಕೊಂಡೆನು. (ವೀರರಾಘವೀಯ) ಸದಸದಾತ್ಮಕವಾದ ಈ ದೇಹೇಂದ್ರಿಯಾದಿಗಳು ನನಗೆ ಸ್ವತಃ ಬಂದುದಲ್ಲ ; ಭಗವಂತನಿಗೆ ಅಧೀನವಾಗಿರುವ ಪ್ರಕೃತಿಯಿಂದ ರಚಿತವಾದುದೆಂದು ತಿಳಿದುಕೊಂಡೆನು. (ಭಾಗವತಚಂದ್ರಿಕಾ)

ಓ ಬ್ರಹ್ಮರ್ಷಿಗಳೇ! ನಮ್ಮ ಕರ್ಮಗಳನ್ನೇ ಸದಸದ್ವ್ಯಾಪಕನೂ, ಸರ್ವ ನಿಯಾಮಕನೂ ಆಗಿರುವ ಶ್ರೀಭಗವಂತನಿಗೇ ಸಮರ್ಪಣೆಮಾಡಿಬಿಟ್ಟರೆ ಅವು ನಮ್ಮ ತಾಪತ್ರಯಗಳನ್ನು ನಾಶಪಡಿಸುವ ದಿವ್ಯೌಷಧಿಗಳೇ ಆಗಬಲ್ಲುವೆಂಬ ರಹಸ್ಯವನ್ನು ನಾನೂ ತಿಳಿದು ಅದನ್ನೇ ನಿಮಗೂ ಸೂಚಿಸಿದ್ದೇನೆ.

**ಆಮಯೋ ಯಶ್ಚ ಭೂತಾನಾಂ ಜಾಯತೇ ಯೇನ ಸುವ್ರತ ।**
**ತದೇವ ಹ್ಯಾಮಯಂ ದ್ರವ್ಯಂ ನ ಪುನಾತಿ ಚಿಕಿತ್ಸಿತಮ್ ॥೩೩॥**

**ಏವಂ ನೃಣಾಂ ಕ್ರಿಯಾಯೋಗಾಃ ಸರ್ವೇ ಸಂಸೃತಿಹೇತವಃ ।**
**ತ ಏವಾತ್ಮವಿನಾಶಾಯ ಕಲ್ಪನ್ತೇ ಕಲ್ಪಿತಾಃ ಪರೇ ॥೩೪॥**

ಯಾವ ಪದಾರ್ಥಗಳನ್ನು ಪ್ರಾಣಿಗಳು ಸೇವಿಸಿದರೆ ಅವುಗಳಿಗೆ ರೋಗ ಉಂಟಾಗುತ್ತದೆಯೋ–ಅದೇ ಪದಾರ್ಥಗಳನ್ನೇ ಚಿಕಿತ್ಸಾವಿಧಿಗೆ ಅನುಸಾರ ವಾಗಿ ಸೇವಿಸಿದರೆ ಅವುಗಳಿಂದ ಆ ರೋಗದ ಉಪಶಮನವೇ ಆಗಿ ಶುದ್ಧಿ ಯುಂಟಾಗುವುದಲ್ಲವೇ? ಹಾಗೆಯೇ ಕರ್ಮಗಳೆಲ್ಲವೂ ಮನುಷ್ಯನನ್ನು ಸಂಸಾರಚಕ್ರದಲ್ಲಿ ತಳ್ಳುವ ಶಕ್ತಿಯನ್ನು ಹೊಂದಿದ್ದರೂ, ಆ ಕರ್ಮಗಳನ್ನೇ ಭಗವಂತನಿಗೆ ಸಮರ್ಪಣೆಮಾಡಿಬಿಟ್ಟರೆ ಅವು ತಮ್ಮ ಕರ್ಮತ್ವವನ್ನೇ ಕಳೆದು ಕೊಂಡು ಆತ್ಮಶುದ್ಧಿಗೆ ಕಾರಣವಾಗುತ್ತವೆ.

ಇಲ್ಲಿ ನಾವು ಏನೇನು ಕರ್ಮಗಳನ್ನು ಮಾಡುತ್ತೇವೆಯೋ ಅವೆಲ್ಲವನ್ನೂ ಭಕ್ತಿಯೋಗದೊಡನೆ ಕೂಡಿ ಆಚರಿಸಿದ ಪಕ್ಷದಲ್ಲಿ ಅವು ಭಗವಂತನ ಸಂತೋಷಕ್ಕೆ ಕಾರಣವಾಗುತ್ತವೆ. ಆ ಭಗವಂತನ ಸಂತುಷ್ಟಿಯಿಂದ ತಾನೇ ಜ್ಞಾನಪ್ರಾಪ್ತಿಯಾಗುವುದು! ಹಾಗೆಯೇ ಭಗವಂತನ ಆಜ್ಞಾನುಸಾರವಾಗಿ ಅವನಿಗೇ ಅರ್ಪಣೆಯಾಗುವಂತೆ ಕರ್ಮಗಳನ್ನಾಚರಿಸುವಾಗ ಜನರು ಬಾರಿ-ಬಾರಿಗೂ ಆ ಶ್ರೀಕೃಷ್ಣಪರಮಾತ್ಮನ ಗುಣಗಳನ್ನೂ, ನಾಮಗಳನ್ನೂ ಸಂಕೀರ್ತನೆಮಾಡುತ್ತಾರೆ ಮತ್ತು ಸ್ಮರಿಸುತ್ತಾರೆ. “ಭಗವಂತನೂ, ವಾಸುದೇವನೂ ಆದ ನಿನಗೆ ನಮಸ್ಕಾರವು. ನಿನ್ನನ್ನೇ ಧ್ಯಾನಿಸುತ್ತೇನೆ.

---

ಈ ಕಾರ್ಯ-ಕಾರಣಾತ್ಮಕವಾದ ಜಗತ್ತು ನನ್ನಲ್ಲಿ ಬಿಂಬಭೂತನಾಗಿರುವ ಪರಮಾತ್ಮನಲ್ಲಿ ಆತನ ಮಾಯೆ ( ಇಚ್ಛೆ ) ಯಿಂದ ‘ಇಲ್ಲಿ ಇರು’–ಎಂದು ಸಂಕಲ್ಪಿತವಾಗಿದೆ.

(ವಿಜಯಧ್ವಜೀಯ)

ಪ್ರದ್ಯುಮ್ನನೂ, ಅನಿರುದ್ಧನೂ, ಸಂಕರ್ಷಣನೂ ಆಗಿರುವ ನಿನಗೆ ನಮೋ ನಮಃ''–ಎಂದು ಶ್ರೀಭಗವಂತನ ಚತುರ್ವ್ಯೂಹಮೂರ್ತಿಗಳ ನಾಮ ಸಂಕೀರ್ತನೆಯನ್ನು ಮಾಡುತ್ತಾ ಪ್ರಾಕೃತಮೂರ್ತಿರಹಿತನೂ, ಅಪ್ರಾಕೃತ ಮಂತ್ರಮೂರ್ತಿಯೂ ಆಗಿರುವ ಭಗವಾನ್ ಯಜ್ಞಪುರುಷನನ್ನು ಯಾವನು ಪೂಜೆಮಾಡುತ್ತಾನೆಯೋ–ಅವನೇ ಯಥಾರ್ಥಜ್ಞಾನಿಯು. ಆತನ ಜ್ಞಾನವು ತಾನೇ ಪೂರ್ಣವಾದುದು ; ಬ್ರಹ್ಮರ್ಷಿಗಳೇ! ಹೀಗೆ ನಾನು ಆತನ ಆಜ್ಞೆಯಂತೆ ನಡೆದುಕೊಂಡೆನು. ಮತ್ತು ಆತನಿಗೆ ಅರ್ಪಿತವಾಗಿ ಕರ್ಮಗಳನ್ನು ಆಚರಿಸಿದೆನು. ಇದರಿಂದ ಪ್ರಸನ್ನಗೊಂಡ ಭಗವಾನ್ ಕೇಶವಸ್ವಾಮಿಯು ನನಗೆ ತನ್ನ ನಿಜವಾದ ಜ್ಞಾನವನ್ನೂ, ಐಶ್ವರ್ಯವನ್ನೂ ಮತ್ತು ತನ್ನ ವಿಷಯವಾದ ಪರಮಭಕ್ತಿಭಾವವನ್ನೂ ಕರುಣಿಸಿದನು. ಓ ಜ್ಞಾನನಿಧಿಗಳೇ! ನೀವೂ ಕೂಡ ಯಾವುದು ಮಹಾಜ್ಞಾನಿಗಳ ಜಿಜ್ಞಾಸೆಯನ್ನೂ ತೀರಿಸಿ ಅವರಿಗೆ ಜ್ಞಾನಪರಿಪೂರ್ಣತೆಯನ್ನುಂಟುಮಾಡುತ್ತದೆಯೋ–ಅಂತಹ ಭಗವಂತನ ಪ್ರೇಮಮಯವಾದ ದಿವ್ಯಲೀಲೆಗಳನ್ನು ವರ್ಣನೆಮಾಡಿರಿ. ನಾನಾದುಃಖಗಳಿಂದ ಮತ್ತೆ-ಮತ್ತೆ ದುಃಖಗಳಿಗೆ ಈಡಾಗುವ ಮನುಷ್ಯರ ಸಂಕಷ್ಟಗಳು ಇದರಿಂದಲೇ ಶಮನಹೊಂದುವುವು. ಇದನ್ನು ಬಿಟ್ಟು ನೆಮ್ಮದಿಗೆ ಬೇರೆ ಯಾವ ಉಪಾಯವೂ ಇಲ್ಲ.''

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೫ನೆಯ ಅಧ್ಯಾಯವು ಮುಗಿಯಿತು.

---

ಪ್ರಥಮಸ್ಕಂಧ ೬ನೆಯ ಅಧ್ಯಾಯ

## ನಾರದರ ಪೂರ್ವಚರಿತ್ರೆ : ಅವಶಿಷ್ಟಭಾಗ

**ಏವಂ ನಿಶಮ್ಯ ಭಗವಾನ್ದೇವರ್ಷೇರ್ಜನ್ಮ ಕರ್ಮ ಚ ।**
**ಭೂಯಃ ಪಪ್ರಚ್ಛ ತಂ ಬ್ರಹ್ಮನ್ ವ್ಯಾಸಃ ಸತ್ಯವತೀಸುತಃ ॥೧॥**

**ಸೂತಪುರಾಣಿಕರು ಹೇಳಿದರು :**

ಭಗವಾನ್ ವೇದವ್ಯಾಸರು ದೇವರ್ಷಿನಾರದರಿಂದ ಅವರ ಜನ್ಮಮತ್ತು ಕರ್ಮಗಳ ವಿಷಯವನ್ನು ಕೇಳಿದ ಬಳಿಕ ಅವರನ್ನು ಮತ್ತೆ ಪ್ರಶ್ನಿಸಿದರು :

“ದೇವರ್ಷಿಗಳೇ! ತಮಗೆ ಜ್ಞಾನೋಪದೇಶಮಾಡಿದ ಯತಿವರೇಣ್ಯರು ಹೊರಟುಹೋದ ಬಳಿಕ ತಾವೇನು ಮಾಡಿದಿರಿ? ಆಗ ತಾವಿನ್ನೂ ತುಂಬಾ ಬಾಲ್ಯಾವಸ್ಥೆಯಲ್ಲಿದ್ದಿರಲ್ಲವೇ? ತಮ್ಮ ಆಯುಷ್ಯದ ಉಳಿದ ಭಾಗವನ್ನು ಹೇಗೆ ಕಳೆದಿರಿ? ಮರಣಸಮಯದಲ್ಲಿ ದೇಹವನ್ನು ತ್ಯಾಗಮಾಡಿದ್ದಾದರೂ ಹೇಗೆ? ಹೇಳಿರಿ. ಬ್ರಹ್ಮಪುತ್ರರೇ! ಎಲೈ ಮುನಿಶ್ರೇಷ್ಠರೇ! ಕಾಲವೆಂಬುದು ಎಲ್ಲವನ್ನೂ ನಿಶ್ಶೇಷವಾಗಿ ಅಳಿಸಿಬಿಡುವುದು. ಹಾಗಿದ್ದರೂ ನಿಮ್ಮ ಜನ್ಮಾಂತರದ ನೆನಪನ್ನು ಮಾತ್ರ ಹೇಗೆ ಅಳಿಸದೇ ಬಿಟ್ಟಿತು?”

ನಾರದರು ವ್ಯಾಸರಿಗೆ ಹೀಗೆ ಉತ್ತರಿಸಿದರು :

“ನನಗೆ ಜ್ಞಾನೋಪದೇಶಮಾಡಿದ ಆ ಯೋಗಿಗಳು ಹೊರಟು ಹೋದ ನಂತರ ಇನ್ನೂ ಬಾಲ್ಯಾವಸ್ಥೆಯಲ್ಲಿದ್ದ ನಾನು ಹೇಗೆ ನಡೆದುಕೊಂಡೆನೆಂಬುದನ್ನು ಕೇಳಿರಿ : ನನ್ನ ತಾಯಿಗೆ ನಾನೊಬ್ಬನೇ ಮಗ. ಆಕೆಯು ಹೆಂಗಸು ; ಜೊತೆಗೆ ಮೂರ್ಖಳು ಮತ್ತು ದಾಸಿಯಾಗಿದ್ದವಳು. ನನಗೂ ಆಕೆಯನ್ನು ಬಿಟ್ಟು ಬೇರಾವ ಗತಿಯೂ ಇರಲಿಲ್ಲ. ಆದ್ದರಿಂದ ಆಕೆಯು ನನ್ನನ್ನು ತನ್ನ ಸ್ನೇಹಪಾಶದಿಂದ ಕಟ್ಟಿಹಾಕಿದ್ದುದು ಸಹಜವೇ ಆಗಿತ್ತು. ನನ್ನ ಯೋಗ-ಕ್ಷೇಮಗಳನ್ನೇ ಆಕೆಯು ಸದಾ ಚಿಂತಿಸುತ್ತಿದ್ದರೂ ಪರಾಧೀನೆಯಾಗಿದ್ದ ಕಾರಣ ಏನೂ ಮಾಡಲಾರದವಳಾಗಿದ್ದಳು. ಮರದ ಬೊಂಬೆಯಂತೆ ಎಲ್ಲರೂ ಈಶ್ವರಾಧೀನರಾಗಿಯೇ ಚಲಿಸುತ್ತಾರಷ್ಟೇ! ನಾನೂ ತಾಯಿಯ ಸ್ನೇಹಬಂಧನದಲ್ಲಿ ಬ್ರಾಹ್ಮಣವಸತಿಯಲ್ಲೇ ವಾಸಮಾಡುತ್ತಿದ್ದೆನು. ಆಗಿನ್ನೂ ಐದು ವರ್ಷ ವಯಸ್ಸಿನವನಾಗಿದ್ದ ನನಗೆ ದಿಕ್ಕು-ದೇಶ- ಕಾಲ-ಸಂಬಂಧ-ಇದಾವುದರ ಅರಿವೂ ಇರಲಿಲ್ಲ. ಹೀಗಿರುವಾಗ ಒಂದು ದಿನ ರಾತ್ರಿ ಆ ನನ್ನ ತಾಯಿಯು ಹಾಲುಕರೆಯಲು ಮನೆಯಿಂದ ಹೊರಟಾಗ ದಾರಿಯಲ್ಲಿ ಆಕೆಯ ಕಾಲು ಒಂದು ಹಾವಿಗೆ ತಗುಲಲು ಅದು ಆ ನನ್ನ ಬಡತಾಯಿಯನ್ನು ಕಚ್ಚಿಬಿಟ್ಟಿತು. ಇದರಲ್ಲಿ ಆ ಸರ್ಪದ್ದೇನು ತಪ್ಪು? ಮೃತ್ಯು ವಿನ ಪ್ರೇರಣೆಯಿಂದ ಅದು ಹಾಗೆ ಮಾಡಿತು. ಆಗ ನಾನು-ನನಗೆ ಒದಗಿದ ತಾಯಿಯ ಮರಣವು ಭಕ್ತರ ಮಂಗಳವನ್ನೇ ಬಯಸುವ ಭಗವಂತನು ನನ್ನ ಮೇಲೆ ಮಾಡಿದ ಒಂದು ಅನುಗ್ರಹವೆಂದೇ ಭಾವಿಸಿದೆನು. ಅಲ್ಲಿಂದ ಹಾಗೆಯೇ ಉತ್ತರದಿಕ್ಕಿನ ಕಡೆ ಹೊರಟುಬಿಟ್ಟೆನು. (ಶ್ಲೋಕ 1-10)

ಹೀಗೆ ಒಂಟಿಯಾಗಿ ಹೋಗುತ್ತಿದ್ದ ನನಗೆ ದಾರಿಯಲ್ಲಿ ಅನೇಕ ಧನ-ಧಾನ್ಯಸಂಪನ್ನವಾದ ದೇಶಗಳೂ, ನಗರಗಳೂ, ಗ್ರಾಮಗಳೂ, ಗೊಲ್ಲರ ದೊಡ್ಡಿಗಳೂ, ಬಗೆ-ಬಗೆಯ ಗಣಿಗಳೂ, ರೈತರ ಕೊಪ್ಪಲುಗಳೂ, ನದಿಗಳೂ, ಪರ್ವತದ ತಪ್ಪಲಿನ ಸಣ್ಣ ಊರುಗಳೂ, ಶಿಬಿರಗಳೂ, ದೊಡ್ಡ ಮರಗಳ ತೋಪುಗಳೂ, ಅರಣ್ಯಗಳೂ, ಉದ್ಯಾನಗಳೂ, ಬಣ್ಣ-ಬಣ್ಣದ ಧಾತುಗಳಿಂದ ಕಂಗೊಳಿಸುವ ವಿಚಿತ್ರವಾದ ಪರ್ವತಗಳೂ ಕಾಣಿಸಿದುವು. ಕೆಲವು ಕಡೆ ಆನೆಗಳಿಂದ ಮುರಿಯಲ್ಪಟ್ಟ ಕೊಂಬೆಗಳುಳ್ಳ ಅರಣ್ಯವೃಕ್ಷಗಳನ್ನೂ ನೋಡಿದೆನು. ಬಗೆ-ಬಗೆಯಾಗಿ ಚಿಲಿಪಿಲಿಗುಟ್ಟುವ ಪಕ್ಷಿಗಳಿಂದಲೂ ಝೇಂಕರಿಸುವ ದುಂಬಿಗಳಿಂದಲೂ ಕೂಡಿದ, ದೇವತಾಪೂಜೆಗೆ ಬರುವ ಕಮಲಪುಷ್ಪಗಳಿಂದ ಕಳಕಳಿಸುತ್ತಿದ್ದ, ತಣ್ಣೀರುತುಂಬಿದ ತಾವರೆಯ ಕೊಳಗಳೂ ನನಗೆ ಸಿಕ್ಕಿದುವು. ಹಾಗೆಯೇ ಬಗೆ-ಬಗೆಯ ಹುಲ್ಲುಗಳು, ಬೆತ್ತದ ಬಳ್ಳಿಗಳು, ಜೊಂಡುಹುಲ್ಲು, ತೆನೆಗಳು, ದರ್ಭೆಗಳ ಪೊದೆಗಳು, ಗಾಳಿಗೆ ಶಬ್ದಮಾಡುವ ಬಿದಿರುಮೆಳೆಗಳು–ಇವುಗಳಿಂದ ದಟ್ಟವಾಗಿ, ಭೀಕರವಾಗಿ ಭಯಂಕರವಾದ ಆಕಾರದಿಂದ ಕೂಡಿ ಹಾವು, ಗೂಬೆ, ನರಿ ಮುಂತಾದುವುಗಳ ವಾಸದ ಅಂಗಳಗಳಂತಿದ್ದ ಬಹುದೊಡ್ಡ ಗೊಂಡಾರಣ್ಯವನ್ನು ಕಂಡೆನು. (ಶ್ಲೋಕ 11-14)

ನನ್ನ ದೇಹೇಂದ್ರಿಯಗಳು ನಡೆದು ನಡೆದು ಬಳಲಿ ಬೆಂಡಾಗಿದ್ದುವು. ಜೊತೆಗೆ ತಡೆಯಲಾರದ ಹಸಿವು-ಬಾಯಾರಿಕೆಗಳು ನನ್ನನ್ನು ಬಾಧಿಸುತ್ತಿದ್ದುವು. ಆಗ ಅಲ್ಲಿದ್ದ ನದಿಯೊಂದರ ಮಡುವಿನಲ್ಲಿ ಸ್ನಾನಮಾಡಿ, ನೀರು ಕುಡಿದು, ಆಚಮನಮಾಡಿ ಆಯಾಸಪರಿಹಾರಮಾಡಿಕೊಂಡೆನು. ಅನಂತರ ಆ ನಿರ್ಜನವಾದ ಅರಣ್ಯದಲ್ಲಿ ಒಂದು ಅರಳೀಮರದ ಅಡಿಯಲ್ಲಿ ಕುಳಿತು ಆತ್ಮದಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನ ಸ್ವರೂಪವನ್ನು ಆ ಯೋಗಿಗಳಿಂದ ಕೇಳಿದ್ದ ರೀತಿಯಲ್ಲಿ ಮನಸ್ಸಿನಲ್ಲಿ ಧ್ಯಾನಮಾಡತೊಡಗಿದೆನು. ಹಾಗೆ ಭಾವಪೂರ್ಣವಾದ ಏಕಾಗ್ರಚಿತ್ತದಿಂದ ಭಗವಂತನ ಪಾದಾರವಿಂದಗಳನ್ನೇ ಧ್ಯಾನಿಸುತ್ತಿರುವಾಗ ಆತನ ದರ್ಶನಮಾಡಬೇಕೆಂಬ ಉತ್ಕಟವಾದ ಆಶೆಯಿಂದ ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬುತ್ತಿರುವಂತೆಯೇ ನನ್ನ ಹೃದಯದಲ್ಲಿ ಮೆಲ್ಲ-ಮೆಲ್ಲನೆ ಶ್ರೀಹರಿಯು ಪ್ರಕಟವಾಗಿಬಿಟ್ಟನು. ಓ ಮಹರ್ಷಿಯೇ!

ಆಗ ನಾನು ಪ್ರೇಮದ ಪರಮೋದ್ರೇಕದಿಂದ ರೋಮಾಂಚಿತನಾಗಿ ಅನಿರ್ವಚನೀಯವಾದ ಸುಖವನ್ನು ಅನುಭವಿಸಿದೆನು. ಆನಂದದ ಪ್ರವಾಹದಲ್ಲಿ ಮುಳುಗಿ ಹೋಗಿದ್ದ ನನಗೆ ಒಳಗೂ-ಹೊರಗೂ ಏನೂ ಕಾಣಿಸದೇ ಹೋಯಿತು. ಆಗ ಮನಸ್ಸಿಗೆ ಅತ್ಯಂತರಮಣೀಯವಾಗಿ ಸರ್ವಶೋಕಗಳನ್ನೂ ಹೋಗಲಾಡಿಸುವ ಶ್ರೀಭಗವಂತನ ರೂಪವು ಇದ್ದಕ್ಕಿದ್ದಂತೆ ಕಾಣದೇ ಹೋಗಲು ನನಗೆ ತುಂಬಾ ಕಳವಳವುಂಟಾಯಿತು. ನಾನು ತಡೆಯಲಾರದ ಬೇಸರ-ಬೇಗುದಿಗಳಿಂದ ಥಟ್ಟನೆ ಮೇಲೆದ್ದುಬಿಟ್ಟೆನು. (ಶ್ಲೋಕ 15-19)

ಆ ದಿವ್ಯಮಂಗಳಸ್ವರೂಪವನ್ನು ಮತ್ತೆ ಕಾಣಲೇಬೇಕೆಂಬ ಹಂಬಲದಿಂದ ತುಂಬಿದ ಮನಸ್ಸನ್ನು ನಾನು ಹಿಂದಿನಂತೆಯೇ ಹೃದಯದಲ್ಲಿ ನೆಲೆಗೊಳಿಸಿ ಎಷ್ಟೇ ಪ್ರಯತ್ನಿಸಿದರೂ ಅದು ಮತ್ತೆ ಕಾಣಿಸದೇ ಹೋದಾಗ, ಮನಸ್ಸಿಗೆ ತುಂಬಾ ಬೇಸರವಾಗಿ, ಸಮಾಧಾನವಿಲ್ಲದೇ ರೋಗಬಂದವನಂತೆ ನರಳತೊಡಗಿದೆನು. ಹೀಗೆ ಆ ನಿರ್ಜನವಾದ ಅರಣ್ಯದಲ್ಲಿ ಆತನ ಪುನರ್ದರ್ಶನಕ್ಕಾಗಿ ಪುನಃ ಪುನಃ ಪ್ರಯತ್ನಮಾಡುತ್ತಿದ್ದ ನನ್ನನ್ನು ಕುರಿತು ಮಾತಿಗೆ ಸಿಲುಕದ ಮಹಾಪ್ರಭು ನನ್ನ ಶೋಕವನ್ನು ಶಮನಗೊಳಿಸುವಂತೆ ಗಂಭೀರವೂ ಮೃದುವೂ ಆದ ಮಾತಿನಿಂದ ಹೀಗೆಂದನು :

"ಅಪ್ಪಾ! ಇದೇ ಜನ್ಮದಲ್ಲಿ ನೀನು ಇಲ್ಲಿ ಮತ್ತೊಮ್ಮೆ ನನ್ನನ್ನು ನೋಡಲಾರೆ. ಏಕೆಂದರೆ : ಮನಸ್ಸಿನ ವಾಸನೆಗಳು ಶಾಂತವಾಗದೇ ಇರುವ, ಅಪಕ್ವವಾದ ಮನಸ್ಸುಳ್ಳ, ಅರೆಬರೆ ಯೋಗಿಗಳಿಗೆ ನನ್ನ ದರ್ಶನವು ಅತ್ಯಂತ ದುರ್ಲಭವು.

**ಅವಿಪಕ್ವಕಷಾಯಾಣಾಂ ದುರ್ದರ್ಶೋಽಹಂ ಕುಯೋಗಿನಾಮ್ ॥**

ಪಾಪರಹಿತನಾದ ಬಾಲಕನೇ! ನಿನಗೆ ನಾನು ಒಂದು ಬಾರಿ ನನ್ನ ರೂಪವನ್ನು ತೋರಿಸಿದ್ದಕ್ಕೆ ಕಾರಣವೇನೆಂದರೆ : ನನ್ನನ್ನು ಪಡೆಯುವ ಹಂಬಲ ನಿನ್ನಲ್ಲಿ ಜಾಗೃತವಾಗಲಿ—ಎಂಬುದಷ್ಟೇ. ನನ್ನನ್ನು ಪಡೆಯಲೇಬೇಕೆಂಬ ಉತ್ಕಟವಾದ ಆಕಾಂಕ್ಷೆಯು ಸಾಧಕನ ಹೃದಯದಲ್ಲಿ ಒಮ್ಮೆ ಬಂದರೆ ಆಗ ಆತನ ಹೃದಯದಲ್ಲಿ ಹುದುಗಿರುವ ಎಲ್ಲ ವಾಸನೆಗಳೂ ಸ್ವಲ್ಪ- ಸ್ವಲ್ಪವಾಗಿ ತೊಲಗಿಹೋಗುತ್ತವೆ. ನೀನು ಸ್ವಲ್ಪಕಾಲ ಮಾಡಿದ ಸಾಧು-ಸಂತರ

ಸೇವೆಯಿಂದ ನಿನ್ನ ಚಿತ್ತವು ನನ್ನಲ್ಲಿ ಸ್ಥಿರಗೊಂಡಿದೆ.* ಈಗ ನೀನು ಈ ಪ್ರಾಕೃತಶರೀರವನ್ನು ತ್ಯಜಿಸಿ ನನ್ನ ಪಾರ್ಷದನಾಗಿಬಿಡುವೆ. ನನ್ನನ್ನು ಪಡೆಯ ಬೇಕೆಂದು ನಿನ್ನಲ್ಲಿ ನೆಲೆಗೊಂಡಿರುವ ಈ ದೃಢನಿಶ್ಚಯವು ಎಂದಿಗೂ ಕದಲು ವುದಿಲ್ಲ. ಸಮಸ್ತಪ್ರಜಾಸೃಷ್ಟಿಯೂ ನಿಂತುಹೋಗುವ ಮಹಾಪ್ರಳಯ ಸಮಯದಲ್ಲೂ ನನ್ನ ಅನುಗ್ರಹದಿಂದ ನಿನಗೆ ನನ್ನ ಸ್ಮರಣೆಯು ಕುಂದದೇ ಹಾಗೆಯೇ ಇರುವುದು." ಇಷ್ಟನ್ನು ಹೇಳಿ ಆ ಪರಮಾತ್ಮನೆಂಬ ಅವ್ಯಕ್ತವೂ, ಆಕಾಶದರ್ಶವೂ ಆಗಿರುವ ಆ ಮಹಾವಸ್ತುವು ಮೌನವಾಯಿತು. ನಾನೂ ಕೂಡ ಆ ಪರಮಕೃಪೆಯನ್ನು ಮನಗಂಡು ಮಹತೋಮಹೀಯನಾದ ಆ ಭಗವಂತನಿಗೆ ತಲೆಬಾಗಿ ನಮಸ್ಕರಿಸಿದೆನು. ಆದ್ದರಿಂದಲೇ ನಾನು ಲಜ್ಜೆ-ಸಂಕೋಚಗಳನ್ನು ತೊರೆದು ಶ್ರೀಭಗವಂತನ ರಹಸ್ಯಮಯವೂ, ಮಂಗಳ ಮಯವೂ ಆದ ನಾಮಗಳ ಮತ್ತು ಲೀಲೆಗಳ ಸಂಕೀರ್ತನೆ ಮತ್ತು ಸ್ಮರಣೆ ಮಾಡತೊಡಗಿದೆನು. ಭೂಮಿಯಲ್ಲೆಲ್ಲಾ ಸಂಚಾರಮಾಡುತ್ತಾ ಮದ-ಮಾತ್ಸರ್ಯಗಳನ್ನೂ, ಆಸೆಗಳನ್ನೂ ತೊರೆದು ಸಂತುಷ್ಟವಾದ ಮನಸ್ಸಿನಿಂದ ಕೂಡಿ ಕಾಲವನ್ನು ಎದುರುನೋಡುತ್ತಾ ಇರತೊಡಗಿದೆನು. (ಶ್ಲೋಕ 20-27)

ಮಹಾತ್ಮರೇ! ಹೀಗೆ ಶ್ರೀಕೃಷ್ಣಭಾವದಿಂದ ತುಂಬಿದ ಮತಿಯುಳ್ಳವ ನಾಗಿ, ನಿರ್ಲಿಪ್ತನಾಗಿ, ಪರಿಶುದ್ಧವಾದ ಹೃದಯದಿಂದ ಕಾಲತಳ್ಳುತ್ತಿರು ವಾಗಲೇ ವರ್ಷಾಕಾಲದಲ್ಲಿ ಧಿಡೀರನೇ ಸುಳಿಯುವ ಮಿಂಚಿನಂತೆ–ನಾನು ನಿರೀಕ್ಷಣೆಮಾಡುತ್ತಿದ್ದ ಕಾಲವು ಬಂದೇಬಿಟ್ಟಿತು. ಪರಿಶುದ್ಧವಾದ ಶ್ರೀಭಗವಂತನ ಪಾರ್ಷದಶರೀರವನ್ನು ಹೊಂದುವ ಸಮಯ ಬಂದೊಡನೆಯೇ ಪ್ರಾರಬ್ಧ ಕರ್ಮವು ಕಳೆದುಹೋದುದರಿಂದ ಪಾಂಚಭೌತಿಕಶರೀರವು ಕಳಚಿಬಿದ್ದು ಹೋಯಿತು. ಅನಂತರ ಆ ಕಲ್ಪದ ಕೊನೆಯಲ್ಲಿ ಭಗವಂತನಾದ ಶ್ರೀಮನ್ನಾರಾಯಣನು ಪ್ರಳಯಕಾಲದ ಸಮುದ್ರಜಲದಲ್ಲಿ ನಿದ್ರೆಮಾಡಲು ಸಂಕಲ್ಪಿಸಿದನು. ಆಗ ನಾನು ಭಗವಂತನ ಉಸಿರಿನೊಡನೆ ಉಸಿರಾಗಿ

---

* ಸತ್ಸೇವಯಾSದೀರ್ಘಯಾಪಿ = ಇಲ್ಲಿ ಅದೀರ್ಘಯಾ ಎಂದು ಪದವಿಭಾಗಮಾಡಿ ಸ್ವಲ್ಪಕಾಲ ಆಚರಿಸಿದ ಸಾಧು-ಸಂತರ ಸೇವೆಯಿಂದಲೇ ಎಂದು ಅರ್ಥಮಾಡಿದ್ದೇವೆ. 'ಸತ್ಸೇವಯಾ ದೀರ್ಘಯಾ ತೇ' ಎಂಬ ಪಾಠವೂ ಇದೆ. ಅದರ ಪ್ರಕಾರ 'ನೀನು ಬಹಳ ಕಾಲ ಆಚರಿಸಿದ ಸಾಧು-ಸಂತರ ಸೇವೆಯಿಂದ' ಎಂದು ಭಾಷಾಂತರಿಸಬೇಕಾ

ಸೇರಿಕೊಂಡು ಆತನ ಹೃದಯದೊಳಗೆ ಪ್ರವೇಶಿಸಿಬಿಟ್ಟೆನು.* ಒಂದು ಸಾವಿರ ಚತುರ್ಯುಗಗಳು ಕಳೆದನಂತರ ಆ ಭಗವಂತನು ಎಚ್ಚರಗೊಂಡು ಈ ಜಗತ್ತನ್ನು ಸೃಷ್ಟಿಸಲು ಬಯಸಿದಾಗ ಆತನ ಪ್ರಾಣಗಳ ಮೂಲಕ ಮರೀಚಿ ಮುಂತಾದ ಋಷಿಗಳೊಡನೆ ನಾನೂ ಸಹ ಪ್ರಕಟಗೊಂಡೆನು. ಅಂದಿನಿಂದಲೇ ನಾನು ಶ್ರೀಭಗವಂತನ ಕೃಪೆಯಿಂದ ಮೂರು ಲೋಕಗಳಲ್ಲಿಯೂ ಒಳಗೂ, ಹೊರಗೂ ಯಾವ ಅಡೆ-ತಡೆಗಳೂ ಇಲ್ಲದೇ ಸಂಚರಿಸುತ್ತಿರುವೆನು. ನನ್ನ ಭಗವನ್ಮಯವಾದ ವ್ರತಕ್ಕೆ ಯಾವ ಭಂಗವೂ ಬಂದಿಲ್ಲ. ಅಖಂಡವಾದ ಭಗವಂತನ ಭಜನೆಯೇ ನನ್ನ ಜೀವನದ ಅಸ್ಖಲಿತವ್ರತವಾಗಿದೆ. ದೇವನು ಅನುಗ್ರಹಿಸಿರುವ, ನಾದಬ್ರಹ್ಮನಿಂದ ಅಲಂಕೃತವಾಗಿರುವ ಈ 'ಮಹತೀ' ಎಂಬ ವೀಣೆಯನ್ನು ನುಡಿಸುತ್ತಾ ಶ್ರೀಹರಿಯ ದಿವ್ಯಲೀಲಾಕಥೆಗಳನ್ನು ಹಾಡುತ್ತಾ ಸಂಚರಿಸುತ್ತಿದ್ದೇನೆ. ಸ್ತೋತ್ರಪ್ರಿಯನೂ, ತೀರ್ಥಗಳಿಗೆ ಆಶ್ರಯ ವಾದ ಪವಿತ್ರಪಾದನೂ ಆಗಿರುವ ಶ್ರೀಭಗವಂತನ ಅದ್ಭುತವಾದ ಲೀಲಾ ವಿಲಾಸಗಳನ್ನು ನಾನು ಗಾನಮಾಡಿದರೆ ಆ ಪ್ರಭುವು ಕೂಗಿ ಕರೆಯಲ್ಪಟ್ಟವ ನಂತೆ–ಒಡನೆಯೇ ನನ್ನ ಹೃದಯಕ್ಕೆ ಬಂದು ದಿವ್ಯದರ್ಶನವನ್ನು ದಯ ಪಾಲಿಸುತ್ತಾನೆ.

---

ಗುತ್ತದೆ. ಆದರೆ ಮೊದಲನೇ ಪಾಠವೇ ಉತ್ತಮವೆಂದು ತೋರುತ್ತದೆ. ಏಕೆಂದರೆ : ಬಾಲಕನಾರದರು ಯೋಗಿಗಳ ಸೇವೆಮಾಡಿರುವುದು ನಾಲ್ಕು ತಿಂಗಳಕಾಲ ಮಾತ್ರ.

* ಪ್ರಳಯಸಮುದ್ರಜಲದಲ್ಲಿ ಮಹಾವಿಷ್ಣುವು ಪವಡಿಸಲು ಬಯಸಿದಾಗ ಬ್ರಹ್ಮದೇವರು ತನ್ನ ಸೃಷ್ಟಿಯೊಡನೆ ಆತನ ಹೃದಯದಲ್ಲಿ ಪ್ರವೇಶಮಾಡುತ್ತಿರಲು ಅವರೊಡನೆ ನಾರದರು ಪ್ರವೇಶಮಾಡಿದರು. ಮಹಾವಿಷ್ಣುವು ಎದ್ದಬಳಿಕ ಜಗತ್ತನ್ನು ಸೃಷ್ಟಿಸಲು ಬಯಸಿದ ಬ್ರಹ್ಮದೇವರ ತೊಡೆಯಿಂದ ನಾರದರು ಹುಟ್ಟಿದರು. ಮರೀಚಿ ಮುಂತಾದ ಋಷಿಗಳು ಬ್ರಹ್ಮದೇವರ ಪ್ರಾಣದಿಂದ ಹುಟ್ಟಿದರು. (ವಿಜಯಧ್ವಜೀಯ)

ಅನಿರುದ್ಧಭಗವಂತನು ಪ್ರಳಯಸಮುದ್ರಜಲದಲ್ಲಿ ಪವಡಿಸಲು ಬಯಸಿದಾಗ ಆತನ ನಾಭಿಪದ್ಮದಲ್ಲಿ ನಿದ್ರಿಸಲು ಇಚ್ಛಿಸಿದ ಬ್ರಹ್ಮದೇವರ ಉಸಿರಿನೊಡನೆ ಒಂದಾಗಿ ಸೇರಿಕೊಂಡು ಒಳಗೆ ಪ್ರವೇಶಿಸಿದ ನಾರದರು ಭಗವಂತನ ನಾಭಿಕಮಲದಿಂದ ಬ್ರಹ್ಮದೇವರು ಎದ್ದು ಜಗತ್ತನ್ನು ಸೃಷ್ಟಿಸಲು ಬಯಸಿದಾಗ ಅವರ ಪ್ರಾಣಾದಿಗಳಿಂದ ಮರೀಚಿಸಹಿತರಾದ ವಸಿಷ್ಠಾದಿ ಋಷಿಗಳೂ ಮತ್ತು ನಾರದರೂ ಹೊರಬಂದರು. (ವೀರರಾಘವೀಯ)

ನಾರದರು ಬ್ರಹ್ಮನ ಪುತ್ರರೆಂಬುದು ಪ್ರಸಿದ್ಧವಾಗಿದೆ. ಬ್ರಹ್ಮದೇವರ ತೊಡೆಯಿಂದ

**ಪ್ರಗಾಯತಃ ಸ್ವವೀರ್ಯಾಣಿ ತೀರ್ಥಪಾದಃ ಪ್ರಿಯಶ್ರವಾಃ ।**
**ಆಹೂತ ಇವ ಮೇ ಶೀಘ್ರಂ ದರ್ಶನಂ ಯಾತಿ ಚೇತಸಿ ॥೩೪॥**

ನಾನು ಮಾಡುತ್ತಿರುವ ಈ ಹರಿಚರಿತಸಂಕೀರ್ತನೆಯು, ಮತ್ತೆ-ಮತ್ತೆ ವಿಷಯಸುಖಗಳನ್ನು ಅನುಭವಿಸುವ ಕಾಮನೆಯಿಂದ ಕೂಡಿ ಮನಸ್ಸಿಗೆ ನೆಮ್ಮದಿಯಿಲ್ಲದೇ ತೊಳಲುತ್ತಿರುವ ಸಂಸಾರಿಜೀವಿಗಳಿಗೆ ಭವಸಾಗರವನ್ನು ದಾಟಿಸುವ ಹಡಗಿನಂತಿದೆ. ಕಾಮ-ಲೋಭಾದಿಗಳಿಂದ ಮತ್ತೆ-ಮತ್ತೆ ಹೊಡೆಯಲ್ಪಟ್ಟು ಗಾಯಗೊಳ್ಳುವ ಆತ್ಮವು ಶ್ರೀಭಗವಂತನ ಸೇವೆಯಿಂದ ಪೀಡಾಪರಿಹಾರವನ್ನೇ ಹೊಂದಿ ಪ್ರತ್ಯಕ್ಷವಾದ ಶಾಂತಿಯನ್ನನುಭವಿಸುವುದು. ಅಂತಹ ಶಾಂತಿಯು ಯಮ-ನಿಯಮಗಳೇ ಮುಂತಾದ ಯೋಗಮಾರ್ಗ

---

ನಾರದರೂ–ಅಂಗುಷ್ಠದಿಂದ ದಕ್ಷನೂ ಜನಿಸಿದರೆಂದು ಶ್ರೀಮದ್ಭಾಗವತವೇ ಮುಂದೆ ಹೇಳುತ್ತದೆ. **ಉತ್ಸಙ್ಗಾನ್ನಾರದೋ ಜಜ್ಞೇ ದಕ್ಷೋಽಙ್ಗುಷ್ಠಾತ್ ಸ್ವಯಮ್ಭುವಃ । ಪ್ರಾಣಾದ್ವಸಿಷ್ಠಃ ಸಞ್ಜಾತೋ ಭೃಗುಸ್ತ್ವಚಿ ಕರಾತ್ಕ್ರತುಃ ॥ ಪುಲಹೋ ನಾಭಿತೋ ಜಜ್ಞೇ ಪುಲಸ್ತ್ಯಃ ಕರ್ಣಯೋರ್ಋಷಿಃ । ಅಙ್ಗಿರಾ ಮುಖತೋಽಕ್ಷ್ಣೋಽತ್ರಿಃ ಮರೀಚಿರ್ಮನಸೋಽಭವತ್ ॥** (ಭಾಗ III 12/23-24) ಆದರೆ ಪ್ರಕೃತ ಶ್ಲೋಕದಲ್ಲಿ (ಕಲ್ಪಾಂತೇ... ಜಜ್ಞಿರೇ) ಚತುರ್ಮುಖಬ್ರಹ್ಮನನ್ನು ನೇರವಾಗಿ ಸೂಚಿಸುವ ಯಾವ ಪದವೂ ಇಲ್ಲ. ಬ್ರಹ್ಮದೇವರು ಮಹಾವಿಷ್ಣುವಿನ ದೇಹವನ್ನು ಪ್ರವೇಶಿಸಿ ಆತನೊಡನೆ ಒಂದಾಗಿ ಸೇರಿ ವೈಷ್ಣವೀನಿದ್ರೆಯನ್ನು ಅನುಭವಿಸಿದರು–ಎಂದು ಕೂರ್ಮ ಪುರಾಣವು ಹೇಳುತ್ತದೆ. **'ಅವಾಪವೈಷ್ಣವೀಂ ನಿದ್ರಾಂ ಏಕೀಭೂಯಾಥ ವಿಷ್ಣುನಾ'** ಇಲ್ಲಿ ಬ್ರಹ್ಮದೇವರಿಗೆ ನಾರಾಯಣನೊಡನೆ ಅಭೇದವನ್ನು ಭಾವಿಸಿದೆ. ನಿದ್ರೆಮಾಡಲು ಬಯಸಿದ ನಾರಾಯಣಾಭಿನ್ನರಾದ ಬ್ರಹ್ಮದೇವರು–ಎಂದು ಶ್ರೀಧರೀಯ ವ್ಯಾಖ್ಯಾನ. **'ಬ್ರಹ್ಮಣಃ ಇತಿ ಶ್ರೀನಾರಾಯಣೇನ ಅಭೇದವಿವಕ್ಷಯಾ ಉಕ್ತಂ'** ಪ್ರಳಯಜಲದಲ್ಲಿ ಪವಡಿಸಲು ಬಯಸಿದವನು ಅನಿರುದ್ಧರೂಪಿಯಾದ ನಾರಾಯಣ. ಆ ಸಮಯದಲ್ಲಿ ಬ್ರಹ್ಮದೇವರೂ ಆತನ ನಾಭಿಕಮಲವನ್ನು ಪ್ರವೇಶಿಸಿ ಅವನೊಡನೆ ನಿದ್ರೆಮಾಡಿದರು. ಪ್ರಳಯವು ಮುಗಿದ ಮೇಲೆ ಮಹಾವಿಷ್ಣುವು ಎಚ್ಚರಗೊಂಡಾಗ ಆತನ ನಾಭಿಯಲ್ಲಿದ್ದ ಬ್ರಹ್ಮದೇವರು ಎಚ್ಚರಗೊಂಡರು. ಆಗ ಅವರ ದೇಹದಿಂದ ನಾರದ-ದಕ್ಷಾದಿಗಳು ಜನಿಸಿದರು–ಎಂದು ಟೀಕಾಕಾರರ ಅಭಿಪ್ರಾಯ.

ಮರೀಚಿಯೇ ಮುಂತಾದ ನವಬ್ರಹ್ಮರು.

**ತೀರ್ಥಪಾದಃ** = ಪವಿತ್ರವಾದ ಪಾದಗಳಿರುವವನು. ಸಕಲಜಗತ್ಪಾವನವಾದ ಗಂಗಾತೀರ್ಥಕ್ಕೆ ಉತ್ಪತ್ತಿಸ್ಥಾನವಾದ ಪಾದಾರವಿಂದವುಳ್ಳವನು.

ಗಳಿಂದಲೂ ದೊರಕುವುದಿಲ್ಲ. ಪಾಪರಹಿತರಾದ ಮಹಾತ್ಮರೇ! ನೀವು ಕೇಳಿದ ಪ್ರಶ್ನೆಗಳಿಗೆ ಉತ್ತರವಾಗಿ ನನ್ನ ಜನ್ಮ ಮತ್ತು ಕರ್ಮಗಳ ರಹಸ್ಯಗಳನ್ನು ನಿರೂಪಿಸಿದ್ದೇನೆ. ನಿಮ್ಮ ಆತ್ಮತುಷ್ಟಿಗೆ ಉಪಾಯಗಳಾವುವೆಂಬುದನ್ನೂ ತಿಳಿಸಿಯಾಗಿದೆ."

ಸೂತಪುರಾಣಿಕರು ಹೇಳುತ್ತಾರೆ :

"ಹೀಗೆ ಪರಮಪೂಜ್ಯರಾದ ದೇವರ್ಷಿ ನಾರದರು ವ್ಯಾಸರೊಡನೆ ಸಂಭಾಷಣೆ ನಡೆಸಿ ಅವರ ಅನುಮತಿಯನ್ನು ಪಡೆದು ವೀಣೆಯನ್ನು ನುಡಿ ಸುತ್ತಾ ಇಷ್ಟಬಂದಲ್ಲಿಗೆ ಸಂಚರಿಸಲು ಹೊರಟುಹೋದರು.

**ಅಹೋ ದೇವರ್ಷಿರ್ಧನ್ಯೋಽಯಂ ಯತ್ಕೀರ್ತಿಂ ಶಾರ್ಙ್ಗಧನ್ವನಃ ।**
**ಗಾಯನ್ಮಾದ್ಯನ್ನಿದಂ ತನ್ತ್ರ್ಯಾ ರಮಯತ್ಯಾತುರಂ ಜಗತ್ ॥೩೯॥**

ಆಹಾ! ಎಂತಹ ಧನ್ಯರು ದೇವರ್ಷಿ ನಾರದರು! ಯಾವಾಗಲೂ ತಮ್ಮ ದಿವ್ಯವೀಣೆಯ ಮೂಲಕ ಪರಮಪುರುಷನ ಕೀರ್ತನೆಯನ್ನು ಹಾಡುತ್ತಾ ತಾವೂ ಆನಂದಮಗ್ನರಾಗುವುದಲ್ಲದೇ–ತಾಪತ್ರಯದಿಂದ ಬೆಂದು ಬಳಲಿದ ಜಗತ್ತನ್ನೂ ಮೈಮರೆಸಿ ಆನಂದಪರವಶವನ್ನಾಗಿ ಮಾಡುತ್ತಿದ್ದಾರಲ್ಲವೇ?"

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ಪ್ರಥಮಸ್ಕಂಧದ ೬ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೭ನೆಯ ಅಧ್ಯಾಯ

## ಶ್ರೀಮದ್ಭಾಗವತದ ರಚನೆ : ದ್ರೌಪದೀಪುತ್ರರನ್ನು ಕೊಲೆಮಾಡಿದ ಅಶ್ವತ್ಥಾಮನಿಗೆ ಶಿಕ್ಷೆ

ಶೌನಕರು ಹೀಗೆ ಸೂತಪುರಾಣಿಕರಿಂದ ನಾರದರ ಪೂರ್ವಚರಿತ್ರೆಯನ್ನು ಕೇಳಿದ ಬಳಿಕ ಅವರನ್ನು ಪುನಃ ಪ್ರಶ್ನಿಸಿದರು :

**ನಿರ್ಗತೇ ನಾರದೇ ಸೂತ ಭಗವಾನ್ಬಾದರಾಯಣಃ ।**
**ಶ್ರುತವಾಂಸ್ತದಭಿಪ್ರೇತಂ ತತಃ ಕಿಮಕರೋದ್ವಿಭುಃ ॥೧॥**

"ಪುರಾಣಿಕರೇ! ನಾರದರು ಹೊರಟುಹೋದ ಬಳಿಕ ಅವರ ಅಭಿಪ್ರಾಯವನ್ನು ಕೇಳಿ ತಿಳಿದುಕೊಂಡಿದ್ದ ವಿಶಾಲಹೃದಯರಾಗಿದ್ದ ಭಗವಾನ್ ಬಾದರಾಯಣರು ಏನು ಮಾಡಿದರು?–ಎಂಬುದನ್ನು ತಿಳಿಸಿರಿ."

ಅದಕ್ಕೆ ಸೂತಪುರಾಣಿಕರು ಹೀಗೆ ಉತ್ತರಿಸಿದರು :

"ಬ್ರಹ್ಮನದಿಯೆನಿಸಿದ ಸರಸ್ವತಿಯ ಪಶ್ಚಿಮತೀರದಲ್ಲಿ ಋಷಿಗಳಿಗೆ ಯಜ್ಞ-ಯಾಗಾದಿಗಳನ್ನು ನಡೆಸಲು ಅನುಕೂಲಕರವಾದ ಶಮ್ಯಾಪ್ರಾಸವೆಂಬ ಆಶ್ರಮವೊಂದುಂಟು. ಅಲ್ಲಿಯೇ ವೇದವ್ಯಾಸರ ಆಶ್ರಮವೂ ಇದೆ. ನಾಲ್ಕು ಕಡೆಗಳಿಂದಲೂ ಬದರೀವೃಕ್ಷಗಳ ದಟ್ಟವಾದ ಪುಂಜದಿಂದ ಅಲಂಕೃತ ವಾಗಿದ್ದ ಆ ಪುಣ್ಯಾಶ್ರಮದಲ್ಲಿ ವ್ಯಾಸರು ಕುಳಿತು ಆಚಮನಮಾಡಿ ಸ್ತಿಮಿತ ವಾದ ಮನಸ್ಸಿನಿಂದ ಧ್ಯಾನಾರೂಢರಾದರು. ತಮ್ಮ ಏಕಾಗ್ರವೂ, ಅತಿ ನಿರ್ಮಲವೂ ಆದ ಮನಸ್ಸಿನಲ್ಲಿ ಅವರು ಭಕ್ತಿಯೋಗದಿಂದ ಆದಿಪುರುಷನಾದ ಭಗವಂತನನ್ನೂ ಮತ್ತು ಅವನನ್ನಾಶ್ರಯಿಸಿ ಅವನಿಗೆ ಅಧೀನವಾಗಿರುವ ಮಾಯೆಯನ್ನೂ ಸಂದರ್ಶಿಸಿದರು. ಜೀವನು ಸ್ವತಃ ತ್ರಿಗುಣಾತೀತನಾಗಿದ್ದರೂ ಈ ಮಾಯೆಯ ಮೋಹದಿಂದಲೇ ಅಲ್ಲವೇ ತನ್ನನ್ನು ತ್ರಿಗುಣಾತ್ಮಕನೆಂದು ಭಾವಿಸಿಕೊಂಡು ಅದರಿಂದುಂಟಾದ ಎಲ್ಲ ಅನರ್ಥಗಳಿಗೂ ಭಾಗಿ ಯಾಗುವುದು? ಈ ಅನರ್ಥಗಳನ್ನು ಶಮನಗೊಳಿಸಲು ಸಾಕ್ಷಾತ್ತಾದ ಸಾಧನ: ಶ್ರೀಹರಿಯನ್ನು ಕುರಿತ ಭಕ್ತಿಯೋಗವೊಂದೇ. ಇದನ್ನರಿಯದೇ ತೊಳಲಾಡುತ್ತಿರುವ ಜನರಿಗಾಗಿ ಜ್ಞಾನಿಶ್ರೇಷ್ಠರಾದ ವ್ಯಾಸರು ಈ 'ಸಾತ್ವತಸಂಹಿತೆ'* ಯೆನಿಸಿದ ಶ್ರೀಮದ್ಭಾಗವತವನ್ನು ರಚಿಸಿದರು. ಇದರ ಶ್ರವಣಮಾತ್ರದಿಂದಲೇ ಪರಮಪುರುಷನಾದ ಶ್ರೀಕೃಷ್ಣನಲ್ಲಿ ಜೀವರ ಶೋಕ-ಮೋಹ-ಭಯಗಳನ್ನು ತೊಲಗಿಸುವ ಪರಮಭಕ್ತಿಯುಂಟಾಗುವುದು. ಪರಮಹಂಸಸಂಹಿತೆಯಾದ ಈ ಭಾಗವತವನ್ನು ರಚಿಸಿ ಕ್ರಮಪಡಿಸಿದ ಬಳಿಕ ಅದನ್ನು ಅವರು ನಿವೃತ್ತಿಧರ್ಮಪರಾಯಣರಾಗಿದ್ದ ತಮ್ಮ ಪುತ್ರರತ್ನರಾದ ಶುಕಮಹರ್ಷಿಗಳಿಗೆ ಉಪದೇಶಮಾಡಿದರು."

---

* ಸಾತ್ವತರು ಎಂದರೆ : ಯಾದವರು. ಯಾದವಕುಲತಿಲಕನಾದ ಶ್ರೀಕೃಷ್ಣನು ಸಾತ್ವತನೆಂದು ವಿಶೇಷವಾಗಿ ಕರೆಯಲ್ಪಡುತ್ತಾನೆ. ಅವನ ವಿಷಯವಾದ ಸಂಹಿತೆ– ಶ್ರೀಮದ್ಭಾಗವತಕ್ಕೆ ಸಾತ್ವತಸಂಹಿತೆಯೆಂದು ಹೆಸರು. 'ಯಾದವಸ್ಸು ದಶಾರ್ಹಸ್ಸು ಸಾತ್ವತಾಃ ಕುಕ್ಕುರಾಶ್ಚ ಯೇ' (ತ್ರಿಕಾಂಡಶೇಷ) 'ಹೇಮಶಂಖಃ ಶತಾವರ್ತೀ ಮನುಸಾತ್ವತವಾರಿಶಾಃ 'ಎಂಬ ಕೋಶದಂತೆ ಮಹಾವಿಷ್ಣುವಿಗೂ ಸಾತ್ವತನೆಂದು ಹೆಸರು.

ಇದನ್ನು ಕೇಳಿ ಶೌನಕರು 'ಸೂತಪುರಾಣಿಕರೇ! ಆ ಶುಕಮುನಿಗಳಾದರೋ ನಿವೃತ್ತಿಧರ್ಮದಲ್ಲಿ ಪರಾಯಣರಾದವರು. ಪರಮಾತ್ಮನನ್ನು ಬಿಟ್ಟು ಉಳಿದೆಲ್ಲದರಲ್ಲೂ ಉದಾಸೀನರಾಗಿರುವವರು. ಸದಾ ಆತ್ಮನಲ್ಲೇ ರಮಿಸುವವರು. ಇಂತಹವರೂ ಸಹ ಇಷ್ಟೊಂದು ದೊಡ್ಡಗ್ರಂಥವನ್ನು ಅಭ್ಯಾಸಮಾಡಲು ಕಾರಣವೇನು?"–ಎಂದು ಪ್ರಶ್ನಿಸಿದರು.

ಸೂತಪುರಾಣಿಕರು ಶೌನಕಾದಿಮಹರ್ಷಿಗಳಿಗೆ ಹೀಗೆಂದರು :

**ಆತ್ಮಾರಾಮಾಶ್ಚ ಮುನಯೋ ನಿರ್ಗ್ರನ್ಥಾ ಅಪ್ಯುರುಕ್ರಮೇ ।**
**ಕುರ್ವನ್ತ್ಯಹೈತುಕೀಂ ಭಕ್ತಿಮಿತ್ಥಮ್ಭೂತಗುಣೋ ಹರಿಃ* ॥೧೦॥**

"ಕೇವಲ ಆತ್ಮಾರಾಮರಾಗಿ ಯಾವ ಸಂಶಯಗ್ರಂಥಿಯೂ ಇಲ್ಲದ ಮುನಿಗಳೂ ಕೂಡ ಪ್ರಭುವಾದ ತ್ರಿವಿಕ್ರಮನಲ್ಲಿ ನಿಷ್ಕಾರಣವಾದ ಭಕ್ತಿಯನ್ನು ಆಚರಿಸುತ್ತಾರೆ. ಶ್ರೀಹರಿಯ ಕಲ್ಯಾಣಗುಣಗಳೇ ಅಂತಹವು. ಅವು ಎಲ್ಲರನ್ನೂ ತಮ್ಮ ಕಡೆಗೇ ಆಕರ್ಷಿಸಿಕೊಳ್ಳುತ್ತವೆ.

ಆ ದಿವ್ಯಗುಣಗಳಿಂದ ಆಕರ್ಷಿಸಲ್ಪಟ್ಟು ಸದಾ ಭಾಗವತಪ್ರಿಯರಾದ ಆ ಭಗವಾನ್ ಬಾದರಾಯಣಪುತ್ರರು ಈ ಬೃಹದ್‌ಗ್ರಂಥವನ್ನು ಅಧ್ಯಯನ ಮಾಡಿದರು.

---

* ನಿರ್ಗ್ರನ್ಥಾಃ = ಯಾವ ಸಂಶಯಗ್ರಂಥಿಯೂ ಇಲ್ಲದವರು. ('ನಿವೃತ್ತಹೃದಯ ಗ್ರನ್ಥಯಃ') ಅಥವಾ ಕೃತಕೃತ್ಯರಾದ್ದರಿಂದ ಯಾವ ಗ್ರಂಥಗಳ ಅವಶ್ಯಕತೆಯೂ ಇಲ್ಲದವರು. **'ತದಾ ಗನ್ತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ'** (ಶ್ರೀಗೀತಾ) (ಶ್ರೀಧರೀಯ)

ಲೌಕಿಕಾರ್ಥವುಳ್ಳ ಪ್ರಬಂಧಗಳನ್ನು ಧರಿಸದವರು. ಅನಿರ್ಗ್ರಾಹ್ಯಾಃ – ಎಂಬ ಪಾಠಾಂತರದಂತೆ ಯಾವ ವಿದ್ಯೆ-ಶಿಕ್ಷಣದ ಆವಶ್ಯಕತೆಯೂ ಇಲ್ಲದವರು ; ಯಾರಿಗೂ ಅಧೀನರಾಗದವರು. (ವೀರರಾಘವೀಯ)

ಶಬ್ದಾದಿವಿಷಯಸಂಗರಹಿತರಾದವರು. (ಭಾಗವತಚಂದ್ರಿಕಾ)

ವಿಜಯಧ್ವಜೀಯದಲ್ಲಿ ನಿರ್ಗ್ರಾಹ್ಯಃ–ಎಂದು ಪದವಿಭಾಗ. ಉಪಾದಾನವಿಲ್ಲದವರೂ–ಪರಿಗ್ರಹಮಾಡದವರೂ ಎಂದರ್ಥ.

**ಅಹೈತುಕೀಂ** = ಫಲಸಂಗರಹಿತವಾದ ಭಕ್ತಿಯನ್ನು (ಭಾಗವತಚಂದ್ರಿಕಾ), ಅನನ್ಯಪ್ರಯೋಜನವಾದ ಭಕ್ತಿಯನ್ನು (ವೀರರಾಘವೀಯ), ಪ್ರಯೋಜನರಹಿತನಾಗಿ ಆನಂದರೂಪವಾದ ಭಕ್ತಿಯಲ್ಲಿ (ವಿಜಯಧ್ವಜೀಯ).

ಈಗ ನಾನು ರಾಜರ್ಷಿ ಪರೀಕ್ಷಿತನ ಜನ್ಮ-ಕರ್ಮ ಮತ್ತು ಮೋಕ್ಷಗಳ ವೃತ್ತಾಂತವನ್ನೂ, ಪಾಂಡವರ ಸ್ವರ್ಗಾರೋಹಣದ ಕಥೆಯನ್ನೂ, ಅಂತೆಯೇ ಶ್ರೀಕೃಷ್ಣನ ಅವತಾರಕಥೆಯನ್ನೂ ಹೇಳುತ್ತೇನೆ ; ಕೇಳಿರಿ :

ಕೌರವ-ಪಾಂಡವರ ಯುದ್ಧದಲ್ಲಿ ಎರಡೂ ಪಕ್ಷಗಳ ವೀರರೂ ಸ್ವರ್ಗಸ್ಥರಾಗಿ ದುರ್ಯೋಧನನ ತೊಡೆಗಳು ಮುರಿದುಹೋದ ಸಮಯ ದಲ್ಲಿ ಅಶ್ವತ್ಥಾಮನು ನಿದ್ರೆಮಾಡುತ್ತಿದ್ದ ದ್ರೌಪದೀಪುತ್ರರ ತಲೆಗಳನ್ನು ಕತ್ತರಿಸಿ ಅವುಗಳನ್ನು ದುರ್ಯೋಧನನಿಗೆ ಕಾಣಿಕೆಯನ್ನಾಗಿ ಸಮರ್ಪಿಸಿದನು.* ಇದು ಪ್ರಭುವಾದ ದುರ್ಯೋಧನನಿಗೆ ಪ್ರಿಯವಾದ ಕಾರ್ಯವೆಂದು ಅವನು ಭಾವಿಸಿದ್ದನು. ಆದರೆ ಅದು ಅವನಿಗೂ ಅಪ್ರಿಯವೇ ಆಯಿತು. ಏಕೆಂದರೆ : ಇಂತಹ ನೀಚಕರ್ಮವನ್ನು ಎಲ್ಲರೂ ನಿಂದಿಸುತ್ತಾರೆ. ಮಕ್ಕಳ ಆ ಭಯಂಕರ ವಾದ ಕೊಲೆಯ ಸಮಾಚಾರವನ್ನು ಕೇಳಿದ ದ್ರೌಪದಿಗೆ ತಡೆಯಲಾರದಷ್ಟು ದುಃಖವುಂಟಾಯಿತು. ಅವಳು ಬಹಳವಾಗಿ ಸಂಕಟಪಡುತ್ತಾ ಕಣ್ಣೀರು ಸುರಿ ಸುತ್ತಾ ಗೋಳಾಡತೊಡಗಿದಳು. ಆಗ ಅರ್ಜುನನು "ಭದ್ರೇ! ಆ ಕೊಲೆ ಗಡುಕನಾದ, ಆತತಾಯಿಯಾದ** ನೀಚಬ್ರಾಹ್ಮಣನ ತಲೆಯನ್ನು ಗಾಂಡೀವಧನುಸ್ಸಿನ ಬಾಣಗಳಿಂದ ಕತ್ತರಿಸಿ ನಿನಗೆ ಬಹುಮಾನವನ್ನಾಗಿ ತಂದುಕೊಡುವೆನು. ಪುತ್ರರ ಉತ್ತರಕ್ರಿಯೆಗಳನ್ನು ಮುಗಿಸಿದ ಬಳಿಕ ಆ ತಲೆಯನ್ನು ಕಾಲಿನಿಂದ ಮೆಟ್ಟಿ ಅನಂತರ ಸ್ನಾನಮಾಡುವಿಯಂತೆ. ಆಗ ನಿನ್ನ ಕಣ್ಣೀರನ್ನೊರೆಸುವೆನು"–ಎಂದು ಆಕೆಗೆ ಸಮಾಧಾನ ಹೇಳಿದನು.

ಹೀಗೆ ಬಗೆ-ಬಗೆಯ ಮಧುರವಾದ ಮಾತುಗಳಿಂದ ಆಕೆಗೆ ಸಾಂತ್ವನ ಮಾಡಿ ಕವಚವನ್ನು ಧರಿಸಿ ತನ್ನ ಭಯಂಕರವಾದ ಗಾಂಡೀವಧನುಸ್ಸನ್ನು

---

* ಉಪಾಹರತ್ = ಉಪಹಾರವನ್ನಾಗಿ, ಕಾಣಿಕೆಯನ್ನಾಗಿ ತಂದುಕೊಟ್ಟನು. ಅಪಾ ಹರತ್ – ಎಂಬ ಪಾಠಾಂತರವೂ ಉಂಟು. ಅಪಹರಿಸಿದನು, ಕತ್ತರಿಸಿಹಾಕಿದನು–ಎಂದು ಆಗ ಅರ್ಥವಾಗುತ್ತದೆ. (ಶ್ಲೋಕ ೧೪)

** ಅತತಾಯೀ = ಕೊಲೆಪಾತಕಿಯಾದ. 'ಆತತಾಯೀ ವಧೋದ್ಯತಃ' ಕೊಲೆಪಾತಕಕ್ಕೆ ಸಿದ್ಧನಾಗಿರುವವನು. 'ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ! ಕ್ಷೇತ್ರದಾರಾಪಹರ್ತಾ ಚ ಷಡೇತೇ ಆತತಾಯಿನಃ ॥'–ಎಂಬಂತೆ ಕೊಲೆಗಾಗಿ ಬೆಂಕಿ ಹಚ್ಚುವವನು, ವಿಷಕೊಡುವವನು, ದುಷ್ಟವಾದ ಉದ್ದೇಶದಿಂದ ಶಸ್ತ್ರಧರಿಸುವವನು.

ತೆಗೆದುಕೊಂಡು ಮಿತ್ರಶ್ರೇಷ್ಠನಾದ ಶ್ರೀಕೃಷ್ಣನನ್ನೇ ಸಾರಥಿಯನ್ನಾಗಿ ಮಾಡಿಕೊಂಡು ರಥವನ್ನೇರಿ ಗುರುಪುತ್ರನಾದ ಅಶ್ವತ್ಥಾಮನನ್ನು ಬೆನ್ನಟ್ಟಿ ಹೋದನು. ಶಿಶುಹತ್ಯೆಮಾಡಿದ್ದ ಆ ಪಾತಕಿಯು–ಅರ್ಜುನನು ರಥದಲ್ಲಿ ಕುಳಿತು ತನ್ನನ್ನು ಅಟ್ಟಿಸಿಕೊಂಡು ಬರುತ್ತಿರುವುದನ್ನು ದೂರದಿಂದಲೇ ಕಂಡು ಹೆಚ್ಚು ಭಯಗೊಂಡು ತನ್ನ ಪ್ರಾಣ ಉಳಿಸಿಕೊಳ್ಳುವುದಕ್ಕಾಗಿ ರುದ್ರನಿಗೆ ಹೆದರಿ ಓಡಿದ ಸೂರ್ಯನಂತೆ* ಭೂಮಿಯಲ್ಲಿ ಸಾಧ್ಯವಾದಷ್ಟು ದೂರ ಓಡಿಹೋಗತೊಡಗಿದನು. ಅಶ್ವತ್ಥಾಮನ ಕುದುರೆಗಳು ತುಂಬಾ ಬಳಲಿಹೋಗಿದ್ದುವು. ತನಗೆ ಬೇರಾವ ಗತಿಯೂ ಇಲ್ಲವೆಂದು ಕಂಡುಕೊಂಡು ಬ್ರಹ್ಮಾಸ್ತ್ರವೊಂದೇ ತನ್ನನ್ನು ರಕ್ಷಿಸುವ ಸಾಧನವೆಂದು ಅವನು ಯೋಚಿಸಿದನು. ಅವ ನಿಗೆ ಆ ಅಸ್ತ್ರವನ್ನು ಉಪಸಂಹಾರಮಾಡುವ ವಿಧಿ ತಿಳಿದಿರಲಿಲ್ಲವಾದರೂ ಪ್ರಾಣಸಂಕಟ ಒದಗಿಬಂದಿದ್ದನ್ನು ಕಂಡು ಆತನು ಆಚಮನಮಾಡಿ ಧ್ಯಾನಸ್ಥನಾಗಿ ಆ ಬ್ರಹ್ಮಾಸ್ತ್ರವನ್ನೇ ಸಂಧಾನಮಾಡಿಬಿಟ್ಟನು. ಆ ಅಸ್ತ್ರದಿಂದ ಸರ್ವದಿಕ್ಕುಗಳಲ್ಲೂ ಭಯಂಕರವಾಗಿ ವ್ಯಾಪಿಸುವ ಪ್ರಚಂಡವಾದ ತೇಜಸ್ಸು ಹೊರಹೊಮ್ಮಿತು. ಅದರಿಂದ ತನ್ನ ಪ್ರಾಣಕ್ಕೆ ಅಪಾಯ ಒದಗುತ್ತಿರುವುದನ್ನು ಕಂಡು ಅರ್ಜುನನು ತನ್ನನ್ನು ರಕ್ಷಿಸುವಂತೆ ಶ್ರೀಕೃಷ್ಣಪರಮಾತ್ಮನನ್ನು

---

ಹಣವನ್ನು ಕಸಿದುಕೊಳ್ಳುವವನು, ಭೂಮಿಯನ್ನು ಅಪಹರಿಸುವವನು, ಹೆಂಡತಿಯನ್ನು ಅಪಹರಿಸುವವನು–ಈ ಆರು ಮಂದಿಗೂ ಆತತಾಯಿಗಳೆಂದು ಹೆಸರು. ಇಂತಹವರನ್ನು ಯಾವ ವಿಚಾರವನ್ನೂ ಮಾಡದೇ ಕೊಂದುಹಾಕಬೇಕೆಂದು ಧರ್ಮಶಾಸ್ತ್ರಗಳು ಹೇಳುತ್ತವೆ. **'ಆತತಾಯಿನಮಾಯಾನ್ತಂ ಹನ್ಯಾದೇವಾವಿಚಾರಯನ್'**

* **'ರುದ್ರಭಯಾದ್ಯಥಾರ್ಕಃ'** = ಎಂದು ಮೂಲ. ವಿದ್ಯುನ್ಮಾಲಿಯೆಂಬ ರಾಕ್ಷಸನು ರುದ್ರದೇವರ ಅನುಗ್ರಹದಿಂದ ಒಂದು ಸುವರ್ಣವಿಮಾನರಥವನ್ನು ಪಡೆದು ಸೂರ್ಯನ ಹಿಂದೆಯೇ ಸಂಚರಿಸುತ್ತಾ ವಿಮಾನದ ಪ್ರಕಾಶದಿಂದ ಕತ್ತಲೆಯನ್ನು ಪೂರ್ಣವಾಗಿ ಧ್ವಂಸಮಾಡಿ ರಾತ್ರಿಯೇ ಆಗದಂತೆ ಮಾಡಿಬಿಟ್ಟನು. ಆಗ ಕುಪಿತನಾದ ಸೂರ್ಯನು ತನ್ನ ತೇಜಸ್ಸಿನಿಂದ ಆ ರಥವನ್ನು ಕರಗಿಸಿ ಕೆಳಗೆ ಬೀಳಿಸಿಬಿಡಲು ರುದ್ರದೇವರಿಗೆ ತುಂಬಾ ಕೋಪಬಂದಿತು. ಅದಕ್ಕೆ ಹೆದರಿ ಸೂರ್ಯನು ಓಡಿಹೋದನು. ರುದ್ರದೇವರ ಕ್ರೂರದೃಷ್ಟಿಯಿಂದ ಸುಟ್ಟುಹೋಗುತ್ತಾ ಅವನು ವಾರಾಣಸೀಕ್ಷೇತ್ರದಲ್ಲಿ ಲೋಲಾರ್ಕನೆಂಬ ಹೆಸರಿನಿಂದ ಹುಟ್ಟಿದನು–ಎಂದು ವಾಮನಪುರಾಣದ ಕಥೆಯನ್ನು ಇದಕ್ಕೆ

ಪ್ರಾರ್ಥನೆಮಾಡಿದನು. ಅವನು ಶ್ರೀಭಗವಂತನನ್ನು ಹೀಗೆ ಸ್ತೋತ್ರಮಾಡಿ ಬೇಡಿಕೊಂಡನು :

ಅರ್ಜುನನ ಪ್ರಾರ್ಥನೆ :

**ಕೃಷ್ಣ ಕೃಷ್ಣ ಮಹಾಬಾಹೋ ಭಕ್ತಾನಾಮಭಯಂಕರ ।**
**ತ್ವಮೇಕೋ ದಹ್ಯಮಾನಾನಾಮಪವರ್ಗೋಽಸಿ ಸಂಸೃತೇಃ ॥೨೨॥**

"ಓ ಕೃಷ್ಣ! ಕೃಷ್ಣ! ಮಹಾಭಾಗನೇ! ಮಹಾಬಾಹುವೇ! ಭಕ್ತರಿಗೆ ಅಭಯನೀಡುವ ಪ್ರಭುವೇ! ಸಂಸಾರದ ಸಂತಾಪಗಳಿಂದ ಸುಟ್ಟುಹೋಗುತ್ತಿರುವ ಜೀವಗಳನ್ನು ಉದ್ಧರಿಸುವ ಮುಕ್ತಿದಾಯಕನು ನೀನೊಬ್ಬನೇ.

ಪ್ರಕೃತಿಯನ್ನು ಮೀರಿರುವ ಪರಮಪುರುಷ–ಪರಮೇಶ್ವರನೂ ನೀನೇ. ಜ್ಞಾನಶಕ್ತಿಯಿಂದ ಮಾಯೆಯನ್ನು ಹೊರದೂಡಿ ಶುದ್ಧವೂ ಅದ್ವಿತೀಯವೂ ಆದ ಆತ್ಮಸ್ವರೂಪದಲ್ಲಿ ನೆಲೆಗೊಂಡಿರುವವನೂ ನೀನೇ. ಮಾಯೆಯಿಂದ ಮೋಹಗೊಂಡಿರುವ ಜೀವಿಗಳಿಗೆ ಧರ್ಮಾದಿರೂಪವಾದ ಶ್ರೇಯಸ್ಸನ್ನು ಪ್ರಭಾವಾತಿಶಯದಿಂದ ನೀನು ತಾನೇ ಉಂಟುಮಾಡುವವನು? ನೀನು ಈ ಅವತಾರವನ್ನು ಮಾಡಿರುವುದೂ ಭೂಮಿಯ ಭಾರವನ್ನು ಕಳೆಯುವುದಕ್ಕಾಗಿ ಮತ್ತು ಅನನ್ಯಭಾವವುಳ್ಳ ಭಕ್ತರು ನಿರಂತರವಾಗಿ ಧ್ಯಾನಮಾಡಲು ಶುಭಾಲಂಬನವನ್ನು ಕೊಡುವುದಕ್ಕಾಗಿ ಅಲ್ಲವೇ? ಓ ದೇವದೇವನೇ! ಅತಿ ಭಯಂಕರವಾಗಿ ಎಲ್ಲ ಕಡೆಗಳಲ್ಲೂ ಹರಡಿಕೊಂಡಿರುವ ಮಹಾತೇಜಸ್ಸೊಂದು

---

ಪೋಷಕವಾಗಿ ಹೇಳಿ 'ರುದ್ರನಿಗೆ ಭಯಪಟ್ಟು ಓಡಿದ ಸೂರ್ಯನಂತೆ'–ಎಂಬ ಆಶಯ ವನ್ನೂ ಶ್ರೀಧರೀಯದಲ್ಲಿ ನೋಡುತ್ತೇವೆ.

**'ರುದ್ರಭಯಾದ್ಯಥಾ ಕಃ'** **'ರುದ್ರಭಯಾದ್ಯಥಾರ್ಕಃ'** ಎಂದೂ ಪಾಠಾಂತರಗಳುಂಟು. ಕಃ – ಎಂದರೆ ಬ್ರಹ್ಮ; ಪ್ರಜಾಪತಿ. ದಕ್ಷಯಜ್ಞದಲ್ಲಿ ವೀರಭದ್ರರೂಪಿಯಾದ ರುದ್ರನು ತನ್ನನ್ನು ಅಟ್ಟಿಸಿಕೊಂಡು ಬಂದಾಗ ಹೆದರಿ ಓಡಿದ ದಕ್ಷಪ್ರಜಾಪತಿಯಂತೆ–ಎಂದು ಅರ್ಥ. 'ಬ್ರಹ್ಮದೇವರು'–ಎಂದು ಅರ್ಥಮಾಡಿ–'ಮೃಗರೂಪವನ್ನು ಧರಿಸಿ ತನ್ನ ಪುತ್ರಿಯೊಡನೆ ರಮಿಸಲು ಹೋದ ಬ್ರಹ್ಮನು ರುದ್ರನಿಗೆ ಹೆದರಿ ಓಡಿಹೋದಂತೆ'–ಎಂದು ಶ್ರೀಧರೀಯ ವ್ಯಾಖ್ಯಾನ.

ವಿಜಯಧ್ವಜೀಯರ ಪ್ರಕಾರ :- **'ರುದ್ರಭಯಾದ್ಯಥಾ ಕಃ'** ಎಂಬ ಪಾಠದಂತೆ (ತನ್ನ ಐದನೆಯ ತಲೆಯನ್ನು ಕತ್ತರಿಸಲು ಬಂದ ) ರುದ್ರನನ್ನು ನೋಡಿ ಹೆದರಿ ಬ್ರಹ್ಮನು ಓಡಿಹೋದಂತೆ– ಎಂದು ಅರ್ಥ. ಅಸುರಜನರನ್ನು ಮೋಹಗೊಳಿಸಲು

ಬರುತ್ತಿದೆ. ಇದು ಯಾವುದು? ಎಲ್ಲಿಂದ ಬರುತ್ತಿದೆ? ನನಗೆ ಏನೂ ತಿಳಿಯುತ್ತಿಲ್ಲವಲ್ಲಾ!"

ಹೀಗೆ ಪ್ರಾರ್ಥನೆಮಾಡಿದ ಅರ್ಜುನನಿಗೆ ಶ್ರೀಭಗವಂತನು ಹೀಗೆಂದನು:

"ಅರ್ಜುನ! ಇದು ಅಶ್ವತ್ಥಾಮನು ಪ್ರಯೋಗಿಸಿರುವ ಬ್ರಹ್ಮಾಸ್ತ್ರ. ತನಗೆ ಪ್ರಾಣಸಂಕಟ ಒದಗಿರುವುದರಿಂದ ಅವನು ಇದರ ಪ್ರಯೋಗವನ್ನು ಮಾಡಿದ್ದಾನೆ. ಆದರೆ ಅದನ್ನು ಉಪಸಂಹಾರಮಾಡುವುದು ಹೇಗೆಂಬುದನ್ನು ಅವನು ಅರಿಯನು. ಇದನ್ನು ಅಡಗಿಸುವ ಅಸ್ತ್ರ ಬೇರೆ ಯಾವುದೂ ಇಲ್ಲ. ಆದುದರಿಂದ ಅಸ್ತ್ರಜ್ಞನಾದ ನೀನು ಪ್ರಚಂಡವಾದ ಈ ಅಸ್ತ್ರದ ತೇಜಸ್ಸನ್ನು ಪ್ರತಿಬ್ರಹ್ಮಾಸ್ತ್ರದಿಂದಲೇ ಶಮನಗೊಳಿಸು."

ಸೂತಪುರಾಣಿಕರು ಕಥೆಯನ್ನು ಮುಂದುವರಿಸುತ್ತಿದ್ದಾರೆ :

"ಎಲೈ ಮಹರ್ಷಿಗಳೇ! ಶತ್ರುವೀರರನ್ನು ಧ್ವಂಸಮಾಡುವುದರಲ್ಲಿ ಪ್ರವೀಣನಾದ ಅರ್ಜುನನು ಶ್ರೀಭಗವಂತನ ಆ ಮಾತನ್ನು ಕೇಳಿದೊಡನೆಯೇ ಆಚಮನಮಾಡಿ ಭಗವಂತನನ್ನು ಪ್ರದಕ್ಷಿಣೆಮಾಡಿ ಆ ಬ್ರಹ್ಮಾಸ್ತ್ರವನ್ನು ಉಡುಗಿಸಲು, ಪ್ರತಿಯಾಗಿ ಬ್ರಹ್ಮಾಸ್ತ್ರವನ್ನೇ ಪ್ರಯೋಗಮಾಡಿದನು. ಬಾಣ ಗಳಿಂದ ಹೊರಹೊಮ್ಮಿದ ಆ ಎರಡು ಬ್ರಹ್ಮಾಸ್ತ್ರಗಳ ತೇಜಸ್ಸು ಒಂದಕ್ಕೊಂದು ಘರ್ಷಣೆಹೊಂದಿ ಪ್ರಳಯಕಾಲದ ಸೂರ್ಯ ಮತ್ತು ಅಗ್ನಿಗಳಂತೆ ಭೂಮ್ಯಾಕಾಶಗಳಲ್ಲೆಲ್ಲಾ ಹರಡಿ ಬೆಳೆಯತೊಡಗಿತು. ಆ ಇಬ್ಬರ ಬ್ರಹ್ಮಾಸ್ತ್ರ

---

ಬ್ರಹ್ಮದೇವರು ಹೀಗೆ ಮಾಡಿದರು—ಎಂದೂ ಅಲ್ಲಿ ವ್ಯಾಖ್ಯಾನವಿದೆ. 'ರುದ್ರಭಯಾ ದ್ಯಥಾರ್ಕಿಃ'—ಇದರ ಪ್ರಕಾರ ಅರ್ಕಿಃ —ಎಂದರೆ ಅರ್ಕನ ಪುತ್ರನಾದ ಶನೈಶ್ಚರ. ರುದ್ರನ ಫಾಲನೇತ್ರಕ್ಕೆ ಹೆದರಿ ಶನೈಶ್ಚರನು ಓಡಿಹೋದನೆಂದು ಪುರಾಣಾಂತರ ಪ್ರಸಿದ್ಧಿ—ಎಂದೂ ವಿಜಯಧ್ವಜೀಯದಲ್ಲಿ ಹೇಳಿದೆ. ವೀರರಾಘವೀಯದಲ್ಲಿ 'ರುದ್ರಭಯದ್ಯಥಾ ಕಃ'—ಎಂಬ ಪಾಠವನ್ನೇ ಆಧರಿಸಿದೆ. 'ರುದ್ರನಿಗೆ ಹೆದರಿದ ದಕ್ಷಪ್ರಜಾಪತಿಯಂತೆ' ಎಂಬ ಅಭಿಪ್ರಾಯವನ್ನು ಅದಕ್ಕೆ ಹೇಳಿದೆ. ಭಾಗವತಚಂದ್ರಿಕೆಯಲ್ಲಿ 'ರುದ್ರಭಯಾದ್ಯಥಾರ್ಕಿಃ' ಎಂಬ ಪಾಠಕ್ಕೆ ರುದ್ರನಿಗೆ ಭಯಪಟ್ಟು ಓಡಿದ ಅರ್ಕಪುತ್ರನಾದ ಮೃತ್ಯುವಿನಂತೆ—ಎಂಬ ಅರ್ಥವನ್ನು ತಿಳಿಸಿದೆ. ರುದ್ರನ ಮೃತ್ಯುಂಜಯತ್ವ ಮಹಿಮೆಯನ್ನು ಇದು ಸೂಚಿಸುತ್ತದೆ. ಈ ಎಲ್ಲ ಅಭಿಪ್ರಾಯಗಳಿಗೂ ಸಮರ್ಥನೆಯಿದೆ. ರುದ್ರದೇವರ ಅಂಶವಾದ ವೀರಭದ್ರನು ದಕ್ಷಪ್ರಜಾಪತಿಯನ್ನು ನಿಗ್ರಹಿಸಿದ ಕಥೆಯು ಶ್ರೀಮದ್ಭಾಗವತದಲ್ಲಿಯೇ ಮುಂದೆ ಬಂದಿದೆ.

ಗಳ ಪ್ರಚಂಡತೇಜಸ್ಸಿನಿಂದ ಮೂರು ಲೋಕಗಳೂ ಸುಟ್ಟುಹೋಗುತ್ತಿರುವುದನ್ನು ಕಂಡು ಬೆಂದುಹೋಗಿದ್ದ ಪ್ರಜೆಗಳೆಲ್ಲರೂ ಅದೊಂದು ಪ್ರಳಯಾಗ್ನಿಯೇ ಇರಬಹುದೆಂದು ಭಾವಿಸಿದರು. ಅದರಿಂದ ಸಂಭವಿಸುತ್ತಿದ್ದ ಪ್ರಜಾಪೀಡೆಯನ್ನೂ, ಲೋಕಗಳ ವಿನಾಶವನ್ನೂ ಕಂಡು ಶ್ರೀಕೃಷ್ಣನ ಆಶಯವನ್ನು ಗಮನಿಸಿದ ಅರ್ಜುನನು ಆ ಎರಡು ಅಸ್ತ್ರಗಳನ್ನೂ ಉಪಸಂಹಾರ ಮಾಡಿಬಿಟ್ಟನು. ಅನಂತರ ಕ್ರೋಧದಿಂದ ಕೆಂಪೇರಿದ ಕಣ್ಣುಗಳುಳ್ಳ ಅರ್ಜುನನು ದಿಢೀರನೆ ಆ ಕ್ರೂರಿಯಾದ ಅಶ್ವತ್ಥಾಮನ ಮೇಲೆ ಜಿಗಿದು ಅವನನ್ನು ಹಿಡಿದುಕೊಂಡು ಹಗ್ಗದಿಂದ ಹಸುವನ್ನು ಕಟ್ಟಿಹಾಕುವಂತೆ ಅವನನ್ನು ಕಟ್ಟಿಹಾಕಿದನು. ಅರ್ಜುನನು ಅಶ್ವತ್ಥಾಮನನ್ನು ಬಲಾತ್ಕಾರದಿಂದ ಬಂಧಿಸಿ ತನ್ನ ಬಿಡಾರಕ್ಕೆ ಒಯ್ಯಲು ಪ್ರಯತ್ನಿಸುತ್ತಿರುವುದನ್ನು ಕಂಡು ಭಗವಂತನಾದ ಪುಂಡರೀಕಾಕ್ಷನು ಕ್ರೋಧದಿಂದ ಹೀಗೆಂದನು :

"ಪಾರ್ಥ! ಈ ಬ್ರಾಹ್ಮಣಾಧಮನನ್ನು ಜೀವಂತವಾಗಿ ಬಿಡುವುದು ಸರಿಯಲ್ಲ. ಇವನನ್ನು ಕೊಂದೇಹಾಕಿಬಿಡು. ರಾತ್ರಿಯಲ್ಲಿ ನಿದ್ದೆಮಾಡುತ್ತಿದ್ದ ನಿರಪರಾಧಿಗಳಾದ ಬಾಲಕರನ್ನು ಕೊಲೆಮಾಡಿದವನಲ್ಲವೇ ಈತನು?

(ಶ್ಲೋಕ 23-35)

**ಮತ್ತಂ ಪ್ರಮತ್ತಮುನ್ಮತ್ತಂ ಸುಪ್ತಂ ಬಾಲಂ ಸ್ತ್ರಿಯಂ ಜಡಮ್ ।**
**ಪ್ರಪನ್ನಂ ವಿರಥಂ ಭೀತಂ ನ ರಿಪುಂ ಹನ್ತಿ ಧರ್ಮವಿತ್ ॥೩೬॥**

**ಸ್ವಪ್ರಾಣಾನ್ಯಃ ಪರಪ್ರಾಣೈಃ ಪ್ರಪುಷ್ಣಾತ್ಯಘೃಣಃ ಖಲಃ ।**
**ತದ್ವಧಸ್ತಸ್ಯ ಹಿ ಶ್ರೇಯೋ ಯದ್ದೋಷಾದ್ಯಾತ್ಯಧಃ ಪುಮಾನ್ ॥೩೭॥**

ಧರ್ಮಜ್ಞರಾದ ಪುರುಷರು ಅಮಲೇರಿದವನನ್ನೂ, ಮೈಮರೆತವನನ್ನೂ, ಹುಚ್ಚುಹಿಡಿದವನನ್ನೂ, ನಿದ್ರೆಮಾಡುತ್ತಿರುವವನನ್ನೂ, ಹೆಂಗಸರನ್ನೂ, ವಿವೇಕಜ್ಞಾನವಿಲ್ಲದವರನ್ನೂ, ಶರಣಾಗತನನ್ನೂ, ರಥವಿಲ್ಲದವನನ್ನೂ ಮತ್ತು ಭಯಗ್ರಸ್ತನಾಗಿರುವವನನ್ನೂ–ಅವನು ಶತ್ರುವೇ ಆಗಿದ್ದರೂ–ಕೊಲ್ಲುವುದಿಲ್ಲ. ಯಾವ ನಿರ್ದಯಿಯಾದ ದುಷ್ಟಾತ್ಮನು ಇತರರನ್ನು ಕೊಂದು ಅವರ ಪ್ರಾಣದಿಂದ ತನ್ನ ಪ್ರಾಣವನ್ನು ಪೋಷಿಸಿಕೊಳ್ಳುತ್ತಾನೋ–ಅಂತಹವನನ್ನು ವಧಿಸುವುದರಿಂದ ಅವನಿಗೇ ಶ್ರೇಯಸ್ಸು. ಏಕೆಂದರೆ : ಇಂತಹ ಕೆಟ್ಟಕೆಲಸದಿಂದ ಅವನಿಗೆ ಅಧೋಗತಿಯೇ ಉಂಟಾಗುತ್ತದೆ. ಅವ

ನಿಗೆ ಪ್ರಾಣವನ್ನು ಕೊಟ್ಟಿದ್ದರಿಂದ ಅವನಿಗೆ ಇಲ್ಲಿಯೇ ಶಿಕ್ಷೆಯಾಗಿ ಮುಂದಿನ ಅಧೋಗತಿಯು ತಪ್ಪುತ್ತದೆ. ಅವನನ್ನು ಬದುಕಲು ಬಿಟ್ಟರೆ ಅವನು ಇಂತಹ ಇನ್ನೂ ಅನೇಕ ಪಾಪಗಳನ್ನು ಮಾಡಿ ನರಕಕ್ಕೆ ಹೋಗುತ್ತಾನೆ.

ಇದಲ್ಲದೇ ನೀನು ಪಾಂಚಾಲಿಯ ಮುಂದೆ "ಎಲೈ ಮಾನವತಿಯೇ! ನಿನ್ನ ಪುತ್ರರನ್ನು ಯಾವನು ವಧಿಸಿದ್ದಾನೋ–ಆತನ ತಲೆಯನ್ನು ಕಡಿದು ತರುವೆನು"–ಎಂದು ನನಗೆ ಕೇಳಿಸುವಂತೆಯೇ ಪ್ರತಿಜ್ಞೆಮಾಡಿದ್ದೀಯೆ. ಆದುದರಿಂದ ಈ ಪಾಪಿಯನ್ನು ಅವಶ್ಯವಾಗಿ ಸಂಹರಿಸು. ಈತನು ಕೊಲೆ ಪಾತಕಿ. ನಿನ್ನ ಪುತ್ರರನ್ನೇ ಕೊಂದುಹಾಕಿರುವವನು. ತನ್ನ ಸ್ವಾಮಿಗೂ ಅಪ್ರಿಯವನ್ನೇ ಉಂಟುಮಾಡಿರುವ ಕುಲಾಂಗಾರನು."

ಅರ್ಜುನನ ಧರ್ಮಬುದ್ಧಿಯನ್ನು ಪರೀಕ್ಷಿಸುವುದಕ್ಕಾಗಿ ಶ್ರೀಕೃಷ್ಣನು ಆತನಿಗೆ ಹೀಗೆ ಪ್ರೇರಣೆಮಾಡಿದರೂ ಅರ್ಜುನನು ಮಹಾಪುರುಷ-ಅಶ್ವತ್ಥಾಮನು ತನ್ನ ಪುತ್ರರನ್ನೇ ಕೊಂದಿದ್ದರೂ ಮತ್ತು ತನ್ನನ್ನೇ ಕೊಲ್ಲಲು ಪ್ರಯತ್ನಿಸಿದ್ದರೂ ಆ ಮಹಾತ್ಮನು ಆತನನ್ನು ಕೊಂದುಹಾಕಲು ಇಷ್ಟಪಡಲಿಲ್ಲ.

ಅನಂತರ ಅವನು ಶ್ರೀಕೃಷ್ಣನ ಸಾರಥ್ಯದಲ್ಲಿಯೇ ತನ್ನ ಯುದ್ಧಶಿಬಿರ ವನ್ನು ತಲುಪಿ ಅಲ್ಲಿ ತನ್ನ ಮೃತಪುತ್ರರಿಗಾಗಿ ಗೋಳಿಡುತ್ತಿದ್ದ ಪ್ರಿಯಪತ್ನಿಯ ವಶಕ್ಕೆ ಅಶ್ವತ್ಥಾಮನನ್ನು ಒಪ್ಪಿಸಿದನು. ಅಶ್ವತ್ಥಾಮನು ಪಶುವಿನಂತೆ ಹಗ್ಗದಿಂದ ಕಟ್ಟಿಹಾಕಲ್ಪಟ್ಟಿದ್ದನು. ತಪ್ಪಿತಸ್ಥನಾಗಿದ್ದ ಅವನು ತಾನು ಮಾಡಿದ್ದ ಹೇವರಿಕೆಯ ಕಾರ್ಯಕ್ಕಾಗಿ ನಾಚಿ ತಲೆತಗ್ಗಿಸಿಕೊಂಡಿದ್ದನು. ಅಂತಹ ಸ್ಥಿತಿಯಲ್ಲಿದ್ದ ಆ ಗುರುಪುತ್ರನನ್ನು ನೋಡಿ ಆ ವಿಪರೀತಸ್ವಭಾವದ ಹೆಂಗಸು* ಕರುಣೆತುಂಬಿದ ಹೃದಯವುಳ್ಳವಳಾಗಿ ಆತನಿಗೆ ನಮಸ್ಕಾರಮಾಡಿದಳು. ಗುರುಪುತ್ರನನ್ನು ಹೀಗೆ ಕಟ್ಟಿಹಾಕಿ ತರುವುದು ಆಕೆಗೆ ಸಹನೆಯಾಗಲಿಲ್ಲ.

---

* ದ್ರೌಪದಿಯನ್ನು ( ೪೨ನೆಯ ಶ್ಲೋಕದಲ್ಲಿ ) 'ವಾಮಸ್ವಭಾವಾ' ಎಂದು ಕರೆದಿದೆ. ವಾಮ–ಎಂದರೆ ವಿರುದ್ಧ, ವಿಪರೀತ ಎಂದು ಅರ್ಥ. ಪ್ರಕೃತದಲ್ಲಿ ದ್ರೌಪದೀ ದೇವಿಯಲ್ಲಿ ಅಂತಹ ವಿರುದ್ಧಸ್ವಭಾವ ಏನು?–ಎಂದರೆ ಹಿಂದೆ ಅರ್ಜುನನು ಅಶ್ವತ್ಥಾಮನನ್ನು ಸಂಹರಿಸುವುದಾಗಿ ಪ್ರತಿಜ್ಞೆಮಾಡಿದಾಗ ಅವಳು ಸಂತೋಷ

"ಇವರನ್ನು ಬಿಡುಗಡೆಮಾಡಿ ಬಿಟ್ಟುಬಿಡಿ. ಇವರು ಬ್ರಾಹ್ಮಣರು. ನಮ್ಮ ಗುರುಸ್ಥಾನದಲ್ಲಿರುವವರು. ಗುರುಪುತ್ರರಾಗಿಯೂ ಗುರುಸ್ಥಾನ ದಲ್ಲಿರುವವರು. ಯಾರ ಅನುಗ್ರಹದಿಂದ ನೀವು ರಹಸ್ಯಸಹಿತವಾದ ಧನುರ್ವೇದವನ್ನೂ, ಪ್ರಯೋಗ-ಉಪಸಂಹಾರಸಹಿತವಾದ ಅಸ್ತ್ರಗಳನ್ನೂ ಪಡೆದಿದ್ದೀರೋ–ಆ ಭಗವಾನ್ ದ್ರೋಣಾಚಾರ್ಯರೇ ತಮ್ಮ ಈ ಪುತ್ರ ರೂಪದಲ್ಲಿದ್ದಾರೆ. ಆಚಾರ್ಯರ ಅರ್ಧಾಂಗಿಯಾದ ಕೃಪಿಯು ಈ ವೀರ ಪುತ್ರನ ಮೇಲಿನ ಮಮತೆಯಿಂದಲೇ ತನ್ನ ಪತಿಯೊಡನೆ ಸಹಗಮನ ಮಾಡಲಿಲ್ಲ. ಓ ಧರ್ಮಜ್ಞರೇ! ಮಹಾಭಾಗರೇ! ಪ್ರತಿದಿನವೂ ಪೂಜಾ- ನಮಸ್ಕಾರಗಳಿಗೆ ಯೋಗ್ಯವಾಗಿರುವ ಗುರುವಂಶಕ್ಕೆ ವ್ಯಥೆಯನ್ನುಂಟು ಮಾಡುವುದು ನಿಮಗೆ ತೆರನಲ್ಲ. ನಾನು ಪುತ್ರಮರಣದಿಂದ ಪೀಡಿತಳಾಗಿ ಕಣ್ಣೀರುಸುರಿಸುತ್ತಾ ಅಳುವಂತೆ ಪತಿವ್ರತೆಯಾದ ಈತನ ತಾಯಿ ಗೌತಮಿಯು ಅಳದಿರಲಿ. ಮನಸ್ಸಂಯಮವಿಲ್ಲದೇ ಮರ್ಯಾದೆಮೀರಿ ವರ್ತಿಸುತ್ತಾ, ತಮ್ಮ ಕುಕೃತ್ಯಗಳಿಂದ ಬ್ರಾಹ್ಮಣಕುಲಕ್ಕೆ ಕೋಪವನ್ನುಂಟು ಮಾಡುವ ರಾಜರನ್ನು ಆ ಬ್ರಾಹ್ಮಣಕುಲವು ಶೋಕಾಗ್ನಿಗೆ ತಳ್ಳಿ ಶೀಘ್ರ ವಾಗಿಯೇ ಸುಟ್ಟುಹಾಕಿಬಿಡುತ್ತದೆ."

(ಶ್ಲೋಕ 38-48)

ಸೂತಪುರಾಣಿಕರು ಹೇಳುತ್ತಾರೆ :

"ಎಲೈ ವಿಪ್ರರೇ! ಧರ್ಮ ಮತ್ತು ನ್ಯಾಯಗಳಿಗೆ ಅನುಕೂಲವಾಗಿ, ನಿಷ್ಕಪಟವಾಗಿ, ಕಾರುಣ್ಯ ಮತ್ತು ಸಮತೆಗಳಿಂದ ಕೂಡಿದ್ದ ಆ ಮಹಾ ರಾಣಿಯ ವಚನವನ್ನು ಧರ್ಮಪುತ್ರಮಹಾರಾಜನು ಅಭಿನಂದನೆಮಾಡಿ ದನು. ನಕುಲನೂ, ಸಹದೇವನೂ, ಸಾತ್ಯಕಿಯೂ, ಅರ್ಜುನನೂ ಮತ್ತು ಶ್ರೀಕೃಷ್ಣಪರಮಾತ್ಮನೂ ಅಂತೆಯೇ ಅಲ್ಲಿದ್ದ ಇತರ ಹೆಂಗಸರೂ ಅದನ್ನು ಅಭಿನಂದಿಸಿದರು. ಆದರೆ ಭೀಮಸೇನನು ಮಾತ್ರ ಕೋಪಭರಿತನಾಗಿ "ಈತ ನನ್ನು ವಧಿಸುವುದೇ ಶ್ರೇಯಸ್ಕರ. ತನ್ನ ಪ್ರಯೋಜನಕ್ಕೂ ಇಲ್ಲದೇ ತನ್ನ

---

ಪಟ್ಟಿದ್ದಳು. ಆದರೆ ಈಗ ಅದಕ್ಕೆ ವಿರುದ್ಧವಾಗಿ ಆತನನ್ನು ಕಂಡು ಕರುಣಾಮಯಿ ಯಾದಳು. ಆತನ ಸ್ಥಿತಿಗೆ ಮರುಕಪಟ್ಟಳು. ಕೋಪದ ಬದಲು ಅನುಕಂಪತೋರಿದಳು. ಆತನ ಸ್ಥಿತಿಯನ್ನು ಕಂಡು ಸಂತಸಪಡುವುದರ ಬದಲು ಶೋಕಪಟ್ಟಳು. ಆದುದರಿಂದ ಆಕೆಯನ್ನು 'ವಾಮಸ್ವಭಾವಾ' ಎಂದು ಕರೆದಿರುವುದು ಅರ್ಥಪೂರ್ಣವಾಗಿದೆ.

ಸ್ವಾಮಿಯ ಪ್ರಯೋಜನಕ್ಕೂ ಇಲ್ಲದೇ, ನಿದ್ರಿಸುತ್ತಿದ್ದ ಮಕ್ಕಳನ್ನು ವೃಥಾ ಕೊಲೆಮಾಡಿದವನು ಈತ"–ಎಂದು ಗುಡುಗಿದನು. ಭಗವಂತನು ಆಗ ಭೀಮಸೇನನ ಮಾತನ್ನೂ ದ್ರೌಪದಿಯ ಮಾತನ್ನೂ ಕೇಳಿ, ತನ್ನ ಮಿತ್ರನ ಮುಖವನ್ನು ನೋಡಿ ನಸುನಕ್ಕು ಹೀಗೆಂದನು :

"ಬ್ರಾಹ್ಮಣನು ಪತಿತನಾಗಿದ್ದರೂ ಆತನನ್ನು ವಧಿಸಬಾರದು. ಹಾಗೆಯೇ ಕೊಲೆಗಡುಕನನ್ನು ಸಂಹರಿಸುವುದೇ ಸರಿ–ಈ ಎರಡು ಮಾತುಗಳನ್ನೂ ಶಾಸ್ತ್ರದಲ್ಲಿ ನಾನೇ ಹೇಳಿರುತ್ತೇನೆ. ನನ್ನ ಎರಡು ಆಜ್ಞೆಗಳನ್ನೂ ಪಾಲನೆಮಾಡು, ನೋಡೋಣ. ಪ್ರಿಯೆಯಾದ ದ್ರೌಪದಿಯನ್ನು ಸಮಾಧಾನಗೊಳಿಸುವಾಗ ನೀನು ಯಾವ ಪ್ರತಿಜ್ಞೆಮಾಡಿದ್ದೆಯೋ ಅದನ್ನೂ ನಿಜವಾಗಿಸು. ಇದರ ಜೊತೆಗೆ ಯಾವುದು ಭೀಮಸೇನನಿಗೂ, ಪಾಂಚಾಲಿಗೂ ಮತ್ತು ನನಗೂ ಪ್ರಿಯವಾಗಿದೆಯೋ ಅದನ್ನೂ ಮಾಡು."

ತಮ್ಮ ಮಾತನ್ನು ಮುಂದುವರಿಸುತ್ತಾ ಸೂತಪುರಾಣಿಕರು ಶೌನಕಾದಿ ಮುನಿಗಳಿಗೆ ಹೀಗೆಂದರು.

"ಮಹರ್ಷಿಗಳೇ! ಅರ್ಜುನನು ಶ್ರೀಭಗವಂತನ ಹೃದಯದ ಆಶಯ ವನ್ನು ಒಡನೆಯೇ ಗ್ರಹಿಸಿ, ತನ್ನ ಕತ್ತಿಯಿಂದ ಆ ಬ್ರಾಹ್ಮಣನ ತಲೆಯಲ್ಲಿದ್ದ ಮಣಿಯನ್ನು ಶಿಖಾಸಹಿತವಾಗಿ ಕತ್ತರಿಸಿ ತೆಗೆದುಕೊಂಡನು. ಬಾಲಕರ ಹತ್ಯೆ ಮಾಡಿದ್ದರಿಂದ ಅಶ್ವತ್ಥಾಮನು ಆ ಮೊದಲೇ ಕಾಂತಿಹೀನನಾಗಿದ್ದನು. ಈಗ ಮಣಿ ಮತ್ತು ಬ್ರಹ್ಮತೇಜಸ್ಸುಗಳನ್ನೂ ಕಳೆದುಕೊಂಡುಬಿಟ್ಟಿದ್ದನು. ಅಂತಹ ಸ್ಥಿತಿಯಲ್ಲಿದ್ದ ಅವನ ಹಗ್ಗದ ಕಟ್ಟನ್ನು ಬಿಚ್ಚಿ ಅವನನ್ನು ಶಿಬಿರದಿಂದ ಹೊರಕ್ಕೆ ದೂಡಲಾಯಿತು. ತಲೆಬೋಳಿಸುವುದು, ಹಣಕಿತ್ತುಕೊಳ್ಳುವುದು ಮತ್ತು ದೇಶದಿಂದ ಹೊರಗೆ ಅಟ್ಟುವುದು–ಇವು ಬ್ರಾಹ್ಮಣರಿಗೆ ವಧೆಗೆ ಸಮನಾದ ಶಿಕ್ಷೆ. ಅವರಿಗೆ ಇದಕ್ಕಿಂತಲೂ ಬೇರೆ ದೈಹಿಕವಾದ ವಧೆಯನ್ನು ಮಾಡಬಾರದು.*

---

* ಇಲ್ಲಿ **'ತಾಂ ಸಾಂತ್ವಯನ್'**–ಎಂದು ಆರಂಭಿಸಿ **'ನಾನ್ಯೋऽಸ್ತಿ ದೈಹಿಕಃ'**– ಎನ್ನುವವರೆಗೆ (ಶ್ಲೋಕ ೧೫ ರಿಂದ ೫೭ರವರೆಗೆ) ಹೇಳಿರುವುದನ್ನು ಅಶ್ವತ್ಥಾಮನು ಕನಸಿನಲ್ಲಿ ಕಂಡುದಾಗಿ ಹೇಳಿದನೆಂದು ತಿಳಿಯಬೇಕು. ಇಲ್ಲದಿದ್ದರೆ ಇತರ ಗ್ರಂಥಗಳಿಗೆ

ಅನಂತರ ಪುತ್ರರ ಮೃತ್ಯುವಿನಿಂದ ದುಃಖದಲ್ಲಿ ಮುಳುಗಿದ್ದ ಪಾಂಡವರು ದ್ರೌಪದಿಯೊಡನೆ ಮೃತರಾಗಿದ್ದ ತಮ್ಮ ಪುತ್ರಾದಿ ಬಂಧುಗಳಿಗೆಲ್ಲಾ ಉತ್ತರಕ್ರಿಯೆಗಳನ್ನು ಮಾಡಿದರು. (ಶ್ಲೋಕ 49-58)

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೭ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೮ನೆಯ ಅಧ್ಯಾಯ

## ಗರ್ಭಸ್ಥಶಿಶು ಪರೀಕ್ಷಿತನ ರಕ್ಷಣೆ : ಕುಂತಿಯು ಮಾಡಿದ ಶ್ರೀಕೃಷ್ಣಸ್ತುತಿ ಮತ್ತು ಧರ್ಮರಾಜನ ಪಶ್ಚಾತ್ತಾಪ

**ಅಥ ತೇ ಸಮ್ಪರೇತಾನಾಂ ಸ್ವಾನಾಮುದಕಮಿಚ್ಛತಾಮ್ ।**
**ದಾತುಂ ಸಕೃಷ್ಣಾ ಗಙ್ಗಾಯಾಂ ಪುರಸ್ಕೃತ್ಯ ಯಯುಃ ಸ್ತ್ರಿಯಃ ॥೧॥**

ಅನಂತರ ಪಾಂಡವರು ಮೃತರಾಗಿದ್ದ ಹಾಗೂ ತಿಲೋದಕವನ್ನು ಬಯಸುತ್ತಿದ್ದ ಸ್ವಜನರಿಗೆ ತರ್ಪಣವನ್ನು ಕೊಡುವುದಕ್ಕಾಗಿ ಶ್ರೀಕೃಷ್ಣ ನೊಡನೆ ಹೆಂಗಸರನ್ನು ಮುಂದಿಟ್ಟುಕೊಂಡು* ಗಂಗಾನದಿಯ ದಡಕ್ಕೆ ಬಂದರು.

ಅಲ್ಲಿ ಅವರೆಲ್ಲರೂ ಮೃತಬಂಧುಗಳಿಗೆ ಜಲತರ್ಪಣವನ್ನು ಕೊಟ್ಟು ಅವರನ್ನು ನೆನೆಸಿಕೊಂಡು ಮತ್ತೆ-ಮತ್ತೆ ಗೋಳಾಡಿದರು. ಬಳಿಕ ಶ್ರೀಭಗ ವಂತನ ಪಾದಾಬ್ಜಧೂಳಿಯಿಂದ ಪರಿಶುದ್ಧವಾದ ಗಂಗಾತೀರ್ಥದಲ್ಲಿ ಮತ್ತೊಮ್ಮೆ ಸ್ನಾನಮಾಡಿದರು. ಅಲ್ಲಿ ಕುಳಿತಿದ್ದ ಭೀಮಾರ್ಜುನಾದಿ ತಮ್ಮಂದಿರಿಂದೊಡ ಗೂಡಿದ ಧರ್ಮರಾಜನನ್ನೂ, ಧೃತರಾಷ್ಟ್ರನನ್ನೂ, ** ಪುತ್ರಶೋಕದಿಂದ ಕಡು

---

ವಿರೋಧ ಬರುತ್ತದೆ. ಅಲ್ಲಿ ಇದನ್ನು ಭೀಮನು ಮಾಡಿದುದಾಗಿ ಹೇಳಿದೆ. ಎಂದು ವಿಜಯಧ್ವಜೀಯ ವಿವರಣೆ.

* **ಸಕೃಷ್ಣಾಃ**–ಎಂಬ ಪದವು ಇಲ್ಲಿ ಮೂಲದಲ್ಲಿದೆ. ಇದಕ್ಕೆ ಶ್ರೀಕೃಷ್ಣಸಹಿತರಾಗಿ ಎಂದು ಅರ್ಥಮಾಡಬಹುದು ಅಥವಾ ಕೃಷ್ಣಾ (ದ್ರೌಪದೀ) ಸಮೇತರಾದ ಹೆಂಗಸರನ್ನು ಮುಂದಿಟ್ಟುಕೊಂಡು ಎಂಬುದಾಗಿಯೂ ಅರ್ಥೈಸಬಹುದು.

* **ಧೃತರಾಷ್ಟ್ರಂ ಸಹಾನುಜಂ**–ಎಂದು ಮೂಲ. ಧೃತರಾಷ್ಟ್ರನ ಪಕ್ಕದಲ್ಲಿ ಆಗ ಅವನ ತಮ್ಮ ವಿದುರನು ಇರಲಿಲ್ಲ. ಧರ್ಮರಾಜನೊಡನೆ ಅವನ ತಮ್ಮಂದಿರು ಇದ್ದರು.

ಪೀಡಿತರಾಗಿದ್ದ ಗಾಂಧಾರೀ-ಕುಂತೀ-ದ್ರೌಪದೀದೇವಿಯರನ್ನೂ ಶ್ರೀಕೃಷ್ಣ ಪರಮಾತ್ಮನು ಧೌಮ್ಯಾದಿ ಮಹರ್ಷಿಗಳೊಡನೆ ಸಮಾಧಾನಪಡಿಸಿದನು. 'ಪ್ರಪಂಚದಲ್ಲಿ ಎಲ್ಲ ಪ್ರಾಣಿಗಳೂ ಕಾಲಕ್ಕೆ ಅಧೀನ, ಮೃತ್ಯುವಿನ ದವಡೆಯಿಂದ ಯಾರೂ ಪಾರಾಗಲಾರರು'–ಎಂದು ತಿಳಿಸಿ ಬಂಧುಮರಣದಿಂದ ಶೋಕಪಡುತ್ತಿದ್ದ ಅವರನ್ನು ಸಾಂತ್ವನಗೊಳಿಸಿದನು. (ಶ್ಲೋಕ 2-4)

ಈ ರೀತಿ ಶ್ರೀಕೃಷ್ಣಪರಮಾತ್ಮನು ಅಜಾತಶತ್ರು ಧರ್ಮರಾಜನಿಗೆ, ಧೂರ್ತನು ಅವನಿಂದ ಮೋಸದಿಂದ ಕಸಿದುಕೊಂಡಿದ್ದ ಅವನ ರಾಜ್ಯವನ್ನು ಹಿಂದಕ್ಕೆ ಕೊಡಿಸಿದನು ಮತ್ತು ದ್ರೌಪದಿಯ ಕೇಶಪಾಶಗಳಿಗೆ ಕೈಹಾಕಿದವನ, ಆಯುಸ್ಸು ಕ್ಷೀಣಹೊಂದಿದ್ದ ದುಷ್ಟರಾಜರ ಸಂಹಾರಮಾಡಿಸಿದನು. ಯುಧಿಷ್ಠಿರಮಹಾರಾಜನಿಂದ ಉತ್ತಮಸಾಮಗ್ರಿ-ಸಂಪತ್ತು ಮುಂತಾದ ಉತ್ತಮಕಲ್ಪಗಳಿಂದ ಕೂಡಿದ ಮೂರು ಅಶ್ವಮೇಧಯಜ್ಞಗಳನ್ನು ಮಾಡಿಸಿದನು. ಆತನ ಕೀರ್ತಿಯು ನೂರು ಯಜ್ಞಮಾಡಿದ ಇಂದ್ರದೇವನ ಕೀರ್ತಿಯಂತೆ ಎಲ್ಲೆಡೆಗಳಲ್ಲೂ ಹರಡುವಂತೆ ಮಾಡಿದನು. ಅನಂತರ ಅಲ್ಲಿಂದ ಹೊರಟುಬರುವ ಮನಸ್ಸುಮಾಡಿದನು. ಅದಕ್ಕಾಗಿ ಪಾಂಡವರಿಂದ

---

ಆದ್ದರಿಂದ 'ಸಹಾನುಜಂ' ಎಂಬ ಪದವನ್ನು ಧರ್ಮರಾಜನಿಗೆ ವಿಶೇಷಣವನ್ನಾಗಿ ತೆಗೆದುಕೊಂಡಿದೆ. ವಿಜಯಧ್ವಜೀಯದಲ್ಲಿ 'ತಮ್ಮನಾದ ಸಂಜಯನಿಂದೊಡಗೂಡಿದ ಧೃತರಾಷ್ಟ್ರನನ್ನು' ಎಂದೇ ಅರ್ಥೈಸಿದೆ. (ಶ್ಲೋಕ ೩) ಇದಲ್ಲದೇ 'ಅಥ ತೇ ಸಮ್ಪರೇತಾನಾಂ' ಎಂಬ ಮೊದಲನೆಯ ಶ್ಲೋಕಕ್ಕೆ ಹಿಂದೆ ಈ ಕೆಳಗಿನ ಎರಡು ಶ್ಲೋಕಗಳೂ ವಿಜಯಧ್ವಜೀಯದಲ್ಲಿ ಕಂಡುಬರುತ್ತವೆ.

ಅಥೋ ನಿಶಾಮಯಾಮಾಸ ಕೃಷ್ಣಾಯೈ ಭಗವಾನ್ಪುರಾ ।
ಪತಿತಾಯಾಃ ಪಾದಮೂಲೇ ರುದನ್ತ್ಯಾಯತ್ಪ್ರತಿಶ್ರುತಮ್ ॥
ಪಶ್ಯ ರಾಜ್ಞ್ಯರಿದಾರಾಂಸ್ತೇ ರುದತ್ಯೋ ಮುಕ್ತಮೂರ್ಧಜಾನ್ ।
ಆಲಿಙ್ಗ್ಯ ನೃಪತೀನ್ಭೀಮಗದಾಭಗ್ನೋರುವಕ್ಷಸಃ ॥

ಅನಂತರ ಶ್ರೀಕೃಷ್ಣಪರಮಾತ್ಮನು ದ್ರೌಪದೀದೇವಿಯು ಹಿಂದೆ ತನ್ನ ಕಾಲುಗಳಿಗೆ ಬಿದ್ದ ಸಮಯದಲ್ಲಿ ತಾನು ಮಾಡಿದ್ದ ಪ್ರತಿಜ್ಞೆಯನ್ನು ನೆನಪಿಸುತ್ತಾ "ನೋಡು ಮಹಾರಾಣಿ! ನಿನ್ನ ಶತ್ರುವಿನ ಪತ್ನಿಯರು ಕೂದಲನ್ನು ಕೆದರಿಕೊಂಡು, ಭೀಮನ ಗದೆಯಿಂದ ಮುರಿದುಹಾಕಲ್ಪಟ್ಟ ತೊಡೆ-ಎದೆಗಳುಳ್ಳ ತಮ್ಮ ಪತಿಗಳನ್ನು ಆಲಿಂಗಿಸಿಕೊಂಡು ಅಳುತ್ತಿರುವುದನ್ನು ನೋಡು"–ಎಂದು ಹೇಳಿದನು.

ಬೀಳ್ಕೊಡುಗೆ ಪಡೆದು ದ್ವೈಪಾಯನವ್ಯಾಸರೇ ಮುಂತಾದವರನ್ನು ಪೂಜಿಸಿ ಅವರಿಂದಲೂ ವಿಶೇಷವಾಗಿ ಸತ್ಕರಿಸಲ್ಪಟ್ಟನು. ಆತನು ದ್ವಾರಕೆಗೆ ಹೊರಡುವುದಕ್ಕಾಗಿ ಸಾತ್ಯಕಿ ಮತ್ತು ಉದ್ಧವರೊಡನೆ ರಥವನ್ನು ಹತ್ತಿದೊಡನೆಯೇ ಅಲ್ಲಿಗೆ ಅಭಿಮನ್ಯುವಿನ ಪತ್ನಿಯಾದ ಉತ್ತರೆಯು ಭಯದಿಂದ ಕಳವಳಗೊಂಡು ಎದುರಿಗೆ ಓಡಿ ಬರುತ್ತಿರುವುದನ್ನು ಕಂಡನು. ಉತ್ತರಾದೇವಿಯು ಪ್ರಭುವನ್ನು ಹೀಗೆ ಪ್ರಾರ್ಥಿಸಿದಳು :–"ಕಾಪಾಡು! ಕಾಪಾಡು! ಓ ಮಹಾಯೋಗಿಯೇ! ದೇವದೇವನೇ! ಜಗತ್ಪತಿಯೇ! ನಿನ್ನನ್ನು ಬಿಟ್ಟು ನನಗೆ ಬೇರೆ ಯಾರೂ ಅಭಯ ನೀಡಲಾರರು. ಏಕೆಂದರೆ : ಇಲ್ಲಿ ಎಲ್ಲರೂ ಪರಸ್ಪರ ಮೃತ್ಯುವಶರೇ ಆಗಿದ್ದಾರೆ. ತಾವೇ ಮೃತ್ಯುವಿಗೆ ಅಧೀನರಾಗಿರುವವರು ಮೃತ್ಯುಗ್ರಸ್ತರಾದ ಇತರರನ್ನು ಹೇಗೆ ಮೃತ್ಯುವಿನಿಂದ ಕಾಪಾಡಿಯಾರು? ಪ್ರಭೋ! ಕಾದ ಕಬ್ಬಿಣದ ಬಾಣವೊಂದು ನನ್ನನ್ನು ಅಟ್ಟಿಸಿಕೊಂಡು ಬರುತ್ತಿದೆ. ಇದು ನನ್ನನ್ನು ಬೇಕಾದರೆ ಸುಟ್ಟುಹಾಕಲಿ. ಆದರೆ ನನ್ನ ಗರ್ಭವನ್ನು ನಾಶಪಡಿಸದಂತೆ ಅನುಗ್ರಹಮಾಡು, ಸ್ವಾಮಿ!"* (ಶ್ಲೋಕ 5-10)

ಸೂತಪುರಾಣಿಕರು ಹೇಳುತ್ತಿದ್ದಾರೆ :

"ಭಕ್ತವತ್ಸಲನಾದ ಭಗವಂತನು ಹೀಗೆ ಆಕೆಯ ಗೋಳಾಟವನ್ನು ಕೇಳಿದೊಡನೆಯೇ 'ಅಶ್ವತ್ಥಾಮನು ಪಾಂಡವರ ವಂಶವನ್ನೇ ನಿರ್ಬೀಜವನ್ನಾಗಿ ಮಾಡುವುದಕ್ಕಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಮಾಡಿದ್ದಾನೆ"–

---

* ಅಜಾತಶತ್ರುಃ –ಎಂದರೆ ಧರ್ಮರಾಜ. ಆತನು ಸರ್ವಸಮದೃಷ್ಟಿಯುಳ್ಳ ಮಹಾಯೋಗಿ ; ಮಹಾತ್ಮ. ಶತ್ರುಗಳೇ ಇಲ್ಲದವನು. 'ನ ಜಾತಃ ಶತ್ರುಃ ಯಸ್ಯ ಸಃ', ವಿಜಯಧ್ವಜೀಯದಲ್ಲಿ ಇದಕ್ಕೆ ಮತ್ತೊಂದು ವಿವರಣೆಯಿದೆ. 'ಕೌರವರಿಗೆ ಅಜಾತರು ಎಂದು ಹೆಸರು. ಅವರಿಗೆ ಶತ್ರುವಾದ್ದರಿಂದ ಧರ್ಮರಾಜನು ಅಜಾತಶತ್ರುವೆನಿಸುತ್ತಾನೆ'–ಎಂಬುದು ಆ ವಿವರಣೆ. ಅದಕ್ಕೆ ಆಧಾರವಾಗಿ ಈ ಶ್ಲೋಕದ ಪ್ರಯೋಗವು ಹೇಳಲ್ಪಟ್ಟಿದೆ.

ಸುಯೋಧನಾದಯಸ್ಸರ್ವೇ ತ್ವಜಾತಾ ಜಜ್ಞಿರೇ ಘಟಾತ್ ।
ವ್ಯಾಸೇನಾನನ್ತವೀರ್ಯೇಣ ಮಾರ್ತಾಣ್ಡಾಧಿಕತೇಜಸಾ ॥

ಇಲ್ಲಿ 'ಅಜಾತಾಃ' ಎಂಬ ಪದಕ್ಕೆ ಮೊದಲು ಮನುಷ್ಯಾಕಾರವಾಗಿ ಹುಟ್ಟದೇ ಕೇವಲ ಪಿಂಡಾಕಾರವಾಗಿದ್ದ–ಎಂದೂ ಅರ್ಥಮಾಡಬಹುದು. (ಶ್ಲೋಕ ೫)

ಎಂಬುದನ್ನು ಗಮನಿಸಿದನು. ಮುನಿಶ್ರೇಷ್ಠರೇ! ಅದೇ ಸಮಯದಲ್ಲಿ ಐದು ಉರಿಯುತ್ತಿರುವ ಬಾಣಗಳು ತಮ್ಮ ಕಡೆಗೆ ಬರುತ್ತಿರುವುದನ್ನು ಪಾಂಡವರು ಕಂಡು ಅದನ್ನು ಎದುರಿಸಲು ತಮ್ಮ ತಮ್ಮ ಅಸ್ತ್ರಗಳನ್ನು ಎತ್ತಿಕೊಂಡರು. ತನಗೆ ಶರಣುಬಂದಿದ್ದ ಅನನ್ಯಭಕ್ತರಿಗೆ ದೊಡ್ಡ ಆಪತ್ತು ಒದಗಿರುವುದನ್ನು ಕಂಡು ಸರ್ವಶಕ್ತನಾದ ಭಗವಾನ್ ಶ್ರೀಕೃಷ್ಣನು ತನ್ನ ದಿವ್ಯವಾದ ಸುದರ್ಶನಾಸ್ತ್ರದಿಂದ ಅವರಿಗೆ ರಕ್ಷಣೆನೀಡಿದನು. ಸರ್ವಪ್ರಾಣಿಗಳಿಗೂ ಅಂತರ್ಯಾಮಿಯಾಗಿರುವ ಯೋಗೇಶ್ವರನಾದ ಆ ಶ್ರೀಹರಿಯು ಕುರು ವಂಶದ ಕುಡಿಯನ್ನು ಉಳಿಸುವುದಕ್ಕಾಗಿ ಉತ್ತರೆಯ ಗರ್ಭವನ್ನು ತನ್ನ ಮಾಯಾಕವಚದಿಂದ ಆವರಿಸಿಬಿಟ್ಟನು. ಬ್ರಹ್ಮಶಿರಸ್ಸು ಎಂಬ ಅಸ್ತ್ರವೇನೋ ಅಮೋಘವಾದುದೇ ; ಅದನ್ನು ನಿವಾರಿಸುವ ಪ್ರತ್ಯಸ್ತ್ರವಿಲ್ಲವೆಂಬುದೂ ನಿಜವೇ. ಆದರೆ ಮಹಾವಿಷ್ಣುವಿನ ತೇಜಸ್ಸು ಎದುರಾಯಿಸಿದ್ದರಿಂದ ಅದು ಶಾಂತವಾಗಿಬಿಟ್ಟಿತು. ಭೃಗುಕುಲತಿಲಕರೇ! ಇದೇನೋ ದೊಡ್ಡ ಅಚ್ಚರಿ ಯೆಂದು ತಿಳಿಯಬಾರದು. ಏಕೆಂದರೆ : ಭಗವಾನ್ ಶ್ರೀಕೃಷ್ಣನು ಸರ್ವಾ ಶ್ಚರ್ಯಮಯನಾದವನು. ತಾನು ಜನ್ಮರಹಿತನಾಗಿಯೇ ಇದ್ದು ತನ್ನಮಾಯಾ ಶಕ್ತಿಯಿಂದ ಈ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಮಾಡುವ ಸರ್ವಶಕ್ತಿ ಮಯನಾದ ಪರಮಾತ್ಮನಲ್ಲವೇ ಅವನು? ಅನಂತರ ದ್ವಾರಕಾಪುರಿಗೆ ಪ್ರಯಾಣಹೊರಟ ಶ್ರೀಕೃಷ್ಣನನ್ನು, ಬ್ರಹ್ಮಾಸ್ತ್ರತೇಜಸ್ಸಿನ ಆಕ್ರಮಣದಿಂದ ಬಿಡುಗಡೆ ಹೊಂದಿದ್ದ ತನ್ನ ಪುತ್ರರೊಡನೆಯೂ ದ್ರೌಪದಿಯೊಡನೆಯೂ ಕೂಡಿ, ಸಾಧ್ವಿಯಾದ ಕುಂತೀದೇವಿಯು ಹೀಗೆ ಸ್ತುತಿಸಿ ಪ್ರಾರ್ಥಿಸಿದಳು :-

ಕುಂತಿಯು ಮಾಡಿದ ಶ್ರೀಕೃಷ್ಣಸ್ತುತಿ-ಪ್ರಾರ್ಥನೆ :

"ಪ್ರಕೃತಿಯನ್ನು ಮೀರಿ ನಿಂತಿರುವ, ಪರಮಪುರುಷನಾದ, ಆದ್ಯ ಪರಮೇಶ್ವರನೂ, ಎಲ್ಲ ಭೂತಗಳನ್ನೂ ಒಳಗೂ ಹೊರಗೂ ಪೂರ್ಣವಾಗಿ ವ್ಯಾಪಿಸಿದ್ದರೂ ಇಂದ್ರಿಯಗಳಿಗೆ ಗೋಚರಿಸದೇ ಮಾಯೆಯೆಂಬ ತೆರೆಯ ಮಧ್ಯೆ ತನ್ನನ್ನು ಮರೆಸಿಕೊಂಡಿರುವವನೂ, ಇಂದ್ರಿಯಗಳನ್ನು ಮೆಟ್ಟಿನಿಂತಿರುವ ನಿರ್ವಿಕಾರನೂ ಆದ ನಿನಗೆ ನಮೋ ನಮಃ. ಸರ್ವಜ್ಞನಾದ ನಿನ್ನನ್ನು ಅಜ್ಞಳಾದ ನಾನು ನಮಸ್ಕರಿಸುತ್ತೇನೆ. ವೇಷವನ್ನು ಧರಿಸಿರುವ ಚತುರ ನಟನಂತೆ ಅಭಿನಯಿಸುತ್ತಿರುವ ನಿನ್ನನ್ನು ಮೂಢದೃಷ್ಟಿಯುಳ್ಳವರು ಹೇಗೆ

ತಾನೇ ಗುರುತಿಸಬಲ್ಲರು? ಪರಿಶುದ್ಧತಮರಾದ ಪರಮಹಂಸರಾದ ಮುನಿ ಗಳ ಹೃದಯದಲ್ಲಿ ಭಕ್ತಿಯೋಗವನ್ನು ಮೂಡಿಸಲು ಅವತಾರಮಾಡಿರು ವವನು ನೀನು. ಇಂತಹ ನಿನ್ನನ್ನು ನಮ್ಮಂತಹ ಪಾಮರಸ್ತ್ರೀಯರು ಹೇಗೆ ತಾನೇ ಗುರುತಿಸಿಯಾರು? (ಶ್ಲೋಕ 11-20)

**ಕೃಷ್ಣಾಯ ವಾಸುದೇವಾಯ ದೇವಕೀನನ್ದನಾಯ ಚ ।**
**ನನ್ದಗೋಪಕುಮಾರಾಯ ಗೋವಿನ್ದಾಯ ನಮೋ ನಮಃ ॥೨೧॥**

**ನಮಃ ಪಙ್ಕಜನಾಭಾಯ ನಮಃ ಪಙ್ಕಜಮಾಲಿನೇ ।**
**ನಮಃ ಪಙ್ಕಜನೇತ್ರಾಯ ನಮಸ್ತೇ ಪಙ್ಕಜಾಙ್ಘ್ರಯೇ ॥೨೨॥**

ನಮೋ ನಮಃ ಶ್ರೀಕೃಷ್ಣನಿಗೆ, ವಾಸುದೇವನಿಗೆ ಮತ್ತು ದೇವಕೀ ನಂದನನಿಗೆ, ನಂದಗೋಪನ ಕುವರನಿಗೆ, ಗೋವಿಂದನಿಗೆ, ಶ್ರೀಪದ್ಮನಾಭ ನಿಗೆ, ಪದ್ಮಮಾಲಾಧರನಿಗೆ, ಪದ್ಮಾಕ್ಷನಿಗೆ, ಪದ್ಮಪಾದನಾಗಿರುವ ನಿನಗೆ ಮತ್ತೆ ಮತ್ತೆ ನಮಸ್ಕಾರವು.

ಓ ಹೃಷೀಕೇಶ!* ಪ್ರಭೋ! ಹಿಂದೆ ನೀನು ದುಷ್ಟಕಂಸನಿಂದ ಸೆರೆಮನೆಗೆ ಸೇರಿಸಲ್ಪಟ್ಟು ಚಿರಕಾಲ ಶೋಕಗ್ರಸ್ತಳಾಗಿದ್ದ ದೇವಕಿಯನ್ನು ಹೇಗೆ ಕಾಪಾಡಿದೆಯೋ–ಹಾಗೆಯೇ ಪುತ್ರಸಹಿತಳಾದ ನನ್ನನ್ನು ಎಷ್ಟು ಬಾರಿ ನಾನಾ ವಿಪತ್ತುಗಳ ಸಮೂಹದಿಂದ ಕಾಪಾಡಿರುವೆ ; ಶ್ರೀಹರೇ! ವಿಷವೇನು, ಅರಗಿನ ಮನೆಯ ಭೀಕರ ಬೆಂಕಿಯೇನು, ಹಿಡಿಂಬರೇ ಮುಂತಾದ ರಾಕ್ಷಸರ ಉಪದ್ರವಗಳೇನು, ಜೂಜಿನ ಸಭೆಯಲ್ಲಿ ಒದಗಿದ ವಿಪತ್ತೇನು, ಅರಣ್ಯ ವಾಸದ ಸಂಕಷ್ಟಗಳೇನು, ಯುದ್ಧದ ಪ್ರತಿಯೊಂದು ಘಟ್ಟದಲ್ಲಿಯೂ ನಾನಾ ಮಹಾರಥರು ಪ್ರಯೋಗಿಸಿದ ಅಸ್ತ್ರಗಳೇನು ಮತ್ತು ಇದೀಗ ಅಶ್ವತ್ಥಾಮನ ಬ್ರಹ್ಮಾಸ್ತ್ರವೇನು–ಹೀಗೆ ಎಷ್ಟು ಸನ್ನಿವೇಶಗಳಲ್ಲಿ ನಮ್ಮನ್ನು ಕಾಪಾಡಿದ್ದೀಯೇ? ಇಡೀ ಜಗತ್ತಿನ ಕತ್ತಲೆಯನ್ನು ಕಳೆಯುವವನೇ! ಜಗದ್ಗುರುವೇ! ನಮ್ಮ ಜೀವನದಲ್ಲಿ ಆಗಾಗ್ಗೆ ವಿಪತ್ತುಗಳು ಒದಗಿಬರುತ್ತಿರಲಿ–ಎಂದು ನಾನು

---

* ಹೃಷೀಕೇಶಃ = ಶ್ರೀಕೃಷ್ಣ, ಹೃಷೀಕಗಳಿಗೆ ಅಂದರೆ ಇಂದ್ರಿಯಗಳಿಗೆ ಈಶನಾಗಿರು ವವನು. ಅಥವಾ ಹರ್ಷವನ್ನುಂಟುಮಾಡುವ ಸುಂದರವಾದ ಕೇಶಪಾಶಗಳಿಂದ ಬೆಳಗುವ ಮೋಹನಮೂರ್ತಿ.

ಹಾರೈಸುತ್ತೇನೆ. ಏಕೆಂದರೆ : ಅಂತಹ ಸಮಯದಲ್ಲೇ ನೀನು ದರ್ಶನವನ್ನು ನೀಡುವೆ. ಆ ನಿನ್ನ ದರ್ಶನವಾದರೆ ಪುನರ್ಜನ್ಮವು ತೊಲಗುವುದಷ್ಟೇ!

**ವಿಪದಃ ಸನ್ತು ನಃ ಶಶ್ವತ್ತತ್ರ ತತ್ರ ಜಗದ್ಗುರೋ ।**
**ಭವತೋ ದರ್ಶನಂ ಯತ್ಸ್ಯಾದಪುನರ್ಭವದರ್ಶನಮ್ ॥೨೫॥**

ನೀನು ಅಕಿಂಚನರಿಗೆ* ಮಾತ್ರ ಗೋಚರನಾಗುವವನು. ಕುಲಮದ, ಅಧಿಕಾರಮದ, ವಿದ್ಯಾಮದ, ಸಂಪತ್ತಿನಮದ–ಮುಂತಾದುವುಗಳಿಂದ ಬೀಗುವ ಮನುಷ್ಯನಿಗೆ ನಿನ್ನ ನಾಮೋಚ್ಚಾರಣೆಯನ್ನು ಮಾಡುವ ಅರ್ಹತೆ ಯಾದರೂ ಹೇಗೆ ಉಂಟಾದೀತು? ಏನೂ ಇಲ್ಲದವರಿಗೆ ಎಲ್ಲ ಐಶ್ವರ್ಯವೂ ನೀನೇ. ನೀನು ತ್ರಿಗುಣಗಳನ್ನೂ ಅದರ ಕಾರ್ಯಗಳನ್ನೂ ಮೀರಿರುವವನು, ಆತ್ಮಾರಾಮನು, ಪ್ರಶಾಂತನು. ಕೈವಲ್ಯಮೋಕ್ಷಕ್ಕೆ ಅಧಿಪತಿಯು. ಇಂತಹ ನಿನಗೆ ನಮಸ್ಕಾರಗಳು.

ಅನಾದಿಯೂ, ಅನಂತನೂ, ಸರ್ವವ್ಯಾಪಕನೂ, ಸರ್ವನಿಯಾಮಕನೂ ಆಗಿರುವ ಕಾಲರೂಪಿಯಾದ ಪರಮೇಶ್ವರನು ನೀನೇ–ಎಂದು ತಿಳಿಯುತ್ತೇನೆ. ಪ್ರಪಂಚದಲ್ಲಿ ಎಲ್ಲ ಭೂತಗಳೂ ಪರಸ್ಪರ ವೈಷಮ್ಯದಿಂದ ಘರ್ಷಣೆಮಾಡು ತ್ತಿರುವಲ್ಲಿ ಎಲ್ಲದರಲ್ಲೂ ಸಮಾನರೂಪದಿಂದ ಸಂಚರಿಸುತ್ತಿರುವವನು ನೀನೇ. ಓ ಭಗವಂತ! ಹೀಗೆ ಸರ್ವಸಮಾನನಾಗಿರುವ ನಿನಗೆ ಯಾರೂ ಯಾವ ಪ್ರಕಾರದಲ್ಲೂ ಪ್ರೀತಿಪಾತ್ರನೂ ಆಗಿಲ್ಲ. ಶತ್ರುವೂ ಆಗಿಲ್ಲ. ಆದರೆ ಜನರ ಬುದ್ಧಿಯು ಮಾತ್ರ ನಿನ್ನ ವಿಷಯದಲ್ಲಿ ವಿಷಮವಾಗಿರುತ್ತದೆ. ಮನುಷ್ಯರ ಮಧ್ಯದಲ್ಲಿ ಅವತರಿಸಿ ಮನುಷ್ಯರಂತೆ ಅಭಿನಯವನ್ನು ಮಾಡುತ್ತಿರುವ ನಿನ್ನ ಸಂಕಲ್ಪವೇನು? ನಿಜವಾಗಿಯೂ ಏನು ಮಾಡಬೇಕೆಂದಿರುವೆ?–ಎಂಬುದು ಯಾರಿಗೂ ತಿಳಿಯದು. ವಿಶ್ವಕ್ಕೇ ಆತ್ಮವಾಗಿರುವವನೇ! ನೀನು ಜನ್ಮ-ಕರ್ಮ ರಹಿತನಾದ ಶುದ್ಧಾತ್ಮಸ್ವರೂಪನೇ ಆಗಿದ್ದರೂ ಲೋಕದ ವಿಡಂಬನೆಗಾಗಿ ಪಶು, ಪಕ್ಷಿ ಮುಂತಾದ ತಿರ್ಯಕ್ ಜಂತುಗಳಲ್ಲೂ, ಮನುಷ್ಯರಲ್ಲೂ, ಮುನಿ ಗಳಲ್ಲೂ, ಜಲಚರಾದಿ ಪ್ರಾಣಿಗಳಲ್ಲೂ ಜನ್ಮತಾಳಿ ಆ ಯೋನಿಗಳಿಗೆ ಅನು ರೂಪವಾದ ದಿವ್ಯಕರ್ಮಗಳನ್ನೂ ಮಾಡುತ್ತಿರುವೆ. ನೀನು ಬಾಲ್ಯದಲ್ಲಿ ತುಂಟ ತನ ಮಾಡಿದಾಗ ಯಶೋದೆಯು ನಿನ್ನನ್ನು ಕಟ್ಟಿಹಾಕಲು ಕೈಯಲ್ಲಿ ಹಗ್ಗವ

---

* ಅಕಿಂಚನಃ = ಏನೂ ಇಲ್ಲದವನು, ದರಿದ್ರ.

ನ್ನೆತ್ತಿಕೊಂಡಳು. ಒಡನೆಯೇ ನೀನು ಹೇಗೆ ಕಾಣಿಸಿಕೊಂಡೆ? ತುಂಬಿದ ಕಣ್ಣೀರಿನಿಂದ ಕಣ್ಣಿಗೆ ಹಾಕಿದ್ದ ಕಾಡಿಗೆ ಕದಡಿಹೋಗುತ್ತಿರುವ ಚಂಚಲನೇತ್ರ ಗಳು, ತಗ್ಗಿಸಿದ ತಲೆ, ಎಂಥ ಭಯದ ಅಭಿನಯ! ಭಯಕ್ಕೂ ಭಯವನ್ನು ಉಂಟುಮಾಡುವವನಿಗೆ ಭಯವೆತ್ತಣದು? ಆದರೆ ಆ ರಮಣೀಯ ಅಭಿನಯದ ಧ್ಯಾನ ಈಗಲೂ ನನ್ನನ್ನು ಮೋಹಗೊಳಿಸುತ್ತಿದೆ. ನೀನು ಜನ್ಮರಹಿತ. ನೀನು ಜನ್ಮರಹಿತನಾಗಿದ್ದರೂ ಏಕೆ ಜನ್ಮತಾಳಿದೆ?–ಎಂದರೆ ಇದಕ್ಕೆ ಕೆಲವು ಮಹಾಪುರುಷರು : "ಮಲಯಪರ್ವತದ ಕೀರ್ತಿಯನ್ನು ಹರಡುವುದಕ್ಕಾಗಿ ಅಲ್ಲಿ ಗಂಧದಮರಗಳು ಹುಟ್ಟುವುದಿಲ್ಲವೇ? ಹಾಗೆಯೇ ಪುಣ್ಯಶ್ಲೋಕನೂ, ಪ್ರಿಯನಾದ ಭಕ್ತೋತ್ತಮನೂ ಆದ ಯದುಮಹಾರಾಜನ ಕೀರ್ತಿಯನ್ನು ವಿಸ್ತಾರಪಡಿಸುವುದಕ್ಕಾಗಿ ಅವನ ವಂಶದಲ್ಲಿ ಸ್ವಾಮಿಯು ಅವತಾರ ಮಾಡಿದ"–ಎಂದು ಕಾರಣವನ್ನು ಹೇಳುತ್ತಾರೆ. ಮತ್ತೆ ಕೆಲವರ ಹೇಳಿಕೆ ಯಂತೆ "ಹಿಂದಿನ ಜನ್ಮದಲ್ಲಿ ಸುತಪ ಮತ್ತು ಪೃಶ್ನೀ ಎಂಬ ರೂಪದಲ್ಲಿದ್ದ ವಸುದೇವ-ದೇವಕಿಯರ ಬೇಡಿಕೆಯಂತೆ ಜನ್ಮರಹಿತನಾದ ನೀನು ಅವರಿಗೆ ಪುತ್ರನಾಗಿ ಜನಿಸಿದೆ. ದೇವತೆಗಳ ಯಾಚನೆಯಂತೆ ಈ ಲೋಕಗಳ ಕ್ಷೇಮಕ್ಕಾಗಿಯೂ ಮತ್ತು ದೇವದ್ವೇಷಿಗಳಾದ ದೈತ್ಯರ ಸಂಹಾರಕ್ಕಾಗಿಯೂ ಹಾಗೆ ಜನ್ಮತಾಳಿದೆ." "ಭೂಮಿಯು–ಸಮುದ್ರದ ಮಧ್ಯದಲ್ಲಿ ಭಾರದಿಂದ ಮುಳುಗಿಹೋಗುತ್ತಿರುವ ನಾವೆಯಂತೆ–ಅಧರ್ಮದ ಭಾರದಿಂದ ಕಡುಪೀಡಿತವಾಗಿದ್ದಾಗ ಬ್ರಹ್ಮದೇವರ ಪ್ರಾರ್ಥನೆಯಂತೆ ಅದರ ಭಾರವನ್ನು ಇಳುಹಲು ನೀನು ಅವತರಿಸಿದೆ"–ಎಂದು ಮತ್ತೆ ಕೆಲವರು ಸಾರುತ್ತಾರೆ. ಇನ್ನು ಕೆಲವು ಮಹಾತ್ಮರು : "ಈ ಸಂಸಾರದಲ್ಲಿ ಅಜ್ಞಾನ, ಕಾಮ ಮತ್ತು ಅನಾದಿಕರ್ಮಗಳ ಕಟ್ಟಿಗೆ ಸಿಲುಕಿ ಕಷ್ಟಪಡುತ್ತಿರುವ ಜನರ ಉದ್ಧಾರಕ್ಕಾಗಿ ಅವರ ಶ್ರವಣ-ಸ್ಮರಣೆಗಳಿಗೆ ಶುಭಾಲಂಬನವಾಗುವ ದಿವ್ಯವಾದ ನಾಮ, ರೂಪ ಮತ್ತು ಚೇಷ್ಟಿತಗಳನ್ನು ತೋರುವುದಕ್ಕಾಗಿ ನಿನ್ನ ಅವತಾರ"–ಎಂದು ತಿಳಿಸುತ್ತಾರೆ. ಯಾವ ಭಾಗ್ಯಶಾಲಿಗಳು ಬಾರಿ-ಬಾರಿಗೂ ನಿನ್ನ ದಿವ್ಯಚೇಷ್ಟಿತ ಗಳನ್ನು ಶ್ರವಣಮಾಡುತ್ತಾರೋ, ಗಾನಮಾಡುತ್ತಾರೋ, ಸಂಕೀರ್ತನೆ ಮಾಡುತ್ತಾರೋ, ಸ್ಮರಣೆಮಾಡುತ್ತಾರೋ–ಆ ಶ್ರವಣ-ಗಾನ-ಸಂಕೀರ್ತನ-ಸ್ಮರಣೆಗಳಿಂದ ಆನಂದಪೂರಿತರಾಗುತ್ತಾರೋ–ಅಂತಹವರು ತಾನೇ ಜನ್ಮ-

ಮರಣಪ್ರವಾಹವನ್ನು ಎಂದೆಂದಿಗೂ ತಡೆಗಟ್ಟುವ ನಿನ್ನ ದಿವ್ಯವಾದ ಅಡಿದಾವರೆಗಳನ್ನು ಶೀಘ್ರವಾಗಿ ಸಾಕ್ಷಾತ್ಕರಿಸುವರು!*

(ಶ್ಲೋಕ 26-36)

ಭಕ್ತರ ಎಲ್ಲ ಇಷ್ಟಾರ್ಥಗಳನ್ನೂ ಈಡೇರಿಸುವ ಪ್ರಭುವೇ! ನಿನ್ನವರಾಗಿ ನಿನ್ನ ಸುಹೃತ್ತುಗಳಾಗಿ ನಿನ್ನನ್ನೇ ಅವಲಂಬಿಸಿ ಬಾಳುತ್ತಿರುವ ನಮ್ಮನ್ನು ಈಗಲೇ ಬಿಟ್ಟು ಹೊರಟುಹೋಗಲು ಬಯಸುವೆಯಾ? ನಮಗೆ ನಿನ್ನ ಚರಣಾರವಿಂದಗಳನ್ನು ಬಿಟ್ಟು ಬೇರೆ ಯಾವ ಆಸರೆಯೂ ಇಲ್ಲ ಮತ್ತು ಭೂಮಿಯಲ್ಲಿರುವ ರಾಜರೆಲ್ಲರೂ ನಮಗೆ ವಿರೋಧಿಗಳಾಗಿ ಬಿಟ್ಟಿದ್ದಾರೆ– ಎಂಬುದು ನಿನಗೆ ತಿಳಿದೇ ಇದೆ. ಆತ್ಮನು ಎಲ್ಲ ಇಂದ್ರಿಯಗಳಿಗೂ ಧಾರಕನು ಮತ್ತು ಪ್ರೇರಕನು. ಅವನನ್ನು ಕಳೆದುಕೊಂಡ ಮೇಲೆ ಇಂದ್ರಿಯಗಳಿಗೆ ಯಾವ ಶಕ್ತಿ? ಎಲ್ಲಿಯ ಅಸ್ತಿತ್ವ? ಅಂತೆಯೇ ನಿನ್ನ ದಿವ್ಯದರ್ಶನವಾಗದಿದ್ದರೆ ಯಾದವರಿಗಾಗಲೀ, ಪಾಂಡವರಿಗಾಗಲೀ ಶಕ್ತಿ, ನಾಮ, ಸ್ವರೂಪ, ಅಸ್ತಿತ್ವ ಯಾವುದಾದರೂ ಹೇಗೆ ಇದ್ದೀತು? ಪ್ರಭೋ! ಗದಾಧರ! ನಿನ್ನ ದಿವ್ಯ ಪಾದಾರವಿಂದಗಳ ಅಸಾಧಾರಣಚಿಹ್ನೆಗಳಿಂದ ಈ ಪ್ರದೇಶವು ಎಷ್ಟು ಶೋಭಾಯಮಾನವಾಗಿದೆ! ನೀನು ಇಲ್ಲಿಂದ ಹೊರಟುಹೋದರೆ ಇಲ್ಲಿ ಈ ಕಾಂತಿಯೂ ಇಲ್ಲವಾಗುವುದು. ನಿನ್ನ ಕಟಾಕ್ಷದ ಪ್ರಭಾವದಿಂದಲೇ ಈ ದೇಶವು ಪಕ್ವವಾದ ಸಮೃದ್ಧಿಗಳಿಂದ, ಧಾನ್ಯ ಮತ್ತು ಫಲಪುಷ್ಪಭರಿತವಾದ ಗಿಡ-ಮರ-ಬಳ್ಳಿಗಳ ಸಂಪತ್ತುಗಳಿಂದ ಸಮೃದ್ಧವಾಗಿದೆ. ಅರಣ್ಯ-ಗಿರಿ-ನದೀ-ಸಮುದ್ರಗಳೂ ಕಣ್ಣುಗಳಿಗೆ ಹಬ್ಬವಾಗಿವೆ. ವಿಶ್ವೇಶ್ವರನೂ ವಿಶ್ವಾತ್ಮನೂ ವಿಶ್ವಮೂರ್ತಿಯೂ ಆಗಿರುವ ಪ್ರಭುವೇ! ಸ್ವಜನರಾಗಿರುವ ಈ ಪಾಂಡವರಲ್ಲಿಯೂ ಮತ್ತು ಯಾದವರಲ್ಲಿಯೂ ನನಗೆ ದೃಢವಾದ ಮಮತೆ ಬೆಳೆದುಬಿಟ್ಟಿದೆ. ಈ ಪ್ರಾಕೃತವಾದ ಪ್ರೇಮದ ಪಾಶವನ್ನು ಕತ್ತರಿಸಿಹಾಕು. ನಿನ್ನಲ್ಲಿಯೇ ನಿರಂತರವಾದ ಪ್ರೇಮವು ಹರಿಯುತ್ತಿರುವಂತೆ ಮಾಡು, ಓ

---

* ಶ್ರೀಕೃಷ್ಣನ ಆ ಬಾಲಲೀಲೆಗಳನ್ನು ಗೋಕುಲದಲ್ಲಿ ಕುಂತಿಯು ಸಾಕ್ಷಾತ್ತಾಗಿ ನೋಡದಿರಬಹುದು. ಆದರೆ ಅದನ್ನು ಅನುಭವಿಸಿದವರ ಬಾಯಿಂದ ಅದರ ವರ್ಣನೆ ಯನ್ನು ಕೇಳುವುದರಿಂದಲೇ ಭಾವಸಮಾಧಿಯನ್ನು ಪಡೆಯುವ ಭಾವುಕತೆ ಆಕೆಗೆ ಉಂಟು.

ಪರಮಾನಂದಸ್ವರೂಪನಾದ ಮಧುಪತಿಯೇ! ಗಂಗೆಯ ಅಖಂಡ ಪ್ರವಾಹವು ಸಮುದ್ರದಲ್ಲಿಯೇ ಸದಾ ಹೋಗಿ ಸೇರುತ್ತಿರುವಂತೆ–ನನ್ನ ಬುದ್ಧಿಯೂ ನಿನ್ನಲ್ಲಿಯೇ ಪ್ರೇಮರಸಪೂರ್ಣಪ್ರವಾಹವಾಗಿ ಸದಾ ಹರಿಯುತ್ತಿರಲಿ. ಅಲ್ಲಿಯೇ ವಿಶ್ರಾಂತಿ ಪಡೆಯಲಿ. ಶ್ರೀಕೃಷ್ಣನೇ! ಕೃಷ್ಣನ (ಅರ್ಜುನನ) ಪ್ರಿಯಮಿತ್ರನೇ! ಯದುವಂಶಶಿರೋಮಣಿಯೇ! ಭೂಮಿಗೆ ಭಾರವಾಗಿರುವ ರಾಜವೇಷಧಾರಿಗಳಾದ ದೈತ್ಯರ ವಂಶಕ್ಕೆ ಬೆಂಕಿಯಾದವನೇ! ಅನಂತ ವೀರ್ಯನೇ! ಗೋವಿಂದ! ಗೋವುಗಳ, ದ್ವಿಜರ ಮತ್ತು ದೇವತೆಗಳ ಸಕಲ ದುಃಖಗಳನ್ನೂ ಧ್ವಂಸಮಾಡುವುದಕ್ಕಾಗಿಯೇ ಅವತರಿಸಿರುವ ಸ್ವಾಮಿಯೇ! ಯೋಗೇಶ್ವರನೇ! ಚರಾಚರ ಗುರುವೇ! ಭಗವಂತ! ನಿನಗೆ ನಮೋ ನಮಃ.”

(ಶ್ಲೋಕ 37-43)

ಸೂತಪುರಾಣಿಕರು ಹೇಳುತ್ತಾರೆ :

“ಕುಂತೀದೇವಿಯು ಹೀಗೆ ಮಧುರವಾದ ಶಬ್ದಗಳಿಂದ ಶ್ರೀಭಗವಂತನ ಸಮಸ್ತವೈಭವವನ್ನೂ ಯಥಾಶಕ್ತಿಯಾಗಿ ಸ್ತುತಿಸಲು–ಸ್ವಾಮಿಯಾದ ವೈಕುಂಠನು ಆಕೆಯನ್ನು ತನ್ನ ಮಾಯೆಯಿಂದ ಮೋಹಗೊಳಿಸುವಂತೆ–ಮಧುರಮಂದಹಾಸವನ್ನು ಬೀರಿ ‘ಹಾಗೆಯೇ ಆಗಲಿ’–ಎಂದು ಆಕೆಗೆ ಹೇಳಿ ಹಸ್ತಿನಾಪುರಕ್ಕೆ ಹಿಂದಿರುಗಿದನು. ಅಲ್ಲಿ ಎಲ್ಲ ಹೆಂಗಸರಿಂದಲೂ ಬೀಳ್ಕೊಡಲ್ಪಟ್ಟವನಾಗಿ ತನ್ನ ನಗರಿಗೆ ಹೊರಡುವಷ್ಟರಲ್ಲಿ ಆತನ ಪ್ರಯಾಣವನ್ನು ಯುಧಿಷ್ಠಿರನು ಪರಮಪ್ರೇಮದಿಂದ ತಡೆಗಟ್ಟಿದನು. ಧರ್ಮರಾಜನು ಬಂಧು-ಮಿತ್ರರ ಮರಣದಿಂದ ಅತ್ಯಂತಶೋಕಾಕುಲನಾಗಿದ್ದನು. ಭಗವಂತನ ಸಂಕಲ್ಪ ಮತ್ತು ದಿವ್ಯಚೇಷ್ಟಿತಗಳ ರಹಸ್ಯವನ್ನರಿತ ವ್ಯಾಸಾದಿ ಮಹರ್ಷಿಗಳೂ ಮತ್ತು ಪರಮಾದ್ಭುತಚರಿತ್ರವುಳ್ಳ ಸ್ವಯಂ ಶ್ರೀಕೃಷ್ಣ ಪರಮಾತ್ಮನೂ ಅನೇಕ ಇತಿಹಾಸಗಳನ್ನು ಹೇಳಿ ಆತನನ್ನು ಸಾಂತ್ವನಗೊಳಿಸಲು ಪ್ರಯತ್ನಿಸಿದರೂ ಆತನಿಗೆ ಅರಿವುಂಟಾಗಲಿಲ್ಲ ; ಸಮಾಧಾನವಾಗಲಿಲ್ಲ. ಮಹರ್ಷಿಗಳೇ! ಧರ್ಮಪುತ್ರನಾದ ಮಹಾರಾಜ ಯುಧಿಷ್ಠಿರನನ್ನು ಪ್ರಾಕೃತವಾದ ಮನಸ್ಸು ಸ್ನೇಹ-ಮೋಹಗಳಲ್ಲಿ ಬಲವಾಗಿ ಬಂಧಿಸಿಬಿಟ್ಟಿತ್ತು. ಅದರಿಂದ ಪರವಶನಾದ ಆತನು ಬಂಧು-ಮಿತ್ರರ ವಧೆಯನ್ನೇ ಕುರಿತು ಚಿಂತಿಸುತ್ತಾ ಹೀಗೆಂದುಕೊಂಡನು :

"ಅಯ್ಯೋ! ದುರಾತ್ಮನಾದ ನನ್ನ ಹೃದಯದಲ್ಲಿ ಎಂತಹ ಅಜ್ಞಾನ ಬೇರೂರಿತು? ನಾಯಿ-ನರಿಗಳಿಗೆ ಆಹಾರವಾಗಬಹುದಾದ ಅನಾತ್ಮವಾದ ಈ ದೇಹಕ್ಕಾಗಿ ನಾನು ಅನೇಕ ಅಕೌಹಿಣೀಸೈನ್ಯವನ್ನು* ನಾಶಪಡಿಸಿದೆನು. ಬಾಲಕರು, ಬ್ರಾಹ್ಮಣರು, ನೆಂಟರಿಷ್ಟರು, ತಂದೆ-ಅಣ್ಣ-ತಮ್ಮಂದಿರ ಸ್ಥಾನ ದಲ್ಲಿರುವವರು, ಗುರುಜನರು–ಇವರಿಗೆಲ್ಲಾ ದ್ರೋಹಮಾಡಿದೆನು. ಇಂತಹ ಮಹಾಪಾಪವನ್ನಾಚರಿಸಿರುವ ನನಗೆ ಕೋಟ್ಯಂತರ ವರ್ಷಗಳು ಕಳೆದರೂ ನರಕದಿಂದ ಬಿಡುಗಡೆಯಾಗುವುದಿಲ್ಲ. ಶಾಸ್ತ್ರಗಳೇನೋ 'ರಾಜನು ಪ್ರಜೆಗಳ ರಕ್ಷಣೆಗಾಗಿ ಧರ್ಮಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಿದರೆ ಅದರಿಂದ ಪಾಪ ವಿಲ್ಲ'–ಎಂದು ಸಾರುತ್ತವೆ. ಆದರೂ ನನಗೆ ಆ ಶಾಸ್ತ್ರವಚನಮಾತ್ರದಿಂದಲೇ ಸಮಾಧಾನವಾಗುತ್ತಿಲ್ಲ. ಈ ಯುದ್ಧದಲ್ಲಿ ನಾನು ಕೊಂದುಹಾಕಿರುವ, ನೆಂಟರಿಷ್ಟರನ್ನು ಕಳೆದುಕೊಂಡು ಸಂಕಷ್ಟದಿಂದ ಕೊರಗುತ್ತಿರುವ ಹೆಂಗಸರಿಗೆ ನನ್ನಿಂದಾದ ದ್ರೋಹವನ್ನು ಹೇಗೆ ತೊಡೆದುಹಾಕುವುದು? ಗೃಹಸ್ಥರು ಆಚರಿಸಲು ಯೋಗ್ಯವಾದ ಯಾವ ಯಜ್ಞ-ಯಾಗಾದಿಗಳಿಂದಲೂ–ಅದನ್ನು ತೊಡೆದುಹಾಕಲು ಸಾಧ್ಯವಿಲ್ಲ.

**ಯಥಾ ಪಙ್ಕೇನ ಪಙ್ಕಾಮ್ಭಃ ಸುರಯಾ ವಾ ಸುರಾಕೃತಮ್ ।**
**ಭೂತಹತ್ಯಾಂ ತಥೈವೈಕಾಂ ನ ಯಜ್ಞೈರ್ಮಾರ್ಷ್ಟುಮರ್ಹತಿ ॥೫೨॥**

ಕೆಸರಿನಿಂದ ಕೊಳಕಾದ ನೀರನ್ನು ಕೆಸರಿನಿಂದಲೇ ಶುದ್ಧಿಗೊಳಿಸಲು ಸಾಧ್ಯವಾಗುವುದಿಲ್ಲ. ಮದ್ಯದಿಂದ ಉಂಟಾದ ದೋಷವನ್ನು ಮದ್ಯದಿಂದಲೇ ಹೋಗಲಾಡಿಸಲು ಸಾಧ್ಯವಿಲ್ಲ. ಹಾಗೆಯೇ ಪ್ರಾಣಿಹತ್ಯೆಯಿಂದ ಆಗಿರುವ ಈ ಒಂದು ಮಹಾಪಾಪವನ್ನು ಪ್ರಾಣಿಹಿಂಸೆಯಿಂದಲೇ ತುಂಬಿ ಅದರಲ್ಲಿಯೇ ಕೊನೆಗಾಣುವ ಯಾವ ಯಜ್ಞಗಳಿಂದಲೂ ತೊಳೆದುಹಾಕಲು ಶಕ್ಯವಿಲ್ಲ."

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೮ನೆಯ ಅಧ್ಯಾಯವು ಮುಗಿಯಿತು.

---

* ಅಕ್ಷೌಹಿಣೀ ಸೈನ್ಯ–21,870 ರಥಗಳು, 21,870 ಆನೆಗಳು, 1,09,350 ಕಾಲಾಳುಗಳು ಮತ್ತು 65,610 ಮಂದಿ ಕುದುರೆಸವಾರರು–ಇಷ್ಟು ಲೆಕ್ಕದ ಸೈನ್ಯಕ್ಕೆ ಒಂದು ಅಕ್ಷೌಹಿಣೀ ಎಂದು ಹೆಸರು.

## ಯುಧಿಷ್ಠಿರಾದಿಗಳು ಭೀಷ್ಮರ ಬಳಿಗೆ ಹೋದುದು : ಶ್ರೀಕೃಷ್ಣಸ್ತುತಿಪೂರ್ವಕವಾಗಿ ಭೀಷ್ಮರ ನಿರ್ಯಾಣ

**ಸೂತಪುರಾಣಿಕರು ಹೇಳುತ್ತಾರೆ :**

**ಇತಿ ಭೀತಃ ಪ್ರಜಾದ್ರೋಹಾತ್ಸರ್ವಧರ್ಮವಿವಿತ್ಸಯಾ ।**
**ತತೋ ವಿನಶನಂ ಪ್ರಾಗಾದ್ಯತ್ರ ದೇವವ್ರತೋಽಪತತ್ ॥೧॥**

ಹೀಗೆ ತನ್ನಿಂದ ಪ್ರಜಾದ್ರೋಹವಾಯಿತೆಂದು ಹೆದರಿದ ಧರ್ಮರಾಜನು ಧರ್ಮರಹಸ್ಯವನ್ನು ತಿಳಿದುಕೊಳ್ಳುವ ಇಚ್ಛೆಯಿಂದ ಭೀಷ್ಮಪಿತಾ ಮಹರು ಶರಶಯ್ಯೆಯಲ್ಲಿ ಪವಡಿಸಿದ್ದ ಕುರುಕ್ಷೇತ್ರಕ್ಕೆ ಹೋದನು.

ಆ ಸಮಯದಲ್ಲಿ ಅವನ ಒಡಹುಟ್ಟಿದವರೆಲ್ಲರೂ ಒಳ್ಳೆಯ ಅಶ್ವ ಗಳಿಂದ ಹೂಡಲ್ಪಟ್ಟ ಸುವರ್ಣಾಲಂಕೃತವಾದ ರಥಗಳಲ್ಲಿ ಕುಳಿತು ಅವನನ್ನು ಹಿಂಬಾಲಿಸಿದರು. ವೇದವ್ಯಾಸರೂ, ಧೌಮ್ಯರೇ ಮುಂತಾದ ಮಹರ್ಷಿಗಳೂ ಬ್ರಾಹ್ಮಣರೂ ಅವರ ಜೊತೆಯಲ್ಲಿ ಹೋದರು. ಮಹರ್ಷಿಶೌನಕರೇ! ಅರ್ಜುನನೊಡನೆ ರಥವನ್ನೇರಿ ಶ್ರೀಕೃಷ್ಣಪರಮಾತ್ಮನೂ ದಯಮಾಡಿಸಿದನು. ಅವರೆಲ್ಲರಿಂದೊಡಗೂಡಿದ ಯುಧಿಷ್ಠಿರಮಹಾರಾಜನು–ಯಕ್ಷಮಂಡಲಿ ಯಿಂದ ಸುತ್ತುವರಿಯಲ್ಪಟ್ಟಿದ್ದ ಕುಬೇರನಂತೆಯೇ ಕಂಗೊಳಿಸುತ್ತಿದ್ದನು. ಸ್ವರ್ಗದಿಂದ ಜಾರಿಬಂದ ದೇವತೆಯಂತೆ–ಭೂಮಿಯಲ್ಲಿ ಬಿದ್ದು ಪವಡಿಸಿದ್ದ ದೇವವ್ರತರಾದ ಭೀಷ್ಮರನ್ನು ಕಂಡು ಪರಿವಾರಸಹಿತರಾದ ಪಾಂಡವರು ಶ್ರೀಕೃಷ್ಣ ಪರಮಾತ್ಮನಿಂದೊಡಗೂಡಿ ಅವರಿಗೆ ನಮಸ್ಕಾರಮಾಡಿದರು. ಆ ಭರತಕುಲ ತಿಲಕರನ್ನು ಸಂದರ್ಶಿಸಲು ಸಮಸ್ತಬ್ರಹ್ಮರ್ಷಿಗಳೂ, ದೇವರ್ಷಿಗಳೂ ಮತ್ತು ರಾಜರ್ಷಿಗಳೂ ಆಗ ಅಲ್ಲಿಗೆ ಬಂದಿದ್ದರು. ಪರ್ವತರೂ, ನಾರದರೂ, ಧೌಮ್ಯರೂ, ಭಗವಾನ್ ವೇದವ್ಯಾಸರೂ, ಬೃಹದಶ್ವರೂ, ಭರದ್ವಾಜರೂ, ಶಿಷ್ಯಸಹಿತರಾದ ಪರಶುರಾಮರೂ, ವಸಿಷ್ಠರೂ, ಇಂದ್ರ-ಪ್ರಮದರೂ, ತ್ರಿತರೂ, ಗೃತ್ಸಮದರೂ, ಅಸಿತರೂ, ಕಕ್ಷೀವಂತರೂ, ಗೌತಮರೂ, ಅತ್ರಿಮಹರ್ಷಿಗಳೂ, ವಿಶ್ವಾಮಿತ್ರರೂ, ಸುದರ್ಶನರೂ, ಬ್ರಹ್ಮರತರಾದ ಶುಕ

ಮಹಾಮುನಿಗಳೂ, ಕಶ್ಯಪರೂ ಮತ್ತು ಅಂಗಿರಸರೂ–ಇವರೇ ಮೊದಲಾದ ಶುದ್ಧಾತ್ಮರಾದ ಮಹರ್ಷಿಗಳು ಶಿಷ್ಯಸಮೇತರಾಗಿ ದಯಮಾಡಿಸಿದರು.

ದೇಶ-ಕಾಲಗಳ ವಿಶೇಷವೇನೆಂಬುದನ್ನು ತಿಳಿದಿದ್ದ, ಧರ್ಮಜ್ಞರಾದ, ವಸುದೇವತೆಯ ಅವತಾರವಾಗಿದ್ದ ಭೀಷ್ಮರು ಅಲ್ಲಿ ನೆರೆದಿದ್ದ ಮಹಾಭಾಗ್ಯ ಶಾಲಿಗಳಾದ ಮುನಿಶ್ರೇಷ್ಠರೆಲ್ಲರನ್ನೂ ಸ್ವಾಗತಿಸಿ ಪೂಜಿಸಿದರು. ಹಾಗೆಯೇ ಶ್ರೀಕೃಷ್ಣನ ಪ್ರಭಾವವನ್ನರಿತಿದ್ದ ಆ ಮಹಾತ್ಮರು ಅಲ್ಲಿಯೇ ಕುಳಿತಿದ್ದ, ಮಾಯಾಮಾನುಷರೂಪಧಾರಿಯಾಗಿದ್ದ, ಹೃದಯಾಂತರ್ಯಾಮಿಯಾದ, ಜಗದೀಶ್ವರನಾದ ಶ್ರೀಕೃಷ್ಣನನ್ನು ಒಳಗೂ–ಹೊರಗೂ ಪೂಜಿಸಿದರು.

(ಶ್ಲೋಕ 2-10)

ಅತಿವಿನಯದಿಂದಲೂ, ಪ್ರೇಮದಿಂದಲೂ ತುಂಬಿದವರಾಗಿ ಹತ್ತಿರ ದಲ್ಲಿ ಕುಳಿತಿದ್ದ ಪಾಂಡವರನ್ನು ಕಂಡು ಭೀಷ್ಮಪಿತಾಮಹರ ಕಣ್ಣುಗಳು ಪ್ರೇಮ ಗಂಬನಿಗಳಿಂದ ತುಂಬಿ ಮಸುಕಾದುವು. ಇಂತಹ ದೃಷ್ಟಿಯಿಂದ ಪಾಂಡವ ರನ್ನು ನೋಡುತ್ತಾ ಹೀಗೆಂದರು :

"ಓ ಧರ್ಮಪುತ್ರರೇ! ಎಂತಹ ಕಷ್ಟ-ಅನ್ಯಾಯ ಒದಗಿತು ನಿಮಗೆ! ಬ್ರಾಹ್ಮಣರನ್ನೂ, ಧರ್ಮವನ್ನೂ, ಶ್ರೀಕೃಷ್ಣಪರಮಾತ್ಮನನ್ನೂ ಆಶ್ರಯಿಸಿ ದ್ದರೂ ನೀವಿಂತಹ ಕಷ್ಟಗಳನ್ನು ಅನುಭವಿಸಬೇಕಾಯಿತಲ್ಲಾ! ನೀವು ಇಂತಹ ಕಷ್ಟ-ಕಾರ್ಪಣ್ಯಗಳ ಬದುಕಿಗೆ ತಕ್ಕವರಲ್ಲ. ಅತಿರಥನಾದ ಪಾಂಡುವು ಅಕಾಲದಲ್ಲಿ ಸ್ವರ್ಗಸ್ಥನಾದಾಗ ನಿಮಗಿನ್ನೂ ಎಳೆಯ ವಯಸ್ಸು. ಆಗ ನಮ್ಮ ಸೊಸೆಯಾದ ಕುಂತಿಯು ನಿಮಗೋಸ್ಕರ ಎಷ್ಟು ಕಷ್ಟಪಡಬೇಕಾಯಿತು! ನೀವೂ ಸಹ ಎಷ್ಟೊಂದು ಕಷ್ಟವನ್ನನುಭವಿಸಬೇಕಾಯಿತು! ಮೋಡಗಳು ವಾಯುವಿಗೆ ವಶವಾಗಿರುವಂತೆ–ಲೋಕಪಾಲರಿಂದ ಸಹಿತವಾದ ಇಡೀ ಜಗತ್ತೇ ಕಾಲಕ್ಕೆ ಅಧೀನವಾಗಿದೆ. ಆದ್ದರಿಂದ ನಿಮಗೆ ಜೀವನದಲ್ಲೊದಗಿದ ಆ ಅಪ್ರಿಯಘಟನೆಗಳಿಗೂ ಕಾಲವೇ ಕಾರಣವೆಂದು ನಾನು ತಿಳಿಯುತ್ತೇನೆ. ಹಾಗಲ್ಲದಿದ್ದರೆ ಧರ್ಮಪುತ್ರನೇ ಆದ ಯುಧಿಷ್ಠಿರನು ರಾಜನಾಗಿ, ಗದಾಪಾಣಿ ಯಾದ ಭೀಮಸೇನನೂ ಮತ್ತು ಧನುರ್ಧಾರಿಯಾದ ಅರ್ಜುನನೂ ರಕ್ಷಕ ರಾಗಿ, ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನೇ ಗೆಳೆಯನಾಗಿರುವ ಜಾಗದಲ್ಲೂ

ವಿಪತ್ತು ಒದಗುವುದುಂಟೇ? ಕಾಲರೂಪಿಯಾದ ಈ ಶ್ರೀಕೃಷ್ಣನು ಯಾವಾಗ ಏನನ್ನು ಮಾಡಲು ಬಯಸುತ್ತಾನೆಂಬುದನ್ನು ಯಾರೂ ಅರಿಯರು. ಅದನ್ನರಿಯಲು ಬಯಸಿ ದೊಡ್ಡ-ದೊಡ್ಡ ಜ್ಞಾನಿಗಳೂ ಆ ವಿಷಯದಲ್ಲಿ ಮೋಹಗೊಂಡು ಆಶ್ಚರ್ಯಚಕಿತರಾಗುತ್ತಾರೆ. ಓ ಭರತಶ್ರೇಷ್ಠನೇ! ಆದ್ದರಿಂದ ಎಲ್ಲ ಘಟನೆಗಳೂ ಭಗವಂತನ ಇಚ್ಛೆಗೆ ಅಧೀನವಾಗಿಯೇ ನಡೆಯುತ್ತವೆಯೆಂಬುದನ್ನು ಮನಗಂಡು ಅದಕ್ಕನುಗುಣವಾಗಿ ನಡೆಯುತ್ತಾ ಅನಾಥರಾಗಿರುವ ಪ್ರಜೆಗಳನ್ನು ಪಾಲಿಸು. ನೀನೇ ಇದಕ್ಕೆ ಸಮರ್ಥನು.

ಈ ಶ್ರೀಕೃಷ್ಣಪರಮಾತ್ಮನಾದರೋ ಸಾಕ್ಷಾತ್ ಭಗವಂತನು. ಎಲ್ಲಕ್ಕೂ ಆದಿಯಾಗಿರುವ ಪರಮಪುರುಷನಾದ ನಾರಾಯಣನು. ಮಾಯೆಯಿಂದ ತನ್ನ ನಿಜಸ್ವರೂಪವನ್ನು ಮರೆಸಿಕೊಂಡು ಲೋಕವನ್ನು ಮೋಹ ಗೊಳಿಸುತ್ತಾ– ಯಾದವರಲ್ಲಿ ತಾನೂ ಒಬ್ಬನೆಂದು ಜನರು ತಿಳಿಯುವಂತೆ– ಅವರ ಮಧ್ಯದಲ್ಲಿ ಓಡಾಡುತ್ತಿದ್ದಾನೆ. ಇವನ ಪ್ರಭಾವವು ಅತ್ಯಂತ ಗಹನವಾದುದು ; ರಹಸ್ಯಪೂರ್ಣವಾದುದು. ಅದನ್ನು ಭಗವಂತನಾದ ಶಿವ, ದೇವರ್ಷಿನಾರದರು ಮತ್ತು ಸಾಕ್ಷಾತ್ ಭಗವಂತನಾದ ಕಪಿಲ ಮಹರ್ಷಿ–ಇವರುಗಳು ಮಾತ್ರವೇ ಬಲ್ಲರು. ನೀನು ಯಾರನ್ನು ನಿನ್ನ ಸೋದರಮಾವನ ಮಗ, ಪ್ರಿಯಮಿತ್ರ, ಶ್ರೇಷ್ಠತಮನಾದ ಗೆಳೆಯ– ಮುಂತಾಗಿ ತಿಳಿದುಕೊಂಡಿರುವೆಯೋ ಮತ್ತು ಪ್ರೇಮವಶದಿಂದ ನಿನ್ನ ಮಂತ್ರಿಯನ್ನಾಗಿಯೂ, ದೂತನನ್ನಾಗಿಯೂ, ಸಾರಥಿಯನ್ನಾಗಿಯೂ ಮಾಡಿಕೊಳ್ಳುವುದಕ್ಕೂ ಸಂಕೋಚಪಡಲಿಲ್ಲವೋ– ಆತನು ಸಾಕ್ಷಾತ್ ಪರ ಮಾತ್ಮನಪ್ಪಾ! ಆತನು ಸರ್ವಾತ್ಮನೂ, ಸಮದರ್ಶಿಯೂ, ಅದ್ವಿತೀಯನೂ,* ಅಹಂಕಾರರಹಿತನೂ, ಅವದ್ಯವಿಲ್ಲದವನೂ– ಆಗಿರುವುದರಿಂದಲೇ ತನ್ನನ್ನು

---

* ಅದ್ವಯಸ್ಯ = ಎಣೆ-ಮಿಗಿಲಿಲ್ಲದ. ಅನಹಂಕೃತೇಃ ನಿರವದ್ಯಸ್ಯ. ಪ್ರಾಕೃತ–ವೈಕೃತಶರೀರರಹಿತನಾದ್ದರಿಂದ ದೇಹಾದಿಗಳಲ್ಲಿ ಅಹಂಬುದ್ಧಿಯಿಲ್ಲದೇ ಅದರಿಂದಲೇ ರಾಗಾದಿಸರ್ವದೋಷರಹಿತನಾದ. (ವಿಜಯಧ್ವಜೀಯ)

ಅದ್ವಯಸ್ಯ = ದ್ವಿತೀಯವಸ್ತುರಹಿತನಾದ. ಸ್ವತಂತ್ರವಾದ ಬೇರೆ ಯಾವ ವಸ್ತುವೂ ಇಲ್ಲದಿರುವ. ಸಮದೃಶಃ = ಪ್ರಕೃತಿ-ಪುರುಷಾದ್ಯಾತ್ಮಕವಾದ ಸಮಸ್ತವನ್ನೂ ತನ್ನ ಶರೀರವೆಂದು ಸಮದೃಷ್ಟಿಯಿಂದ ನೋಡುವವನಾದ. (ವೀರರಾಘವೀಯ)

ಆತನಿಗೆ ತನಗೆ ಕೊಟ್ಟಿದ್ದು ನೀಚಕರ್ಮ-ಉಚ್ಚಕರ್ಮ ಎಂಬ ವೈಷಮ್ಯವಿಲ್ಲ.

ಸಾರಥ್ಯವೇ ಮುಂತಾದ ಕೆಲಸಕ್ಕೆ ನೇಮಿಸಿದ್ದರೂ ವೈಷಮ್ಯವನ್ನು ಭಾವಿಸದೆ ಸರ್ವಾತ್ಮನಾಗಿ ಸಮದರ್ಶಿಯಾಗಿದ್ದಾನೆ. ಆದರೂ ತನ್ನ ಅನನ್ಯಭಕ್ತರ ವಿಷಯದಲ್ಲಿ ವಿಶೇಷಕೃಪೆಯನ್ನು ಹೊಂದಿರುವುದರಿಂದ ಪ್ರಾಣತ್ಯಾಗಮಾಡು ತ್ತಿರುವ ನನಗೆ ಸಾಕ್ಷಾತ್ತಾಗಿ ದರ್ಶನವನ್ನು ದಯಪಾಲಿಸಲು ಇಲ್ಲಿಗೆ ಬಂದಿ ದ್ದಾನೆ. ಅವನ ವಿಷಯದಲ್ಲಿ ಮನಸ್ಸಿನಲ್ಲಿ ಭಕ್ತಿಭಾವವನ್ನು ತುಂಬಿಕೊಂಡು, ಬಾಯಲ್ಲಿ ಅವನ ನಾಮಸಂಕೀರ್ತನೆಯನ್ನು ಮಾಡುತ್ತಾ ದೇಹತ್ಯಾಗ ಮಾಡುವ ಯೋಗಿಯು ಎಲ್ಲ ಕರ್ಮಗಳಿಂದಲೂ–ಕರ್ಮಬಂಧನ ಗಳಿಂದಲೂ ಬಿಡುಗಡೆಹೊಂದುತ್ತಾನೆ. ಅಂತಹ ಯೋಗಿಗಳ ಧ್ಯಾನ ಮಾರ್ಗಕ್ಕೆ ಗೋಚರನಾಗಿ ಚತುರ್ಭುಜಗಳಿಂದಲೂ, ಪ್ರಸನ್ನವಾದ ಮಂದ ಹಾಸದಿಂದಲೂ, ನಸುಗೆಂಪಾದ ಕಣ್ಣುಗಳಿಂದಲೂ, ಉಲ್ಲಾಸಗೊಂಡಿರುವ ಮುಖಕಮಲದಿಂದಲೂ ಕಂಗೊಳಿಸುತ್ತಿರುವ ಭಗವಂತನಾದ, ದೇವ ದೇವೋತ್ತಮನಾದ, ದೇವತಾಸಾರ್ವಭೌಮನಾದ ಆ ಶ್ರೀಕೃಷ್ಣಪರಮಾತ್ಮನು ನನ್ನ ಕಡೆಗೆ ದೃಷ್ಟಿಯನ್ನು ಬೀರಲಿ." (ಶ್ಲೋಕ 11-24)

ಸೂತಪುರಾಣಿಕರು ಹೇಳುತ್ತಾರೆ :

"ಶರಪಂಜರದಲ್ಲಿ ಪವಡಿಸಿದ್ದ ಭೀಷ್ಮಪಿತಾಮಹರ ಮಾತುಗಳನ್ನು ಕೇಳಿದ ಬಳಿಕ ಯುಧಿಷ್ಠಿರನು ನಾನಾಬಗೆಯಾದ ಧರ್ಮಗಳ ರಹಸ್ಯವನ್ನು ಉಪದೇಶಿಸಬೇಕೆಂದು ಅಲ್ಲಿ ನೆರೆದಿದ್ದ ಋಷಿಗಳೆದುರಿನಲ್ಲಿ ಆ ಮಹಾತ್ಮರನ್ನು ಕೇಳಿಕೊಂಡನು. ಧರ್ಮಜ್ಞರಾದ, ದೇವವ್ರತರಾದ ಭೀಷ್ಮರು ಅದರಂತೆ ಯುಧಿಷ್ಠಿರನಿಗೆ ಆಯಾ ವರ್ಣ ಮತ್ತು ಆಶ್ರಮಗಳಿಗೆ ಅನುಗುಣವಾಗಿ ಪುರುಷರ ಸ್ವಭಾವಕ್ಕೆ ಹೊಂದಿಕೆಯಾಗುವಂತಹ ವರ್ಣಾಶ್ರಮಧರ್ಮ ಗಳನ್ನೂ, ವೈರಾಗ್ಯಮಾರ್ಗ ಮತ್ತು ಲೋಕಮಾರ್ಗಗಳಿಗೆ ಅನುಗುಣವಾಗಿ ಶಾಸ್ತ್ರಗಳು ವಿಧಿಸಿರುವ ನಿವೃತ್ತಿ-ಪ್ರವೃತ್ತಿಧರ್ಮಗಳೆಂಬ ಎರಡೂ ಬಗೆಯ ಧರ್ಮಗಳನ್ನೂ, ದಾನಧರ್ಮಗಳನ್ನೂ, ರಾಜಧರ್ಮಗಳನ್ನೂ, ಮೋಕ್ಷಧರ್ಮ ಗಳನ್ನೂ, ಸ್ತ್ರೀಧರ್ಮಗಳನ್ನೂ, ಭಾಗವತರು ಅನುಸರಿಸಬೇಕಾದ ಧರ್ಮ

---

ಏಕೆಂದರೆ : ಅವನು ನಿರವದ್ಯನು ; ರಾಗಾದಿರಹಿತನು. ಇದಕ್ಕೆ ಕಾರಣ ಅವನು ಅಹಂಕಾರರಹಿತನಾಗಿರುವುದು, ಅಹಂಕಾರರಾಹಿತ್ಯಕ್ಕೆ ಕಾರಣ ಅವನು ಅದ್ವಯ ನಾಗಿರುವುದು. (ಶ್ರೀಧರೀಯ)

ಗಳನ್ನೂ, ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ–ನಾಲ್ಕು ಬಗೆಯ ಪುರುಷಾರ್ಥಗಳನ್ನೂ, ಅವುಗಳ ಸಾಧನ-ಸಂಪತ್ತು-ಉಪಾಯಗಳನ್ನೂ ಕಥೆಗಳಿಂದಲೂ–ಇತಿಹಾಸಗಳಿಂದಲೂ, ವರ್ಣನೆಮಾಡುತ್ತಾ ವಿಭಾಗಪೂರ್ವಕವಾಗಿಯೂ ಉಪದೇಶಮಾಡಿದರು. ಇಚ್ಛಾಮರಣಿಗಳಾದ ಆ ಮಹಾಯೋಗಿಗಳು ಹೀಗೆ ಧರ್ಮವನ್ನು ಕುರಿತು ಪ್ರವಚನಮಾಡುತ್ತಿರುವಂತೆಯೇ ಅವರು ದೇಹತ್ಯಾಗಕ್ಕಾಗಿ ಕಾಯುತ್ತಿದ್ದ ಪವಿತ್ರವಾದ ಉತ್ತರಾಯಣಕಾಲವು ಬಂದುಬಿಟ್ಟಿತು. ಒಡನೆಯೇ ಅವರು ಸಾವಿರಾರು ಬಗೆಗಳಲ್ಲಿ ಹರಿಯುತ್ತಿದ್ದ ತಮ್ಮ ಮಾತಿನ ಪ್ರವಾಹವನ್ನು ಉಪಸಂಹಾರಮಾಡಿಕೊಂಡು ತಮ್ಮ ಮುಂದೆ ಕಂಗೊಳಿಸುತ್ತಿದ್ದ ಚತುರ್ಭುಜನೂ, ಪೀತಾಂಬರವಿರಾಜಿತನೂ ಆದ ಶ್ರೀಕೃಷ್ಣಪರಮಾತ್ಮನನ್ನು ಎವೆಯಿಕ್ಕದ ಕಣ್ಣುಗಳಿಂದ ದೃಷ್ಟಿಸುತ್ತಾ ತಮ್ಮ ಸಂಗರಹಿತವಾದ ಮನಸ್ಸನ್ನು ಅವನಲ್ಲಿ ನೆಲೆಗೊಳಿಸಿದರು. ಹಾಗೆ ಶ್ರೀಭಗವಂತನನ್ನು ದೃಢವಾಗಿ ಧರಿಸಿದ ಧಾರಣಾಯೋಗದಿಂದ ಅವರ ಎಲ್ಲ ಅಶುಭಗಳೂ ತೊಲಗಿಹೋಗಲಾಗಿ ಅವರಿಗೆ ಶಸ್ತ್ರಾಸ್ತ್ರಪ್ರಹಾರಗಳಿಂದ ಉಂಟಾಗಿದ್ದ ಎಲ್ಲ ನೋವುಗಳೂ ಅವನ ಕೃಪಾಕಟಾಕ್ಷಮಾತ್ರದಿಂದ ಒಡನೆಯೇ ಕಳೆದುಹೋದುವು. ಇಂದ್ರಿಯವ್ಯಾಪಾರಗಳ ಅಲೆದಾಟವು ನಿಂತುಹೋಗಲಾಗಿ ಅದರ ಸಡಗರವೂ ಇಲ್ಲವಾಯಿತು. ದೇಹತ್ಯಾಗಮಾಡುತ್ತಾ ಆ ಭಕ್ತೋತ್ತಮರು ಭಗವಂತನನ್ನು ಹೀಗೆ ಸ್ತುತಿಸಿದರು : (ಶ್ಲೋಕ 25-31)

**ಇತಿ ಮತಿರುಪಕಲ್ಪಿತಾ ವಿತೃಷ್ಣಾ**
**ಭಗವತಿ ಸಾತ್ವತಪುಙ್ಗವೇ ವಿಭೂಮ್ನಿ ।**
**ಸ್ವಸುಖಮುಪಗತೇ ಕ್ವಚಿದ್ವಿಹರ್ತುಂ**
**ಪ್ರಕೃತಿಮುಪೇಯುಷಿ ಯದ್ಭವಪ್ರವಾಹಃ ॥೩೨॥**

“ಯದುಕುಲಶಿರೋಮಣಿಯೂ, ಮಹಾಮಹಿಮನೂ ಆದ ಶ್ರೀಕೃಷ್ಣಪರಮಾತ್ಮನ ಚರಣಾರವಿಂದಗಳಲ್ಲಿ ನನ್ನ ಭೋಗವಾಸನಾರಹಿತವಾದ ಮನಸ್ಸು ಸಮರ್ಪಿತವಾಗಿಬಿಟ್ಟಿದೆ. ಈತನು ಸದಾ ತನ್ನ ಸಹಜಾನಂದ ಸ್ವರೂಪದಲ್ಲಿ ನೆಲೆಗೊಂಡಿದ್ದುಕೊಂಡೇ ತನ್ನ ಸಂಕಲ್ಪದಂತೆ ಲೀಲಾವಿಹಾರಕ್ಕಾಗಿ ಪ್ರಕೃತಿಯೊಡನೆ ಕೂಡಿದಾಗ ಅಖಂಡವಾದ ಈ ಸಂಸಾರಪ್ರವಾಹವು ಹರಿಯಲಾರಂಭಿಸುವುದು.

**ತ್ರಿಭುವನಕಮನಂ ತಮಾಲವರ್ಣಂ**
**ರವಿಕರಗೌರವರಾಮ್ಬರಂ ದಧಾನೇ ।**
**ವಪುರಲಕಕುಲಾವೃತಾನನಾಬ್ಜಂ**
**ವಿಜಯಸಖೇ ರತಿರಸ್ತು ಮೇಽನವದ್ಯಾ ॥೩೩॥**

ಹೊಂಗೆಯ ಎಲೆಗಳಂತೆ ಶ್ಯಾಮಲವರ್ಣದ ದೇಹಕಾಂತಿಯಿಂದ ಕಂಗೊಳಿಸುತ್ತಿರುವ, ಸೂರ್ಯನ ಹೊಂಗಿರಣಗಳಂತೆ ಹೊಳೆಯುವ ಪೀತಾಂಬರವನ್ನು ಧರಿಸಿರುವ, ಮುಖಕಮಲದ ಮೇಲೆ ಗುಂಗುರು-ಗುಂಗುರಾದ ಮುಂಗುರುಳುಗಳು ಜೋಲಾಡುತ್ತಿರುವ ದಿವ್ಯಮಂಗಳವಿಗ್ರಹವುಳ್ಳ, ತ್ರಿಭುವನೈಕಸುಂದರನಾದ ಅರ್ಜುನಮಿತ್ರನಲ್ಲಿ ನನ್ನ ನಿರುಪಾಧಿಕವೂ, ಶಾಶ್ವತವೂ ಆಗಿರುವ ಪ್ರೇಮವು ನೆಲೆಗೊಳ್ಳಲಿ.

**ಯುಧಿ ತುರಗರಜೋವಿಧೂಮ್ರವಿಷ್ವ-**
**ಕ್ಕಚಲುಲಿತಶ್ರಮವಾರ್ಯಲಂಕೃತಾಸ್ಯೇ ।**
**ಮಮ ನಿಶಿತಶರೈರ್ವಿಭಿದ್ಯಮಾನ-**
**ತ್ವಚಿ ವಿಲಸತ್ಕವಚೇಽಸ್ತು ಕೃಷ್ಣ ಆತ್ಮಾ ॥೩೪॥**

ರಣರಂಗದಲ್ಲಿ ರಾರಾಜಿಸುತ್ತಿದ್ದ ಆತನ ಮೋಹನಮೂರ್ತಿಯು ನನ್ನ ಮನಸ್ಸನ್ನು ಸೂರೆಗೊಳ್ಳುತ್ತಿದೆ. ಕುದುರೆಗಳ ಕಾಲಿನಿಂದೆದ್ದ ಧೂಳು ಮುಸುಕಿದ್ದರಿಂದ ಮುಖದ ಮೇಲೆ ಕೆದರಿಹೋಗಿರುವ ಗುಂಗುರುಕೂದಲು ಧೂಸರವರ್ಣವಾಗಿಬಿಟ್ಟಿದೆ. ಆಯಾಸದ ಬೆವರಿನ ಹನಿಗಳೂ ಅಲ್ಲಿ ಅಂಟಿಕೊಂಡಿವೆ. ನನ್ನ ತೀಕ್ಷ್ಣವಾದ ಬಾಣಗಳು ಚರ್ಮದ ಮೇಲೆ ನಾಟಿ ಗಾಯಗಳನ್ನುಂಟುಮಾಡಿವೆ. ಇಷ್ಟೆಲ್ಲಾ ಇದ್ದರೂ ಕುಂದದ ಸೌಂದರ್ಯದಿಂದ ರಮಣೀಯವಾಗಿ ಕಂಗೊಳಿಸುತ್ತಿರುವ ಆ ಕವಚಧಾರಿಯಾದ ಶ್ರೀಕೃಷ್ಣನಲ್ಲಿ ನನ್ನ ಆತ್ಮವು ವಿಶ್ರಮಿಸಿಕೊಳ್ಳಲಿ.

**ಸಪದಿ ಸಖಿವಚೋ ನಿಶಮ್ಯ ಮಧ್ಯೇ**
**ನಿಜಪರಯೋರ್ಬಲಯೋ ರಥಂ ನಿವೇಶ್ಯ ।**
**ಸ್ಥಿತವತಿ ಪರಸೈನಿಕಾಯುರಕ್ಷ್ಣಾ**
**ಹೃತವತಿ ಪಾರ್ಥಸಖೇ ರತಿರ್ಮಮಾಸ್ತು ॥೩೫॥**

ಯಾವನು ತನ್ನ ಮಿತ್ರನ ಮಾತನ್ನು ಕೇಳಿ ಅದಕ್ಕನುಗುಣವಾಗಿ ರಥವನ್ನು ಒಡನೆಯೇ ಸ್ವಸೈನ್ಯ ಮತ್ತು ಶತ್ರುಸೈನ್ಯಗಳ ಮಧ್ಯದಲ್ಲಿ* ನಿಲ್ಲಿಸಿದವನಾಗಿ, ಕೇವಲ ತನ್ನ ದೃಷ್ಟಿಯಿಂದಲೇ ಶತ್ರುಸೈನಿಕರ ಆಯುಸ್ಸನ್ನು ಎಳೆದುಕೊಂಡುಬಿಟ್ಟನೋ–ಅಂತಹ ಪಾರ್ಥನ ಗೆಳೆಯನಾದ ಗೋವಿಂದ ನಲ್ಲಿ ನನ್ನ ಪರಮಪ್ರೇಮವಿರಲಿ.

**ವ್ಯವಹಿತಪೃತನಾಮುಖಂ ನಿರೀಕ್ಷ್ಯ**
**ಸ್ವಜನವಧಾದ್ವಿಮುಖಸ್ಯ ದೋಷಬುದ್ಧ್ಯಾ ।**
**ಕುಮತಿಮಹರದಾತ್ಮವಿದ್ಯಯಾ ಯ-**
**ಶ್ಚರಣರತಿಃ ಪರಮಸ್ಯ ತಸ್ಯ ಮೇಽಸ್ತು ॥೩೬॥**

ಯುದ್ಧವು ಪ್ರಾರಂಭವಾಗುವುದಕ್ಕೆ ಮೊದಲು ಸ್ವಲ್ಪ ದೂರದಲ್ಲಿ ನಿಂತಿದ್ದ ಶತ್ರುಸೇನೆಯ ಮುಖವನ್ನು ಕಂಡೊಡನೆಯೇ–'ಇವರನ್ನು ಕೊಂದರೆ ಮಹಾಪಾತಕವಾಗುವುದು'–ಎಂದು ಭಾವಿಸಿ ಅರ್ಜುನನು ಸ್ವಜನರ ವಧೆಯಿಂದ ವಿಮುಖನಾಗಿ ಕುಳಿತುಬಿಟ್ಟನು. ಆಗ ಯಾವ ಜ್ಞಾನ ಮೂರ್ತಿಯು ಶ್ರೀಗೀತೆಯೆಂಬ ಆತ್ಮವಿದ್ಯೆಯನ್ನು ಉಪದೇಶಿಸಿ ಅವನ ಮೋಹವನ್ನು ಹೋಗಲಾಡಿಸಿದನೋ–ಅಂತಹ ಪರಮಪುರುಷನ ಪಾದಾರ ವಿಂದಗಳಲ್ಲಿ ನನ್ನ ಕರಣಗಳು ರಮಿಸಲಿ.

**ಸ್ವನಿಗಮಮಪಹಾಯ ಮತ್ಪ್ರತಿಜ್ಞಾ-**
**ಮೃತಮಧಿಕರ್ತುಮವಪ್ಲುತೋ ರಥಸ್ಥಃ ।**
**ಧೃತರಥಚರಣೋಽಭ್ಯಯಾಚ್ಚಲದ್ಗು-**
**ರ್ಹರಿರಿವ ಹನ್ತುಮಿಭಂ ಗತೋತ್ತರೀಯಃ ॥೩೭॥**

**ಶಿತವಿಶಿಖಹತೋ ವಿಶೀರ್ಣದಂಶಃ**
**ಕ್ಷತಜಪರಿಪ್ಲುತ ಆತತಾಯಿನೋ ಮೇ ।**
**ಪ್ರಸಭಮಭಿಸಸಾರ ಮದ್ವಧಾರ್ಥಂ**
**ಸ ಭವತು ಮೇ ಭಗವಾನ್ಗತಿರ್ಮುಕುನ್ದಃ ॥೩೮॥**

---

* 'ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ'–ಶ್ರೀಗೀತಾ

'ಶ್ರೀಕೃಷ್ಣನು ಯುದ್ಧದಲ್ಲಿ ಶಸ್ತ್ರವನ್ನು ಹಿಡಿಯುವಂತೆ ಮಾಡುತ್ತೇನೆ' ಎಂದು ನಾನು ಪ್ರತಿಜ್ಞೆಮಾಡಿದ್ದೆನು. 'ನಾನು ಯುದ್ಧದಲ್ಲಿ ಶಸ್ತ್ರವನ್ನು ಹಿಡಿಯುವುದೇ ಇಲ್ಲ'–ಎಂದು ಈತನು ಶಪಥಮಾಡಿದ್ದನು. ಆದರೆ ಭಕ್ತನಾದ ನನ್ನ ಪ್ರತಿಜ್ಞೆಯನ್ನು ನಿಜವಾಗಿಸುವುದಕ್ಕಾಗಿ ತನ್ನ ಶಪಥವನ್ನೇ ಮುರಿದು ಸ್ವಾಮಿಯು ರಥದಿಂದ ಕೆಳಕ್ಕೆ ಧುಮುಕಿ–ಸಿಂಹವು ಆನೆಯನ್ನು ಸಂಹರಿಸಲು ಅದರ ಮೇಲೆ ಬೀಳುವಂತೆ–ಚಕ್ರವನ್ನೆತ್ತಿಕೊಂಡು ನನ್ನ ಮೇಲೆರಗಲು ರಭಸದಿಂದ ಬಂದನು. ತನ್ನ ಉತ್ತರೀಯವು ಜಾರಿಹೋಗುತ್ತಿರುವುದನ್ನೂ ಗಮನಿಸದೇ ಭೂಮಿಯೇ ಅದುರುವಷ್ಟು ಮಹಾವೇಗದಿಂದ ನನ್ನನ್ನೆದುರಿ ಸಲು ಧಾವಿಸಿಬಂದನು. ಅವನನ್ನು ವಧಿಸಬಹುದೆಂಬ ಪ್ರಯತ್ನದಲ್ಲಿ ನಾನು ಬಿಟ್ಟ ತೀಕ್ಷ್ಣವಾದ ಬಾಣಗಳಿಂದ ಶರೀರದ ಕವಚವು ಹರಿದುಹೋಗಿ ಮೈಯೆಲ್ಲಾ ರಕ್ತದಿಂದ ತೋಯ್ದುಹೋಗುತ್ತಿರಲು, ಅರ್ಜುನನು ತಡೆ ಯುತ್ತಿದ್ದರೂ ಕೇಳದೇ ನನ್ನನ್ನು ಕೊಂದೇಹಾಕುವೆನೆಂದು ಬಲವಂತವಾಗಿ ಯಾವನು ನನ್ನನ್ನು ಅನುಗ್ರಹಿಸಲು ನನ್ನ ಕಡೆಗೆ ಓಡಿಬಂದನೋ–ಅಂತಹ ಭಕ್ತವತ್ಸಲನಾದ, ಭಗವಂತನಾದ ಶ್ರೀಮುಕುಂದನೇ ನನಗೆ ಗತಿಯಾಗಲಿ.

**ವಿಜಯರಥಕುಟುಮ್ಬ ಆತ್ತತೋತ್ರೇ**
**ಧೃತಹಯರಶ್ಮಿನಿ ತಚ್ಛ್ರಿಯೇಕ್ಷಣೀಯೇ ।**
**ಭಗವತಿ ರತಿರಸ್ತು ಮೇ ಮುಮೂರ್ಷೋ-**
**ರ್ಯಮಿಹ ನಿರೀಕ್ಷ್ಯ ಹತಾ ಗತಾಃ ಸರೂಪಮ್ ॥೩೯॥**

ಅರ್ಜುನನ ರಥದ ಸಾರಥಿಯಾಗಿ ಒಂದು ಕೈಯಲ್ಲಿ ಚಾವಟಿಯನ್ನೂ, ಮತ್ತೊಂದು ಕೈಯಲ್ಲಿ ಕುದುರೆಯ ಕಡಿವಾಣವನ್ನೂ ಹಿಡಿದುಕೊಂಡು ಆ ವೇಷದಲ್ಲಿಯೂ ಅತ್ಯಂತರಮಣೀಯದರ್ಶನನಾಗಿದ್ದ ಯಾವ ಪ್ರಭುವನ್ನು ನೋಡುತ್ತಾ ಯುದ್ಧದಲ್ಲಿ ಮಡಿದವರೆಲ್ಲರೂ ಆತನ ಸಾರೂಪ್ಯಮುಕ್ತಿಯನ್ನೇ ಪಡೆದರೋ–ಅಂತಹ ರಮಣೀಯತಮನಾದ ಯೋಗಮೂರ್ತಿಯಲ್ಲಿಯೇ ಮರಣವನ್ನಪ್ಪಲು ಬಯಸುತ್ತಿರುವ ನನಗೆ ರತಿಯುಂಟಾಗಲಿ.

**ಲಲಿತಗತಿವಿಲಾಸವಲ್ಗುಹಾಸ-**
**ಪ್ರಣಯನಿರೀಕ್ಷಣಕಲ್ಪಿತೋರುಮಾನಾಃ ।**

**ಕೃತಮನುಕೃತವತ್ಯ ಉನ್ಮದಾನ್ಧಾಃ**
**ಪ್ರಕೃತಿಮಗನ್ಕಿಲ ಯಸ್ಯ ಗೋಪವಧ್ವಃ ॥೪೦॥**

ಯಾವನ ಹಾವ-ಭಾವಗಳಿಂದ ಕೂಡಿದ ವಿಲಾಸ, ಮಧುರವಾದ ಮಂದಹಾಸ, ಬೆಡಗು, ಬಿನ್ನಾಣ ಮತ್ತು ಪ್ರೇಮಯುಕ್ತವಾದ ಕಡೆಗಣ್ಣಿನ ನೋಟ–ಇವುಗಳಿಂದ ಸಂಭಾವಿತರಾದ ಗೋಪಸ್ತ್ರೀಯರು ಪರಮಪ್ರೇಮದ ಉನ್ಮಾದದಿಂದ ಮತ್ತರಾಗಿ ಅವನ ಆ ದಿವ್ಯಲೀಲೆಗಳನ್ನೇ ಅನುಕರಣೆ ಮಾಡುತ್ತಾ ತನ್ಮಯರಾಗಿಬಿಟ್ಟರೋ–ಅಂತಹ ಸೌಂದರ್ಯನಿಧಿಯಾದ ಶ್ರೀಕೃಷ್ಣಪರಮಾತ್ಮನಲ್ಲೇ ನನಗೆ ಪರಮಪ್ರೇಮವುಂಟಾಗಲಿ.

**ಮುನಿಗಣನೃಪವರ್ಯಸಂಕುಲೇಽನ್ತಃ-**
**ಸದಸಿ ಯುಧಿಷ್ಠಿರರಾಜಸೂಯ ಏಷಾಮ್ ।**
**ಅರ್ಹಣಮುಪಪೇದ ಈಕ್ಷಣೀಯೋ**
**ಮಮ ದೃಶಿಗೋಚರ ಏಷ ಆವಿರಾತ್ಮಾ ॥೪೧॥**

ಮಹಾಮುನಿಗಳೂ, ರಾಜಶ್ರೇಷ್ಠರೂ ನೆರೆದಿದ್ದ ಧರ್ಮರಾಜನ ರಾಜಸೂಯಯಜ್ಞದ ಸಭೆಯಲ್ಲಿ ಯಾವನಿಗೆ ಮಾಡಿದ ಅಗ್ರಪೂಜೆಯು ನನ್ನ ಕಣ್ಣುಗಳಿಗೆ ನೋಡಲು ಹಬ್ಬವಾಗಿ ನೆರವೇರಿತೋ–ಅಂತಹ ಸರ್ವರಿಗೂ ಆತ್ಮಸ್ವರೂಪನಾಗಿರುವ ಪ್ರಭುವೇ ಇಂದು ನನ್ನ ಮೃತ್ಯುಸಮಯದಲ್ಲಿ ನನ್ನೆದುರಿನಲ್ಲೇ ದರ್ಶನವನ್ನು ನೀಡುತ್ತಿದ್ದಾನೆ.

**[ಕ್ಷಿತಿಭರಮವರೋಪಿತುಂ ಕುರೂಣಾಂ**
**ಶ್ವಸನ ಇವಾಸೃಜದಕ್ಷವಂಶವಹ್ನಿಮ್ ।**
**ತಮಿಮಮಹಮನುವ್ರತಾರ್ತಿಹಾಙ್ಘ್ರಿಂ**
**ಹೃದಿ ಪರಿರಭ್ಯ ಜಹಾಮಿ ಮರ್ತ್ಯನೀಡಮ್ ॥]***

ಯಾವನು ಭೂಮಿಯ ಭಾರವನ್ನು ಇಳಿಸುವುದಕ್ಕಾಗಿ–ಬಿದಿರು ಮೆಳೆಯ ಕಾಡಿನಲ್ಲಿ ಆ ಮೆಳೆಗಳ ಪರಸ್ಪರಘರ್ಷಣೆಯಿಂದ ಬೆಂಕಿಯನ್ನುಂಟು

---

* ಕ್ಷಿತಿಭರ.... ನೀಡಮ್ = ಈ ಶ್ಲೋಕವು ಕೆಲವು ಸಂಸ್ಕರಣಗಳಲ್ಲಿ ಕಂಡುಬರುವುದಿಲ್ಲ. ಆದ್ದರಿಂದ ಇದನ್ನು ಕಂಸದಲ್ಲಿ ಕೊಡಲಾಗಿದೆ.

ಮಾಡುವ ಬಿರುಗಾಳಿಯಂತೆ–ಕುರುವಂಶದಲ್ಲಿಯೇ ಕಲಹಾಗ್ನಿಯನ್ನುಂಟು ಮಾಡಿ ಅದನ್ನು ಸುಟ್ಟುಹಾಕಿದನೋ–ಅಂತಹ ಭಕ್ತಕಷ್ಟಪರಿಹಾರಕವಾದ ಪಾದಪದ್ಮಗಳನ್ನುಳ್ಳ ಶ್ರೀಕೃಷ್ಣಪ್ರಭುವನ್ನು ನನ್ನ ಹೃದಯದಲ್ಲಿ ಆಲಿಂಗನೆ ಮಾಡಿಕೊಂಡು ನನ್ನ ಮನುಷ್ಯಶರೀರವೆಂಬ ಈ ಗೂಡನ್ನು ತೊರೆದುಬಿಡುತ್ತೇನೆ.

ತಮಿಮಮಹಮಜಂ ಶರೀರಭಾಜಾಂ
ಹೃದಿ ಹೃದಿ ಧಿಷ್ಠಿತಮಾತ್ಮಕಲ್ಪಿತಾನಾಮ್ ।
ಪ್ರತಿದೃಶಮಿವ ನೈಕಧಾರ್ಕಮೇಕಂ
ಸಮಧಿಗತೋಽಸ್ಮಿ ವಿಧೂತಭೇದಮೋಹಃ ॥೪೨॥

ಯಾವ ಮಹಾಪ್ರಭುವು ತಾನು ಸೃಷ್ಟಿಮಾಡಿದ ಪ್ರತಿಯೊಬ್ಬ ಶರೀರಧಾರಿಯ ಹೃದಯದಲ್ಲೂ ಅಂತರ್ಯಾಮಿಯಾಗಿ ವಿರಾಜಿಸುತ್ತಿದ್ದಾನೋ, ಒಬ್ಬನೇ ಆಗಿದ್ದರೂ ಬೇರೆ-ಬೇರೆ ಕಣ್ಣುಗಳಿಗೆ ಬೇರೆ-ಬೇರೆ ರೂಪಗಳಿಂದ ಕಾಣುತ್ತಿರುವ ಸೂರ್ಯನಂತೆ –ತಾನೊಬ್ಬನೇ ಆಗಿದ್ದರೂ ಬೇರೆ-ಬೇರೆ ಶರೀರಧಾರಿಗಳಲ್ಲಿ ಬೇರೆ-ಬೇರೆ ರೂಪಗಳಿಂದ ಕಾಣಿಸುತ್ತಿದ್ದಾನೆಯೋ– ಅಂತಹ ಜನ್ಮರಹಿತನಾದ ಪರಮಾತ್ಮನಲ್ಲಿ ಸರ್ವಭೇದಮೋಹವನ್ನೂ ಕಳೆದುಕೊಂಡ ನಾನು ತಾದಾತ್ಮ್ಯಭಾವದಿಂದ ಸೇರಿಕೊಂಡುಬಿಟ್ಟಿದ್ದೇನೆ."

ಸೂತಪುರಾಣಿಕರು ಹೇಳುತ್ತಾರೆ :

ಹೀಗೆ ಭೀಷ್ಮಪಿತಾಮಹರು ಆತ್ಮಸ್ವರೂಪನಾದ ಶ್ರೀಕೃಷ್ಣನಲ್ಲಿ ಮನಸ್ಸು, ಮಾತು ಮತ್ತು ದೃಷ್ಟಿ–ಇವುಗಳ ಮೂಲಕ ತನ್ನನ್ನು ಸಮರ್ಪಿಸಿಕೊಂಡು ಪ್ರಾಣವಾಯುವನ್ನು ಒಳಕ್ಕೆ ಎಳೆದುಕೊಂಡು ಶಾಂತರಾಗಿಬಿಟ್ಟರು. ಅವರು ಹೀಗೆ ನಿಷ್ಕಲವಾದ ಪರಬ್ರಹ್ಮದಲ್ಲಿ ಲಯಹೊಂದುತ್ತಿರುವುದನ್ನು ಕಂಡು ಸರ್ವರೂ ಹಗಲು ಕಳೆದು ಸಂಜೆಬಂದಾಗ ಪಕ್ಷಿಗಳು ಹೇಗೋ ಹಾಗೆ ಮೌನವನ್ನವಲಂಬಿಸಿದರು. ಒಡನೆಯೇ ದೇವತೆಗಳೂ ಮತ್ತು ಮನುಷ್ಯರೂ ದುಂದುಭಿವಾದ್ಯಗಳನ್ನು ಮೊಳಗಿಸಿದರು. ಸಾಧು-ಸಜ್ಜನರಾದ

---

* 'ಏಕಂ ಸನ್ತಂ ಬಹುಧಾ ಕಲ್ಪಯನ್ತಿ' 'ತತ್ಸೃಷ್ಟ್ವಾ । ತದೇವಾನುಪ್ರಾವಿಶತ್' ಇತ್ಯಾದಿ ಶ್ರುತಿಗಳು ಇದನ್ನೇ ಹೇಳುತ್ತವೆ.

ರಾಜರು ಭೀಷ್ಮರನ್ನು ಪ್ರಶಂಸೆಮಾಡಿದರು. ಆಕಾಶದಿಂದ ಹೂಮಳೆಗರೆಯಿತು. ಭಾರ್ಗವರೇ! ಲೋಕಾಂತರಹೊಂದಿರುವ* ಆ ಮಹಾತ್ಮರ ಮೃತ ಶರೀರಕ್ಕೆ ಅಂತ್ಯಕ್ರಿಯೆ ಮುಂತಾದುವುಗಳನ್ನು ಮಾಡಿಸಿ ಧರ್ಮರಾಜನು ಸ್ವಲ್ಪಕಾಲ ಶೋಕಮಗ್ನನಾಗಿ ಕುಳಿತನು. ಅಲ್ಲಿ ಸೇರಿದ್ದ ಮುನಿಗಳೆಲ್ಲರೂ ಶ್ರೀಕೃಷ್ಣಪರಮಾತ್ಮನನ್ನು ಅವನ ರಹಸ್ಯಮಯವಾದ ದಿವ್ಯನಾಮಗಳಿಂದ ಸ್ತುತಿಸಿದ ಅನಂತರ ಕೃಷ್ಣಮಯವಾದ ಹೃದಯಗಳಿಂದ ತಮ್ಮ-ತಮ್ಮ ಆಶ್ರಮಗಳಿಗೆ ಹಿಂದಿರುಗಿದರು. ಅನಂತರ ಯುಧಿಷ್ಠಿರನೂ ಸಹ ಶ್ರೀಕೃಷ್ಣ ಪರಮಾತ್ಮನೊಡನೆ ಹಸ್ತಿನಾಪುರಕ್ಕೆ ಹೋಗಿ ದೊಡ್ಡಪ್ಪನಾದ ಧೃತರಾಷ್ಟ್ರನನ್ನೂ ದೀನಳಾಗಿದ್ದ ಗಾಂಧಾರಿಯನ್ನೂ ಸಮಾಧಾನಪಡಿಸಿದನು. ಮಹಾರಾಜನು ದೊಡ್ಡಪ್ಪನ ಅನುಮತಿ ಮತ್ತು ಶ್ರೀವಾಸುದೇವನ ಅನುಮೋದನೆಯಂತೆ ತಂದೆ-ತಾತಂದಿರ ವಂಶಪರಂಪರೆಯಿಂದ ಬಂದ ರಾಜ್ಯವನ್ನು ಧರ್ಮಪೂರ್ವಕವಾಗಿ ಆಳತೊಡಗಿದನು.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ಪ್ರಥಮಸ್ಕಂಧದ ೯ನೆಯ ಅಧ್ಯಾಯವು ಮುಗಿಯಿತು.

---

ಪ್ರಥಮಸ್ಕಂಧ ೧೦ನೆಯ ಅಧ್ಯಾಯ

## ಶ್ರೀಕೃಷ್ಣನು ದ್ವಾರಕೆಗೆ ಮರಳಿದುದು

ಅನಂತರ ಶೌನಕರು ಸೂತಪುರಾಣಿಕರನ್ನು ಹೀಗೆ ಪ್ರಶ್ನಿಸಿದರು :

**ಹತ್ವಾ ಸ್ವರಿಕ್ಥಸ್ಪೃಧ ಆತತಾಯಿನೋ**
**ಯುಧಿಷ್ಠಿರೋ ಧರ್ಮಭೃತಾಂ ವರಿಷ್ಠಃ ।**
**ಸಹಾನುಜೈಃ ಪ್ರತ್ಯವರುದ್ಧಭೋಜನಃ**
**ಕಥಂ ಪ್ರವೃತ್ತಃ ಕಿಮಕಾರಷೀತ್ತತಃ ॥೧॥**

* ಸಮುದ್ಯಮಾನಂ = ನಿಷ್ಕಳವೂ, ನಿರುಪಾಧಿಕವೂ ಆದ ಬ್ರಹ್ಮದಲ್ಲಿ ಮಿಳಿತನಾದ. (ಶ್ರೀಧರೀಯ ) ಕರ್ಮಸಂಬಂಧರಹಿತನಾದ ನಾರಾಯಣನಲ್ಲಿ ಸಂಗತನಾದ–' ಸತಾ

"ಧಾರ್ಮಿಕಶಿರೋಮಣಿಯಾಗಿದ್ದ ಮಹಾರಾಜ ಯುಧಿಷ್ಠಿರನು ತನ್ನ ಪೈತೃಕಸಂಪತ್ತಿಯನ್ನು ಕಸಿದುಕೊಳ್ಳುವ ಆಸೆಯಿಂದ ಕೂಡಿ ತನ್ನನ್ನು ವಧಿಸಲು ಪ್ರಯತ್ನಿಸುತ್ತಿದ್ದ ಶತ್ರುಗಳನ್ನು ಸಂಹರಿಸಿ ರಾಜ್ಯಭೋಗವನ್ನು ಮರಳಿ ಪಡೆದ ಬಳಿಕ ತನ್ನ ಒಡಹುಟ್ಟಿದವರೊಡನೆ ಕೂಡಿ ಹೇಗೆ ನಡೆದು ಕೊಂಡನು? ಏನು ಮಾಡಿದನು? ಹೇಳಿ ; ಪುರಾಣಿಕರೇ!"

ಅದಕ್ಕೆ ಸೂತಪುರಾಣಿಕರು ಹೀಗೆ ಉತ್ತರಿಸಿದರು :

"ಲೋಕದ ಉಜ್ಜೀವನಕ್ಕಾಗಿ* ಅವತಾರಮಾಡಿದ ಶ್ರೀಹರಿಯು ಕಲಹಾಗ್ನಿಯಿಂದ ಸುಟ್ಟುಹೋಗಿದ್ದ ಕುರುವಂಶವು ಮತ್ತೆ ಅಂಕುರಿಸುವಂತೆ[1] ಮಾಡಿದನು ಮತ್ತು ಯುಧಿಷ್ಠಿರನನ್ನು ಅವನ ರಾಜ್ಯದಲ್ಲಿ ನೆಲೆಗೊಳಿಸಿ ಪ್ರಸನ್ನನಾದನು.[2] ಶ್ರೀಭೀಷ್ಮಪಿತಾಮಹರ ಮತ್ತು ಶ್ರೀಕೃಷ್ಣಪರಮಾತ್ಮನ ಉಪದೇಶಗಳನ್ನು ಕೇಳಿ ಯುಧಿಷ್ಠಿರನಿಗೆ ಜ್ಞಾನೋದಯವಾಗಿ ಅವನ ಭ್ರಾಂತಿಯು ತೊಲಗಿತು. ಶ್ರೀಭಗವಂತನ ಬೆಂಬಲದಿಂದ ಆತನು ಸಮುದ್ರ ಪರ್ಯಂತವಾದ[3] ಭೂಮಂಡಲವನ್ನು ಇಂದ್ರನಂತೆ ಆಳತೊಡಗಿದನು.

---

ಸೌಮ್ಯತದಾ ಸಂಪನ್ನೋ ಭವತಿ' ಎಂಬ ಶ್ರುತಿಯಂತೆ ಸೇರಿಕೊಂಡ. ಪರಮಾತ್ಮನ ಸಾಧರ್ಮ್ಯವನ್ನು ಹೊಂದಿದನು. (ಭಾಗವತಚಂದ್ರಿಕಾ) ಸಮ್ಪದ್ಯಮಾನಂ = ಪ್ರಾಪ್ನುವನ್ತಂ–ಹೊಂದುತ್ತಿದ್ದ. (ವಿಜಯಧ್ವಜೀಯ) (ಶ್ಲೋಕ ೪೪)

* ಭವಭಾವನಃ = ಜಗದುಜ್ಜೀವಕನಾದ, ಸೃಷ್ಟಿವರ್ಧಕನಾದ. ಭವತಾಪನಃ – ಎಂದೂ ಪಾಠಾಂತರವುಂಟು. ಆಗ ಸಂಸಾರವನ್ನು ನಿರ್ಮೂಲಗೊಳಿಸುವವನಾದ ಎಂದು ಅರ್ಥ. ಭವಬಂಧನವನ್ನೇ ನಿರ್ಮೂಲಗೊಳಿಸುವ ಪರಮಾತ್ಮನಿಗೆ ಪಾಂಡವರ ಶತ್ರುಗಳನ್ನು ಧ್ವಂಸಮಾಡುವುದು ಎಷ್ಟರ ಕೆಲಸ?–ಎಂದು ಭಾವ. (ವಿಜಯಧ್ವಜೀಯ)

[1] ಸಂರೋಹಯಿತ್ವಾ = ಪರೀಕ್ಷಿದ್ರಾಜನೆಂಬ ಅಂಕುರವನ್ನು ಬದುಕಿಸಿ ಕುರುಕುಲದ ಕುಡಿಯು ಉಳಿಯುವಂತೆ ಮಾಡಿ.

[2] ಪ್ರೀತಮನಾ ಬಭೂವ = ಸದಾ ಪ್ರಸನ್ನನಾಗಿರುವ ಪರಮಾತ್ಮನಿಗೆ ಈಗ ಪ್ರಸನ್ನತೆಯುಂಟಾಯಿತು–ಎಂದು ಹೇಳಿರುವುದು ಲೌಕಿಕರ ಅಪೇಕ್ಷೆಯ ದೃಷ್ಟಿಯಿಂದ. 'ಹ' ಎಂಬ ಅವ್ಯಯವು ಈ ಅರ್ಥವನ್ನು ತಿಳಿಸುತ್ತದೆ. (ಶ್ಲೋಕ ೨)

[3] ಪರಿಧ್ಯುಪಾನ್ತಾಂ = ಸಮುದ್ರಪರ್ಯಂತವಾದ, ಪ್ರಣಿಧ್ಯುಪಾತ್ತಾಂ –ಎಂದು ವಿಜಯಧ್ವಜೀಯ ಪಾಠ. ಅಮಾತ್ಯರೇ ಮುಂತಾದ ಪ್ರಣಿಧಿಗಳಿಂದ ಕೂಡಿದ ಎಂದರ್ಥ. 'ಅಮಾತ್ಯಾ ಮನ್ತ್ರಿಣೋ ದೂತಾಃ ಶ್ರೇಣಯಶ್ಚ ಪುರೋಹಿತಾಃ । ಪುರಂ ಜನಪದಶ್ಚೇತಿ ಸಪ್ತ ಪ್ರಣಿಧಯಃ ಸ್ಮೃತಾಃ ॥' (ಶ್ಲೋಕ ೩)

ತಮ್ಮಂದಿರು ಆತನ ಆಜ್ಞೆಯಂತೆ ನಡೆಯುತ್ತಿದ್ದರು. ಆ ಮಹಾತ್ಮನ ಆಳ್ವಿಕೆಯಲ್ಲಿ ಪೂರ್ಣವಾದ ಸುಭಿಕ್ಷವಿದ್ದು ಸುಖ-ಶಾಂತಿಗಳು ನೆಲೆಸಿದ್ದುವು. ಆವಶ್ಯಕತೆಗೆ ಅನುಗುಣವಾಗಿ ಕಾಲ-ಕಾಲದಲ್ಲಿ ಮಳೆಯಾಗುತ್ತಿದ್ದು ಭೂಮಿಯಲ್ಲಿ ಜೀವನಕ್ಕೆ ಬೇಕಾದ ಎಲ್ಲ ಪದಾರ್ಥಗಳೂ ಹೇರಳವಾಗಿ ಸಿಕ್ಕುತ್ತಿದ್ದುವು. ಹಸುಗಳು ಪುಷ್ಟವಾದ ಕೆಚ್ಚಲುಗಳಿಂದ ಕೂಡಿ ಸಮೃದ್ಧವಾದ ಕ್ಷೀರಧಾರೆಯಿಂದ ಕೊಟ್ಟಿಗೆಗಳನ್ನು ನೆನೆಸುತ್ತಿದ್ದುವು. ನದಿಗಳೂ, ಸಮುದ್ರ ಗಳೂ, ಗಿರಿಗಳೂ, ವನಸ್ಪತಿಗಳೂ, ಗಿಡ-ಮರ-ಬಳ್ಳಿಗಳೂ, ಆಯಾ ಋತುಗಳಿಗೆ ತಕ್ಕಂತೆ ಯಥೇಷ್ಟವಾಗಿ ತಮ್ಮ-ತಮ್ಮ ಸಂಪತ್ತನ್ನು ರಾಜನಿಗೆ ನೀಡುತ್ತಿದ್ದುವು. ಅಜಾತಶತ್ರುವು ರಾಜನಾಗಿದ್ದಾಗ ಯಾವ ಪ್ರಾಣಿಗಳಿಗೂ– ಎಂದಿಗೂ ಯಾವ ಕ್ಲೇಶಗಳೂ ಉಂಟಾಗುತ್ತಿರಲಿಲ್ಲ. ಆಧಿದೈವಿಕವಾಗಿ ಯಾಗಲೀ, ಆಧ್ಯಾತ್ಮಿಕವಾಗಿಯಾಗಲೀ, ಆಧಿಭೌತಿಕವಾಗಿಯಾಗಲೀ ಯಾವುದೇ ಪೀಡೆಗಳೂ, ಆಧಿ-ವ್ಯಾಧಿಗಳೂ* ಜನರನ್ನೂ ಕಾಡಿಸುತ್ತಿರಲಿಲ್ಲ.
(ಶ್ಲೋಕ 2-6)

ತನ್ನ ಬಂಧು-ಮಿತ್ರರ ಶೋಕವನ್ನು ಪರಿಹಾರಮಾಡುವುದಕ್ಕಾಗಿಯೂ, ತಂಗಿ ಸುಭದ್ರೆಗೆ ಸಂತೋಷವನ್ನುಂಟುಮಾಡುವುದಕ್ಕಾಗಿಯೂ ಹಸ್ತಿನಾಪುರ ದಲ್ಲಿ ಕೆಲವು ತಿಂಗಳುಗಳ ಕಾಲ ವಾಸವಾಗಿದ್ದ ಶ್ರೀಹರಿಯು ಒಂದು ದಿನ ದ್ವಾರಕೆಗೆ ಹೊರಡಲು ಯುಧಿಷ್ಠಿರನ ಅನುಮತಿಯನ್ನು ಕೇಳಿದನು. ಆಗ ಯುಧಿಷ್ಠಿರನು ಅವನನ್ನು ತುಂಬುಹೃದಯದಿಂದ ಆಲಿಂಗಿಸಿಕೊಂಡು ಅನು ಮತಿ ನೀಡಲಾಗಿ ಭಗವಂತನು ರಾಜನಿಗೆ ನಮಸ್ಕಾರಮಾಡಿ ರಥವನ್ನೇರಿ ದನು. ಆಗ ಆತನನ್ನು ಕೆಲವರು ಆಲಿಂಗಿಸಿಕೊಂಡರು. ಮತ್ತೆ ಕೆಲವರು ಆತ ನಿಗೆ ನಮಸ್ಕಾರಮಾಡಿದರು. ಆಗ ಸುಭದ್ರೆ, ದ್ರೌಪದೀ, ಕುಂತೀ, ಉತ್ತರೆ, ಗಾಂಧಾರೀ, ಧೃತರಾಷ್ಟ್ರ, ಯುಯುತ್ಸು, ಕೃಪಾಚಾರ್ಯರು, ನಕುಲ, ಸಹ ದೇವ, ಭೀಮಸೇನ, ಧೌಮ್ಯ–ಮುಂತಾದವರೂ, ಸತ್ಯವತಿಯೇ ಮುಂತಾದ ಸ್ತ್ರೀಯರೂ ಪ್ರೇಮಭರಿತರಾಗಿ ಆತನ ಅಗಲಿಕೆಯನ್ನು ಸಹಿಸಲಾರದೇ ಮೂರ್ಛಿತರಾಗಿಬಿಟ್ಟರು. ಶ್ರೀಕೃಷ್ಣಪರಮಾತ್ಮನ ಮಧುರವಾದ ಕೀರ್ತಿಯು ಹಾಡಲ್ಪಡುತ್ತಿರುವಾಗ ಅದನ್ನು ಒಂದು ಬಾರಿ ಕೇಳಿದರೂ ಸಂಸ್ಕಾರಿಯಾದ

* ಆಧಿಃ = ಮಾನಸಿಕವ್ಯಥೆ. ವ್ಯಾಧಿಃ = ಶಾರೀರಕರೋಗ.

ಚೇತನನು ಸಜ್ಜನರ ಸಹವಾಸಕ್ಕೆ ಒಳಗಾಗಿ ದುಷ್ಟರ ಸಹವಾಸವನ್ನು ತೊರೆದು, ಆ ಹರಿಕಥಾಶ್ರವಣಕ್ಕಾಗಿ ಮತ್ತೆ-ಮತ್ತೆ ಹಂಬಲಿಸುತ್ತಾನೆ. ಅವನಿಗೆ ಅದನ್ನು ಕೊಂಚವೂ ಬಿಟ್ಟಿರಲಾಗುವುದಿಲ್ಲ. ಹೀಗಿರುವಾಗ ಆ ಶ್ರೀಹರಿಯನ್ನೇ ಹಗಲಿರುಳೂ ನೋಡುತ್ತಾ, ಸ್ಪರ್ಶಿಸುತ್ತಾ, ಆತನೊಡನೆ ಮಾತನಾಡುತ್ತಾ, ಶಯನ-ಆಸನ-ಭೋಜನಗಳಲ್ಲಿಯೂ ಆತನೊಡನೆ ಪಾಲ್ಗೊಳ್ಳುತ್ತಾ ಅವನಿಗೆ ಸಂಪೂರ್ಣವಾಗಿ ತಮ್ಮ ಹೃದಯವನ್ನು ಅರ್ಪಿಸಿ ಆನಂದಿಸುತ್ತಿದ್ದ ಪಾಂಡವರಿಗೆ ಆತನ ಅಗಲಿಕೆಯನ್ನು ಸಹಿಸಲಾದೀತೇ? ದುಃಖದಿಂದ ಅವರ ಹೃದಯವು ಕರಗಿಹೋಯಿತು. ಅವರು ಎವೆಯಿಕ್ಕದ ಕಣ್ಣುಗಳಿಂದ ಆತನನ್ನೇ ನೋಡುತ್ತಾ ಅವನ ಸ್ನೇಹಕ್ಕೆ ಕಟ್ಟುಬಿದ್ದು ಅಲ್ಲಲ್ಲಿಯೇ ಸುತ್ತಿ ತವಕಪಡುತ್ತಿದ್ದರು. ಅವರು ಮನೆಯಿಂದ ಹೊರಡುತ್ತಿರುವಾಗ ಬಂಧು ಸ್ತ್ರೀಯರ ಕಣ್ಣುಗಳು ಉಕ್ಕಿಬರುತ್ತಿದ್ದ ಪ್ರೇಮದ ಕಂಬನಿಗಳಿಂದ ತುಂಬಿಕೊಂಡವು. ಆದರೆ ಅವರು ಪ್ರಯಾಣದ ಸಮಯದಲ್ಲಿ ಅಪಶಕುನವಾಗದಿರಲೆಂದು ಬಹಳ ಕಷ್ಟದಿಂದ ಆ ಅಶ್ರುಧಾರೆಯನ್ನು ತಡೆದುಕೊಂಡರು. (ಶ್ಲೋಕ 7-14)

ಆಗ ಮೃದಂಗ-ಶಂಖ-ಭೇರಿ-ವೀಣೆ-ಡೋಲು-ಕಹಳೆ-ಝಲ್ಲರಿ-ತಮಟೆ-ಘಂಟೆ-ದುಂದುಭಿ—ಇನ್ನೂ ಮುಂತಾದ ಮಂಗಳವಾದ್ಯಗಳು ಮೊಳಗ ತೊಡಗಿದುವು. ಕಣ್ಣುಗಳಿಗೆ ಹಬ್ಬವಾಗಿ ಆತನನ್ನು ಸಂದರ್ಶಿಸಲು ಕುರು ಸ್ತ್ರೀಯರು ಮೇಲ್ಮಹಡಿಗಳನ್ನೇರಿ ಶ್ರೀಭಗವಂತನೆಡೆಗೆ ಪ್ರೇಮ ಮತ್ತು ಲಜ್ಜೆ ಗಳಿಂದ ಕೂಡಿದ ಮಂದಹಾಸದ ನೋಟಗಳನ್ನು ಬೀರುತ್ತಾ ಆತನ ಮೇಲೆ ಹೂಮಳೆಗರೆಯತೊಡಗಿದರು. ಗುಂಗುರುಗೂದಲಿನಿಂದ ಕಂಗೊಳಿಸುತ್ತಿದ್ದ ಕೃಷ್ಣಪ್ರಿಯನಾದ ಅರ್ಜುನನು ತನ್ನ ಪ್ರಿಯಮಿತ್ರನ ಮೇಲೆ ಮುತ್ತಿನ ಸರಗಳಿಂದ ಅಲಂಕೃತವಾಗಿದ್ದ, ರತ್ನಖಚಿತವಾದ ಹಿಡಿಯಿಂದ ಕಂಗೊಳಿಸುತ್ತಿದ್ದ ಬೆಳ್ಗೊಡೆಯನ್ನು ಹಿಡಿದುಕೊಂಡನು. ಉದ್ಧವ ಮತ್ತು ಸಾತ್ಯಕಿಗಳು ಅವನೆರಡು ಪಾರ್ಶ್ವಗಳಲ್ಲಿ ಪರಮಾದ್ಭುತವಾದ ಚಾಮರಗಳನ್ನು ಬೀಸುತ್ತಿದ್ದರು. ಹೆಜ್ಜೆ-ಹೆಜ್ಜೆಗೂ ಪುರಜನರು ಪುಷ್ಪವೃಷ್ಟಿಗಳನ್ನು ಕರೆಯುತ್ತಿದ್ದರು. ಇವೆಲ್ಲವನ್ನೂ ಪ್ರೀತಿಯಿಂದ ಸ್ವೀಕರಿಸುತ್ತಾ ಸ್ವಾಮಿಯು ಸಾಗಿಹೋಗುತ್ತಿದ್ದನು. ತ್ರಿಗುಣಾತೀತನೂ, ಅಪ್ರಾಕೃತಕಲ್ಯಾಣಗುಣಪೂರ್ಣನೂ ಆದ ಆ ಪರಮಾತ್ಮ

ನನ್ನು ಕುರಿತು ಬ್ರಾಹ್ಮಣರು ಹೇಳುತ್ತಿದ್ದ ಸತ್ಯವಾದ ಆಶೀರ್ವಾದವಚನ ಗಳೂ ಅಲ್ಲಲ್ಲಿ ಕೇಳಿಬರುತ್ತಿದ್ದುವು. ಆತನು ನಿರ್ಗುಣನಾಗಿರುವಂತೆಯೇ ಗುಣಪರಿಪೂರ್ಣನೂ ಆಗಿದ್ದಾನಲ್ಲವೇ? ಪುಣ್ಯಶ್ಲೋಕನಾದ ಆ ಪರಮ ಪುರುಷನಲ್ಲಿ ರಮಿಸುತ್ತಿದ್ದ ಚಿತ್ತವೃತ್ತಿಯಿಂದ ಕೂಡಿದ್ದ ಹಸ್ತಿನಾಪುರದ ಕುಲೀನಸ್ತ್ರೀಯರು ಕಿವಿ-ಮನಸ್ಸುಗಳನ್ನು ಸೆಳೆಯುವಂತೆ ಭಗವಂತನನ್ನು ಕೊಂಡಾಡುತ್ತಾ ಹೀಗೆ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು :

"ಈತನೇ ಅಲ್ಲವೇ ಆ ಪುರಾಣಪುರುಷನಾದ ಮಹಾವಿಷ್ಣುವು? ತ್ರಿಗುಣಗಳು* ಅಭಿವ್ಯಕ್ತವಾಗುವುದಕ್ಕೆ ಮೊದಲು ಮಹಾಪ್ರಳಯಸಮಯದಲ್ಲಿ ಎಲ್ಲವೂ ತನ್ನಲ್ಲಿ ಉಪಸಂಹಾರಹೊಂದಿರುವಾಗ ಎಲ್ಲ ಮಾಯಾಶಕ್ತಿಗಳೂ ಸುಪ್ತವಾಗಿದ್ದ ಸಮಯದಲ್ಲಿ[1] ತನ್ನ ನಿರ್ವಿಶೇಷವಾದ[2] ಆತ್ಮಸ್ವರೂಪದಲ್ಲಿ ಏಕಾಕಿಯಾಗಿ ನೆಲೆಗೊಂಡಿದ್ದ ನಾರಾಯಣನು ಈತನೇ ಅಲ್ಲವೇ? ಈತನೇ ವೇದಾದಿಶಾಸ್ತ್ರಪ್ರವರ್ತಕನಾದ ಆ ಭಗವಂತನು. ನಾಮ-ರೂಪ ರಹಿತನಾಗಿದ್ದ ಆತ್ಮನಿಗೆ ನಾಮ-ರೂಪಗಳನ್ನು ಕೊಡುವ ಇಚ್ಛೆಯಿಂದ ತನ್ನ ಪರಮಾದ್ಭುತವಾದ ವೀರ್ಯದಿಂದ ಪ್ರೇರಿತನಾಗಿ ಸೃಷ್ಟಿಯಲ್ಲಿ ಪ್ರವರ್ತಿ

---

* **ಅಗ್ರೇ ಗುಣೇಭ್ಯಃ** –ಗುಣಕ್ಷೋಭೆಯುಂಟಾಗುವುದಕ್ಕೆ ಮೊದಲು. (ಶ್ರೀಧರೀಯ) ಸತ್ತ್ವಾದಿ ಗುಣಗಳು ಹೊರಹೊಮ್ಮುವುದಕ್ಕೆ ಮೊದಲು. (ವೀರರಾಘವೀಯ)

ಅಪ್ರಧಾನವಾದ್ದರಿಂದ ಗುಣ ಎಂದು ಕರೆಯಲ್ಪಡುವ ಮಹದಾದಿತತ್ತ್ವಗಳಿಗೆ.

(ವಿಜಯಧ್ವಜೀಯ)

[1] **ಸುಪ್ತಶಕ್ತಿಷು** = ಶಕ್ತಿಯೆಂದು ಕರೆಯಲ್ಪಡುವ ಸತ್ತ್ವಾದಿಗುಣಗಳಿಗೆ ಅಭಿಮಾನಿ ದೇವತೆಗಳಾದ ಶ್ರೀಭೂದುರ್ಗಾದೇವಿಯರು ಸುಪ್ತವಾಗಿರುವಾಗ ಅಂದರೆ : ಜಗತ್ತಿನ ವ್ಯಾಪಾರಗಳನ್ನು ನಿಲ್ಲಿಸಿ ಶ್ರೀಹರಿಯಲ್ಲಿ ರಮಿಸುತ್ತಿರುವಾಗ. (ವಿಜಯಧ್ವಜೀಯ)

[2] ನಿರ್ವಿಶೇಷೇ ಆತ್ಮನಿ = ತನಗಿಂತಲೂ ವಿಶಿಷ್ಟರಾದವರು (ಮಿಗಿಲಾದವರು) ಇಲ್ಲವಾದ ಆತ್ಮಸ್ವರೂಪದಲ್ಲಿ ಅಂದರೆ : ಸ್ವರೂಪಾಧಾರದಲ್ಲಿ ಪ್ರತಿಷ್ಠಿತನಾದ. (ವಿಜಯಧ್ವಜೀಯ)

ತನಗಿಂತಲೂ ವಿಶಿಷ್ಟವಾದುದು ಅಂದರೆ : ಕಾರ್ಯವರ್ಗವಾದ ಪೃಥಿವೀ ಮುಂತಾದುದು ಇಲ್ಲದೇ ಇರುವಾಗ, ಕಾರ್ಯವರ್ಗರಹಿತವಾಗಿರುವಾಗ, ನಾಮ-ರೂಪ ವಿಭಾಗ ರಹಿತವಾಗಿರುವಾಗ. (ವೀರರಾಘವೀಯ)

ನಿಷ್ಪ್ರಪಂಚವಾದ ನಿಜಸ್ವರೂಪದಲ್ಲಿ. (ಶ್ರೀಧರೀಯ)

ಸಲು ತೊಡಗಿದ ಪ್ರಕೃತಿಯನ್ನು ಅನುಸರಣೆಮಾಡಿದವನು. ತನ್ನ ಅಂಶ ಗಳಾಗಿರುವ ಜೀವರನ್ನು ಮೋಹಗೊಳಿಸುವ ಶಕ್ತಿಯನ್ನು ಪ್ರಕೃತಿಗೆ ಕೊಟ್ಟು ಅದಕ್ಕೆ ತಾನೇ ಅಧಿಷ್ಠಾತೃವಾಗಿ ನಿಂತು ಈ ಸಂಸಾರವು ಮುಂದುವರಿಯು ವಂತೆ ಮಾಡಿದವನು. ಜಿತೇಂದ್ರಿಯರಾಗಿ ಪ್ರಾಣಗಳನ್ನು ವಶಪಡಿಸಿಕೊಂಡಿ ರುವ ಯೋಗಿಗಳು ಭಕ್ತಿಯಿಂದ ಅರಳಿದ ನಿರ್ಮಲವಾದ ಹೃದಯದಲ್ಲಿ ಯಾವನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೋ–ಅಂತಹ ಸಾಕ್ಷಾತ್ ಪರಮಾತ್ಮನೇ ಈತನು. ವಾಸ್ತವವಾಗಿ ಪ್ರಕೃತಿಯನ್ನು ಪೂರ್ಣವಾಗಿ ಶುದ್ಧಗೊಳಿಸಿ ಜೀವರನ್ನು ಶುದ್ಧಸತ್ತ್ವರನ್ನಾಗಿ ಮಾಡುವುದು ಈತನಲ್ಲಿಡುವ ಭಕ್ತಿಯೇ. ಓ ಸಖಿ! ರಹಸ್ಯಾರ್ಥಗಳನ್ನು ಹೊರಗೆಡಹುವ ಜ್ಞಾನಿಶ್ರೇಷ್ಠರು ವೇದಗಳ ಮೂಲಕವೂ, ಇತರ ರಹಸ್ಯಗ್ರಂಥಗಳ ಮೂಲಕವೂ ಗಾನಮಾಡಿರುವುದು ಈತನ ಮಹಿಮೆಗಳನ್ನೇ. ಏಕೈಕಪರಮೇಶ್ವರನಾಗಿ ತನ್ನ ಲೀಲಾಮಾತ್ರದಿಂದ ಈ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ನಡೆಸುತ್ತಿದ್ದರೂ ಅವುಗಳ ಲೇಪವು ಕಿಂಚಿತ್ತೂ ಇಲ್ಲದೇ ಶುದ್ಧವಾಗಿ ಬೆಳಗುತ್ತಿರುವ ಪ್ರಭುವೂ ಈತನೇ. ಯಾವಾಗ ಪ್ರಜೆಗಳಿಗೆ ರಕ್ಷಣೆಯನ್ನೂ, ಸುಖ-ಶಾಂತಿಗಳನ್ನೂ ಕೊಡಬೇಕಾದ ರಾಜರೇ ತಾಮಸಬುದ್ಧಿಯುಳ್ಳವರಾಗಿ ಅಧರ್ಮದಿಂದ ಜೀವಿಸತೊಡಗು ವರೋ–ಆಗ ಈತನೇ ಜಗತ್ತಿನ ಕ್ಷೇಮಕ್ಕಾಗಿ ಸತ್ತ್ವಗುಣವನ್ನು ಸ್ವೀಕರಿಸಿ ಐಶ್ವರ್ಯ, ಸತ್ಯ, ಋತ, ದಯೆ ಮತ್ತು ಯಶಸ್ಸುಗಳನ್ನು ದಯಪಾಲಿಸಲು ಯುಗ-ಯುಗಗಳಲ್ಲೂ ಅನೇಕ ಅವತಾರಗಳನ್ನು ಮಾಡುವನು. ಎಷ್ಟು ಶ್ಲಾಘ್ಯವಾಗಿದೆ ಈ ಯದುವಂಶ! ಶ್ರಿಯಃಪತಿಯಾದ ಪುರುಷೋತ್ತಮನೇ ಈ ವಂಶದಲ್ಲಿ ಅವತರಿಸಿ ಇದಕ್ಕೆ ಗೌರವ ತಂದನಲ್ಲವೇ! ಹಾಗೆಯೇ ಈ ಮಧುರಾಮಂಡಲವೂ ಎಷ್ಟು ಪವಿತ್ರವಾದುದು! ತನ್ನ ಬಾಲ್ಯದಲ್ಲಿ ಭಗವಂತನು ಸಂಚಾರಮಾಡುತ್ತಾ ಅಲಂಕರಿಸಿದ ಭೂಮಿಯು ಇದಲ್ಲವೇ! ಎಂತಹ ಆಶ್ಚರ್ಯ! ಈ ದ್ವಾರಕಾನಗರಿಯೂ ತನ್ನ ಕೀರ್ತಿಯಿಂದ ಸ್ವರ್ಗದ ಯಶಸ್ಸನ್ನೂ ಮೀರಿಸಿ ಭೂಲೋಕಕ್ಕೇ ಪುಣ್ಯವಾದ ಕೀರ್ತಿಯನ್ನು ತಂದುಕೊಟ್ಟಿದೆಯಲ್ಲಾ! ಈ ನಗರದ ಪ್ರಜೆಗಳೆಲ್ಲರೂ ಈತನ ಅನು ಗ್ರಹಪೂರ್ಣವಾದ ಮಂದಹಾಸದಿಂದ ಕೂಡಿದ ಕೃಪಾದೃಷ್ಟಿಗೆ ಪಾತ್ರರಾಗಿ ಈ

ಪ್ರಭುವನ್ನು ಸದಾ ಕಣ್ಣಾರೆ ನೋಡುತ್ತಾ ಧನ್ಯರಾಗುತ್ತಿರುವರಲ್ಲವೇ! ಗೆಳತಿಯೇ! ಈತನ ಕೈಹಿಡಿದ ನಾರೀಮಣಿಯರು ಎಷ್ಟೆಷ್ಟು ಜನ್ಮಗ್ರಳಲ್ಲಿ ವ್ರತ-ಸ್ನಾನ-ಹೋಮಗಳನ್ನಾಚರಿಸಿ ಭಗವಂತನನ್ನು ಪೂಜಿಸಿ ಮೆಚ್ಚಿಸಿರಬೇಕು! ಅದಕ್ಕೇ ಗೋಕುಲದ ಹೆಂಗಸರು ಈತನ ಅಧರಾಮೃತವನ್ನು ಪಾನಮಾಡುತ್ತಾ ಈತನ ಸ್ಮರಣಮಾತ್ರದಿಂದಲೇ ಆನಂದದ ಮೂರ್ಛೆಯನ್ನನುಭವಿಸುತ್ತಾರೆ. ಮಹಾಪರಾಕ್ರಮಿಗಳಾದ ಶಿಶುಪಾಲನೇ ಮುಂತಾದವರನ್ನು ನಿಗ್ರಹಿಸಿ ಸ್ವಯಂವರದಲ್ಲಿ ವೀರ್ಯಶುಲ್ಕವಾಗಿ ಸ್ವೀಕರಿಸಿರುವ ಯಾವ ರುಕ್ಮಿಣೀ, ಜಾಂಬವತೀ, ಮಿತ್ರವಿಂದೆಯರೇ ಮುಂತಾದ–ಪ್ರದ್ಯುಮ್ನ, ಸಾಂಬ, ಅಂಬ ಮುಂತಾದವರ ವೀರಮಾತೆಯರಾದ ರಾಣಿಯರುಂಟೋ, ನರಕಾಸುರನನ್ನು ಸಂಹರಿಸಿ ಸೆರೆಯಿಂದ ಬಿಡಿಸಿ ಸ್ವೀಕರಿಸಿರುವ ಯಾವ ಸಾವಿರಾರು ಮಂದಿ ಸ್ತ್ರೀಯರುಂಟೋ–ಅವರೆಲ್ಲರೂ ಈ ಜಗತ್ತಿನ ಸ್ತ್ರೀಜಾತಿಗೇ ಪಾವಿತ್ರ್ಯವನ್ನೂ ಪ್ರಕಾಶವನ್ನೂ ತಂದುಕೊಟ್ಟರಲ್ಲವೇ! ಪುಂಡರೀಕಾಕ್ಷನಿಂದ ತಮಗೆ ಬೇಕು-ಬೇಕಾದ ಪ್ರಿಯವಸ್ತುಗಳನ್ನು ಪಡೆ ಯುತ್ತಾ ಅವನನ್ನು ತಮ್ಮ ಅರಮನೆಗಳಲ್ಲೇ ಸದಾ ಹೊಂದಿರುವ ಭಾಗ್ಯವತಿಯರು ಅವರು."

(ಶ್ಲೋಕ 21-30)

ಭಗವಂತನಾದ ಶ್ರೀಕೃಷ್ಣನು, ಹೀಗೆಲ್ಲಾ ಮಾತನಾಡಿಕೊಳ್ಳುತ್ತಿದ್ದ ಹಸ್ತಿನಾವತಿಯ ರಮಣಿಯರನ್ನು ಮಂದಹಾಸದಿಂದಲೂ, ಪ್ರೇಮಪೂರ್ಣ ವಾದ ದೃಷ್ಟಿಯಿಂದಲೂ ಅಭಿನಂದಿಸುತ್ತಾ ಅಲ್ಲಿಂದ ಹೊರಟುಬಂದನು. ಅಜಾತಶತ್ರುವು ಶ್ರೀಭಗವಂತನ ರಕ್ಷಣೆಗೆಂದು ಆನೆ, ಕುದುರೆ, ರಥ ಮತ್ತು ಕಾಲಾಳುಗಳಿಂದ ಕೂಡಿದ ಸೇನೆಯನ್ನು ಕಳುಹಿಸಿಕೊಟ್ಟನು. ಮಾರ್ಗದಲ್ಲಿ ಯಾರಾದರೂ ಶತ್ರುಗಳು ಆತನ ಮೇಲೆ ಆಕ್ರಮಣಮಾಡಬಹುದೆಂದು ತನ್ನ ಅತಿಸ್ನೇಹದಿಂದ ಶಂಕಿಸುತ್ತಾ ಅವನು ಹಾಗೆ ಮಾಡಿದನು. ಪರಮಪ್ರೇಮ ವಶರಾಗಿ ಆತನ ಅಗಲಿಕೆಯಿಂದ ಕಳವಳಪಡುತ್ತಾ ಬಹುದೂರದವರೆಗೆ ತನ್ನನ್ನೇ ಅನುಸರಿಸಿ ಬಂದ ಕುರುವಂಶದ ಮಹಾಪುರುಷರನ್ನು ಶ್ರೀಕೃಷ್ಣ ಪರಮಾತ್ಮನು ತುಂಬಾ ಆಗ್ರಹದಿಂದ ಹಿಂದಿರುಗಿಸಿ, ಸಾತ್ಯಕಿ-ಉದ್ಧವರೇ ಮುಂತಾದ ಗೆಳೆಯರೊಡನೆ ದ್ವಾರಕೆಗೆ ಪ್ರಯಾಣಬೆಳೆಸಿದನು. ಶೌನಕರೇ! ಕುರುಜಾಂಗಲ, ಪಾಂಚಾಲ, ಶೂರಸೇನದೇಶ ಮತ್ತು ಯಮುನೆಗಳ ದಡದಲ್ಲಿ

ರುವ ಜಾಗಗಳನ್ನು ದಾಟಿ ಮಹಾಪ್ರಭುವು ಸೌವೀರ ಮತ್ತು ಆಭೀರದೇಶಗಳ ಪಶ್ಚಿಮದಲ್ಲಿರುವ ಆನರ್ತದೇಶಕ್ಕೆ ದಯಮಾಡಿಸಿದನು. ಆ ವೇಳೆಗಾಗಲೇ ಬಹಳ ದೂರ ಪ್ರಯಾಣಮಾಡಿದ್ದರಿಂದ ಆತನ ರಥದ ಕುದುರೆಗಳು ಬಳಲಿದ್ದುವು. ಮಾರ್ಗಮಧ್ಯದಲ್ಲಿ ಜನರು ಆತನಿಗೆ ಕಾಣಿಕೆ ಮುಂತಾದುವುಗಳನ್ನು ತಂದೊಪ್ಪಿಸಿ ಗೌರವಸಲ್ಲಿಸುತ್ತಿದ್ದರು. ಸಾಯಂಕಾಲವಾಗುತ್ತಲೇ ಸ್ವಾಮಿಯು ರಥದಿಂದ ಕೆಳಗಿಳಿದು ಸಂಧ್ಯಾವಂದನೆಯನ್ನು ಮಾಡಿದನು.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತದಲ್ಲಿ ಪ್ರಥಮಸ್ಕಂಧದ ೧೦ನೆಯ ಅಧ್ಯಾಯವು ಮುಗಿಯಿತು.

---

ಪ್ರಥಮಸ್ಕಂಧ ೧೧ನೆಯ ಅಧ್ಯಾಯ

## ಶ್ರೀಕೃಷ್ಣಪರಮಾತ್ಮನಿಗೆ ದ್ವಾರಕೆಯಲ್ಲಿ ಸ್ವಾಗತ

**ಆನರ್ತಾನ್ಸ ಉಪವ್ರಜ್ಯ ಸ್ವೃದ್ಧಾಞ್ಜನಪದಾನ್ಸ್ವಕಾನ್ ।**
**ದಧ್ಮೌ ದರವರಂ ತೇಷಾಂ ವಿಷಾದಂ ಶಮಯನ್ನಿವ ॥೧॥**

ಶ್ರೀಕೃಷ್ಣಪರಮಾತ್ಮನು ಹೀಗೆ ಪ್ರಯಾಣಮಾಡುತ್ತಾ ತನ್ನ ಆನರ್ತದೇಶದ ಪ್ರಾಂತವನ್ನು ತಲುಪಿ ಅಲ್ಲಿ ತನ್ನ ಶ್ರೇಷ್ಠವಾದ ಪಾಂಚಜನ್ಯಶಂಖವನ್ನೂದಿದನು. ಆ ದಿವ್ಯನಾದವನ್ನು ಕೇಳಿದೊಡನೆಯೇ ಅಲ್ಲಿಯ ಜನರಿಗೆ ಭಗವಂತನ ವಿರಹದಿಂದುಂಟಾಗಿದ್ದ ದುಃಖವು ಉಪಶಮನವಾದಂತಾಯಿತು.

ಭಗವಂತನು ತನ್ನ ಕರಕಮಲದಲ್ಲಿ ಹಿಡಿದು ಊದುತ್ತಿದ್ದ ಆ ಶುಭ್ರವಾದ ಶಂಖಕ್ಕೆ ಆತನ ಕೆಂದುಟಿಯ ಸಂಬಂಧದಿಂದ ಕೆಂಪುಬಣ್ಣವು ಬಂದು ಅದು–ಕೆಂದಾವರೆಯ ಸರೋವರದಲ್ಲಿ ವಿಹರಿಸುತ್ತಾ ಮಧುರಧ್ವನಿಮಾಡುವ ರಾಜಹಂಸದಂತೆ–ಕಂಗೊಳಿಸಿತು. ಜಗತ್ತಿನ ಸಕಲಭಯಗಳನ್ನೂ ಹೋಗಲಾಡಿಸುವ ಆ ಶಂಖನಾದವನ್ನು ಆಲಿಸಿ ಅಲ್ಲಿನ ಸರ್ವಪ್ರಜೆಗಳೂ ತಮ್ಮ ಪ್ರಭುವಾದ ಶ್ರೀಕೃಷ್ಣನನ್ನು ಸಂದರ್ಶಿಸುವ ಹಂಬಲತುಂಬಿದವರಾಗಿ ಒಡನೆಯೇ ಆತನನ್ನು ಎದುರುಗೊಳ್ಳಲು ಹೊರಕ್ಕೆ ಬಂದರು. ಸೂರ್ಯನು ಸ್ವಯಂಪ್ರಕಾಶನಾಗಿ ತೇಜೋನಿಧಿಯಾಗಿದ್ದರೂ ಭಕ್ತಜನರು ಪ್ರೀತ್ಯಾದರಗಳಿಂದ ಆತನಿಗೆ ದೀಪಗಳನ್ನು ಸಮರ್ಪಿಸಿ ಗೌರವಿಸುವಂತೆ–ಆ ಪುರಜನರು

ಆತ್ಮಾರಾಮನಾಗಿ, ಆತ್ಮಲಾಭದಿಂದಲೇ ನಿತ್ಯಸಂತುಷ್ಟನಾಗಿದ್ದ ಭಗವಂತನಿಗೆ ಬಗೆ-ಬಗೆಯ ಕಾಣಿಕೆಗಳನ್ನು ಸಮರ್ಪಿಸುತ್ತಾ ಗೌರವಸಲ್ಲಿಸಿದರು. ಪ್ರೇಮ ದಿಂದ ಅರಳಿದ ಮುಖವುಳ್ಳವರಾದ ಅವರು ಎಲ್ಲ ಪ್ರಾಣಿಗಳಿಗೂ ನೆಚ್ಚಿನ ಗೆಳೆಯನಾಗಿ ಎಲ್ಲರನ್ನೂ ಕಾಪಾಡುತ್ತಿರುವ ಆ ಸ್ವಾಮಿಯಲ್ಲಿ–ತಂದೆಯಲ್ಲಿ ಮಕ್ಕಳು ಹೇಗೋ ಹಾಗೆ ನಡೆದುಕೊಂಡರು. ಹರ್ಷದಿಂದ ಗದ್ಗದವಾದ ಕಂಠದಿಂದ ಅವರು ಹೀಗೆ ಅವನಲ್ಲಿ ತಮ್ಮ ಹೃದಯವನ್ನು ತೋಡಿಕೊಂಡರು. (ಶ್ಲೋಕ 2-5)

"ಪ್ರಭೋ! ನಿನ್ನ ಚರಣಕಮಲಗಳಿಗೆ ಸದಾ ನಮ್ಮ ನಮಸ್ಕಾರಗಳು. ಬ್ರಹ್ಮದೇವರು, ಬ್ರಹ್ಮಪುತ್ರರಾದ ಸನಕಾದಿಗಳು ಮತ್ತು ಇಂದ್ರದೇವರು– ಇವರೂ ಕೂಡ ವಂದಿಸುವ ಪಾದಾರವಿಂದಗಳಿವು. ಸಮಸ್ತಜಗತ್ತಿನ ಮೇಲೂ ಪ್ರಭುತ್ವವನ್ನು ನಡೆಸುವ, ಕಾಲದ ಪ್ರಭಾವಕ್ಕೂ ಒಳಪಡದಿರುವ, ಪರಮ ಕಲ್ಯಾಣವನ್ನು ಬಯಸುವವರಿಗೆ ಪರಮಾಶ್ರಯವಾಗಿರುವ ಪವಿತ್ರಪಾದಗಳು. ಇವುಗಳಿಗೆ ನಮ್ಮ ನಮಸ್ಕಾರಪರಂಪರೆಗಳನ್ನರ್ಪಿಸುತ್ತೇವೆ. ಓ ವಿಶ್ವಭಾವ ನನೇ! ಜಗದ್ರಕ್ಷಕನೇ! ನಮಗೆ ಯಾವುದು ಶ್ರೇಯಸ್ಸೋ ಅದನ್ನು ನೀನೇ ದೊರಕಿಸಿಕೊಡಬೇಕು. ನೀನೇ ನಮ್ಮ ಮಾತೆಯೂ, ಆತ್ಮವೂ, ಸುಹೃತ್ತೂ, ತಂದೆಯೂ, ಸರ್ವವಿಧಸಂರಕ್ಷಕನೂ ಆಗಿದ್ದೀಯೆ. ಸದ್ಗುರುವೂ, ಶ್ರೇಷ್ಠವಾದ ಆರಾಧ್ಯದೇವತೆಯೂ ನೀನೇ. ನಿನ್ನ ಆಸರೆ ಪಡೆದು ನಿನ್ನನ್ನನುಸರಿಸಿದರೆ ನಾವು ಕೃತಕೃತ್ಯರಾಗಿಬಿಡುವೆವು. ನಾವೆಂತಹ ಸುಕೃತಿಗಳು! ಇಂತಹ ನಾಥನನ್ನು ಪಡೆದಿರುವ ಧನ್ಯರು! ಯಾವುದು ದೇವತೆಗಳಿಗೂ ನೋಡಲು ದುರ್ಲಭವಾಗಿದೆಯೋ–ಅಂತಹ ಪ್ರೇಮಭರಿತವಾದ ಮಂದಹಾಸದಿಂದಲೂ, ಸ್ನೇಹಪೂರ್ಣವಾದ ನೋಟದಿಂದಲೂ ಕಂಗೊಳಿಸುವ ಮುಖಕಮಲದಿಂದ ರಮಣೀಯವಾಗಿ ಸರ್ವಸೌಂದರ್ಯಗಳ ನೆಲೆಮನೆಯಾಗಿರುವ ನಿನ್ನ ದಿವ್ಯ ರೂಪವನ್ನು ನಾವು ಸದಾ ನೋಡುತ್ತಿದ್ದೇವಲ್ಲವೇ? ಓ ಪುಂಡರೀಕಾಕ್ಷನೇ! ಅಚ್ಯುತನೇ! ನೀನು ಪ್ರೀತಿಯ ನೆಂಟರಿಷ್ಟರನ್ನು ನೋಡುವುದಕ್ಕೆಂದು ಹಸ್ತಿನಾವತಿಗೋ–ಮಧುರಾನಗರಿಗೋ ಹೊರಟುಹೋದರೆ ನಾವು ಸೂರ್ಯನ ಬೆಳಕನ್ನು ಕಾಣದ ಕಣ್ಣುಗಳಂತೆ–ಒಂದೊಂದು ಕ್ಷಣವನ್ನೂ ಕೋಟಿ-ಕೋಟಿ ಸಂವತ್ಸರಗಳಂತೆ ಕಳೆಯಬೇಕಾಗುವುದು, ದೇವ!"

ಭಕ್ತವತ್ಸಲನಾದ ಭಗವಂತನು ಪ್ರಜೆಗಳಿಂದ ಇಂತಹ ಸವಿಮಾತುಗಳನ್ನು ಕೇಳಿ, ತನ್ನ ಕೃಪಾದೃಷ್ಟಿಯಿಂದ ಅವರ ಮೇಲೆ ಅನುಗ್ರಹದ ಮಳೆಗರೆಯುತ್ತಾ ದ್ವಾರಕೆಯನ್ನು ಪ್ರವೇಶಿಸಿದನು. (ಶ್ಲೋಕ 6-10)

ನಾಗಗಳು ಪಾತಾಳದ ಭೋಗವತೀನಗರಿಯನ್ನು ಕಾಪಾಡುವಂತೆ– ಎಣೆಯಿಲ್ಲದ ಪರಾಕ್ರಮವುಳ್ಳ ಮಧು-ಭೋಜ-ದಶಾರ್ಹ-ಅರ್ಹ-ಕುಕುರ-ಅಂಧಕ-ವೃಷ್ಣಿಗಳೆಂಬ ಕ್ಷತ್ರಿಯಶಾಖೆಯವರು ಆ ದ್ವಾರಕೆಯನ್ನು ಸಂರಕ್ಷಿಸುತ್ತಿದ್ದರು. ಎಲ್ಲ ಋತುಗಳಲ್ಲಿಯೂ ಸಂಪೂರ್ಣವೈಭವದಿಂದ ಕೂಡಿದ ಪುಣ್ಯವೃಕ್ಷಗಳಿಂದಲೂ, ಲತಾಪುಂಜಗಳಿಂದಲೂ ಅದು ಕಂಗೊಳಿಸುತ್ತಿತ್ತು. ಆಶ್ರಮಗಳೂ, ಉದ್ಯಾನವನಗಳೂ, ಹೂದೋಟಗಳೂ, ವಿಹಾರಭೂಮಿಗಳೂ, ತಾವರೆಕೊಳಗಳೂ ಅದನ್ನು ನಾನಾಕಡೆಗಳಲ್ಲಿ ಅಲಂಕರಿಸಿದ್ದುವು. ನಗರದ ಮಹಾದ್ವಾರಗಳೂ, ರಾಜಮಾರ್ಗಗಳೂ ರಮಣೀಯವಾದ ತಳಿರು-ತೋರಣಗಳಿಂದ ಸಿಂಗರಿಸಲ್ಪಟ್ಟಿದ್ದುವು. ನಗರದೊಳಗಿನ ಬಿಸಿಲಿನ ಬೇಗೆಯನ್ನು ವಿಧ-ವಿಧವಾದ ಧ್ವಜಗಳೂ, ಬಾವುಟಗಳ ತುದಿಗಳೂ ನಿವಾರಿಸುತ್ತಿದ್ದುವು. ರಾಜಮಾರ್ಗಗಳು ಚೊಕ್ಕಟವಾಗಿ ಗುಡಿಸಲ್ಪಟ್ಟಿದ್ದುವು. ರಥದ ಬೀದಿಗಳೂ, ಅಂಗಡಿಬೀದಿಗಳೂ, ಅಂಗಳಗಳೂ ನಗರವನ್ನು ಅಲಂಕರಿಸಿದ್ದು ಗಂಧೋದಕಗಳಿಂದ ಅವನ್ನು ಸಿಂಪಡಿಸಿದ್ದರು. ಹಣ್ಣು-ಹೂವು-ಅಕ್ಷತೆ-ಚಿಗುರುಗಳೂ ಅಲ್ಲಿ ಹೇರಳವಾಗಿದ್ದು ಪ್ರತಿಮನೆಯ ಬಾಗಿಲಿನಲ್ಲಿಯೂ ಮೊಸರು, ಅಕ್ಷತೆ, ಹಣ್ಣು, ಕಬ್ಬು–ಮುಂತಾದ ಮಂಗಳದ್ರವ್ಯಗಳು ಇರಿಸಲ್ಪಟ್ಟಿದ್ದುವು. ಪೂರ್ಣಕುಂಭಗಳೂ, ಪೂಜಾಬಲಿಗಳೂ, ಧೂಪ-ದೀಪಗಳೂ, ಅಲ್ಲಿ ಶೋಭಾಯಮಾನವಾಗಿದ್ದುವು. ಅಂತಹ ಅತಿರಮಣೀಯವೂ, ವೈಭವೋಪೇತವೂ ಆದ ದ್ವಾರಕಾನಗರಿಯನ್ನು ಶ್ರೀಕೃಷ್ಣನು ಪ್ರವೇಶಿಸಿದನು. (ಶ್ಲೋಕ 11-15)

ತಮ್ಮ ಪ್ರಿಯತಮನಾದ ಶ್ರೀಕೃಷ್ಣನು ಬಂದಿರುವುದನ್ನು ಕೇಳಿದೊಡನೆಯೇ ಮಹಾತ್ಮನಾದ ವಸುದೇವ, ಅಕ್ರೂರ, ಉಗ್ರಸೇನ, ಅದ್ಭುತ ಪರಾಕ್ರಮವುಳ್ಳ ಬಲರಾಮ, ಪ್ರದ್ಯುಮ್ನ, ಚಾರುದೇಷ್ಣ, ಜಾಂಬವತೀ ಪುತ್ರನಾದ ಸಾಂಬ–ಇವರೆಲ್ಲರೂ ಉಕ್ಕಿಬಂದ ತಮ್ಮ ಸಂತೋಷದ ಭರದಲ್ಲಿ ನಿದ್ರೆ, ವಿಶ್ರಾಂತಿ, ಭೋಜನಗಳೇ ಮುಂತಾದ ದಿನನಿತ್ಯದ ಕರ್ಮಗಳನ್ನೂ

ಮರೆತು ಪಟ್ಟದಾನೆಯನ್ನು ಮುಂದಿಟ್ಟುಕೊಂಡು ಮಂಗಳದ್ರವ್ಯಯುಕ್ತರಾದ ಬ್ರಾಹ್ಮಣರೊಡನೆ ಶಂಖವನ್ನೂ, ಕೊಂಬು-ಕಹಳೆಗಳೇ ಮುಂತಾದ ಮಂಗಳ ವಾದ್ಯಗಳನ್ನೂ ಮೊಳಗಿಸುತ್ತಾ ವೇದಘೋಷಗಳೊಡನೆ ರಥಗಳನ್ನೇರಿ, ಹೊರಟು ಶ್ರೀಕೃಷ್ಣನನ್ನು ಎದುರುಗೊಂಡರು. ಹಾಗೆಯೇ ಸುಂದರಿಯ ರಾದ ವೇಶ್ಯಾಸ್ತ್ರೀಯರೂ ಶ್ರೀಕೃಷ್ಣನನ್ನು ಸಂದರ್ಶಿಸುವ ಸಲುವಾಗಿ ಉತ್ಸಾಹ-ಪ್ರೀತಿಗಳಿಂದ, ಸಂಭ್ರಮ-ಸಡಗರಗಳಿಂದ ವಾಹನಗಳನ್ನೇರಿ ಅವನನ್ನೆದುರು ಗೊಳ್ಳಲು ಹೋದರು. ಶೃಂಗಾರಾದಿ ರಸಗಳನ್ನು ಅಭಿನಯಿಸಲು ಸಮರ್ಥರಾದ ನಟರೂ, ತಾಳಕ್ಕೆ ಅನುಗುಣವಾಗಿ ನರ್ತನಮಾಡುವ ನರ್ತಕರೂ, ಪೌರಾಣಿಕರೂ, ವಂದಿ-ಮಾಗಧರೂ, ಸಲ್ಲಾಪಚತುರರೂ– ಹೊಳೆಯುವ ಕರ್ಣಕುಂಡಲಗಳಿಂದ ಶೋಭಿಸುತ್ತಿದ್ದ ಕಪೋಲಕಾಂತಿಯಿಂದ ಕಂಗೊಳಿಸುತ್ತಿದ್ದ ಮುಖಗಳಿಂದ ರಾರಾಜಿಸುತ್ತಾ ಭಗವಂತನ ದಿವ್ಯಾದ್ಭುತ ವಾದ ಕಥೆಗಳನ್ನು ಹಾಡುತ್ತಾ ಹೊರಟುಬಂದರು. (ಶ್ಲೋಕ 16-20)

ಶ್ರೀಭಗವಂತನು ನೆಂಟರಿಷ್ಟರನ್ನೂ, ನಾಗರಿಕರನ್ನೂ, ಸೇವಕರನ್ನೂ– ಇನ್ನೂ ಮುಂತಾದವರನ್ನೂ ಅವರವರ ಯೋಗ್ಯತೆಗೆ ತಕ್ಕಂತೆ ಬೇರೆ-ಬೇರೆ ಯಾಗಿ ಸಂಧಿಸಿ ಎಲ್ಲರಿಗೂ ಸನ್ಮಾನಮಾಡಿದನು. ಕೆಲವರಿಗೆ ತಲೆಬಗ್ಗಿಸಿ ನಮಸ್ಕಾರಮಾಡಿದನು. ಕೆಲವರನ್ನು ಮಾತಿನ ಮೂಲಕ ನಮಸ್ಕರಿಸಿದನು. ಕೆಲವರನ್ನು ಹೃದಯದಿಂದ ಆಲಿಂಗಿಸಿದನು. ಕೆಲವರ ಕೈಕುಲುಕಿದನು. ಮತ್ತೆ ಕೆಲವರನ್ನು ಕಂಡು ಮುಗುಳ್ನಗೆಬೀರಿದನು. ಇನ್ನೂ ಕೆಲವರನ್ನು ನೋಟದಿಂದಲೇ ಗೌರವಿಸಿದನು. ಪ್ರಭುವು ಪ್ರತಿಯೊಬ್ಬರಿಗೂ ಅವರವರಿಗೆ ಬೇಕಾದ ವರಗಳನ್ನು ಕೊಟ್ಟು ಅನುಗ್ರಹ ಮಾಡಿದನು. ಹೀಗೆ ಚಾಂಡಾಲರ ವರೆಗಿನ ಎಲ್ಲ ವರ್ಗಗಳ ಜನರನ್ನೂ ಸಂತೋಷಗೊಳಿಸಿ ಗುರುಜನರ, ಸಪತ್ನೀಕರಾದ ವೃದ್ಧರ ಮತ್ತು ಇತರರ ಆಶೀರ್ವಾದಗಳನ್ನೂ ಪಡೆದು, ಹೊಗಳುಭಟರಿಂದ ಬಿರುದಾವಳಿಗಳನ್ನು ಕೇಳುತ್ತಾ–ಎಲ್ಲರಿಂದೊಡಗೂಡಿದ ಭಗವಂತನು ನಗರಿಯನ್ನು ಪ್ರವೇಶಿಸಿದನು. (ಶ್ಲೋಕ 21-23)

ಭಗವಂತನು ರಾಜಮಾರ್ಗದಲ್ಲಿ ಹೋಗುತ್ತಿದ್ದಾಗ ದ್ವಾರಕಾನಗರಿಯ ಕುಲಸ್ತ್ರೀಯರು ಅವನ ದರ್ಶನವನ್ನೇ ಪರಮಾನಂದಮಹೋತ್ಸವವನ್ನಾಗಿ ಭಾವಿಸಿ ಅದಕ್ಕಾಗಿ ಎತ್ತರವಾದ ಉಪ್ಪರಿಗೆಗಳನ್ನೇರಿದರು. ಶ್ರೀಭಗವಂತನ

ದಿವ್ಯಮಂಗಳವಿಗ್ರಹದ ಶೋಭೆಯನ್ನು ಏನೆಂದು ಹೇಳೋಣ? ಆತನ ವಕ್ಷಃಸ್ಥಳವು ಆಕಾರತಳೆದ ಸೌಂದರ್ಯಲಕ್ಷ್ಮಿಯ ನಿವಾಸಸ್ಥಾನವೇ ಆಗಿತ್ತು. ಅವನ ಮುಖಾರವಿಂದವು ಕಣ್ಣುಗಳಿಂದ ಪಾನಮಾಡಲು ಸೌಂದರ್ಯಸುಧೆ ಯಿಂದ ತುಂಬಿದ ಪಾತ್ರೆಯೋಪಾದಿಯಲ್ಲಿತ್ತು. ಅವನ ಭುಜಗಳಾದರೋ ಲೋಕಪಾಲರಿಗೇ ಶಕ್ತಿಯನ್ನು ತುಂಬುವಂತಿದ್ದುವು. ಚರಣಕಮಲಗಳು ಭಕ್ತರೆಂಬ ಹಂಸಗಳಿಗೆ ಆಶ್ರಯಸ್ಥಾನವಾಗಿದ್ದುವು. ಅವನ ಒಂದೊಂದು ಅವಯವವೂ ಕೂಡ ಕಾಂತಿಯ ತೌರುಮನೆಯಂತಿದ್ದು–ಅಂತಹ ಕಾಂತಿ ಯನ್ನು ಸದಾ ನೋಡುತ್ತಿದ್ದರೂ ದ್ವಾರಕಾನಗರಿಯ ನಿವಾಸಿಗಳಿಗೆ ಕ್ಷಣ ಕಾಲವೂ ತೃಪ್ತಿಯುಂಟಾಗಲಿಲ್ಲ. ರಾಜಮಾರ್ಗದಲ್ಲಿ ಹೋಗುತ್ತಿದ್ದ ಭಗವಂತನ ಮೇಲೆ ಬೆಳ್ಗೊಡೆಯನ್ನು ಹಿಡಿದಿದ್ದು ಇಕ್ಕೆಡೆಗಳಲ್ಲಿಯೂ ಬೆಳ್ಳಿಯ ಚಾಮರಗಳನ್ನು ಬೀಸುತ್ತಿದ್ದರು. ನಾಲ್ಕು ಕಡೆಗಳಿಂದಲೂ ಪುಷ್ಪ ವೃಷ್ಟಿಯಾಗುತ್ತಿತ್ತು. ಸ್ವಾಮಿಯು ಮಿಂಚಿನಂತೆ ಹೊಳೆಯುತ್ತಿದ್ದ ಪೀತಾಂಬರ ವನ್ನೂ, ಸೊಬಗು-ಸುವಾಸನೆಗಳಿಂದ ಕೂಡಿದ್ದ ವನಮಾಲೆಯನ್ನೂ ಧರಿಸಿದ್ದನು. ಹೀಗೆ, ಎಲ್ಲ ಅಲಂಕಾರ-ವೈಭವಗಳಿಂದಲೂ ಕೂಡಿದ್ದ ಶ್ಯಾಮಲಮೂರ್ತಿಯಾದ ಸ್ವಾಮಿಯು ಒಟ್ಟಿಗೆ ಏಕಕಾಲದಲ್ಲೇ ಸೂರ್ಯ, ಚಂದ್ರ, ಕಾಮನಬಿಲ್ಲು, ಮಿಂಚು–ಇವೆಲ್ಲದರಿಂದಲೂ ಶೋಭಿಸುತ್ತಿರುವ ನೀಲಮೇಘದಂತೆ ಕಂಗೊಳಿಸುತ್ತಿದ್ದನು. (ಶ್ಲೋಕ 24-27)

ಶ್ರೀಭಗವಂತನು ಎಲ್ಲಕ್ಕಿಂತಲೂ ಮೊದಲು ತನ್ನ ತಂದೆ-ತಾಯಿಗಳಿದ್ದ ಅರಮನೆಗೆ ಹೋದನು. ಅಲ್ಲವನು ಪರಮಾನಂದದಿಂದ ದೇವಕಿಯೇ ಮೊದಲಾದ ಏಳು ಮಂದಿ ತಾಯಂದಿರಿಗೂ ಅವರ ಪಾದಗಳಲ್ಲಿ ಶಿರಸ್ಸನ್ನಿಟ್ಟು ನಮಸ್ಕರಿಸಿದನು. ಆಗ ಆ ಎಲ್ಲ ಮಾತೆಯರೂ ಆತನನ್ನು ಹೃದಯದಿಂದಪ್ಪಿ ಕೊಂಡು ತೊಡೆಯ ಮೇಲೆ ಕೂರಿಸಿಕೊಂಡರು. ವಾತ್ಸಲ್ಯದ ಕಾರಣದಿಂದಾಗಿ ಅವರ ಸ್ತನಗಳಿಂದ ಹಾಲಿನ ಧಾರೆಯೇ ಹರಿಯುತ್ತಿತ್ತು. ಆನಂದತುಂಬಿದ ಹೃದಯವುಳ್ಳವರಾಗಿ ಅವರು ಆನಂದಬಾಷ್ಪಗಳಿಂದ ಶ್ರೀಕೃಷ್ಣನಿಗೆ ಅಭಿಷೇಕ ಮಾಡಿದರು. ಆ ಎಲ್ಲ ತಾಯಂದಿರ ಅನುಜ್ಞೆಯನ್ನೂ ಪಡೆದು ಅವನು ಸಮಸ್ತಭೋಗಸಾಮಗ್ರಿಗಳಿಂದ ಸಂಪನ್ನವಾಗಿದ್ದ, ಸರ್ವೋತ್ತಮವಾಗಿದ್ದ ತನ್ನ ಅರಮನೆಗೆ ದಯಮಾಡಿಸಿದನು. ಅಲ್ಲಿ ಅವನ ಹದಿನಾರು ಸಾವಿರ ಮಂದಿ

ಪತ್ನಿಯರಿಗೂ ಬೇರೆ-ಬೇರೆ ಭವನಗಳಿದ್ದುವು. ಬಹಳ ದಿವಸಗಳ ಪ್ರವಾಸದ ಬಳಿಕ ಅರಮನೆಗೆ ಹಿಂದಿರುಗಿದ ಪ್ರಾಣನಾಥನನ್ನು ಕಂಡು ರಾಣಿಯರ ಹೃದಯಗಳು ಆನಂದೋತ್ಸಾಹಗಳಿಂದ ತುಂಬಿದುವು. ಆತನು ತಮ್ಮ ಬಳಿಗೆ ಬಂದಿದ್ದನ್ನು ಕಂಡು ಎಲ್ಲರೂ ಕೂಡಲೇ ಧ್ಯಾನದಿಂದ ವಿಮುಖರಾಗಿ ಎದ್ದು ನಿಂತರು. ಆಗ ಅವರು ತಮ್ಮ-ತಮ್ಮ ಆಸನಗಳನ್ನು ಬಿಟ್ಟಿದ್ದರಲ್ಲದೇ *ವಿರಹಿಣೀಸ್ತ್ರೀಯರ ಲಕ್ಷಣವಾದ ಅಲಂಕಾರತ್ಯಾಗವೇ ಮುಂತಾದ ನಿಯಮ ಗಳನ್ನೂ ತ್ಯಾಗಮಾಡಿದ್ದರು. ಆಗ ಅವರ ಮುಖ ಮತ್ತು ನೇತ್ರಗಳನ್ನು ಲಜ್ಜೆಯು ಆಕ್ರಮಿಸಿತು. ಶ್ರೀಭಗವಂತನ ವಿಷಯದಲ್ಲಿ ಅವರ ಭಾವವು ತುಂಬಾ ಗಂಭೀರವಾಗಿತ್ತು. ಅವರು ಪ್ರಾಣಕಾಂತನನ್ನು ಪ್ರೇಮಪೂರ್ಣವಾದ ದೃಷ್ಟಿಯಿಂದಲೂ ಮತ್ತು ಮನಸ್ಸಿನಿಂದಲೂ ಆಲಿಂಗಿಸಿಕೊಂಡರು. ಪ್ರೇಮಭಾವದಿಂದ ಲಜ್ಜಿತರಾದರು. ಅವರ ಕಣ್ಣುಗಳಿಂದ ಎಷ್ಟೇ ತಡೆದರೂ ನಿಲ್ಲದೇ ಧಾರಾಕಾರವಾಗಿ ಕಂಬನಿ ಹರಿಯಲಾರಂಭಿಸಿತು. ವಾಸ್ತವವಾಗಿ ಹೇಳುವುದಾದರೆ–ಸರ್ವವ್ಯಾಪಕನೂ, ಅನಂತಶಕ್ತಿಪರಿಪೂರ್ಣನೂ ಆಗಿದ್ದ ಶ್ರೀಕೃಷ್ಣಪರಮಾತ್ಮನು ಸರ್ವದಾ ಆ ರಮಣಿಯರ ಪಕ್ಕದಲ್ಲೂ ಮತ್ತು ಅಂತರಂಗದಲ್ಲೂ ಏಕಾಂತವಾಗಿ ಉಪಸ್ಥಿತನಾಗಿಯೇ ಇದ್ದನು. ಆದರೂ ಪ್ರತಿಕ್ಷಣದಲ್ಲಿಯೂ ಹೊಸ-ಹೊಸದೆಂಬಂತೆ ಬೆಳಗುತ್ತಿದ್ದ ಆತನ ಪೊನ್ನಡಿಗಳ ಯುಗಳವನ್ನು ಕ್ಷಣಕಾಲವಾದರೂ ಹೊರಗಡೆಯಿಂದ ಬಿಟ್ಟಿರಲು ಯಾವಳ ಮನಸ್ಸು ತಾನೇ ಬಯಸುತ್ತದೆ? ಸ್ವಭಾವದಿಂದಲೇ ಚಂಚಲೆಯಾದ ಲಕ್ಷ್ಮೀದೇವಿಯೂ ಕೂಡ ಆತನ ಪಾದಾರವಿಂದಗಳ ಸಾನ್ನಿಧ್ಯವನ್ನು ಕ್ಷಣಕಾಲವೂ ಬಿಟ್ಟಿರಲಾರಳಲ್ಲವೇ?

ಹೀಗೆ ಭಗವಂತನು ಭೂಮಿಗೆ ಭಾರವಾಗಿ ತಮ್ಮ ಅಸಂಖ್ಯಾತವಾದ

---

* ವಿರಹಿಣೀ ಸ್ತ್ರೀಯರ ಲಕ್ಷಣ : ಸ್ತ್ರೀಣಾಂ ಶರೀರಸಂಸ್ಕಾರಂ ಸಮಾಜೋತ್ಸವ-ದರ್ಶನಮ್ । ಹಾಸ್ಯಂ ಪರಗೃಹೇ ವಾಸಂ ತ್ಯಜೇತ್ಪ್ರೋಷಿತ ಭರ್ತೃಕಾ ॥

(ಯಾಜ್ಞವಲ್ಕ್ಯಸ್ಮೃತಿ)

ಪತಿಯು ವಿದೇಶವಾಸಕ್ಕೆ ಹೋಗಿರುವಾಗ ಪತ್ನಿಯು ಈ ಕೆಳಗೆ ಕಂಡ ನಿಯಮಗಳನ್ನು ಪಾಲಿಸಬೇಕು. ಆಟ-ಪಾಟಗಳಲ್ಲಿ ಭಾಗವಹಿಸಬಾರದು. ಅಲಂಕಾರ ಇತ್ಯಾದಿ ಶರೀರಸಂಸ್ಕಾರ ಮಾಡಿಕೊಳ್ಳಬಾರದು. ಸಾಮಾಜಿಕವಾದ ಉತ್ಸವಗಳನ್ನು ನೋಡಬಾರದು. ಹಾಸ್ಯಗಳಲ್ಲಿ ಭಾಗವಹಿಸಕೂಡದು. ಪರಗೃಹದಲ್ಲಿ ವಾಸಮಾಡಬಾರದು.

ಸೇನಾಸಹಾಯದಿಂದ ಬಲಶಾಲಿಗಳಾಗಿ ಕೊಬ್ಬಿಹೋಗಿದ್ದ, ಅಜೇಯರಾಗಿದ್ದ, ದುಷ್ಟರಾದ ರಾಜರಲ್ಲಿ ಪರಸ್ಪರಘರ್ಷಣೆಯನ್ನುಂಟುಮಾಡಿ ಬೆಂಕಿಯನ್ನು ಹೊತ್ತ ಬಿರುಗಾಳಿಯು ಕಾಡುಗಳನ್ನು ದಹಿಸಿಬಿಡುವಂತೆ–ಪರಸ್ಪರ ವೈರಾಗ್ನಿಯಿಂದ ಒಬ್ಬರನ್ನೊಬ್ಬರು ಕೊಂದುಹಾಕಿಕೊಳ್ಳುವಂತೆ ಮಾಡಿ ತಾನು ಮಾತ್ರ ಯಾವ ಆಯುಧವನ್ನೂ ಹಿಡಿಯದೇ ಕಾರ್ಯವನ್ನು ಸಾಧಿಸಿದನು. ಅಂತಹ ಸ್ವಾಮಿಯು ತನ್ನ ಪರಮಾದ್ಭುತವಾದ ಮಾಯೆಯ ಶಕ್ತಿಯಿಂದ ಮನುಷ್ಯಲೋಕದಲ್ಲಿ ಮನುಷ್ಯನಂತೆ ಕಾಣಿಸಿಕೊಂಡನು. ತಾನು ಸಾಕ್ಷಾತ್ ಭಗವಂತನೇ ಆಗಿದ್ದರೂ ಒಬ್ಬ ಸಾಧಾರಣಮನುಷ್ಯನಂತೆ ತನ್ನನ್ನು ಪ್ರಕಟಪಡಿಸಿಕೊಳ್ಳುತ್ತಾ ಆ ಸ್ತ್ರೀರತ್ನಗಳ ಮಧ್ಯದಲ್ಲಿ ರಮಿಸುತ್ತಿದ್ದನು. ತ್ರಿಲೋಕವಿಜಯಿಯಾದ ಮನ್ಮಥನೂ ಕೂಡ ಯಾವ ಮೋಹನಾಂಗಿಯರ ಗಂಭೀರವಾದ ಭಾವವನ್ನು ಸೂಚಿಸುವ ಮಧುರವಾದ ಮಂದಹಾಸಗಳಿಗೂ, ಲಜ್ಜೆಯಿಂದ ತುಂಬಿದ ಕಡೆಗಣ್ಣನೋಟಗಳಿಗೂ ಸೋತವನಾಗಿ ತನ್ನ ಪಂಚಬಾಣಗಳನ್ನೂ ಬಿಸಾಡಿಬಿಟ್ಟನೋ–ಅಂತಹ ರಮಣಿಯರೂ ಕೂಡ ಆ ಮಹಾಪ್ರಭುವಿನ ಇಂದ್ರಿಯಗಳಲ್ಲಿ ತಮ್ಮ ವಿಲಾಸಗಳಿಂದ ಕ್ಷೋಭೆ ಯನ್ನುಂಟುಮಾಡಲು ಅಸಮರ್ಥರಾದರು. ಅಂತಹ ನಿರ್ಲಿಪ್ತನೂ, ನಿರಂಜ ನನೂ ಆದ ಭಗವಂತನನ್ನು ಮಾನವರು ತಮ್ಮಂತೆಯೇ ಎಂದು ಭಾವಿಸಿ, ಆತನು ತಮ್ಮಂತೆಯೇ ವಿಷಯಾಸಕ್ತನಾಗಿರುವ ಸಾಮಾನ್ಯವ್ಯಕ್ತಿಯೆಂದು ತಿಳಿಯುವುದುಂಟು. ಅಂತಹ ಮಾನವರು ನಿಜವಾಗಿಯೂ ಮೂರ್ಖಶಿಖಾ ಮಣಿಗಳೇ ಅಲ್ಲವೇ? ಜ್ಞಾನವು ಜಡವಾದ ಪ್ರಕೃತಿಯನ್ನಾಶ್ರಯಿಸಿಕೊಂಡಿ ದ್ದರೂ ಅದರ ಗುಣಗಳೊಡನೆ ಸ್ವಲ್ಪವೂ ಬೆರೆತುಕೊಳ್ಳುವುದಿಲ್ಲ. ಹಾಗೆಯೇ ಈ ಪ್ರಕೃತಿಯಲ್ಲಿ ಸೇರಿಕೊಂಡಿರುವ ಭಗವಂತನೂ ಕೂಡ ಅದರಲ್ಲಿರುವ ಯಾವ ಗುಣದೊಡನೆಯೂ ಸ್ವಲ್ಪವೂ ಬೆರೆತುಕೊಳ್ಳುವುದಿಲ್ಲ. ಇದು ತಾನೇ ಈಶ್ವರನ ಈಶ್ವರತ್ವದ ಸಾಮರ್ಥ್ಯ! ಆತನ ಪ್ರಭಾವಶಕ್ತಿಯ ಅಗ್ಗಳಿಕೆ–ಹೀಗಿದ್ದರೂ ಆ ಸ್ತ್ರೀಯರೂ ಕೂಡ ಶ್ರೀಭಗವಂತನ ದೈವತ್ವ ವನ್ನರಿಯದ ಮೂಢರು ; ದುರ್ಬಲಪ್ರಕೃತಿಯವರು–ಬುದ್ಧಿಗಳು ಬುದ್ಧ್ಯ ತೀತನಾದ ಪರಮಾತ್ಮನನ್ನು ಹೇಗೆ ಅರಿಯಲಾರವೋ–ಹಾಗೆಯೇ ಅವರೂ ಕೂಡ ಪತಿಯಾದ ಶ್ರೀಕೃಷ್ಣನ ನಿಜಸ್ವರೂಪವನ್ನು ಅರಿಯಲಾರದೇ ಆತ

ನನ್ನು ಸ್ತ್ರೀಯರಿಗೆ ಅಧೀನನಾಗಿ ಅವರೊಡನೆ ಕಲೆತು ವಿಹರಿಸುವ ದುರ್ಬಲ ಪ್ರಕೃತಿಯವನೆಂದೇ ಭಾವಿಸುತ್ತಿದ್ದರು.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೧೧ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೧೨ನೆಯ ಅಧ್ಯಾಯ

## ಪರೀಕ್ಷಿದ್ರಾಜನ ಜನನ

ಶೌನಕಮಹರ್ಷಿಗಳು ಸೂತಪುರಾಣಿಕರನ್ನು ಪ್ರಶ್ನಿಸಿದರು :

**ಅಶ್ವತ್ಥಾಮ್ನೋಪಸೃಷ್ಟೇನ ಬ್ರಹ್ಮಶೀರ್ಷ್ಣೋರುತೇಜಸಾ ।**
**ಉತ್ತರಾಯಾ ಹತೋ ಗರ್ಭ ಈಶೇನಾಜೀವಿತಃ ಪುನಃ ॥೧॥**

"ಪುರಾಣಿಕರೇ! ಅಶ್ವತ್ಥಾಮನು ಪ್ರಯೋಗಿಸಿದ ಪರಮತೇಜಸ್ವಿ ಯಾದ ಬ್ರಹ್ಮಶಿರೋಸ್ತ್ರದಿಂದ ನಾಶಪಡಿಸಲ್ಪಟ್ಟಿದ್ದ ಉತ್ತರೆಯ ಗರ್ಭವನ್ನು ಪರಮಾತ್ಮನು ಪುನರುಜ್ಜೀವನಗೊಳಿಸಿದನೆಂದು ಕೇಳಿದೆವು.

ಆ ಗರ್ಭದಲ್ಲಿ ಜನಿಸಿದ ಮಹಾಜ್ಞಾನಿಯೂ, ಮಹಾತ್ಮನೂ ಆದ ಪರೀಕ್ಷಿದ್ರಾಜನು ಮಾಡಿದ ಕರ್ಮಗಳಾವುವು? ಅವನಿಗೆ ಮೃತ್ಯುವು ಹೇಗೆ ಉಂಟಾಯಿತು? ಅನಂತರ ಅವನು ಯಾವಗತಿಯನ್ನು ಪಡೆದನು? ಇವೆಲ್ಲ ವನ್ನೂ ಸರಿಯೆನಿಸಿದರೆ ನಮಗೆ ತಿಳಿಸಿರಿ. ನಾವು ಶ್ರದ್ಧೆಯಿಂದ ಕೇಳುತ್ತೇವೆ. ಶುಕಮಹಾಮುನಿಯಿಂದಲೇ ಜ್ಞಾನವನ್ನು ಪಡೆದ ಆ ರಾಜರ್ಷಿಯೇ ಧನ್ಯನು. ಅಂತಹವನ ಪವಿತ್ರವಾದ ವೃತ್ತಾಂತವನ್ನು ತಿಳಿಸುವಿರಾ?"

ಸೂತಪುರಾಣಿಕರು ಹೇಳುತ್ತಾರೆ :

"ಧರ್ಮರಾಜಯುಧಿಷ್ಠಿರನು ಪ್ರಜೆಗಳನ್ನು ಸಂತೋಷಪಡಿಸುತ್ತಾ ತಂದೆಯಂತೆ ಅವರನ್ನು ಸಂರಕ್ಷಿಸುತ್ತಿದ್ದನು. ಶ್ರೀಕೃಷ್ಣಪರಮಾತ್ಮನ ಪಾದಾರವಿಂದಗಳ ಸೇವನೆಯಿಂದ ಸಮಸ್ತಭೋಗಗಳಲ್ಲೂ ನಿಃಸ್ಪೃಹನಾಗಿ ಅವರನ್ನು ಪಾಲಿಸುತ್ತಿದ್ದನು. ಆತನು ಎಂತಹ ಪುಣ್ಯಶಾಲಿಯಾಗಿದ್ದ ನೆಂದರೆ : ಪುಷ್ಕಳವಾದ ಸಂಪತ್ತನ್ನು ಹೊಂದಿ ಆ ಮೂಲಕ ಶ್ರೇಷ್ಠವಾದ ಅನೇಕ ಯಜ್ಞಗಳನ್ನಾಚರಿಸಿ ಶ್ರೇಷ್ಠವಾದ ಲೋಕಗಳನ್ನು ಗಳಿಸಿದ್ದನು.

ಆತನಿಗೆ ಅನುಕೂಲೆಯರಾದ ರಾಣಿಯರೂ, ಅನುಕೂಲರಾದ ಒಡಹುಟ್ಟಿದವರೂ ಇದ್ದು ಇಡೀ ಜಂಬೂದ್ವೀಪದ ಆಧಿಪತ್ಯವೇ ದೊರಕಿತ್ತು. ಆತನ ಕೀರ್ತಿಯು ಸ್ವರ್ಗವನ್ನೂ ವ್ಯಾಪಿಸಿದ್ದು ದೇವತೆಗಳೂ ಆಸೆಪಡಬಹುದಾದ ಭೋಗಸಮೃದ್ಧಿಯನ್ನು ಹೊಂದಿದ್ದನು. ಆದರೂ ಬಹಳವಾಗಿ ಹಸಿದಿರುವವನಿಗೆ ಭೋಜನವನ್ನು ಬಿಟ್ಟು ಬೇರೆ ಯಾವುದೂ ಹೇಗೆ ರುಚಿಸುವುದಿಲ್ಲವೋ–ಹಾಗೆಯೇ ಶ್ರೀಕೃಷ್ಣನನ್ನೇ ಮನಸ್ಸಿನಲ್ಲಿ ತುಂಬಿಕೊಂಡಿದ್ದ ಆತನಿಗೆ ಆ ಯಾವ ಭೋಗಸಂಪತ್ತೂ ರುಚಿಸಲಿಲ್ಲ. (ಶ್ಲೋಕ 2-6)

ಭಾರ್ಗವರೇ! ಉತ್ತರೆಯ ಗರ್ಭದಲ್ಲಿದ್ದ ವೀರಶಿಶು ಪರೀಕ್ಷಿತ್ತು ಬ್ರಹ್ಮಶಿರೋಸ್ತ್ರದ ತೇಜಸ್ಸು ತನ್ನನ್ನು ಸುಟ್ಟುಹಾಕಲು ಪ್ರಯತ್ನಿಸುತ್ತಿರುವಾಗ ಕಣ್ಣುಗಳ ಮುಂದೆ ಒಂದಾನೊಂದು ಜ್ಯೋತಿರ್ಮಯಪುರುಷನನ್ನು ನೋಡಿತು. ಆ ಪುರುಷನು ಆಕಾರದಲ್ಲಿ ಅಂಗುಷ್ಠಪ್ರಮಾಣದವನಾಗಿದ್ದರೂ ಆತನ ತೇಜಸ್ಸು ಅತ್ಯದ್ಭುತವಾಗಿತ್ತು ; ಅತಿನಿರ್ಮಲವಾಗಿತ್ತು. ಆತನು ಥಳಥಳಿಸುವ ಚಿನ್ನದ ಕಿರೀಟವನ್ನು ಧರಿಸಿದ್ದನು. ನೀಲವರ್ಣದ ದೇಹಕಾಂತಿಯಿಂದ ಕೂಡಿದ ಆ ಸುಂದರಮೂರ್ತಿಯು ಮಿಂಚಿನಂತೆ ಹೊಳೆಯುವ ಪೀತಾಂಬರವನ್ನೂ, ತಲೆಯಲ್ಲಿ ಸ್ವರ್ಣಕಿರೀಟವನ್ನೂ ಧರಿಸಿ ರಾರಾಜಿಸುತ್ತಿದ್ದನು. ಅತಿಸುಂದರವಾಗಿ ದೀರ್ಘವಾಗಿದ್ದ ನಾಲ್ಕು ತೋಳುಗಳಿಂದ ಒಪ್ಪುತ್ತಿದ್ದನು. ಆತನ ಕಿವಿಗಳಲ್ಲಿ ಚಿನ್ನದ ಕುಂಡಲಗಳು ಹೊಳೆಯುತ್ತಿದ್ದುವು. ಕಣ್ಣುಗಳು ರಕ್ತದಂತೆ ಕೆಂಪಾಗಿದ್ದುವು. ಆತನು ಕೈಯ್ಯಲ್ಲಿ ಗದೆಯೊಂದನ್ನು ಹಿಡಿದುಕೊಂಡು ಎಲ್ಲ ದಿಕ್ಕುಗಳಲ್ಲೂ ಸುತ್ತುತ್ತಾ ಉರಿಯುವ ಕೊಳ್ಳಿಯಂತಿದ್ದ ತನ್ನ ಗದೆಯನ್ನು ಮತ್ತೆ-ಮತ್ತೆ ತಿರುಗಿಸುತ್ತಾ–ಸೂರ್ಯನು ತನ್ನ ಕಿರಣಗಳಿಂದ ಮಂಜನ್ನು ಹೊಡೆದೋಡಿಸುವಂತೆ–ಬ್ರಹ್ಮಾಸ್ತ್ರದ ತೇಜಸ್ಸನ್ನು ಬಡಿದಟ್ಟುತ್ತಿದ್ದನು. ಅಂತಹ ಮಹಾಪುರುಷನನ್ನು ಕಂಡ ಗರ್ಭಸ್ಥಶಿಶುವು ಈತನಾರು? ಎಂದು ಆತನನ್ನು ಗಮನಿಸತೊಡಗಿತು. ಆಗ ಅಪ್ರಮೇಯಸ್ವರೂಪನಾದ, ಧರ್ಮರಕ್ಷಕನಾದ ಶ್ರೀಹರಿಯು ಆ ಬ್ರಹ್ಮಶಿರೋಸ್ತ್ರದ ತೇಜಸ್ಸನ್ನು ಶಮನಗೊಳಿಸಿ, ಆ ಹತ್ತು ತಿಂಗಳ ಮಗುವು ನೋಡುತ್ತಿರುವಂತೆಯೇ ಅಲ್ಲಿಯೇ ಅಂತರ್ಧಾನಹೊಂದಿಬಿಟ್ಟನು. (ಶ್ಲೋಕ 7-11)

ಅನಂತರ ಎಲ್ಲ ಗ್ರಹಗಳೂ ಅನುಕೂಲವಾಗಿ, ಎಲ್ಲ ಸದ್ಗುಣಗಳೂ

ಕೂಡಿ ಸುಫಲಪ್ರದವಾಗಿದ್ದ ಶುಭಸಮಯದಲ್ಲಿ ಪಾಂಡುವಿನ ವಂಶದ ಕುಡಿಯಾದ ಸುಪುತ್ರನ ಜನನವಾಯಿತು. ಆ ಶಿಶುವು ತನ್ನ ತೇಜಸ್ಸು-ಪರಾಕ್ರಮಗಳಿಂದ ಪಾಂಡುಮಹಾರಾಜನೇ ಮತ್ತೆ ಹುಟ್ಟಿಬಂದಂತೆ ಬೆಳಗುತ್ತಿತ್ತು. ಮೊಮ್ಮಗನು ಹುಟ್ಟಿದ ಸಮಾಚಾರವನ್ನು ಕೇಳಿ ಯುಧಿಷ್ಠಿರನ ಮನಸ್ಸಿಗೆ ಬಹಳ ಸಂತೋಷವಾಯಿತು. ಆತನು ಧೌಮ್ಯ-ಕೃಪಾಚಾರ್ಯರೇ ಮುಂತಾದ ಬ್ರಾಹ್ಮಣರಿಂದ ಮಗುವಿಗೆ ಮಂಗಳವಾಚನಮಾಡಿಸಿ ಜಾತಕರ್ಮ ಸಂಸ್ಕಾರವನ್ನು ನೆರವೇರಿಸಿದನು. ದಾನಕ್ಕೆ ಯೋಗ್ಯವಾದ, ಶ್ರೇಷ್ಠವಾದ ದೇಶ-ಕಾಲ-ಪಾತ್ರಗಳಾವುವು-ಎಂಬುದನ್ನರಿತಿದ್ದ ಆ ಮಹಾತ್ಮನು ಹೊಕ್ಕಳು ಕುಡಿ ಕತ್ತರಿಸುವುದಕ್ಕೆ ಮುಂಚೆ ಬರುವ್ವ 'ಪ್ರಜಾತೀರ್ಥ'ವೆಂಬ ಸತ್ಕಾಲದಲ್ಲಿ ಬ್ರಾಹ್ಮಣರಿಗೆ ಸುವರ್ಣ, ಹಸುಗಳು, ಭೂಮಿ, ಗ್ರಾಮ, ಉತ್ತಮ ಜಾತಿಯ ಆನೆ-ಕುದುರೆಗಳು ಮತ್ತು ಅನ್ನ–ಇವುಗಳನ್ನು ದಾನಮಾಡಿದನು. ಅವುಗಳಿಂದ ಸಂತೋಷಗೊಂಡ ಬ್ರಾಹ್ಮಣರು ಮಹಾವೀರ್ಯಶಾಲಿ ಯಾಗಿದ್ದ ಧರ್ಮರಾಜನನ್ನು ಕುರಿತು ಹೀಗೆಂದರು : "ಪುರುವಂಶಶಿರೋಮಣಿಯೇ! ನಿವಾರಿಸಲಸಾಧ್ಯವಾದ ಕಾಲದ ಗತಿಯಂತೆ ಪವಿತ್ರವಾದ ಕುರುವಂಶವು ಇನ್ನೇನು ನಾಶಹೊಂದಿಬಿಡುವುದು ಎನ್ನುವ ಸಮಯದಲ್ಲಿ ಸರ್ವಸಮರ್ಥನಾದ ಭಗವಾನ್ ಮಹಾವಿಷ್ಣುವು ನಿಮ್ಮ ಮೇಲೆ ಕೃಪೆದೋರಿ ನಿಮಗೆ ಈ ಬಾಲಕನನ್ನು ದಯಪಾಲಿಸಿ ಅವನ ಸಂರಕ್ಷಣೆಯನ್ನೂ ಮಾಡಿದ್ದಾನೆ. ಆದ್ದರಿಂದ ಈತನಿಗೆ 'ವಿಷ್ಣುರಾತ'–ವಿಷ್ಣುವಿನಿಂದ ಸಂರಕ್ಷಿತನಾದವನು–ಎಂಬ ಹೆಸರು ದೊರೆಯುತ್ತದೆ. ನಿಸ್ಸಂಶಯವಾಗಿಯೂ ಈ ಬಾಲಕನು ಲೋಕದಲ್ಲಿ ಮಹಾಯಶಸ್ವಿಯೂ ಪರಮಭಗವದ್ಭಕ್ತನೂ ಆದ ಮಹಾಪುರುಷನಾಗುವನು."

ಆಗ ಯುಧಿಷ್ಠಿರನು ಅವರನ್ನು ಕುರಿತು "ಪೂಜ್ಯರೇ! ಈ ಬಾಲಕನು

---

* ಹೊಕ್ಕಳುಕುಡಿಯನ್ನು ಕತ್ತರಿಸುವುದಕ್ಕೆ ಮೊದಲು ಸೂತಕ ಇರುವುದಿಲ್ಲ. 'ಯಾವನ್ನ ಛಿದ್ಯತೇ ನಾಳಂ ತಾವನ್ನಾಪ್ನೋತಿ ಸೂತಕಮ್ । ಛಿನ್ನೇ ನಾಳೇ ತತಃ ಪಶ್ಚಾತ್ ಸೂತಕಂ ತು ವಿಧೀಯತೇ ॥' ಈ ಸಮಯಕ್ಕೆ ಪ್ರಜಾತೀರ್ಥವೆಂದು ಹೆಸರು. ಈ ಸಮಯದಲ್ಲಿ ಕೊಡುವ ದಾನಕ್ಕೆ ಅಕ್ಷಯವಾದ ಫಲವುಂಟೆಂದು ಸ್ಮೃತಿಗಳು ಹೇಳುತ್ತವೆ. 'ಪುತ್ರೇ ಜಾತೇ ವ್ಯತೀಪಾತೇ ದತ್ತಂ ಭವತಿ ಚಾಕ್ಷಯಮ್.'

ತನ್ನ ಉಜ್ಜ್ವಲವಾದ ಕೀರ್ತಿಯಿಂದ ನಮ್ಮ ವಂಶದ ಪುಣ್ಯಶ್ಲೋಕರಾದ, ಮಹಾತ್ಮರಾದ ರಾಜರ್ಷಿಗಳನ್ನು ಅನುಸರಿಸುತ್ತಾನಷ್ಟೇ?"–ಎಂದು ಕೇಳಲು ಅವರು ಹೀಗೆ ಉತ್ತರಕೊಟ್ಟರು : "ಎಲೈ ಕುಂತೀನಂದನನೇ! ಈತನು ಮನುಪುತ್ರನಾದ ಇಕ್ಷ್ವಾಕುಮಹಾರಾಜನಂತೆ ತನ್ನ ಪ್ರಜೆಗಳನ್ನು ಪಾಲಿಸುವನು ಮತ್ತು ದಶರಥಕುಮಾರನಾದ ಶ್ರೀರಾಮನಂತೆ ಬ್ರಾಹ್ಮಣಭಕ್ತನೂ– ಸತ್ಯಪ್ರತಿಜ್ಞನೂ ಆಗುವನು. ಉಶೀನರದ ಅರಸನಾದ ಶಿಬಿಯಂತೆ ಕೊಡುಗೈ ಯುಳ್ಳವನೂ–ಶರಣಾಗತವತ್ಸಲನೂ ಆಗುವನು ಮತ್ತು ಯಜ್ಞವನ್ನಾಚರಿ ಸುವವರಲ್ಲಿ ದುಷ್ಯಂತಪುತ್ರನಾದ ಭರತಚಕ್ರವರ್ತಿಗೆ ಸಾಟಿಯಾಗಿ ತನ್ನ ವಂಶದ ಕೀರ್ತಿಯನ್ನು ಹಬ್ಬಿಸುವನು. ಬಿಲ್ಗಾರರಲ್ಲಿ ಕಾರ್ತವೀರ್ಯಾರ್ಜುನ ನಿಗೂ, ತನ್ನ ತಾತನಾದ ಅರ್ಜುನನಿಗೂ ಸಮನೆನಿಸುವನು. ಅಗ್ನಿಯಂತೆ ಎದುರಿಸಲು ಅಶಕ್ಯವಾದ ಪ್ರತಾಪವುಳ್ಳವನೂ, ಸಮುದ್ರದಂತೆ ಅತಿಕ್ರಮಿಸಲು ಅಸಾಧ್ಯನೂ ಆಗುವನು. ಸಿಂಹದಂತೆ ಮಹಾಪರಾಕ್ರಮಿಯೂ, ಹಿಮಾಲಯದಂತೆ ಸರ್ವರಿಗೂ ಆಶ್ರಯನೂ, ಭೂದೇವಿಯಂತೆ ಕ್ಷಮಾಗುಣಶಾಲಿಯೂ ಮತ್ತು ಪ್ರಜೆಗಳ ವಿಷಯದಲ್ಲಿ ತಾಯಿ-ತಂದೆಗಳಂತೆ ಸಹನಶೀಲನೂ ಆಗುವನು. ಸಮಭಾವದಲ್ಲಿ ಬ್ರಹ್ಮದೇವರಿಗೂ, ಅನುಗ್ರಹಮಾಡುವುದರಲ್ಲಿ ಈಶ್ವರನಿಗೂ, ಸರ್ವಪ್ರಾಣಿಗಳಿಗೂ ಆಸರೆಯನ್ನಿತ್ತು ರಕ್ಷಿಸುವುದರಲ್ಲಿ ಲಕ್ಷ್ಮೀಪತಿಗೂ ಸಮಾನನಾಗುವನು. ಸಮಸ್ತಶ್ರೇಷ್ಠಗುಣಗಳ ಮಾಹಾತ್ಮ್ಯೆಯನ್ನು ಹೊಂದಿರುವ ವಿಷಯದಲ್ಲಿ ಶ್ರೀಕೃಷ್ಣಪರಮಾತ್ಮನನ್ನು ಅನುಸರಿಸುವನು. ರಂತಿದೇವನಂತೆ ಔದಾರ್ಯಗುಣಸಂಪನ್ನನಾಗುವನು. ಯಯಾತಿ ಯಂತೆ ಪರಮಧಾರ್ಮಿಕನಾಗುವನು. ಧೈರ್ಯದಲ್ಲಿ ಬಲಿಚಕ್ರವರ್ತಿಯನ್ನೂ, ಶ್ರೀಕೃಷ್ಣಭಕ್ತಿಯ ನಿಷ್ಠೆಯಲ್ಲಿ ಪ್ರಹ್ಲಾದನನ್ನೂ ಸರಿಹೋಲುವನು. ಅನೇಕ ಅಶ್ವಮೇಧಯಜ್ಞಗಳನ್ನು ಮಾಡುವನು. ಗುರು-ಹಿರಿಯರ ಸೇವೆಯನ್ನು ನಿಷ್ಠೆಯಿಂದ ಮಾಡುವನು. ಈತನ ವಂಶದಲ್ಲಿ ರಾಜರ್ಷಿಗಳು ಜನಿಸುವರು. ಮರ್ಯಾದೆ ಮೀರಿ ನಡೆಯುವವರನ್ನು ಈತನು ದಂಡಿಸುವನು ಮತ್ತು ಭೂಮಿಯಲ್ಲಿ ಧರ್ಮವನ್ನು ಸ್ಥಾಪಿಸುವುದಕ್ಕಾಗಿ ಕಲಿಯನ್ನು ನಿಗ್ರಹಿಸುವನು. ಕಡೆಗೆ ಒಬ್ಬ ಬ್ರಾಹ್ಮಣಪುತ್ರನು ಕೊಡುವ ಶಾಪದಿಂದ ತನಗೆ ತಕ್ಷಕನಿಂದ ಸಾವುಂಟಾಗುವುದೆಂಬುದನ್ನು ತಿಳಿದು ಸರ್ವಸಂಗಪರಿತ್ಯಾಗಮಾಡಿ ಶ್ರೀಹರಿಯ

ಪರಮಪದವನ್ನೇ ಹೊಂದುವನು. ವ್ಯಾಸಪುತ್ರರಾದ ಶುಕಮಹಾಮುನಿಗಳಿಂದ ಆತ್ಮಸ್ವರೂಪದ ಯಥಾರ್ಥಜ್ಞಾನವನ್ನು ಪಡೆದವನಾಗಿ ಕೊನೆಗೆ ಗಂಗಾತೀರದಲ್ಲಿ ದೇಹತ್ಯಾಗಮಾಡಿ ಯಾವ ಭಯಪ್ರಸಂಗವೂ ಇಲ್ಲದ ಮೋಕ್ಷವನ್ನೇ ಪಡೆಯುವನು. ಇದು ಸತ್ಯ." (ಶ್ಲೋಕ 12-28)

ಜ್ಯೋತಿಶ್ಶಾಸ್ತ್ರದಲ್ಲಿ ಪ್ರವೀಣರಾದ ಬ್ರಾಹ್ಮಣರು ಧರ್ಮರಾಜನಿಗೆ ಆ ಬಾಲಕನ ಭವಿಷ್ಯವನ್ನು ತಿಳಿಸಿ ಯಥೋಚಿತವಾದ ಸಂಭಾವನೆಯನ್ನು ಸ್ವೀಕರಿಸಿ ತಮ್ಮ-ತಮ್ಮ ಗೃಹಗಳಿಗೆ ತೆರಳಿದರು. ಆ ರಾಜಕುಮಾರನೇ ಮುಂದೆ "ಪರೀಕ್ಷಿತ್" ಎಂಬ ಹೆಸರಿನಿಂದ ವಿಖ್ಯಾತನಾದನು. ತಾನು ತಾಯಿಯ ಗರ್ಭದಲ್ಲಿದ್ದಾಗ ಸಂದರ್ಶಿಸಿದ್ದ ಪರಮಪುರುಷನನ್ನೇ ಸ್ಮರಣೆಮಾಡುತ್ತಾ–ಆತನು ಯಾರಾಗಿರಬಹುದು? ಎಲ್ಲಿರಬಹುದು?–ಎಂದು ಪರೀಕ್ಷೆಮಾಡುತ್ತಿದ್ದುದರಿಂದ ಆತನಿಗೆ ಆ ಹೆಸರು ಪ್ರಸಿದ್ಧವಾಯಿತು. ಆ ರಾಜಕುಮಾರನು ತನ್ನ ಗುರು-ಹಿರಿಯರಿಂದ ಪೋಷಿಸಲ್ಪಡುತ್ತಾ–ಶುಕ್ಲಪಕ್ಷದಲ್ಲಿ ಪ್ರತಿದಿನವೂ ತನ್ನ ಕಲೆಗಳಿಂದ ಬೆಳವಣಿಗೆ ಹೊಂದುವ ಚಂದ್ರನಂತೆ ಶೀಘ್ರದಲ್ಲಿಯೇ ಬೆಳವಣಿಗೆ ಹೊಂದಿದನು. (ಶ್ಲೋಕ 29-31)

ಅದೇ ಸಮಯದಲ್ಲಿ ಮಹಾರಾಜಯುಧಿಷ್ಠಿರನಿಗೆ ತಾನು ಮಾಡಿದ್ದ ಸ್ವಜನಸಂಹಾರಕ್ಕೆ ಪ್ರಾಯಶ್ಚಿತ್ತವಾಗಿ ಅಶ್ವಮೇಧಯಜ್ಞವನ್ನು ಮಾಡುವ ಮನಸ್ಸುಂಟಾಯಿತು. ಆದರೆ ಅದಕ್ಕೆ ಹಣವನ್ನು ಹೇಗೆ ಹೊಂದಿಸಬೇಕೆಂಬುದೇ ಆತನಿಗೆ ದೊಡ್ಡ ಚಿಂತೆಯಾಯಿತು. ಪ್ರಜೆಗಳಿಂದ ಕಂದಾಯ ಮತ್ತು ದಂಡಗಳ ರೂಪದಲ್ಲಿ ದೊರೆಯುತ್ತಿದ್ದ ಹಣವನ್ನು ಬಿಟ್ಟು ಬೇರಾವ ಹಣವೂ ದೊರೆಯದೇ ಆತನು ಚಿಂತಾಕ್ರಾಂತನಾದನು. ಆಗ ಆತನ ಅಭಿಪ್ರಾಯವನ್ನರಿತ ಶ್ರೀಕೃಷ್ಣಪರಮಾತ್ಮನ ಪ್ರೇರಣೆಯಂತೆ ಆತನ ಸೋದರರು ಉತ್ತರದಿಕ್ಕಿಗೆ ಹೋಗಿ ಅಲ್ಲಿ ಮರುತ್ತರಾಜನೂ* ಮತ್ತು

---

* ಹಿಂದೆ ಮಹಾರಾಜ ಮರುತ್ತನು ಒಂದು ಅದ್ಭುತವಾದ ಮಹಾಯಜ್ಞವನ್ನು ಮಾಡಿದ್ದನು. ಅದರಲ್ಲವನು ಉಪಯೋಗಿಸಿದ್ದ ಎಲ್ಲ ಪಾತ್ರೆಗಳೂ ಸುವರ್ಣಮಯವೇ ಆಗಿದ್ದುವು. ಯಜ್ಞವು ಮುಗಿದನಂತರ ಅವನು ಆ ಪಾತ್ರೆಗಳನ್ನು ಉತ್ತರದಿಕ್ಕಿನಲ್ಲಿ ಎಸೆಯಿಸಿಬಿಟ್ಟಿದ್ದನು. ಆತನು ಆಗ ಬ್ರಾಹ್ಮಣರಿಗೆ ದಾನಮಾಡಿದ ಹಣವೂ ಎಷ್ಟು ಹೆಚ್ಚಾಗಿತ್ತೆಂದರೆ : ಅವರದನ್ನು ಕೊಂಡೊಯ್ಯಲು ಸಾಧ್ಯವಾಗದೇ ಆ ಉತ್ತರ ದಿಕ್ಕಿನಲ್ಲೇ ಬಿಟ್ಟುಹೋದರು. ಇತರರು ಬಿಟ್ಟುಹೋದ ಹಣದ ಮೇಲೆ ರಾಜನಿಗೆ

ಬ್ರಾಹ್ಮಣರೂ ಹಿಂದೆ ಬಿಟ್ಟುಹೋಗಿದ್ದ ಹೇರಳವಾದ ಹಣವನ್ನು ತಂದು ಕೊಟ್ಟರು. ಅದರಿಂದ ಯಜ್ಞದ್ರವ್ಯಗಳನ್ನು ಸಂಪಾದಿಸಿ ಧರ್ಮಭೀರುವಾದ ಧರ್ಮರಾಜನು ಮೂರು ಅಶ್ವಮೇಧಯಜ್ಞಗಳನ್ನು ಆಚರಿಸಿ ತನ್ಮೂಲಕ ಭಗವಂತನನ್ನು ಆರಾಧಿಸಿದನು. ಯುಧಿಷ್ಠಿರನ ಆಹ್ವಾನದಂತೆ ಅಲ್ಲಿಗೆ ದಯಮಾಡಿಸಿದ ಭಗವಂತನು ಬ್ರಾಹ್ಮಣರ ಮೂಲಕ ಅವನಿಂದ ಆ ಯಜ್ಞಗಳನ್ನು ನಡೆಯಿಸಿ ಅವನ ಮನಸ್ಸಂತೋಷಕ್ಕಾಗಿ ಅಲ್ಲಿಯೇ ಕೆಲವು ದಿನಗಳ ಕಾಲ ಉಳಿದುಕೊಂಡನು. ಅನಂತರ ಯಾದವರಿಂದ ಸುತ್ತುವರಿಯಲ್ಪಟ್ಟ ಮಹಾಪ್ರಭುವು ಬಂಧುಸಹಿತನಾದ ಧರ್ಮರಾಜನ ಮತ್ತು ಮಹಾರಾಣಿ ದ್ರೌಪದಿಯ ಅನುಮತಿಯನ್ನು ಪಡೆದು ಅರ್ಜುನನೊಡನೆ ದ್ವಾರಕೆಗೆ ಪ್ರಯಾಣ ಬೆಳೆಸಿದನು.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೧೨ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೧೩ನೆಯ ಅಧ್ಯಾಯ

## ವಿದುರನ ಉಪದೇಶದಂತೆ ಧೃತರಾಷ್ಟ್ರನ ನಿರ್ಯಾಣ

**ವಿದುರಸ್ತೀರ್ಥಯಾತ್ರಾಯಾಂ ಮೈತ್ರೇಯಾದಾತ್ಮನೋ ಗತಿಮ್ ।**
**ಜ್ಞಾತ್ವಾಗಾದ್ಧಾಸ್ತಿನಪುರಂ ತಯಾವಾಪ್ತವಿವಿತ್ಸಿತಃ* ॥೧॥**

ಮಹಾತ್ಮನಾದ ವಿದುರನು ತೀರ್ಥಯಾತ್ರೆಯ ಸಮಯದಲ್ಲಿ ಮೈತ್ರೇಯಮಹರ್ಷಿಗಳಿಂದ ಆತ್ಮಸ್ವರೂಪದ ರಹಸ್ಯವನ್ನು ತಿಳಿದುಕೊಂಡು ಹಸ್ತಿನಾವತಿಗೆ ಹಿಂದಿರುಗಿದನು.

---

ಪೂರ್ಣವಾದ ಅಧಿಕಾರವಿದ್ದುದರಿಂದ ಶ್ರೀಭಗವಂತನು ಆ ಹಣವನ್ನು ತರಿಸಿ ಧರ್ಮರಾಜನಿಂದ ಯಜ್ಞಮಾಡಿಸಿದನು.

(ವಿಜಯಧ್ವಜೀಯದ ಪ್ರಕಾರ ಇದು ಹನ್ನೊಂದನೆಯ ಅಧ್ಯಾಯವಾಗುತ್ತದೆ. ಶ್ರೀಕೃಷ್ಣನ ದ್ವಾರಕಾಗಮನ ಮತ್ತು ದ್ವಾರಕೆಯಲ್ಲಿ ಆತನು ಪಡೆದ ಸತ್ಕಾರಗಳನ್ನು ಸೇರಿಸಿ ಒಟ್ಟು ೭೬ ಶ್ಲೋಕಗಳನ್ನು ೧೦ನೆಯ ಅಧ್ಯಾಯವೆಂದು ಲೆಕ್ಕಿಸಲಾಗಿದೆ.)

* **ತಯಾವಾಪ್ತವಿವಿತ್ಸಿತಃ** = ಆತ್ಮಸ್ವರೂಪವನ್ನು ತಿಳಿದುಕೊಂಡಿದ್ದರಿಂದಲೇ ತಿಳಿಯಬೇಕಾದುದನ್ನೆಲ್ಲಾ ತಿಳಿದವನಾಗಿ. 'ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿದಿತೇ

ಆತ್ಮಸ್ವರೂಪವನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಯಿತಲ್ಲವೇ? ಗೋವಿಂದನಲ್ಲಿ ಅನನ್ಯಭಕ್ತಿಯನ್ನು* ಆತನು ಹೊಂದಿದ್ದನು. ಮೈತ್ರೇಯರು ಆತನು ಕೇಳಿದ್ದ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ನೀಡಿದರು. ಆದ್ದರಿಂದ ಮತ್ತೆ ಯಾವ ಪ್ರಶ್ನೆಯನ್ನೂ ಮಾಡದೇ ಆತನು ಶಾಂತನಾಗಿಬಿಟ್ಟನು. ಆಪ್ತಬಂಧು ವಾದ ಆತನನ್ನು ಕಂಡೊಡನೆಯೇ ಸೋದರಸಹಿತನಾದ ಧರ್ಮರಾಜನು- ಧೃತರಾಷ್ಟ್ರ, ಗಾಂಧಾರಿ, ಯುಯುತ್ಸು, ಸಂಜಯ, ಕೃಪಾಚಾರ್ಯರೂ– ಕುಂತಿ, ಸುಭದ್ರೆ, ಉತ್ತರೆ, ದ್ರೋಣಾಚಾರ್ಯರ ಪತ್ನಿಯಾದ ಕೃಪೀ–ಇವರುಗಳೂ, ಪಾಂಡುವಿನ ಬಂಧುಕುಲದ ಇತರ ಸ್ತ್ರೀಯರೂ, ಜ್ಞಾತಿಗಳೂ ಮತ್ತು ಪುತ್ರಸಹಿತರಾದ ಇತರ ಸ್ತ್ರೀಯರೂ ಅತ್ಯಂತ ಸಂತೋಷದಿಂದ ಆತನನ್ನೆದುರುಗೊಂಡರು. ಮೃತಶರೀರಕ್ಕೆ ಆತ್ಮವು ಮರಳಿಬಂದಿತೋ–ಎಂಬಂತೆ ಮಹಾಸಂತೋಷದಿಂದ ಆತನನ್ನು ಸ್ವಾಗತಿಸಿ ದರು. ಯಥೋಚಿತವಾಗಿ ಆಲಿಂಗನೆ ಮತ್ತು ನಮಸ್ಕಾರಗಳೊಡನೆ ಆತನನ್ನು ಬರಮಾಡಿಕೊಂಡರು. ಅಲ್ಲಿಯವರೆಗೂ ಆತನ ಅಗಲಿಕೆಯಿಂದ ಉಂಟಾಗಿದ್ದ ದುಃಖದಿಂದ ಮಹಾಕಳವಳಗೊಂಡಿದ್ದ ಅವರೆಲ್ಲರೂ ಆನಂದಬಾಷ್ಪಧಾರೆ ಯನ್ನು ಸುರಿಸಿದರು. ಧರ್ಮರಾಜನೂ ಕೂಡ ಆತನಿಗೆ ಆಸನವನ್ನು ಸಮರ್ಪಿಸಿ ಅಲ್ಲಿ ಸುಖಾಸೀನನಾದ ಆತನಿಗೆ ಪೂಜೆಯನ್ನು ಸಲ್ಲಿಸಿದನು. ಆತನು ಭೋಜನಮಾಡಿ ವಿಶ್ರಾಂತಿಪಡೆದು ಸುಖವಾಗಿ ಕುಳಿತಿದ್ದ ಸಮಯದಲ್ಲಿ ವಿನಯದಿಂದ ತಲೆಬಾಗಿ ಅಲ್ಲಿರುವವರೆಲ್ಲರಿಗೂ ಕೇಳಿಸುವಂತೆ ಆತನನ್ನು ಹೀಗೆ ಪ್ರಶ್ನಿಸಿದನು. (ಶ್ಲೋಕ 2-7)

---

ಇದಂ ಸರ್ವಂ ವಿಜ್ಞಾತಂ ಭವತಿ'–ಆತ್ಮಗತಿಯಾದ ಶ್ರೀಹರಿಯಿಂದಲೇ ತನಗೆ ತಿಳಿಯಲು ಇಷ್ಟವಾದುದನ್ನೆಲ್ಲಾ ತಿಳಿದವನಾಗಿ. (ಶ್ರೀಧರೀಯ)

ವಿದಿತವೇದ್ಯನಾಗಿ–'ಯೇನಾಶ್ರುತಂ ಶ್ರುತಂ ಭವತಿ ಅಮತಂ ಮತಂ ಅವಿಜ್ಞಾತಂ ವಿಜ್ಞಾತಂ ಭವತಿ' (ವೀರರಾಘವೀಯ)

ಆ ಪರಮಾತ್ಮವಿದ್ಯೆಯಿಂದ ತಿಳಿಯಲು ಇಷ್ಟವಾದುದನ್ನು ತಿಳಿದು (ವಿಜಯಧ್ವಜೀಯ)

* ಜಾತೈಕಭಕ್ತಿರ್ಗೋವಿನ್ದೇ = ತತ್ತ್ವಜ್ಞಾನದಿಂದ ಗೋವಿಂದನಲ್ಲಿ ಪ್ರಧಾನವಾದ ಭಕ್ತಿಯನ್ನು ಪಡೆದ. ಇದರಿಂದ ಭಕ್ತಿ-ಜ್ಞಾನಗಳು ಅನ್ಯೋನ್ಯವಾಗಿ ಕರಣವಾಗುತ್ತವೆಯೆಂದು ಸೂಚಿತವಾಗುತ್ತದೆ. (ವಿಜಯಧ್ವಜೀಯ)

ಏಕಭಕ್ತಿಯುಂಟಾದ್ದರಿಂದ ಕೃತಕೃತ್ಯನಾಗಿ. (ಶ್ರೀಧರೀಯ) (ಶ್ಲೋಕ ೨)

"ಪೂಜ್ಯರೇ! ಕೌರವರು ನಮ್ಮ ಮೇಲೆ ಪ್ರಯೋಗಮಾಡಿದ ವಿಷ, ಅರಗಿನ ಮನೆಯ ಅಗ್ನಿಪ್ರಕರಣ-ಇವೇ ಮುಂತಾದ ವಿಪತ್ತುಗಳ ಪರಂಪರೆ ಯಿಂದ ನಮ್ಮನ್ನೂ, ನಮ್ಮ ತಾಯಿಯನ್ನೂ ಕಾಪಾಡಿದಿರಿ. ಹೀಗೆ ನಿಮ್ಮ ಪ್ರೀತಿ-ಅಭಿಮಾನಗಳ ನೆರಳಿನಲ್ಲೇ ಬೆಳೆದು ದೊಡ್ಡವರಾದ ನಮ್ಮನ್ನು ನೆನಪು ಮಾಡಿಕೊಳ್ಳುತ್ತಿದ್ದೀರಷ್ಟೇ! ತೀರ್ಥಯಾತ್ರೆಯ ಸಮಯದಲ್ಲಿ ಭೂಮಿಯಲ್ಲಿ ಸಂಚರಿಸುತ್ತಿರುವಾಗ ಹೇಗೆ ಜೀವನ ನಿರ್ವಹಿಸಿದಿರಿ? ಯಾವ ಯಾವ ಮುಖ್ಯವಾದ ಕ್ಷೇತ್ರಗಳಿಗೂ-ತೀರ್ಥಗಳಿಗೂ ಹೋಗಿ ಸೇವನೆಮಾಡಿದಿರಿ?

**ಭವದ್ವಿಧಾ ಭಾಗವತಾಸ್ತೀರ್ಥಭೂತಾಃ ಸ್ವಯಂ ವಿಭೋ ।**
**ತೀರ್ಥೀಕುರ್ವನ್ತಿ ತೀರ್ಥಾನಿ ಸ್ವಾನ್ತಃಸ್ಥೇನ ಗದಾಭೃತಾ ॥೧೦॥**

ಪ್ರಭುಗಳೇ! ನಿಮ್ಮಂತಹ ಭಾಗವತರು ಸ್ವತಃ ಪವಿತ್ರತೀರ್ಥ ಸ್ವರೂಪರೇ ಆಗಿದ್ದೀರಿ. ತೀರ್ಥಗಳಿಗೆ ದಯಮಾಡಿಸಿದಾಗ ಅವುಗಳನ್ನು- ಹೃದಯಸ್ಥನಾದ ಗದಾಧರನ ಪ್ರಭಾವದಿಂದ-ನಿಜವಾಗಿಯೂ ತೀರ್ಥವನ್ನಾಗಿಸುವವರು ನೀವು.

ಚಿಕ್ಕಪ್ಪನವರೇ! ನಮ್ಮ ಮಿತ್ರರೂ-ಬಂಧುಗಳೂ ಆಗಿ, ಶ್ರೀಕೃಷ್ಣನನ್ನೇ ದೈವವನ್ನಾಗಿ ಭಾವಿಸುತ್ತಿರುವ ಯಾದವರೆಲ್ಲರೂ ತಮ್ಮ ನಗರಿಯಲ್ಲಿ ಸುಖ ವಾಗಿದ್ದಾರಷ್ಟೇ? ಅವರನ್ನು ನೇರವಾಗಿ ನೋಡಿದ್ದೀರಾ? ಅಥವಾ ಅವರ ಸಮಾಚಾರವು ಕಿವಿಗೆ ಬಿದ್ದಿದೆಯೇ?"-ಎಂದು ಕೇಳಿದನು.

ಸೂತಪುರಾಣಿಕರು ಹೇಳುತ್ತಾರೆ :

"ಧರ್ಮರಾಜನ ಪ್ರಶ್ನೆಗಳಿಗೆ ಉತ್ತರವಾಗಿ ವಿದುರನು ತಾನು ಕಂಡು- ಕೇಳಿದ್ದಂತೆಯೇ ಎಲ್ಲ ವಿಷಯಗಳನ್ನೂ ಕ್ರಮವಾಗಿ ವರ್ಣಿಸಿದನು. ಆದರೆ ಕರುಣಾಪೂರ್ಣಹೃದಯನಾದ ಆತನು ಇಡೀ ಯದುಕುಲವು ನಾಶಹೊಂದಿದ ವಿಷಯವೊಂದನ್ನು ಮಾತ್ರ ತಿಳಿಸಲಿಲ್ಲ. ಆ ಸಮಾಚಾರವನ್ನು ಕೇಳಿದ ಪಾಂಡ ವರು ತನ್ನ ಕಣ್ಣೆದುರಿಗೇ ಸಂಕಟಪಡುವುದನ್ನು ನೋಡುವುದು ಆತನಿಗೆ

ಶಕ್ಯವಾಗಿರಲಿಲ್ಲ. ಆದುದರಿಂದ ಆತನು ವಿಧಿವಿಲಾಸದಿಂದ ಅವರಿಗೆ ತಾನಾ ಗಿಯೇ ಒದಗಿಬಂದಿದ್ದ, ಸಹಿಸಲಸಾಧ್ಯವೂ, ಅತ್ಯಂತ ಅಪ್ರಿಯವೂ ಆಗಿದ್ದ ಆ ವೃತ್ತಾಂತವನ್ನು ತಿಳಿಸಲಿಲ್ಲ. ಅದು ಎಂದಾದರೊಂದು ದಿನ ತಾನಾಗಿಯೇ ತಿಳಿದುಬರುವ ಸಮಾಚಾರವಷ್ಟೇ! (ಶ್ಲೋಕ 11-31)

ಅನಂತರ ವಿದುರನು ತನ್ನವರಾದ ಪಾಂಡವರಿಂದ ಸತ್ಕರಿಸಲ್ಪಡುತ್ತಾ, ಹಿರಿಯಣ್ಣನಾದ ಧೃತರಾಷ್ಟ್ರನಿಗೆ ಶ್ರೇಯಸ್ಸನ್ನು ಬಯಸುತ್ತಾ ಕೊಂಚ ಕಾಲದವರೆಗೂ ಹಸ್ತಿನಾವತಿಯಲ್ಲೇ ಇದ್ದನು. ಆತನು ಸಾಕ್ಷಾತ್ ಯಮಧರ್ಮರಾಜನ ಅವತಾರವೇ ಅಲ್ಲವೇ? ಮಾಂಡವ್ಯಮಹರ್ಷಿಗಳ ಶಾಪದಂತೆ ನೂರು ವರ್ಷಗಳ ಕಾಲ ಯಮಧರ್ಮರಾಜನೇ ಶೂದ್ರಯೋನಿ ಯಲ್ಲಿ ಜನಿಸಿ ಮಹಾತ್ಮನಾದ ವಿದುರನ ರೂಪದಲ್ಲಿದ್ದನು.* ಅಲ್ಲಿಯವರೆಗೂ ಅವನ ತಂದೆಯಾದ ಸೂರ್ಯದೇವನೇ ಪಾಪಿಗಳಿಗೆ ದಂಡನೆಯನ್ನು ವಿಧಿಸುವ ಯಮನ ಅಧಿಕಾರವನ್ನು ನಿರ್ವಹಿಸುತ್ತಿದ್ದನು.

ಧರ್ಮರಾಜನಿಗೆ ಕಳೆದುಹೋಗಿದ್ದ ರಾಜ್ಯವು ಮರಳಿ ದೊರಕಿತ್ತು. ಕುಲದ ಕುಡಿಯಾಗಿದ್ದ ಮೊಮ್ಮಗನು ಬೆಳೆಯುತ್ತಿದ್ದನು. ಲೋಕಪಾಲರಿಗೆ ಸಮರಾಗಿದ್ದ ಸಹೋದರರ ಸೇವೆ-ಸಹಕಾರಗಳ ಸೌಭಾಗ್ಯವನ್ನೂ ಅವನು

---

* ಹಿಂದೊಮ್ಮೆ ಧ್ಯಾನಾಸಕ್ತರಾಗಿದ್ದ ಮಾಂಡವ್ಯಮಹರ್ಷಿಗಳ ಆಶ್ರಮದಲ್ಲಿ ಕೆಲವು ಡಕಾಯಿತರು ರಾಜಪುರುಷರ ಕೈಗೆ ಸಿಕ್ಕಿಬಿದ್ದರು. ಡಕಾಯಿತರ ಕೆಲಸದಲ್ಲಿ ಮಾಂಡವ್ಯ ಮಹರ್ಷಿಗಳದೂ ಪಾತ್ರವಿರಬೇಕೆಂದು ಭಾವಿಸಿದ ರಾಜನು ಅವರಿಗೆ ಶೂಲಕ್ಕೇರಿಸುವ ದಂಡನೆಯನ್ನು ವಿಧಿಸಿದನು. ತನ್ನ ತಪ್ಪನ್ನು ತಿಳಿದೊಡನೆಯೇ ರಾಜನು ಮಹರ್ಷಿ ಗಳನ್ನು ಶೂಲದಿಂದಿಳಿಸಿ ಅವರಲ್ಲಿ ಕ್ಷಮೆಯನ್ನು ಯಾಚಿಸಿದನು. ಮಾಂಡವ್ಯರು ಯಮಧರ್ಮರಾಜನ ಬಳಿಗೆ ಹೋಗಿ ತಮಗೆ ಯಾವ ಪಾಪಕ್ಕಾಗಿ ಈ ದಂಡನೆಯು ಒದಗಿತೆಂದು ಪ್ರಶ್ನಿಸಲು, ಅವನು "ನೀವು ಬಾಲ್ಯದಲ್ಲಿ ಒಂದು ಚಿಟ್ಟೆಯನ್ನು ದರ್ಭೆಯ ಅಗ್ರದಿಂದ ಚುಚ್ಚಿದ್ದಕ್ಕಾಗಿ ನಿಮಗಿಂದು ಈ ಶಿಕ್ಷೆಯೊದಗಿತು"—ಎಂದು ಉತ್ತರಿಸಿದನು. ಆಗ ಮಹರ್ಷಿಗಳು ಕ್ರುದ್ಧರಾಗಿ "ನಾನು ಬಾಲ್ಯದಲ್ಲಿ ಅರಿಯದೇ ಅಪರಾಧ ಮಾಡಿರಬಹುದು. ಅದೂ ಅಲ್ಲದೇ ಆ ಸಣ್ಣ ಅಪರಾಧಕ್ಕಾಗಿ ಇಷ್ಟೊಂದು ಕಠೋರವಾದ ಶಿಕ್ಷೆಯನ್ನು ವಿಧಿಸಿದ್ದೀಯಾದ್ದರಿಂದ ನೀನು ನೂರು ವರ್ಷಗಳ ಕಾಲ ಶೂದ್ರಯೋನಿಯಲ್ಲಿರು"—ಎಂದು ಅವನಿಗೆ ಶಾಪವನ್ನು ಕೊಟ್ಟರು.

ಅನುಭವಿಸುತ್ತಿದ್ದನು. ಇಂತಹ ಅಪಾರವಾದ ಸುಖ-ಸಂಪತ್ತುಗಳಿಂದ ಮೆರೆಯುತ್ತಾ ಆತನು ಆನಂದವಾಗಿದ್ದನು. ಹೀಗೆ ಗೃಹಸ್ಥಜೀವನದ ಕಾರ್ಯಗಳಲ್ಲಿ ಆಸಕ್ತರಾಗಿ ಮೈಮರೆತಿದ್ದ ಪಾಂಡವರಿಗೆ ಅವರು ನೋಡುತ್ತಿದ್ದಂತೆಯೇ ಯಾವುದನ್ನು ಯಾರೂ ಅತಿಕ್ರಮಿಸಲಾರರೋ ಅಂತಹ ಕಾಲವು ಹತ್ತಿರ ಬಂದುಬಿಟ್ಟಿತು. (ಶ್ಲೋಕ 14-17)

ಆಗ ಕಾಲದ ಗತಿಯನ್ನು ಪರಿಶೀಲಿಸಿದ ವಿದುರನು ಅಣ್ಣನಾದ ಧೃತರಾಷ್ಟ್ರನ ಬಳಿಗೆ ಹೋಗಿ ಹೀಗೆಂದನು : "ಮಹಾರಾಜ! ಅತಿಭಯಂಕರವಾದ ಕಾಲವು ಬಂದುಬಿಟ್ಟಿದೆ. ಆದುದರಿಂದ ನೀನು ಶೀಘ್ರವಾಗಿ ಇಲ್ಲಿಂದ ಹೊರಟುಬಿಡು. ಪ್ರಭೋ! ಯಾವುದಕ್ಕೆ ಯಾರೂ–ಹೇಗೂ ಪ್ರತಿಕ್ರಿಯೆ ಮಾಡಲಾರರೋ, ಯಾವುದನ್ನು ತಡೆಯಲೂ, ಬದಲಾಯಿಸಲೂ, ಪರಿಹರಿಸಲೂ ಯಾರಿಗೂ–ಹೇಗೂ ಸಾಧ್ಯವಾಗುವುದಿಲ್ಲವೋ–ಅಂತಹ ಕಾಲರೂಪಿಯಾದ ಭಗವಂತನು ನಮ್ಮೆಲ್ಲರ ಬಳಿಗೂ ಬಂದುಬಿಟ್ಟಿರುವನು. ಕಾಲಕ್ಕೆ ವಶನಾಗಿ ಜೀವನು ತನಗೆ ಪ್ರಿಯತಮವಾಗಿರುವ ಪ್ರಾಣಗಳನ್ನೂ ತೊರೆಯಬೇಕಾಗಿರುವಾಗ ಇನ್ನು, ಹಣ, ಜನ–ಮುಂತಾದ ಇತರ ವಸ್ತುಗಳ ವಿಷಯದಲ್ಲಿ ಹೇಳುವುದೇನಿದೆ? ನಿನ್ನ ತಂದೆ, ಸೋದರ, ಮಿತ್ರರು, ಪುತ್ರರು–ಇವರೆಲ್ಲರೂ ಹತರಾಗಿಬಿಟ್ಟರು. ನಿನಗೂ ತುಂಬಾ ವಯಸ್ಸಾಗಿದ್ದು ಶರೀರವು ಮುಪ್ಪಿಗೆ ಬಲಿಯಾಗಿದ್ದು ಮತ್ತೊಬ್ಬರ ಮನೆಯಲ್ಲಿ ವಾಸಮಾಡುತ್ತಿದ್ದೀಯೆ. ಅಬ್ಬಾ! ಈ ಪ್ರಾಣಕ್ಕೆ ಹೇಗಾದರಾಗಲೀ ಬದುಕಿರಬೇಕೆಂಬ ಆಸೆ ಎಷ್ಟು ಪ್ರಬಲವಾಗಿದೆ! ಅದಕ್ಕಾಗಿಯೇ ನೀನು, ಭೀಮಸೇನನು ಅಸಡ್ಡೆಯಿಂದ ಹಾಕಿದ ಕೂಳನ್ನು–ಮನೆಕಾಯುವ ನಾಯಿಯು ತಿನ್ನುವಂತೆ–ತಿನ್ನುತ್ತಾ ಬದುಕನ್ನು ಕಳೆಯುತ್ತಿದ್ದೀಯೆ. ಯಾರನ್ನು ನೀನಂದು ಬೆಂಕಿಯಲ್ಲಿ ಹಾಕಿ ಸುಟ್ಟುಹಾಕಲು ಬಯಸಿದೆಯೋ, ವಿಷವನ್ನಿಕ್ಕಿ ಸಾಯಿಸಲು ಬಯಸಿದೆಯೋ, ತುಂಬಿದ ಸಭೆಯಲ್ಲಿ ಯಾರ ಪತ್ನಿಗೆ ಅಪಮಾನಮಾಡಿದೆಯೋ, ಯಾರ ಹಣ, ಭೂಮಿ-ಕಾಣಿಗಳನ್ನು ಕಿತ್ತುಕೊಂಡೆಯೋ–ಇಂದು ಅವರೇ ಹಾಕಿದ ಕೂಳಿನಿಂದ ಬದುಕಿರುವ ಪ್ರಾಣ ಏತಕ್ಕಾಗಿರಬೇಕು? ದೈನ್ಯದಿಂದಲಾದರೂ ಬದುಕಿರಬೇಕೆಂದು ನೀನಾಶಿಸುತ್ತಾ ಕಷ್ಟಪಡುತ್ತಿದ್ದರೂ ನಿನ್ನ ಈ ಶರೀರವು ಕ್ರಮ-ಕ್ರಮವಾಗಿ ಮುಪ್ಪಿನಿಂದ ಹಳೆಯ ವಸ್ತ್ರದಂತೆ ಜೀರ್ಣವಾಗಿಬಿಟ್ಟಿದೆ.

ನೀನಿಷ್ಟಪಡದಿದ್ದರೂ ಕ್ಷೀಣಿಸುತ್ತಿದೆ. ಹೀಗೆ ಯಾವ ಪ್ರಯೋಜನಕ್ಕೂ ಬಾರದಿರುವ ಈ ದೇಹಬಂಧನದಲ್ಲಿ ಏಕೆ ಸಿಕ್ಕಿಹಾಕಿಕೊಳ್ಳುತ್ತಿದ್ದೀಯೆ? ಇದರಲ್ಲಿರುವ ಮಮತಾಬಂಧನವನ್ನು ಕಡಿದುಹಾಕು. ಯಾವನು ಎಲ್ಲ ಸಾಂಸಾರಿಕಮಿತ್ರರನ್ನೂ ಬಿಟ್ಟು ವಿರಕ್ತನಾಗಿ ಯಾರಿಗೂ ತಿಳಿಯದ ರೀತಿಯಲ್ಲಿ ತನ್ನ ಶರೀರವನ್ನು ತ್ಯಾಗಮಾಡಿಬಿಡುತ್ತಾನೆಯೋ–ಅವನೇ ನಿಜವಾಗಿಯೂ ಧೀರನೆನಿಸುವನು. ಯಾವನು ತನ್ನ ಸ್ವಂತ ತಿಳಿವಳಿಕೆಯ ಪ್ರೇರಣೆಯಿಂದಾಗಲೀ ಅಥವಾ ಇತರರ ಸಲಹೆಯಿಂದಾಗಲೀ ಈ ಸಂಸಾರವನ್ನು ದುಃಖರೂಪವೆಂದು ತಿಳಿದು ಇದರಲ್ಲಿ ವಿರಕ್ತನಾಗುತ್ತಾನೆಯೋ ಮತ್ತು ತನ್ನ ಅಂತಃಕರಣವನ್ನು ವಶಪಡಿಸಿಕೊಂಡು ಹೃದಯದಲ್ಲಿ ಭಗವಂತನನ್ನು ಧರಿಸಿ ಸಂನ್ಯಾಸಿಯಾಗಿ ಮನೆಯಿಂದ ಹೊರಟುಬಿಡುತ್ತಾನೆಯೋ–ಆತನೇ ಉತ್ತಮ ಪುರುಷನು. ಇನ್ನು ಮುಂಬರಲಿರುವ ಕಾಲವು ಪ್ರಾಯಶಃ ಮನುಷ್ಯರ ಗುಣಗಳ ಮಟ್ಟವನ್ನಿಳಿಸುವುದೇ ಆಗಿದೆ. ಆದುದರಿಂದ ನೀನು ನಿನ್ನ ಕುಟುಂಬದವರಿಗೆ ತಿಳಿಯದಂತೆ ಗುಟ್ಟಾಗಿ ಉತ್ತರದಿಕ್ಕಿನ ಕಡೆಗೆ ಹೊರಟುಬಿಡು."

(ಶ್ಲೋಕ 18-27)

ತಮ್ಮನಾದ ವಿದುರನ ಬೋಧನೆಯಿಂದ ಧೃತರಾಷ್ಟ್ರನ ಜ್ಞಾನದ ಕಣ್ಣು ತೆರೆಯಿತು. ಹೊರಗಣ್ಣಿನಿಂದ ಕುರುಡನಾದರೂ ಆತನು ವಿವೇಕದೃಷ್ಟಿಯುಳ್ಳವನಾಗಿ ನೆಂಟರಿಷ್ಟರಲ್ಲಿಟ್ಟಿದ್ದ ದೃಢವಾದ ಸ್ನೇಹಪಾಶಗಳನ್ನು ಕತ್ತರಿಸಿಹಾಕಿದವನಾಗಿ ತಮ್ಮನು ಬೋಧಿಸಿದ ದಾರಿಯನ್ನನುಸರಿಸಿ ಹೊರಟುಬಿಟ್ಟನು. ಹಾಗೆ ಹೊರಡುತ್ತಿದ್ದ ಪತಿಯನ್ನನುಸರಿಸಿ ಸಾಧ್ವೀಮಣಿಯಾದ ಆತನ ಪತ್ನಿ ಗಾಂಧಾರಿಯೂ ಹೊರಟಳು. ಶೂರನಿಗೆ ಧರ್ಮಯುದ್ಧದಲ್ಲಿ ಬೀಳುವ ಏಟುಗಳೂ ಹೇಗೆ ಸಂತೋಷವನ್ನುಂಟುಮಾಡುತ್ತವೆಯೋ–ಹಾಗೆ ಹಿಂಸೆ-ದ್ರೋಹ-ದಂಡನೆಗಳನ್ನು ತ್ಯಜಿಸಿದ, ಶಾಂತರಾದ, ಕಷ್ಟಸಹಿಷ್ಣುಗಳಾದ ಸಂನ್ಯಾಸಿಗಳಿಗೆ ಸಂತೋಷವನ್ನುಂಟುಮಾಡುವ ಹಿಮಾಲಯ ಪರ್ವತಕ್ಕೆ ಸರ್ವಸಂಗಪರಿತ್ಯಾಗಿಯಾಗಿ ಹೊರಟ ಆತನನ್ನು ಆಕೆಯು ಹಿಂಬಾಲಿಸಿದಳು.

(ಶ್ಲೋಕ 28-29)

ಅಜಾತಶತ್ರುವಾದ ಮಹಾತ್ಮನಾದ ಧರ್ಮರಾಜನು ಪ್ರತಿನಿತ್ಯದಂತೆ ಪ್ರಾತಃಕಾಲದ ಸಂಧ್ಯಾವಂದನೆ-ಅಗ್ನಿಹೋತ್ರಗಳನ್ನು ಮುಗಿಸಿಕೊಂಡು

ಬ್ರಾಹ್ಮಣರಿಗೆ ನಮಸ್ಕಾರಮಾಡಿ ಅವರಿಗೆ ಎಳ್ಳು, ಗೋವು, ಭೂಮಿ ಮತ್ತು ಸುವರ್ಣಗಳನ್ನು ದಾನಮಾಡಿದನು. ಅನಂತರ ಗುರು-ಹಿರಿಯರನ್ನು ವಂದಿಸುವುದಕ್ಕಾಗಿ ಅರಮನೆಯೊಳಗೆ ಹೋಗಲು ಅಲ್ಲಿ ಧೃತರಾಷ್ಟ್ರ, ಗಾಂಧಾರಿ ಮತ್ತು ವಿದುರರು ಕಾಣಿಸಲಿಲ್ಲ. ಅದರಿಂದ ಕಳವಳಗೊಂಡ ಧರ್ಮರಾಜನು ಅಲ್ಲೇ ಕುಳಿತಿದ್ದ ಸಂಜಯನನ್ನು–"ಸಂಜಯ! ವೃದ್ಧರೂ-ಅಂಧರೂ ಆದ ನನ್ನ ದೊಡ್ಡಪ್ಪ ಎಲ್ಲಿದ್ದಾರೆ? ಪುತ್ರಶೋಕದಿಂದ ಪೀಡಿತಳಾಗಿ ಕೊರಗುತ್ತಿದ್ದ ದೊಡ್ಡಮ್ಮ ಗಾಂಧಾರಿಯಾದರೂ ಎಲ್ಲಿ? ನನ್ನ ಪರಮ ಹಿತೈಷಿಯಾದ ಚಿಕ್ಕಪ್ಪ ವಿದುರನೆಲ್ಲಿ ಹೋದನು? ಬಂಧು-ಮಿತ್ರರೆಲ್ಲರನ್ನೂ ಕಳೆದುಕೊಂಡು ದುಃಖಮಗ್ನನಾದ ಆ ದೊಡ್ಡಪ್ಪನು ಮೂರ್ಖನಾದ ನನ್ನಲ್ಲಿ ಏನಾದರೂ ತಪ್ಪನ್ನು ಶಂಕಿಸಿ ಶೋಕಭಾವದಿಂದ ಪತ್ನಿಯೊಡನೆ ಗಂಗಾನದಿ ಯಲ್ಲೇನಾದರೂ ಧುಮುಕಿಬಿಟ್ಟನೇ? ನಮ್ಮ ತಂದೆ ಪಾಂಡುವು ಮೃತನಾಗಿ ನಾವಿನ್ನೂ ಶಿಶುಗಳಾಗಿ ಅನಾಥರಾಗಿದ್ದಾಗ ಆ ದೊಡ್ಡಪ್ಪ-ಚಿಕ್ಕಪ್ಪಂದಿರೇ ಅಲ್ಲವೇ ನಮ್ಮನ್ನು ನಾನಾದುಃಖಗಳಿಂದ ಪಾರುಮಾಡಿಸಿ ಪ್ರೀತಿಯಿಂದ ಕಾಪಾ ಡಿದ್ದು? ಅಯ್ಯೋ? ಅವರು ಈಗ ಎಲ್ಲಿ ಹೋದರೋ ತಿಳಿಯಲಿಲ್ಲವಲ್ಲಾ!

(ಶ್ಲೋಕ 30-33)

ಸೂತಪುರಾಣಿಕರು ಹೇಳುತ್ತಾರೆ :

"ಸಂಜಯನೂ ತನ್ನ ಪ್ರಭುವಾದ ಧೃತರಾಷ್ಟ್ರನನ್ನು ಕಾಣದೇ ಕರುಣೆ-ಸ್ನೇಹಗಳಿಂದ ಕುಗ್ಗಿ ಅಗಲಿಕೆಯ ದುಃಖದಿಂದ ಕೊರಗುತ್ತಾ ಯುಧಿಷ್ಠಿರನಿಗೆ ಏನೂ ಉತ್ತರಕೊಡಲಾರದೇ ಹೋದನು. ಅನಂತರ ಕಣ್ಣು ಗಳಿಂದ ಧಾರೆ-ಧಾರೆಯಾಗಿ ಸುರಿಯುತ್ತಿದ್ದ ಕಣ್ಣೀರನ್ನು ಕೈಗಳಿಂದ ಒರೆಸಿ ಕೊಂಡು, ಸ್ವಲ್ಪ-ಸ್ವಲ್ಪವಾಗಿ ತನಗೆ ತಾನೇ ಸಮಾಧಾನತಂದುಕೊಂಡು, ತನ್ನ ಪ್ರಭುವಿನ ಪಾದಗಳನ್ನು ಸ್ಮರಿಸುತ್ತಾ ಯುಧಿಷ್ಠಿರನಿಗೆ ಹೀಗೆಂದನು :

"ಓ ಕುರುಕುಲನಂದನನೇ! ನಿಮ್ಮ ದೊಡ್ಡಪ್ಪ ಮತ್ತು ದೊಡ್ಡಮ್ಮ ನವರ ಸಂಕಲ್ಪವೇನಿತ್ತು? ಅವರೇನು ನಿಶ್ಚಯಮಾಡಿದ್ದರು?–ಎಂಬು ದೇನೂ ನನಗೆ ತಿಳಿಯದು. ಆ ಮಹಾತ್ಮರು ನನಗೆ ಮೋಸಮಾಡಿ ಹೊರಟು ಹೋದರು." ಸಂಜಯನು ಹೀಗೆ ಹೇಳುತ್ತಿರುವಂತೆಯೇ ಅಲ್ಲಿಗೆ ತುಂಬುರು ಸಮೇತರಾದ ಭಗವಾನ್ ದೇವರ್ಷಿ-ನಾರದರು ದಯಮಾಡಿಸಿದರು.

ಯುಧಿಷ್ಠಿರನು ಒಡನೆಯೇ ಸೋದರರೊಡನೆ ಎದ್ದು ಅವರಿಗೆ ನಮಸ್ಕರಿಸಿ ಸತ್ಕಾರಮಾಡಿ "ಓ ಪೂಜ್ಯರೇ! ನನ್ನ ದೊಡ್ಡಪ್ಪ-ಚಿಕ್ಕಪ್ಪ ಇವರುಗಳ ಸಮಾಚಾರ ತಿಳಿಯದೇ ಹೋಗಿದೆ. ಪುತ್ರರ ಸಾವಿನಿಂದ ಕೊರಗುತ್ತಿದ್ದ, ದೀನಳಾಗಿದ್ದ ದೊಡ್ಡಮ್ಮನಾದರೂ ಎಲ್ಲಿಗೆ ಹೋದಳೋ ತಿಳಿಯುತ್ತಿಲ್ಲ. ಮಹಾತ್ಮರೇ! ಈ ಸಮಯದಲ್ಲಿ ಅಪಾರವಾದ ಸಮುದ್ರದಲ್ಲಿ ದಡತೋರಿಸುವ ನಾವಿಕನಂತೆ–ನೀವು ಇಲ್ಲಿಗೆ ನಮ್ಮ ಭಾಗ್ಯೋದಯದಿಂದ ದಯಮಾಡಿ ಸಿದ್ದೀರಿ"–ಎಂದು ಅರಿಕೆಮಾಡಿಕೊಂಡನು. ಆಗ ಮುನಿಶ್ರೇಷ್ಠರಾದ ಭಗವಾನ್ ನಾರದಮಹರ್ಷಿಗಳು ಹೀಗೆಂದರು :

"ಧರ್ಮರಾಜ! ನೀನು ಯಾರ ವಿಷಯದಲ್ಲೂ ಶೋಕಪಡಬಾರದು. ಏಕೆಂದರೆ: ಜಗತ್ತೆಲ್ಲವೂ ಈಶ್ವರಾಧೀನವಾಗಿದೆ. ಸಮಸ್ತಲೋಕಗಳೂ ಮತ್ತು ಲೋಕಪಾಲರೂ ಆ ಮಹಾಪ್ರಭುವಿನ ಆಣತಿಯಂತೆಯೇ ನಡೆಯುತ್ತಿದ್ದಾರೆ. ಅವನೇ ಎಲ್ಲ ಪ್ರಾಣಿಗಳನ್ನೂ ಅವುಗಳ ಕರ್ಮಗಳಿಗೆ ಅನುಗುಣವಾಗಿ ಕೆಲವೊಮ್ಮೆ ಕೂಡಿಸುವನು ; ಮತ್ತೆ ಕೆಲವೊಮ್ಮೆ ಅಗಲಿಸುವನು.

**ಯಥಾ ಗಾವೋ ನಸಿ ಪ್ರೋತಾಸ್ತನ್ತ್ಯಾಂ ಬದ್ಧಾಃ ಸ್ವದಾಮಭಿಃ ।**
**ವಾಕ್ತನ್ತ್ಯಾಂ ನಾಮಭಿರ್ಬದ್ಧಾ ವಹನ್ತಿ ಬಲಿಮೀಶಿತುಃ ॥೪೧॥**

**ಯಥಾ ಕ್ರೀಡೋಪಸ್ಕರಾಣಾಂ ಸಂಯೋಗವಿಗಮಾವಿಹ ।**
**ಇಚ್ಛಯಾ ಕ್ರೀಡಿತುಃ ಸ್ಯಾತಾಂ ತಥೈವೇಶೇಚ್ಛಯಾ ನೃಣಾಮ್ ॥೪೨॥**

ಎತ್ತುಗಳು ಮೂಗಿನಲ್ಲಿ ಪೋಣಿಸಿದ ಮೂಗುದಾರಗಳಿಗೂ, ಇತರ ಕಡೆಗಳಲ್ಲಿ ದಪ್ಪಹಗ್ಗಗಳಿಗೂ ಕಟ್ಟುಬಿದ್ದು ಅಲುಗಾಡುವುದಕ್ಕೂ ಸ್ವಾತಂತ್ರ್ಯ ವಿಲ್ಲದೇ ಯಜಮಾನನ ಆಜ್ಞೆಯಂತೆಯೇ ನಡೆಯುವುದಿಲ್ಲವೇ? ಹಾಗೆಯೇ ನಾಮ-ರೂಪಗಳೆಂಬ ಪಾಶಗಳಿಂದ, ಮಾತುಗಳೆಂಬ ತಂತಿಗಳಲ್ಲಿ ಬಿಗಿ ಯಾಗಿ ಕಟ್ಟಿಹಾಕಲ್ಪಟ್ಟಿರುವ ಈ ಪ್ರಾಣಿವರ್ಗಗಳೂ ಆತನ ಆಣತಿ ಯಂತೆಯೇ ನಡೆಯುತ್ತವೆ. ಈ ಲೋಕದಲ್ಲಿ ಆಟಗಾರನ ಇಷ್ಟದಂತೆಯೇ ಆಟದ ಸಾಮಾನುಗಳು ಒಟ್ಟುಗೂಡುತ್ತವೆ ಮತ್ತು ಬೇರ್ಪಡುತ್ತವೆಯಲ್ಲವೇ? ಹಾಗೆಯೇ ಆ ಈಶ್ವರನ ಇಚ್ಛೆಯಿಂದಲೇ ಮನುಷ್ಯರ ಸೇರುವಿಕೆ ಮತ್ತು ಅಗಲಿಕೆ–ಇವೆಲ್ಲಾ ಉಂಟಾಗುವುದು.

ಹೀಗೆ ಇದೆಲ್ಲಾ ಈಶ್ವರನ ಕೈವಾಡವೆಂಬುದನ್ನು ಭಾವಿಸದೇ ಒಂದು ಪಕ್ಷ ನೀನು ಈ ಲೋಕವೆಲ್ಲವೂ ಹೀಗೆ ಸ್ವಾಭಾವಿಕವಾಗಿಯೇ ಶಾಶ್ವತವಾಗಿದೆ ಅಥವಾ ಅಶಾಶ್ವತವಾಗಿದೆ ಅಥವಾ ಎರಡೂ ಅಲ್ಲವಾಗಿದೆ–ಎಂದು ತಿಳಿದು ಕೊಂಡರೂ ಕೂಡ ವಾಸ್ತವವಾಗಿ ಶೋಕಕ್ಕೆ ಏನೂ ಕಾರಣವಿಲ್ಲ. ಅಜ್ಞಾನ ಮೂಲವಾದ ಸ್ನೇಹಪಾಶವೊಂದೇ ಇದಕ್ಕೆ ಕಾರಣ. ಯಾರ ವಿಷಯ ವಾಗಿಯೂ–ಹೇಗೂ ಶೋಕಪಡಬಾರದು. ಆದುದರಿಂದ, ಅಪ್ಪಾ ಯುಧಿಷ್ಠಿರ! 'ಅನಾಥರೂ, ದೀನರೂ ಆಗಿರುವ ಅವರು ನನ್ನನ್ನು ಬಿಟ್ಟು ಹೇಗೆ ತಾನೇ ಬದುಕಿಯಾರು?'–ಎಂಬ ಮನಸ್ಸಿನ ಕೊರಗನ್ನು ಬಿಡು. ಅದು ಅಜ್ಞಾನಮೂಲವಾದುದು.

**ಕಾಲಕರ್ಮಗುಣಾಧೀನೋ ದೇಹೋಽಯಂ ಪಾಞ್ಚಭೌತಿಕಃ ।**
**ಕಥಮನ್ಯಾಂಸ್ತು ಗೋಪಾಯೇತ್ಸರ್ಪಗ್ರಸ್ತೋ ಯಥಾ ಪರಮ್ ॥**

ಹೆಬ್ಬಾವಿನ ಬಾಯಲ್ಲಿ ಸಿಕ್ಕಿಬಿದ್ದಿರುವ ಒಬ್ಬನು ಮತ್ತೊಬ್ಬನನ್ನು ಹೇಗೆ ಕಾಪಾಡಿಯಾನು? ಹಾಗೆಯೇ ಭೀಕರವಾಗಿರುವ ಕಾಲಕ್ಕೂ, ಕರ್ಮಗಳಿಗೂ, ತ್ರಿಗುಣಗಳ ಚಕ್ರಕ್ಕೂ ಸಿಕ್ಕಿ ಕಷ್ಟಪಡುತ್ತಿರುವ ಈ ಪಂಚಭೂತಮಯವಾದ ದೇಹವು ಮತ್ತೊಬ್ಬರ ದೇಹವನ್ನು ಹೇಗೆ ಕಷ್ಟದಿಂದ ಪಾರುಮಾಡಿಸಿ ರಕ್ಷಿಸೀತು?

**ಅಹಸ್ತಾನಿ ಸಹಸ್ತಾನಾಮಪದಾನಿ ಚತುಷ್ಪದಾಮ್ ।**
**ಫಲ್ಗೂನಿ ತತ್ರ ಮಹತಾಂ ಜೀವೋ ಜೀವಸ್ಯ ಜೀವನಮ್ ॥೪೬॥**

ಲೋಕದಲ್ಲಿ ಕೈಗಳಿಲ್ಲದ ಪ್ರಾಣಿಗಳು ಕೈಗಳುಳ್ಳ ಪ್ರಾಣಿಗಳಿಗೆ ಆಹಾರ. ಕಾಲುಗಳಿಲ್ಲದ ಪ್ರಾಣಿಗಳು ನಾಲ್ಕು ಕಾಲುಗಳುಳ್ಳ ಪ್ರಾಣಿಗಳಿಗೆ ಆಹಾರ. ಅವುಗಳಲ್ಲಿಯೂ ಸಣ್ಣಜೀವಿಗಳು ದೊಡ್ಡಜೀವಿಗಳಿಗೆ ಆಹಾರವಾಗಿವೆ.

ಓ ಮಹಾರಾಜ! ಆದುದರಿಂದ ಈ ಜಗತ್ತೆಲ್ಲವೂ ಆ ಭಗವಂತನ ರೂಪವೇ ಆಗಿದೆ. ಸ್ವಯಂಪ್ರಕಾಶನಾದ ಆತನೊಬ್ಬನೇ ಎಲ್ಲ ಜೀವಿಗಳಿಗೂ ಆತ್ಮನಾಗಿ ಒಳಗೂ-ಹೊರಗೂ ಪ್ರಕಾಶಿಸುತ್ತಿದ್ದಾನೆ. ಆತನೇ ತನ್ನ ಮಾಯೆ ಯಿಂದ ನಾನಾ ಆಕಾರಗಳಲ್ಲಿರುವನೆಂಬುದನ್ನು ತಿಳಿ.

ಮಹಾರಾಜ! ಸರ್ವಭೂತಗಳನ್ನೂ ಸೃಷ್ಟಿಮಾಡಿ ರಕ್ಷಿಸುವ, ಭೂತ ಭಾವನನಾದ, ಕಾಲರೂಪಿಯಾದ ಆ ಭಗವಂತನೇ ಈಗ ಅಸುರರನ್ನು ಸಂಹಾರಮಾಡುವುದಕ್ಕಾಗಿ ಶ್ರೀಕೃಷ್ಣನ ರೂಪದಲ್ಲಿ ಅವತಾರಮಾಡಿರುವನು. ದೇವತೆಗಳ ಪ್ರಯೋಜನಕ್ಕಾಗಿ ಆ ಕಾರ್ಯವನ್ನು ಆತನು ಮಾಡಿ ಮುಗಿಸಿ ಯಾಯಿತು. ಉಳಿದಿರುವ ಕೊಂಚ ಕೆಲಸಕ್ಕಾಗಿ ಅವನು ಕಾಲವನ್ನು ಪ್ರತೀಕ್ಷೆ ಮಾಡುತ್ತಿದ್ದಾನೆ. ಆ ಭಗವಂತನು ಎಷ್ಟು ಕಾಲದವರೆಗೆ ಈ ಲೋಕದಲ್ಲಿ ಇರುವನೋ–ಅಷ್ಟು ಕಾಲದವರೆಗೆ ನೀವೂ ಇಲ್ಲಿ ನಿರ್ದಿಷ್ಟಸಮಯವನ್ನು ಪ್ರತೀಕ್ಷಿಸುತ್ತಾ ಕಾಲಕಳೆಯುತ್ತಿರಿ. 'ಧೃತರಾಷ್ಟ್ರ, ಗಾಂಧಾರೀ ಮತ್ತು ವಿದುರ–ಇವರು ಎಲ್ಲಿಗೆ ಹೊರಟುಹೋದರು?'–ಎಂದು ಕೇಳಿದೆಯಲ್ಲವೇ? ನಿಮ್ಮ ದೊಡ್ಡಪ್ಪನು ತನ್ನ ತಮ್ಮನೊಡನೆಯೂ, ಪತ್ನಿಯೊಡನೆಯೂ ಈಗಾಗಲೇ ಹಿಮಾಲಯಪರ್ವತದ ದಕ್ಷಿಣಭಾಗದಲ್ಲಿ, ದೇವಗಂಗೆಯು ಸಪ್ತರ್ಷಿಗಳಿಗೆ ಸಂತೋಷವನ್ನುಂಟುಮಾಡಲು ಏಳು ಧಾರೆಗಳಾಗಿ ತನ್ನನ್ನು ವಿಭಾಗಿಸಿ ಕೊಂಡು ಹರಿಯುವ 'ಸಪ್ತಸ್ರೋತಃ' ಎಂದು ಪ್ರಸಿದ್ಧವಾದ ಜಾಗದಲ್ಲಿರುವ ಋಷಿಗಳ ಆಶ್ರಮಕ್ಕೆ ಹೊರಟುಹೋಗಿದ್ದಾನೆ. ಅವನು ಅಲ್ಲಿ ತ್ರಿಕಾಲ ಗಳಲ್ಲಿಯೂ ಸ್ನಾನಮಾಡಿ ಯಥಾವಿಧಿಯಾಗಿ ಅಗ್ನಿಹೋತ್ರವನ್ನಾಚರಿಸುತ್ತಾ ಕೇವಲ ಜಲಾಹಾರಿಯಾಗಿ, ಪ್ರಶಾಂತನಾಗಿ ಸರ್ವಕಾಮನೆಗಳನ್ನೂ ತೊರೆದು ವಾಸಮಾಡುತ್ತಿದ್ದಾನೆ. ಅವನೀಗ ಆಸನಜಯವನ್ನು ಸಾಧಿಸಿ ಪ್ರಾಣಾಪಾನ ಗಳನ್ನು ಹತೋಟಿಗೆ ತಂದುಕೊಂಡಿದ್ದಾನೆ. ಐದು ಜ್ಞಾನೇಂದ್ರಿಯಗಳನ್ನೂ ಮತ್ತು ಮನಸ್ಸನ್ನೂ ಆಯಾ ವಿಷಯಗಳ ದೆಸೆಯಿಂದ ಹಿಂದಕ್ಕೆಳೆದುಕೊಂಡು ಪರಮಾತ್ಮಮಯವಾದ ಭಾವನೆಯಿಂದ ತ್ರಿಗುಣಗಳಿಂದ ಉಂಟಾಗುವ ಎಲ್ಲ ಮಲಗಳನ್ನೂ ಕಳೆದುಕೊಂಡಿದ್ದಾನೆ. ಅಹಂಕಾರವನ್ನು ಬುದ್ಧ್ಯಾತ್ಮನಲ್ಲೂ ಬುದ್ಧ್ಯಾತ್ಮನನ್ನು–ಕ್ಷೇತ್ರಜ್ಞನೆಂದು ಕರೆಯಲ್ಪಡುವ ಜೀವಾತ್ಮನಲ್ಲೂ, ಆ ಜೀವಾತ್ಮನನ್ನು–ಘಟಾಕಾಶವನ್ನು ಮಹಾಕಾಶದಲ್ಲಿ ಲಯಗೊಳಿಸುವಂತೆ–ಎಲ್ಲಕ್ಕೂ ಆಧಾರವಾಗಿರುವ ಪರಮಾತ್ಮನಲ್ಲೂ ಸೇರಿಸಿಬಿಟ್ಟಿದ್ದಾನೆ. ಮಾಯೆ ಯಿಂದ ಉಂಟಾಗುವ ತ್ರಿಗುಣಗಳು ಯಾವ ವಿಧವಾದ ಕೆಟ್ಟ ಪರಿಣಾಮವನ್ನೂ ಮಾಡದ ರೀತಿಯಲ್ಲಿ ಅವುಗಳ ಮೂಲವನ್ನೇ ಧ್ವಂಸ ಮಾಡಿದ್ದಾನೆ. ಇಂದ್ರಿಯಗಳು ಹೊರಮುಖವಾಗಲು ಕಾರಣವಾದ ಕರ್ಮ

ವಾಸನೆಗಳನ್ನೂ ತಡೆಗಟ್ಟಿದ್ದಾನೆ. ದೇಹ-ಇಂದ್ರಿಯ-ಮನಸ್ಸುಗಳಿಗೆ ಆಹಾರ ವನ್ನು ಕೊಡದೇ ನೆಟ್ಟಿರುವ ಕಂಬದಂತೆ ನಿಶ್ಚಲವಾಗಿದ್ದಾನೆ. ಹೀಗೆ ಎಲ್ಲ ಕರ್ಮಗಳನ್ನೂ ತೊರೆದಿರುವ ಆತನನ್ನು ಹಿಂದಕ್ಕೆ ಕರೆತರಲು ಪ್ರಯತ್ನಿಸಿ ನೀನವನ ಶ್ರೇಯಸ್ಸಿಗೆ ಅಡ್ಡಿಯಾಗಬೇಡ. ಮಹಾರಾಜ! ಇಷ್ಟೇ ಅಲ್ಲ ; ಆ ಧೃತರಾಷ್ಟ್ರನು ಇಂದಿನಿಂದ ಐದನೆಯ ದಿವಸದಲ್ಲಿ ತನ್ನ ದೇಹವನ್ನು ತ್ಯಜಿಸಿ ಬಿಡುವನು ಮತ್ತು ಆ ದೇಹವು ಒಡನೆಯೇ ಸುಟ್ಟು ಬೂದಿಯಾಗಿಬಿಡು ವುದು. ಪತಿಯ ದೇಹವು ಆತನ ಪರ್ಣಶಾಲೆಯೊಡನೆ ಅಗ್ನಿಯಲ್ಲಿ ಉರಿದುಹೋಗುತ್ತಿರುವಾಗ ಹೊರಗಡೆಯಿಂದ ಆತನ ಸಾಧ್ವೀಮಣಿಯಾದ ಪತ್ನಿಯೂ ಪತಿಯನ್ನನುಸರಿಸಿ ಆ ಅಗ್ನಿಯಲ್ಲೇ ಪ್ರವೇಶಮಾಡಿಬಿಡುವಳು. ಕುರುನಂದನನೇ! ಆ ಆಶ್ಚರ್ಯಕರವಾದ ಘಟನೆಯನ್ನು ನೋಡಿ ಮಹಾತ್ಮನಾದ ವಿದುರನಿಗೆ ಹರ್ಷ-ಶೋಕಗಳೆರಡೂ ಉಂಟಾಗುವುವು. ಅವನಿಗೆ ಅವರ ಸದ್ಗತಿಯನ್ನು ಪರಿಶೀಲಿಸಿ ಸಂತೋಷವೂ, ಭೌತಿಕವಾದ ವಿರಹವನ್ನು ಗಮನಿಸಿ ದುಃಖವೂ ಉಂಟಾಗುವುದು. ಆಗವನು ತೀರ್ಥ ಯಾತ್ರೆಮಾಡುವ ಸಂಕಲ್ಪದೊಡನೆ ಅಲ್ಲಿಂದ ಹೊರಟುಹೋಗುವನು."

ಇಷ್ಟು ಮಾತುಗಳನ್ನು ಹೇಳಿ ನಾರದರು ತುಂಬುರುವಿನೊಡನೆ ಸ್ವರ್ಗ ಲೋಕಕ್ಕೆ ಹೊರಟುಹೋದರು. ಅವರ ಉಪದೇಶಗಳನ್ನು ಹೃದಯದಲ್ಲಿ ಧರಿಸಿ ಯುಧಿಷ್ಠಿರನೂ ಶೋಕ-ಮೋಹಗಳನ್ನು ತೊರೆದನು.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೧೩ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೧೪ನೆಯ ಅಧ್ಯಾಯ

## ಅಪಶಕುನಗಳನ್ನು ಕಂಡು ಯುಧಿಷ್ಠಿರನ ಶಂಕೆ : ಅರ್ಜುನನು ದ್ವಾರಕೆಯಿಂದ ಹಿಂದಿರುಗಿದುದು

ಸೂತಪುರಾಣಿಕರು ಹೇಳುತ್ತಾರೆ :

**ಸಮ್ಪ್ರಸ್ಥಿತೇ ದ್ವಾರಕಾಯಾಂ ಜಿಷ್ಣೌ ಬನ್ಧುದಿದೃಕ್ಷಯಾ ।**
**ಜ್ಞಾತುಂ ಚ ಪುಣ್ಯಶ್ಲೋಕಸ್ಯ ಕೃಷ್ಣಸ್ಯ ಚ ವಿಚೇಷ್ಟಿತಮ್ ॥೧॥**

"ದ್ವಾರಕೆಯಲ್ಲಿದ್ದ ನೆಂಟರಿಷ್ಟರನ್ನು ನೋಡಿಬರುವ ಬಯಕೆ

ಯಿಂದಲೂ, ಪುಣ್ಯಕೀರ್ತಿಯಾದ ಶ್ರೀಕೃಷ್ಣಪರಮಾತ್ಮನ ದಿವ್ಯಚೇಷ್ಟಿತಗಳನ್ನು ವಿಶೇಷವಾಗಿ ತಿಳಿಯುವ ಅಪೇಕ್ಷೆಯಿಂದಲೂ ಅರ್ಜುನನು ದ್ವಾರಕೆಗೆ ಹೋಗಿದ್ದನು.

ಕೆಲವು ತಿಂಗಳುಗಳು ಕಳೆದರೂ ಆತನು ಅಲ್ಲಿಂದ ಹಿಂದಿರುಗಲೇ ಇಲ್ಲ. ಇಷ್ಟಲ್ಲದೇ ಹಸ್ತಿನಾವತಿಯಲ್ಲಿದ್ದ ಧರ್ಮರಾಜನಿಗೆ ಆಗ ಭೀಕರವಾದ ಅಪಶಕುನಗಳೂ ಕಾಣಿಸತೊಡಗಿದುವು. ಋತುಗಳ ಧರ್ಮಗಳು ಅದಲು-ಬದಲಾಗುವ ಭೀಕರವಾದ ಕಾಲದ ನಡೆಯನ್ನು ಅವನು ಕಂಡನು. ಜನರು ಜೀವನದಲ್ಲಿ ಕ್ರೋಧ-ದುರಾಸೆ-ಅಸತ್ಯಗಳಿಂದ ತುಂಬಿದವರಾಗಿ ಕಪಟ ವ್ಯವಹಾರ ಮಾಡುವುದೂ, ಕೃತ್ರಿಮವಾದ ಸ್ನೇಹವನ್ನು ತೋರುವುದೂ ಕಂಡುಬಂದಿತು. ತಂದೆ-ತಾಯಿಗಳೂ, ಬಂಧು-ಮಿತ್ರರು, ಒಡಹುಟ್ಟಿದವರು ಮತ್ತು ಗಂಡ-ಹೆಂಡಿರು ಪರಸ್ಪರ ಜಗಳಗಂಟಿಗರಾಗುತ್ತಿರುವುದೂ ಕಂಡು ಬಂದಿತು. ತಂದೆಯು ತನ್ನ ಕನ್ಯೆಯನ್ನು ಮಾರುವುದನ್ನೂ, ಪುತ್ರನು ಮುಪ್ಪಿನ ಸಮಯದಲ್ಲಿ ತಂದೆ-ತಾಯಿಗಳನ್ನು ಕಾಪಾಡದೇ ಇರುವುದನ್ನೂ ಧರ್ಮರಾಜನು ಗಮನಿಸಿದನು. ಕಲಿಗಾಲವು ಬಂದಿದ್ದರಿಂದ ಜನರ ಸ್ವಭಾವವೇ ಲೋಭ-ದಂಭಗಳೇ ಮುಂತಾದ ಅಧರ್ಮಗಳಿಂದ ಆಕ್ರಮಿಸಲ್ಪಟ್ಟಿರುವುದನ್ನೂ, ಪ್ರಕೃತಿಯಲ್ಲೇ ೀ ಅತ್ಯಂತ ಅನಿಷ್ಟವನ್ನು ಸೂಚಿಸುವಅಪಶಕುನಗಳಾಗುತ್ತಿರುವುದನ್ನೂ ನೋಡಿದನು. ಇವೆಲ್ಲವನ್ನೂ ಗಮನಿಸಿದ ಯುಧಿಷ್ಠಿರನು ತಮ್ಮನಾದ ಭೀಮಸೇನನನ್ನು ಕುರಿತು ಹೀಗೆಂದನು. (ಶ್ಲೋಕ 2-5)

"ಭೀಮಸೇನ! 'ಬಂಧುಗಳ ಯೋಗ-ಕ್ಷೇಮಗಳನ್ನು ವಿಚಾರಿಸಿಕೊಂಡು, ಪುಣ್ಯಕೀರ್ತಿಯಾದ ಶ್ರೀಕೃಷ್ಣನು ಯಾವ ಕಾರ್ಯಗಳನ್ನು ಮಾಡುತ್ತಿದ್ದಾನೆಂಬುದನ್ನು ತಿಳಿದು ಬಾ'–ಎಂದು ನಾವು ಅರ್ಜುನನನ್ನು ದ್ವಾರಕೆಗೆ ಕಳುಹಿಸಿದ್ದೆವು. ಆ ನಿನ್ನ ತಮ್ಮನು ಅಲ್ಲಿಗೆ ಹೋಗಿ ಇಂದಿಗೆ ಏಳು ತಿಂಗಳುಗಳು ಕಳೆದುವು. ಇಷ್ಟು ಸಮಯವಾದರೂ ಅವನೇಕೆ ಹಿಂದಿರುಗಿಲ್ಲವೆಂಬುದು ಸರಿಯಾಗಿ ತಿಳಿಯುತ್ತಿಲ್ಲವಲ್ಲಾ! ಭಗವಂತನಾದ ಶ್ರೀಕೃಷ್ಣಪರಮಾತ್ಮನು ತನ್ನ ಮನುಷ್ಯಲೀಲೆಗಳಿಗೆ ಆಧಾರವಾಗಿರುವ ಮಾನುಷದೇಹವನ್ನು ಉಪಸಂಹಾರಮಾಡಿಕೊಳ್ಳಲು ಬಯಸುವ ಕಾಲ ಬರುತ್ತಿದೆಯೆಂದು ದೇವರ್ಷಿ ನಾರದರು ಸೂಚಿಸಿದ್ದರು. ಆ ಕಾಲವು ಬಂದುಬಿಟ್ಟಿಲ್ಲ ತಾನೇ! ಯಾವನ

ಅನುಗ್ರಹದಿಂದಲೇ ನಮಗೆ ಸಂಪತ್ತು, ರಾಜ್ಯ, ಪತ್ನೀ, ಪ್ರಾಣ, ಕುಲ, ಪ್ರಜೆಗಳು, ಶತ್ರುವಿಜಯ–ಈ ಎಲ್ಲವೂ ದೊರೆತವೋ–ಆ ಸ್ವಾಮಿಯೇ ತನ್ನ ದೇಹವನ್ನು ಉಪಸಂಹಾರಮಾಡಿಕೊಳ್ಳುವ ಸಮಯವು ಬಂದಿಲ್ಲ ತಾನೇ! ನರೋತ್ತಮನೇ! ಆಕಾಶದಲ್ಲಿ ಉಲ್ಕಾಪಾತವೇ ಮುಂತಾದ ಅಪಶಕುನಗಳೂ, ಭೂಮಿಯಲ್ಲಿ ಭೂಕಂಪವೇ ಮುಂತಾದ ಅಪಶಕುನಗಳೂ, ಶರೀರದಲ್ಲಿ ರೋಗಗಳೇ ಮುಂತಾದ ಅಪಶಕುನಗಳೂ ಕಾಣಿಸುತ್ತಿರುವುದನ್ನು ನೋಡು. ಇವು ಶೀಘ್ರದಲ್ಲಿಯೇ ನಮ್ಮ ಬುದ್ಧಿಗೆ ಮೋಹವನ್ನುಂಟುಮಾಡುವ ಯಾವುದೋ ಉತ್ಪಾತವುಂಟಾಗುವುದೆಂಬುದನ್ನು ಸೂಚಿಸುತ್ತವೆ. ನನ್ನ ಎಡ ತೊಡೆ, ಎಡಗಣ್ಣು ಮತ್ತು ಎಡತೋಳುಗಳು ಮತ್ತೆ-ಮತ್ತೆ ಅದುರುತ್ತಿದ್ದು ಹೃದಯವೂ ನಡುಗುತ್ತಿದೆ. ಅತ್ಯಲ್ಪಕಾಲದಲ್ಲಿಯೇ ಯಾವುದೋ ಅಪ್ರಿಯವಾದ ಸಮಾಚಾರ ಬರಲಿದೆಯೆಂಬುದನ್ನು ಇವು ಹೇಳುತ್ತಿವೆ. ನೋಡು! ಆ ಹೆಣ್ಣುನರಿಯು ಉದಯಿಸುತ್ತಿರುವ ಸೂರ್ಯನ ಕಡೆ ನೋಡುತ್ತಾ ಊಳಿಡುತ್ತಿದೆ. ಅದರ ಬಾಯಿಂದ ಬೆಂಕಿಯ ಜ್ವಾಲೆಯೂ ಬರುತ್ತಿದೆಯಲ್ಲಾ! ಆ ನಾಯಿಯು ತನಗಾವ ಭಯವೂ ಇಲ್ಲವೇನೋ ಎಂಬಂತೆ ನನ್ನ ಕಡೆ ನೋಡಿ ಬಗುಳುತ್ತಿದೆ. ಹಸುವೇ ಮುಂತಾದ ಉತ್ತಮಪಶುಗಳು ನನ್ನನ್ನು ತಮ್ಮ ಎಡಗಡೆಗೆ ಬಿಟ್ಟುಕೊಂಡು ಅಪ್ರದಕ್ಷಿಣಾಕಾರವಾಗಿಯೂ, ಕತ್ತೆಯೇ ಮುಂತಾದ ಅಶುಭವಾದ ಪ್ರಾಣಿಗಳು ನನ್ನನ್ನು ತಮ್ಮ ಬಲಗಡೆಗೆ ಬಿಟ್ಟು ಕೊಂಡು ಪ್ರದಕ್ಷಿಣಾಕಾರವಾಗಿಯೂ ಸುತ್ತುತ್ತಿವೆ. ಓ ಪುರುಷಶ್ರೇಷ್ಠನೇ! ನನ್ನ ಕುದುರೆಯೇ ಮುಂತಾದ ವಾಹನಗಳು ಅಳುತ್ತಿರುವಂತೆ ನನಗೆ ಕಾಣಿಸುತ್ತಿವೆ. ಮೃತ್ಯುವಿನ ದೂತರಂತಿರುವ ಪಾರಿವಾಳ, ಗೂಬೆ ಮತ್ತು ಗೂಬೆಯ ಶತ್ರುಗಳಾದ ಕಾಗೆಗಳು ರಾತ್ರಿಯ ವೇಳೆಯಲ್ಲಿ ಕರ್ಣಕಠೋರವಾದ ಶಬ್ದಗಳಿಂದ ನನ್ನ ಮನಸ್ಸನ್ನು ನಡುಗಿಸುತ್ತಾ ಶೂನ್ಯವಾಗಿಸಲು ಬಯಸುತ್ತಿವೆ. ದಿಕ್ಕುಗಳು ಹೊಗೆಯು ತುಂಬಿದಂತೆ ಕಂದುಬಣ್ಣವನ್ನು ತಾಳಿವೆ. ಸೂರ್ಯ ಮತ್ತು ಚಂದ್ರಮಂಡಲಗಳ ಸುತ್ತಲೂ ಪರಿಧಿಮಂಡಲವು ಮತ್ತೆ-ಮತ್ತೆ ನಿರ್ಮಾಣಗೊಳ್ಳುತ್ತಿದೆ. ಭೂಮಿಯು ಪರ್ವತಸಹಿತವಾಗಿ ನಡುಗುತ್ತಿದೆ. ಮೋಡಗಳು ಜೋರಾಗಿ ಗುಡುಗುತ್ತಿದ್ದು ಮಿಂಚು-ಸಿಡಿಲುಗಳು ಮತ್ತೆ-ಮತ್ತೆ ಕಾಣಿಸಿಕೊಳ್ಳುತ್ತಿವೆ. ಶರೀರವನ್ನು ಕೊರೆಯುವ ಬಿರುಗಾಳಿಯು ಧೂಳಿನಿಂದ

ಕಗ್ಗತ್ತಲೆಯನ್ನು ಹರಡುತ್ತಾ ಬೀಸುತ್ತಿದೆ. ಮೇಘಗಳು ಎಲ್ಲೆಡೆಗಳಲ್ಲೂ ಭೀಕರದೃಶ್ಯವನ್ನುಂಟುಮಾಡುತ್ತಾ ರಕ್ತವನ್ನು ಸುರಿಸುತ್ತಿವೆ. ಸೂರ್ಯನು ಮಂಕಾಗಿಬಿಟ್ಟಿದ್ದಾನೆ. ಆಕಾಶದಲ್ಲಿ ಗ್ರಹಗಳು ಒಂದಕ್ಕೊಂದು ಘರ್ಷಣೆ ಹೊಂದುತ್ತಿವೆ. ಭೂತಗಣಗಳು ಒಟ್ಟಾಗಿ ಗುಂಪುಗೂಡಿ ಭೂಮಿ-ಆಕಾಶ ಗಳಲ್ಲಿ ಬೆಂಕಿಹಚ್ಚಿರುವಂತೆ ಕಾಣುತ್ತಿದೆಯಲ್ಲಾ! ನದಿಗಳೂ, ನದಗಳೂ, ಸರೋವರಗಳೂ ಮತ್ತು ಅಂತೆಯೇ ಜನರ ಮನಸ್ಸುಗಳೂ ಕಲಕಿಹೋಗು ತ್ತಿವೆ. ತುಪ್ಪದ ಧಾರೆಯನ್ನು ಸುರಿದರೂ ಅಗ್ನಿಯು ಉರಿಯುತ್ತಿಲ್ಲ. ಈ ಎಲ್ಲ ಅಶುಭಲಕ್ಷಣಗಳಿಂದ ಕೂಡಿದ ಕಾಲವು ಏನು ಫಲವನ್ನು ತರುತ್ತದೆಯೋ ನಾ ಕಾಣೆ. ಎಳೆಯ ಕರುಗಳು ತಾಯಿಯ ಹಾಲನ್ನು ಕುಡಿಯುತ್ತಿಲ್ಲ ; ಆಕಳುಗಳೂ ಅವುಗಳಿಗೆ ಹಾಲನ್ನು ಕೊಡುತ್ತಿಲ್ಲ. ಗೋಶಾಲೆಯಲ್ಲಿ ಗೋವುಗಳು ಕಣ್ಣೀರುಗರೆಯುತ್ತಿವೆ. ಹಾಗೆಯೇ ಕೊಟ್ಟಿಗೆಯಲ್ಲಿ ಎತ್ತುಗಳೂ ಸಂತೋಷಪಡುತ್ತಿಲ್ಲ. ದೇವತಾಮೂರ್ತಿಗಳು ಅಳುತ್ತಿವೆಯೋ ಎಂಬಂತಿವೆ. ಬೆವರುಸುರಿಸುತ್ತಿದ್ದು ಅಲುಗಾಡುತ್ತಿರುವಂತೆಯೂ ಕಾಣುತ್ತಿವೆ. ಈ ದೇಶಗಳೂ, ಹಳ್ಳಿಗಳೂ, ಪಟ್ಟಣಗಳೂ, ಉದ್ಯಾನವನಗಳೂ, ಗಣಿಗಳೂ ಮತ್ತು ಆಶ್ರಮಗಳೂ ಕಾಂತಿಹೀನವಾಗಿ ಆನಂದರಹಿತವಾಗಿವೆ. ಇವೆಲ್ಲಾ ಯಾವ ಕಷ್ಟವನ್ನು ಸೂಚಿಸುತ್ತವೆಯೋ ತಿಳಿಯದಾಗಿದೆ. ಈ ದೊಡ್ಡ-ದೊಡ್ಡ ಉತ್ಪಾತಗಳನ್ನು ನೋಡಿದಾಗ ಭೂದೇವಿಯು ಅಸಾಧಾರಣವಾದ ದಿವ್ಯ ಲಕ್ಷಣಗಳಿಂದಲಂಕೃತವಾದ ಶ್ರೀಭಗವಂತನ ಅಡಿದಾವರೆಗಳನ್ನಗಲಿ ತನ್ನ ಎಲ್ಲ ಸೌಭಾಗ್ಯಗಳನ್ನೂ ಕಳೆದುಕೊಂಡುಬಿಟ್ಟಿರುವಳೋ ಏನೋ!"

ಶೌನಕರೇ! ಮಹಾರಾಜ ಯುಧಿಷ್ಠಿರನು ಆ ಭಯಂಕರವಾದ ಉತ್ಪಾತಗಳನ್ನು ನೋಡಿ ಮನಸ್ಸಿನಲ್ಲಿ ಚಿಂತೆಪಡುತ್ತಿರುವಾಗಲೇ ಅರ್ಜುನನು ದ್ವಾರಕೆಯಿಂದ ಹಿಂದಿರುಗಿ ಬಂದನು. ಬಂದೊಡನೆಯೇ ಕಾಲಿಗೆ ಬಿದ್ದು ನಮಸ್ಕಾರಮಾಡಿದ ಅರ್ಜುನನು ಹಿಂದೆಂದೂ ಕಾಣದ ರೀತಿಯಲ್ಲಿ ಮಹಾ ದುಃಖದಿಂದ ಮುಖವನ್ನು ತಗ್ಗಿಸಿಕೊಂಡು ಕಣ್ಣೀರುಸುರಿಸುತ್ತಾ ಕಳೆಗುಂದಿ ರುವುದನ್ನು ಕಂಡು ಧರ್ಮರಾಜನಿಗೆ ಮಿತಿಮೀರಿದ ಗಾಬರಿಯುಂಟಾಯಿತು. ಆತನು ನಾರದರು ಹೇಳಿದ್ದ ಮಾತನ್ನೇ ಸ್ಮರಿಸುತ್ತಾ ಅಲ್ಲಿ ನೆರೆದಿದ್ದ ಬಂಧು-ಮಿತ್ರರ ಮಧ್ಯದಲ್ಲಿಯೇ ಅರ್ಜುನನನ್ನು ಹೀಗೆ ಪ್ರಶ್ನಿಸಿದನು : (ಶ್ಲೋಕ 6-24)

“ಅರ್ಜುನ! ದ್ವಾರಕಾನಗರಿಯಲ್ಲಿ ನಮ್ಮ ನೆಂಟರಿಷ್ಟರಾದ ಮಧು, ಭೋಜ, ದಶಾರ್ಹ, ಸಾತ್ವತ, ಅಂಧಕ ಮತ್ತು ವೃಷ್ಣಿಗಳೆಂಬ ಯಾದವ ರೆಲ್ಲಾ ಸುಖವಾಗಿದ್ದಾರಷ್ಟೇ! ನಮ್ಮ ಮಾನ್ಯಮಾತಾಮಹನಾದ ಶೂರಸೇನಮಹಾರಾಜನು ಕುಶಲನಾಗಿದ್ದಾನೆಯೇ? ಸೋದರಮಾವನಾದ ವಸುದೇವನೂ ಮತ್ತು ಅವನ ತಮ್ಮನೂ ಕ್ಷೇಮವೇ? ಅವನ ಪತ್ನಿಯರೂ, ನಮ್ಮ ಸೋದರತ್ತೆಯರೂ ಆದ ದೇವಕಿಯೇ ಮುಂತಾದ ಆರು ಮಂದಿ ಸೋದರಿಯರೂ ತಮ್ಮ ಪುತ್ರರೊಡನೆಯೂ, ಸೊಸೆಗಳೊಡನೆಯೂ ಸೌಖ್ಯ ವಾಗಿದ್ದಾರೆಯೇ? ದುಷ್ಟನಾಗಿದ್ದ ಕಂಸನ ತಂದೆ ಉಗ್ರಸೇನಮಹಾರಾಜನು ತನ್ನ ತಮ್ಮ ದೇವಕನೊಡನೆ ಕುಶಲವಾಗಿದ್ದಾನೆಯೇ? ಹಾಗೆಯೇ ಹೃದೀಕ, ಅವನ ಪುತ್ರನಾದ ಕೃತವರ್ಮ, ಅಕ್ರೂರ, ಜಯಂತ, ಗದ, ಸಾರಣ ಮತ್ತು ಶತ್ರುಜಿತ್–ಮುಂತಾದ ಯಾದವವೀರರು ಕ್ಷೇಮವಾಗಿದ್ದಾರಷ್ಟೇ? ಯಾದವರ ಪ್ರಭುವಾದ, ಪೂಜ್ಯನಾದ ಬಲರಾಮದೇವನು ಸುಖವಾಗಿ ದ್ದಾನೆಯೇ? ಯದುವಂಶದ ಸರ್ವಶ್ರೇಷ್ಠಮಹಾರಥಿಯಾದ ಪ್ರದ್ಯುಮ್ನನು ಸುಖವಾಗಿದ್ದಾನೆಯೇ? ಯುದ್ಧದಲ್ಲಿ ಗಂಭೀರವಾದ ವೇಗ-ಚಟುವಟಿಕೆ ಗಳುಳ್ಳ ಪೂಜ್ಯನಾದ ಅನಿರುದ್ಧನು ಆನಂದವಾಗಿದ್ದಾನೆಯೇ? ಸುಷೇಣ, ಚಾರುದೇಷ್ಣ, ಜಾಂಬವತೀಪುತ್ರನಾದ ಸಾಂಬ ಮತ್ತು ಋಷಭರೇ ಮುಂತಾದ ಶ್ರೀಕೃಷ್ಣನ ಇತರ ಪುತ್ರರೂ, ಅವರ ಪುತ್ರರೂ ಎಲ್ಲರೂ ಕುಶಲರಾಗಿರುವ ರಷ್ಟೇ? ಹಾಗೆಯೇ ಶ್ರೀಕೃಷ್ಣನ ಸೇವಕರಾಗಿರುವ ಶ್ರುತದೇವ, ಉದ್ಧವರೇ ಮುಂತಾದ ಯಾದವಶ್ರೇಷ್ಠರೂ, ನಂದ-ಸುನಂದರೇ ಮುಂತಾದವರೂ, ಪೂಜ್ಯರಾದ ಶ್ರೀಬಲರಾಮ ಮತ್ತು ಶ್ರೀಕೃಷ್ಣದೇವರ ಬಾಹುಬಲದಿಂದ ಸಂರಕ್ಷಿತರಾಗಿರುವ ಇತರರೂ ಎಲ್ಲರೂ ಸೌಖ್ಯವಾಗಿದ್ದಾರೆಯೇ? ನಮ್ಮಲ್ಲಿ ಪ್ರೀತಿ-ವಿಶ್ವಾಸಗಳುಳ್ಳ ಇವರೆಲ್ಲರೂ ಆಗಾಗ್ಯೆ ನಮ್ಮ ಯೋಗ-ಕ್ಷೇಮಗಳನ್ನು ನೆನಪುಮಾಡಿಕೊಳ್ಳುತ್ತಿದ್ದಾರೆಯೇ? (ಶ್ಲೋಕ 25-33)

ಭಕ್ತವತ್ಸಲನೂ, ಬ್ರಾಹ್ಮಣರಿಗೆ ಪ್ರಿಯನೂ, ಹಿತನೂ ಆಗಿರುವ ಭಗವಂತನಾದ ಗೋವಿಂದನು ತನ್ನ ಮಿತ್ರರೊಡನೆ ದ್ವಾರಕಾನಗರಿಯಲ್ಲಿ ಸುಧರ್ಮಾಸಭೆಯಲ್ಲಿ ಸುಖವಾಗಿರುವನಷ್ಟೇ? ಆ ಆದಿಪುರುಷನು ಶ್ರೀಬಲ ರಾಮನೊಡನೆ ಲೋಕದ ಮಂಗಳಕ್ಕೋಸ್ಕರವಾಗಿಯೂ, ಕ್ಷೇಮಕ್ಕೋಸ್ಕರ

ವಾಗಿಯೂ ಯದುವಂಶವೆಂಬ ಕ್ಷೀರಸಮುದ್ರದಲ್ಲಿ ಅವತರಿಸಿದ್ದಾನೆ. ಅನಂತ ನಾಗರಾಜನ ಮಿತ್ರನಾಗಿರುವ, ಆತನ ಬಾಹುಬಲದಿಂದಲೇ ಸುರಕ್ಷಿತವಾಗಿ ರುವ ತಮ್ಮ ಜನ್ಮಭೂಮಿಯಾದ ದ್ವಾರಕೆಯಲ್ಲಿ ಯಾದವರೆಲ್ಲರೂ ಲೋಕ ದಲ್ಲಿ ಸಂಭಾವಿತರಾಗಿ ಮಹಾಪುರುಷ ನಾರಾಯಣನ ಪಾರ್ಷದರಂತೆ ಸುಖ-ಶಾಂತಿಗಳಿಂದ ವಿಹರಿಸುತ್ತಿದ್ದಾರೆ. ಸತ್ಯಭಾಮೆಯೇ ಮುಂತಾದ ಹದಿನಾರು ಸಾವಿರ ಮಂದಿ ರಾಣಿಯರೂ ಮುಖ್ಯವಾಗಿ ಆತನ ಚರಣಕಮಲಗಳ ಸೇವೆ ಯಲ್ಲಿಯೇ ನಿರತರಾಗಿದ್ದು, ಆತನ ಮೂಲಕ ಇಂದ್ರಾದಿದೇವತೆಗಳನ್ನೂ ಯುದ್ಧದಲ್ಲಿ ಸೋಲಿಸಿ ಶಚೀದೇವಿಯ ಭೋಗಕ್ಕೆ ಮಾತ್ರವೇ ಯೋಗ್ಯವಾಗಿ ರುವ ಪಾರಿಜಾತವೇ ಮುಂತಾದ ತಮ್ಮ ಇಷ್ಟವಸ್ತುಗಳೆಲ್ಲವನ್ನೂ ಪಡೆದು ಅನುಭವಿಸುತ್ತಿದ್ದಾರೆ. ಆತನ ಬಾಹುದಂಡಗಳ ಪ್ರಭಾವದಿಂದಲೇ ಬಾಳುತ್ತಾ ಯಾದವಶ್ರೇಷ್ಠರು ಯಾವ ಭಯಪ್ರಸಂಗವೂ ಇಲ್ಲದೇ ದೇವತೆಗಳನ್ನು ಯುದ್ಧದಲ್ಲಿ ಗೆದ್ದು ಬಲಾತ್ಕಾರವಾಗಿ ಭೂಮಿಗೆ ತರಲ್ಪಟ್ಟಿರುವ, ದೇವಶ್ರೇಷ್ಠ ರಿಗೆ ಮಾತ್ರವೇ ಭೋಗ್ಯವಾಗಿರುವ ಸುಧರ್ಮೆಯೆಂಬ ದಿವ್ಯಸಭೆಯಲ್ಲಿ ಮತ್ತೆ ಮತ್ತೆ ಯಥೇಷ್ಟವಾಗಿ ಸಂಚರಿಸುತ್ತಿದ್ದಾರೆ. ಇಂತಹ ಪರಮಪುರುಷ ಶ್ರೀಕೃಷ್ಣಪರಮಾತ್ಮನು ಸೌಖ್ಯವಾಗಿದ್ದಾನಷ್ಟೇ? (ಶ್ಲೋಕ 34-38)

ಇದಲ್ಲದೇ ನಿನ್ನ ಸ್ವಂತ ದೇಹಾರೋಗ್ಯ ಚೆನ್ನಾಗಿದೆಯೇನಪ್ಪಾ ಅರ್ಜುನ! ನೀನು ತುಂಬಾ ಕಳೆಗುಂದಿರುವನಂತೆ ಕಾಣಿಸುತ್ತಿದ್ದೀಯಲ್ಲಾ! ನಿನಗೆ ತಕ್ಕ ಮಾನ-ಮರ್ಯಾದೆಗಳು ಸಿಕ್ಕದೇ ತಿರಸ್ಕಾರಕ್ಕೆ ವಿಷಯನಾಗುವ ಪ್ರಸಂಗವೇನಾದರೂ ಬಂದಿತೇ? ಬಹಳ ಕಾಲ ಏಕೆ ಪ್ರವಾಸದಲ್ಲೇ ಉಳಿದು ಬಿಟ್ಟೆ, ಅರ್ಜುನ! ದುರ್ಭಾವನೆಯಿಂದ ಪೂರ್ಣವಾದ, ಅಮಂಗಳಕರವಾದ ಮಾತು ಮುಂತಾದುವುಗಳನ್ನಾಡಿ ಯಾರೂ ನಿನ್ನ ಮನಸ್ಸನ್ನು ನೋಯಿಸ ಲಿಲ್ಲ ತಾನೇ? ಅಥವಾ ಆಸೆಯಿಂದ ಬಯಸಿಬಂದವರಿಗೆ ಮಾಡಿದ ವಾಗ್ದಾನ ವನ್ನಾಗಲೀ, ನೀನಾಗಿಯೇ ಕೊಡುವುದಾಗಿ ಹೇಳಿದ್ದ ಪ್ರತಿಜ್ಞಾವಚನವನ್ನಾಗಲೀ ನಡೆಸಿಕೊಡದೇ ಹೋದೆಯಾ? ಶರಣುಬಂದವರನ್ನು ಕೈಬಿಡದೇ ಕಾಪಾಡುವ ಸ್ವಭಾವ ನಿನ್ನದು. ಇಂತಹ ನೀನು ನಿನ್ನಲ್ಲಿ ಶರಣಾಗತನಾದ ಬ್ರಾಹ್ಮಣನನ್ನಾಗಲೀ, ಮಗುವನ್ನಾಗಲೀ, ಗೋವನ್ನಾಗಲೀ, ವೃದ್ಧನನ್ನಾ ಗಲೀ, ರೋಗಿಯನ್ನಾಗಲೀ, ಒಬ್ಬ ಹೆಂಗಸನ್ನಾಗಲೀ, ಅಥವಾ ಯಾವುದೇ

ಒಂದು ಪ್ರಾಣಿಯನ್ನಾಗಲೀ ಕಾಪಾಡದೇ ಕೈಬಿಟ್ಟಿಲ್ಲ ತಾನೇ? ನೀನು ಸೇರ ಬಾರದ ಹೆಂಗಸಿನೊಡನೆ ಸೇರಿ ರಮಿಸಲಿಲ್ಲ ತಾನೇ? ಅಥವಾ ಒಬ್ಬಹೆಂಗಸು ಸೇರಲು ಯೋಗ್ಯಳಾಗಿದ್ದರೂ ಆಕೆಯನ್ನು ಸತ್ಕರಿಸದೇ ಆಕೆಯೊಡನೆ ಸೇರಿ ರಮಿಸಲಿಲ್ಲ ತಾನೇ? ಮಹಾವೀರನೂ, ಅಭಿಮಾನಿಯೂ ಆಗಿರುವ ನೀನು ದಾರಿಯಲ್ಲಿ ಜನರ ಮುಂದೆ ನಿನಗಿಂತಲೂ ಉತ್ತಮರಾದವರಿಂದಾಗಲೀ, ಕೆಳಮಟ್ಟದವರಿಂದಾಗಲೀ ಯುದ್ಧದಲ್ಲಿ ಪರಾಜಯವನ್ನು ಹೊಂದಿಲ್ಲ ತಾನೇ? ಅಥವಾ ನೀನು ಯಾರಿಗೆ ಮೊದಲು ಭೋಜನ ಮಾಡಿಸಬೇಕೋ ಅಂತಹ ಬಾಲಕನನ್ನಾಗಲೀ, ಮುದುಕನನ್ನಾಗಲೀ ಬಿಟ್ಟು ಮೊದಲು ಊಟವನ್ನು ಮಾಡಿಲ್ಲ ತಾನೇ? ಜುಗುಪ್ಸೆಗೆ ಯೋಗ್ಯವಾಗಿರುವ, ಯಾರೂ ಮಾಡಬಾರದ ಕೆಲಸವನ್ನು ಮಾಡಿಲ್ಲ ತಾನೇ?

**ಕಚ್ಚಿತ್ಪ್ರೇಷ್ಠತಮೇನಾಥ ಹೃದಯೇನಾತ್ಮಬನ್ಧುನಾ ।**
**ಶೂನ್ಯೋಽಸ್ಮಿ ರಹಿತೋ ನಿತ್ಯಂ ಮನ್ಯಸೇ ತೇಽನ್ಯಥಾ ನ ರುಕ್ ॥೪೪॥**

ಅಥವಾ ಅತ್ಯಂತಪ್ರಿಯತಮನೂ, ಏಕಹೃದಯನೂ, ಪರಮ ಸುಹೃತ್ತೂ ಆಗಿರುವ ಶ್ರೀಕೃಷ್ಣಪರಮಾತ್ಮನನ್ನಗಲಿ ಬಂದ ಕಾರಣ 'ಇನ್ನು ನಾನು ಎಂದೆಂದಿಗೂ ಶೂನ್ಯನೇ'–ಎಂದು ಭಾವಿಸುತ್ತಾ ಈ ರೀತಿ ಆಗಿರುವೆಯಾ? ಇದಾವುದೂ ಇಲ್ಲದಿದ್ದರೆ ನಿನಗೆ ಇಂತಹ ಮನೋವ್ಯಥೆ ಉಂಟಾಗುವುದಕ್ಕೆ ಬೇರಾವ ಕಾರಣವೂ ಇರಲಾರದು."

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೧೪ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೧೫ನೆಯ ಅಧ್ಯಾಯ

## ಶ್ರೀಕೃಷ್ಣನ ವಿರಹದಿಂದ ವ್ಯಥೆಗೊಂಡ ಪಾಂಡವರು ಪರೀಕ್ಷಿತನಿಗೆ ಪಟ್ಟಗಟ್ಟಿ ಸ್ವರ್ಗಕ್ಕೆ ತೆರಳಿದುದು

**ಏವಂ ಕೃಷ್ಣಸಖಃ ಕೃಷ್ಣೋ ಭ್ರಾತಾ ರಾಜ್ಞಾ ವಿಕಲ್ಪಿತಃ ।**
**ನಾನಾಶಙ್ಕಾಸ್ಪದಂ ರೂಪಂ ಕೃಷ್ಣವಿಶ್ಲೇಷಕರ್ಶಿತಃ ॥೧॥**

ಶ್ರೀಕೃಷ್ಣನ ನೆಚ್ಚಿನ ಗೆಳೆಯನಾದ ಅರ್ಜುನನು ಆತನ ವಿರಹದಿಂದ

ಕೃಶನಾಗಿಬಿಟ್ಟಿದ್ದನು. ಆತನ ಮುಖಕಮಲ ಮತ್ತು ಹೃದಯಕಮಲಗಳು ದುಃಖದಿಂದ ಬಾಡಿಹೋಗಿ ಆತನು ಪೂರ್ಣವಾಗಿ ಕಳೆಗುಂದಿದ್ದನು. ಆತನ ಈ ವಿಷಾದಮುದ್ರೆಯನ್ನು ನೋಡಿ ಯುಧಿಷ್ಠಿರನ ಮನಸ್ಸಿನಲ್ಲಿ ನಾನಾ ಶಂಕೆಗಳು ಉಂಟಾದುವು.

ಇಂತಹ ದೈಹಿಕ ಮತ್ತು ಮಾನಸಿಕಸ್ಥಿತಿಗಳಲ್ಲಿ ಅರ್ಜುನನು ಪ್ರಭುವಾದ ಶ್ರೀಕೃಷ್ಣನ ಧ್ಯಾನದಲ್ಲಿ ಮುಳುಗಿ ಧರ್ಮರಾಜನ ಪ್ರಶ್ನೆಗಳಿಗೆ ಏನೂ ಉತ್ತರಕೊಡಲಾರದೇ ಹೋದನು. ಶ್ರೀಕೃಷ್ಣನಲ್ಲಿದ್ದ ಪರಮಪ್ರೇಮಕ್ಕೆ ಪರವಶನಾಗಿ ಆತನ ಅಗಲಿಕೆಯನ್ನು ತಾಳಲಾರದೇ ಕಂಗೆಟ್ಟು ತತ್ತರಿಸಿಹೋಗಿದ್ದನು. ಹೇಗೋ ಉಮ್ಮಳಿಸಿ ಬರುತ್ತಿದ್ದ ದುಃಖವನ್ನು ಅತಿಕಷ್ಟದಿಂದ ತಡೆದುಕೊಂಡು ಕಣ್ಣುಗಳಿಂದ ಸುರಿಯುತ್ತಿದ್ದ ಜಲಧಾರೆಯನ್ನು ಕೈಯಿಂದ ಒರೆಸಿಕೊಂಡು ಸಾರಥ್ಯವೇ ಮುಂತಾದ ಕಾರ್ಯಗಳ ಸಮಯದಲ್ಲಿ ಶ್ರೀಭಗವಂತನು ತನ್ನಲ್ಲಿ ತೋರಿಸುತ್ತಿದ್ದ ಸ್ನೇಹ, ಸಲಿಗೆ, ಹೃದಯೈಕ್ಯಹಿತಚಿಂತನೆಗಳನ್ನು ಬಾರಿ-ಬಾರಿಗೂ ನೆನೆಯುತ್ತಾ ಬಾಷ್ಪದಿಂದ ಗದ್ಗದವಾಗಿದ್ದ ಧ್ವನಿಯ ಮಾತಿನಿಂದ ಅಣ್ಣನಾದ ಧರ್ಮರಾಜನಿಗೆ ಹೀಗೆ ಉತ್ತರಿಸಿದನು : (ಶ್ಲೋಕ 2-4)

"ಮಹಾರಾಜ! ಬಂಧುವಿನ ರೂಪವನ್ನು ಧರಿಸಿ ಬಂದ ಶ್ರೀಹರಿಯು ನನಗೆ ಮೋಸಮಾಡಿಬಿಟ್ಟನು. ಮಹಾದೇವತೆಗಳನ್ನೂ ಆಶ್ಚರ್ಯಚಕಿತರನ್ನಾಗಿ ಮಾಡುತ್ತಿದ್ದ ನನ್ನ ತೇಜಸ್ಸು-ಪರಾಕ್ರಮಗಳನ್ನು ಕಿತ್ತುಕೊಂಡು ಬಿಟ್ಟನು. ಪ್ರಾಣವು ಹೋದೊಡನೆಯೇ ಈ ದೇಹವು ಶವದ ರೂಪವನ್ನು ತಾಳಿ ಅತ್ಯಂತ ಅಪ್ರಿಯವೂ ಅಸಹ್ಯವೂ ಆಗಿಬಿಡುವಂತೆ–ಯಾವ ಮಹಾತ್ಮನ ಕ್ಷಣಮಾತ್ರದ ಅಗಲಿಕೆಯಿಂದಲೇ ಈ ಲೋಕವು ಅಪ್ರಿಯವೂ ಅಸಹ್ಯವೂ ಆಗಿಬಿಡುವುದೋ–ಅಂತಹ ಶ್ರೀಹರಿಯು ನನ್ನನ್ನು ವಂಚಿಸಿಬಿಟ್ಟನು. ಯಾವಾತನ ಬಲದ ಆಸರೆಯಿಂದಲೇ ನಾನು ದ್ರೌಪದೀಸ್ವಯಂವರದ ಪ್ರಾರಂಭದಲ್ಲಿ ಕಾಮವಶರಾಗಿ ಕೊಬ್ಬಿಹೋಗಿದ್ದ ರಾಜರ ತೇಜಸ್ಸನ್ನು ಕಸಿದುಕೊಳ್ಳುತ್ತಾ ಮತ್ಸ್ಯಯಂತ್ರವನ್ನು ಸಜ್ಜಾಗಿದ್ದ ಬಿಲ್ಲು-ಬಾಣಗಳಿಂದ ಭೇದಿಸಿ ದ್ರೌಪದಿಯನ್ನು ಪಡೆದೆನೋ–ಆ ಮಹಾಪುರುಷನು ನನಗೆ ಮೋಸ ಮಾಡಿಹೋದನು. ಯಾವನ ಸಾನ್ನಿಧ್ಯಬಲದಿಂದಲೇ ನಾನು ದೇವತಾಗಣ

ಸಹಿತನಾದ ದೇವೇಂದ್ರನನ್ನೂ ಸೋಲಿಸಿ ಅಗ್ನಿದೇವನ ತೃಪ್ತಿಗಾಗಿ ಖಾಂಡವ ವನವನ್ನು ಸಮರ್ಪಣೆಮಾಡಿದೆನೋ, ದಾನವಶಿಲ್ಪಿಯಾದ ಮಯನ ಅದ್ಭುತ ವಾದ ಕಲಾಕೌಶಲದಿಂದ ಕೂಡಿದ ಸಭೆಯನ್ನು ಸಂಪಾದಿಸಿದೆನೋ ಮತ್ತು ನಾನಾದಿಕ್ಕುಗಳಿಂದ ಆಗಮಿಸಿದ ಅರಸರು ನಿನಗೆ ಯಜ್ಞದಲ್ಲಿ ಅಮೂಲ್ಯ ವಾದ ಕಪ್ಪ-ಕಾಣಿಕೆಗಳನ್ನು ಹೇರಳವಾಗಿ ತಂದೊಪ್ಪಿಸಿದರೋ–ಆ ತೇಜೋ ಮೂರ್ತಿಯಿಂದ ನಾನು ವಂಚಿತನಾದೆನು. ಹತ್ತು ಸಾವಿರ ಆನೆಗಳ ಬಲ- ಪರಾಕ್ರಮಗಳಿಂದ ಸಂಪನ್ನನಾದ, ನಿನ್ನ ತಮ್ಮನಾದ ಆರ್ಯ ಭೀಮಸೇನನು ರಾಜರ ತಲೆಗಳನ್ನು ತಿರಸ್ಕಾರದಿಂದ ಮೆಟ್ಟಿದ್ದ ಜರಾಸಂಧನನ್ನು ಯಾವಾತನ ಶಕ್ತಿಯಿಂದ ಸಂಹರಿಸಿ–ಆತನು ಮಹಾಭೈರವಯಜ್ಞದಲ್ಲಿ ಬಲಿಯನ್ನಾಗಿ ಸಮರ್ಪಿಸಲು ಸಂಕಲ್ಪಿಸಿದ್ದ ರಾಜರೆಲ್ಲರನ್ನೂ ಬಂಧನದಿಂದ ಬಿಡಿಸಿ–ಅವರು ನಿನಗೆ ಯಜ್ಞದಲ್ಲಿ ಅಪಾರವಾದ ಕಪ್ಪ-ಕಾಣಿಕೆಗಳನ್ನು ಸಮರ್ಪಿಸುವಂತೆ ಮಾಡಿದನೋ–ಆ ಶಕ್ತಿಧರನು ನನ್ನನ್ನು ತೊರೆದುಹೋದನು. ರಾಜಸೂಯ ಯಜ್ಞದ ಅಭಿಷೇಕಜಲದಿಂದ ಪವಿತ್ರವಾಗಿದ್ದ ದ್ರೌಪದಿಯ ಸಿರಿಮುಡಿಯನ್ನು ದುರಾತ್ಮರು ಬಹಿರಂಗಸಭೆಯಲ್ಲಿ ಮುಟ್ಟುವ ಸಾಹಸಮಾಡಿದಾಗ ಆಕೆಯು ತಲೆಗೂದಲುಗಳನ್ನು ಬಿಚ್ಚಿದ್ದ ಸ್ಥಿತಿಯಲ್ಲೇ ಇಟ್ಟು, ಅದೇ ಕೆದರಿದ ಕೇಶಪಾಶ ಮತ್ತು ಕಣ್ಣೀರುಗಳಿಂದ ಕೂಡಿ ಯಾವ ಮಹಾತ್ಮನ ಪಾದಗಳಲ್ಲಿ ಬಿದ್ದು ತನ್ನ ಹೃದಯವನ್ನು ತೋಡಿಕೊಂಡಾಗ–ಆತನು ಆಕೆಯನ್ನು ಸಂತೈಸಿ ಮಾತುಕೊಟ್ಟಂತೆ–ದುಷ್ಟಶತ್ರುಗಳ ಸ್ತ್ರೀಯರಿಗೆ ಅದೇ ದುಃಸ್ಥಿತಿಯು ಬರುವಂತೆ ಮಾಡಿದನೋ–ಅಂತಹ ಸತ್ಯಸಂಕಲ್ಪನೂ, ಸಮರ್ಥನೂ ಆದ ಸ್ವಾಮಿಯು ನನ್ನನ್ನು ತೊರೆದುಹೋದನು. ದುಷ್ಟದುರ್ಯೋಧನನಿಂದ ಪ್ರೇರಿತರಾದ ದುರ್ವಾಸಮಹರ್ಷಿಗಳು ತಮ್ಮ ಹತ್ತು ಸಾವಿರ ಶಿಷ್ಯರೊಡನೆ ಭೋಜನಮಾಡಲು ಅಕಾಲದಲ್ಲಿ ಅತಿಥಿಯಾಗಿ ಬಂದಾಗ ಯಾವ ಆಪದ್ಬಾಂಧವನು ಅರಣ್ಯಕ್ಕೆ ಬಂದು ದ್ರೌಪದಿಯು ತಿಂದು ಉಳಿದಿದ್ದ ಸೊಪ್ಪಿನ ಚೂರನ್ನು ತಿಂದು ತೃಪ್ತಿಯಾಯಿತೆಂದು ಹೇಳಿ, ಸ್ನಾನಕ್ಕೆಂದು ನೀರಿನಲ್ಲಿ ಮುಳುಗಿದ್ದ ಮಹರ್ಷಿಗಳ ಗುಂಪು ಶ್ರೀಕೃಷ್ಣನ ತೃಪ್ತಿಯಿಂದ ಮೂರು ಲೋಕಕ್ಕೂ ತೃಪ್ತಿಯಾಗಿದೆ–ಎಂದು ಅನುಭವದಿಂದ ನುಡಿಯುವಂತೆ ಮಾಡಿ

ಅವರ ಶಾಪಭಯದಿಂದ ನಮ್ಮನ್ನು ಸಂರಕ್ಷಿಸಿದನೋ–ಆ ಸ್ವಾಮಿಯು ನನ್ನನ್ನು ವಂಚಿಸಿಹೋದನು. ಪಾರ್ವತೀಸಮೇತನಾದ ಪರಶಿವನು ಯಾವನ ಪ್ರಭಾವದಿಂದ ವಿಸ್ಮಯಗೊಂಡೇ ನನಗೆ ಯುದ್ಧದಲ್ಲಿ ಪಾಶುಪತಾಸ್ತ್ರವನ್ನು ಅನುಗ್ರಹಿಸಿದನೋ, ಇತರ ದೇವತೆಗಳೂ ತಮ್ಮ ತಮ್ಮ ಅಸ್ತ್ರಗಳನ್ನು ದಯಪಾಲಿಸಿದರೋ ಮತ್ತು ನಾನು ಸಶರೀರನಾಗಿಯೇ ಮಹೇಂದ್ರನ ಸಭೆಗೆ ಹೋಗಿ ಆತನ ಮಹಾಸಿಂಹಪೀಠದಲ್ಲಿ ಅರ್ಧಾಸನದ ಗೌರವವನ್ನು ಪಡೆದೆನೋ–ಆತನಿಂದ ನಾನು ವಂಚಿತನಾದೆನು. ಅಣ್ಣಾ! ನಾನಾಗ ಸ್ವರ್ಗದಲ್ಲಿ ವಿಹರಿಸುತ್ತಿದ್ದಾಗ ಯಾವನ ಅನುಗ್ರಹದಿಂದ ಪ್ರಭಾವಿತವಾದ ಗಾಂಡೀವ ಧನುಸ್ಸನ್ನು ಹಿಡಿದುಕೊಂಡಿದ್ದ ನನ್ನ ಎರಡು ತೋಳುಗಳನ್ನೂ ಇಂದ್ರಸಹಿತರಾದ ದೇವತೆಗಳೆಲ್ಲರೂ ತಮ್ಮ ರಕ್ಷಣೆಗಾಗಿ ಆಶ್ರಯಿಸಿದರೋ–ಆ ಸರ್ವಸಮರ್ಥನಾದ ಸಂರಕ್ಷಕನು ನನ್ನನ್ನು ಬಿಟ್ಟುಹೋದನು. ಜಯಿಸಲಸಾಧ್ಯ ವಾದ ಸತ್ವದಿಂದ ಕೂಡಿದ್ದ ಅಪಾರವಾದ ಕೌರವಸೇನಾಸಾಗರವನ್ನು ನಾನು ಯಾವನ ಬಂಧುತ್ವದ ಬಲದಿಂದ ಏಕಾಕಿಯಾಗಿಯೇ ರಥದಿಂದ ದಾಟಿ ಶತ್ರುಗಳ ಪುಷ್ಕಳವಾದ ಧನವನ್ನು ಕಿತ್ತುತಂದೆನೋ, ಶತ್ರುವಾಗಿದ್ದ ಅಶ್ವತ್ಥಾಮನ ತೇಜಸ್ಸಿಗೆ ಕಾರಣವಾಗಿದ್ದ ಶಿರೋರತ್ನವನ್ನು ಅವನ ತಲೆಯಿಂದ ಕಿತ್ತು ತಂದೆನೋ–ಅಂತಹ ಶಕ್ತಿನಿಧಿಯಾದ, ಪರಮೋಪಕಾರಿಯಾದ ಪ್ರಭುವು ಕಣ್ಮರೆಯಾಗಿಬಿಟ್ಟನು. ರಾಜೇಂದ್ರನೇ! ಅಗಣಿತಸಂಖ್ಯೆಯಲ್ಲಿದ್ದ ರಾಜರ ರಥ ಸಮೂಹಗಳಿಂದ ಕೂಡಿದ್ದ ಭೀಷ್ಮ, ಕರ್ಣ, ಗುರುದ್ರೋಣರು ಮತ್ತು ಶಲ್ಯ–ಇವರ ಸೈನ್ಯಗಳಲ್ಲಿ ನನ್ನ ಮುಂದೆ ಸಂಚರಿಸುತ್ತಾ ಯಾವನು ಆ ಅತಿರಥ-ಮಹಾರಥರ ಆಯುಸ್ಸು, ಮನಸ್ಸು ಮತ್ತು ಶಕ್ತಿಗಳನ್ನು ಏಕಕಾಲದಲ್ಲಿ ತನ್ನ ದೃಷ್ಟಿಮಾತ್ರದಿಂದಲೇ ಅಪಹರಿಸುತ್ತಿದ್ದನೋ ಮತ್ತು ಯಾವನ ಬಾಹುಗಳ ನೆರಳಿನಲ್ಲಿ ಸುರಕ್ಷಿತನಾಗಿದ್ದ ನನ್ನ ಮೇಲೆ ಆಚಾರ್ಯ ದ್ರೋಣರು, ಭೀಷ್ಮ ಕರ್ಣ, ಅಶ್ವತ್ಥಾಮ, ತ್ರಿಗರ್ತರು, ಶಲ್ಯ, ಜಯದ್ರಥ, ಬಾಹ್ಲಿಕ–ಇನ್ನೂ ಮುಂತಾದವರು ಪ್ರಯೋಗಿಸಿದ್ದ ಅಮೋಘವಾದ ಅಸ್ತ್ರಗಳೂ ನನ್ನನ್ನು ಮುಟ್ಟಲಾರದೇ–ಅಸುರರು ಶ್ರೀನರಸಿಂಹಭಕ್ತನಾದ ಪ್ರಹ್ಲಾದನ ಮೇಲೆ ಪ್ರಯೋಗಿಸಿದ ಅಸ್ತ್ರಗಳಂತೆ ವಿಫಲವಾದುವೋ–ಅಂತಹ ಅನಂತ ಶಕ್ತಿನಿಧಿಯೂ, ಆಶ್ರಿತರಕ್ಷಕನೂ ಆದ ಪ್ರಭುವು ತನ್ನನ್ನು ಉಪಸಂಹಾರ

ಮಾಡಿಕೊಂಡುಬಿಟ್ಟನು. ಯಾವನ ಅಡಿದಾವರೆಗಳನ್ನು ಸಾಧು-ಸಜ್ಜನರು ಮೋಕ್ಷಪ್ರಾಪ್ತಿಗಾಗಿ ಭಜಿಸುತ್ತಾರೆಯೋ–ಅಂತಹ ಭಕ್ತಜನರಿಗೆ ತನ್ನನ್ನೇ ಸಂಪೂರ್ಣವಾಗಿ ಕೊಟ್ಟುಕೊಂಡುಬಿಡುವ ಪರಮೋದಾರಿಯಾದ ಪರಮೇಶ್ವರನನ್ನು ಕುಬುದ್ಧಿಯಿಂದ ನಾನು–'ಯುದ್ಧದಲ್ಲಿ ಸಾರಥಿಯಾಗಿರು'–ಎಂದು ಅತ್ಯಲ್ಪಕೆಲಸಕ್ಕಾಗಿ ಕೇಳಿ ಬಳಸಿಕೊಂಡೆನು. ಆದರೆ ಆತನ ಪ್ರಭಾವದಿಂದಲೇ, ರಥಾರೂಢರಾಗಿದ್ದ ನನ್ನ ಶತ್ರುಗಳು ವಂಚಿತರಾಗಿ, ನನ್ನ ಅಶ್ವಗಳು ಬಳಲಿ ನಾನು ಭೂಮಿಯಲ್ಲಿ ನಿಲ್ಲಬೇಕಾಗಿ ಬಂದ ಪರಿಸ್ಥಿತಿಯಲ್ಲೂ ನನ್ನನ್ನು ಹೊಡೆಯಲೂ ಸಮರ್ಥರಾಗಲಿಲ್ಲ. ಅಣ್ಣಾ! ಆಟದ ಸಮಯಗಳಲ್ಲಿ ಆತನು ಹೇಳುತ್ತಿದ್ದ–'ಓ ಪಾರ್ಥ! ಓ ಅರ್ಜುನ! ಓ ಸಖನೇ! ಓ ಕುರುನಂದನನೇ!'–ಇವೇ ಮೊದಲಾದ ಉದಾರವಾದ, ರಮಣೀಯವಾದ, ನಸುನಗೆಗೂಡಿದ, ಹೃದಯಸ್ಪರ್ಶಿಯಾದ ಮಾತುಗಳು ಸ್ಮರಣೆಗೆ ಬಂದು ನನ್ನ ಹೃದಯವನ್ನು ಸೂರೆಗೊಳ್ಳುತ್ತಿವೆ. ಮಲಗುವ ಸಮಯದಲ್ಲಿ, ಕುಳಿತುಕೊಳ್ಳುವ ಕಾಲದಲ್ಲಿ, ತಿರುಗಾಡುವ ಸಂದರ್ಭದಲ್ಲಿ, ಆತ್ಮಶ್ಲಾಘನೆಮಾಡಿಕೊಳ್ಳುವ ಸಮಯಗಳಲ್ಲಿ ಮತ್ತು ಭೋಜನಮಾಡುವ ಕಾಲಗಳಲ್ಲಿ ಹೃದಯೈಕ್ಯವಿದ್ದುದರಿಂದ–'ಮಿತ್ರ! ನೀನೇ ತುಂಬಾ ದೊಡ್ಡವನೋ?'–ಎಂದು ನಾನು ತಿರಸ್ಕಾರದ ಮಾತುಗಳನ್ನಾಡಿದರೂ ಆತನು ಪರಮೋದಾರಿಯಾಗಿದ್ದುದರಿಂದಲೂ, ಮಹಾಮಹಿಮನಾಗಿದ್ದುದರಿಂದಲೂ–ಮಿತ್ರನ ತಪ್ಪನ್ನು ಮಿತ್ರನೂ, ಮಗನ ಅಪರಾಧವನ್ನು ತಂದೆಯೂ ಸಹಿಸಿಕೊಳ್ಳುವಂತೆ–ದುರ್ಬುದ್ಧಿಯಾದ ನನ್ನ ಎಲ್ಲ ಅಪರಾಧಗಳನ್ನೂ ಸಹಿಸಿಕೊಂಡಿದ್ದನೋ–ಅಂತಹ ಕರುಣಾಮೂರ್ತಿಯು ಕಣ್ಮರೆಯಾದನು. ರಾಜೇಂದ್ರ! ಮಿತ್ರಶ್ರೇಷ್ಠನೂ, ಪ್ರಿಯಮಿತ್ರನೂ, ಸುಹೃತ್ತೂ ಆದ ಪುರುಷೋತ್ತಮನನ್ನು ಕಳೆದುಕೊಂಡು ಶೂನ್ಯಹೃದಯನಾಗಿ ನಾನು ಆತನ ಸ್ತ್ರೀಯರನ್ನು ಜೋಪಾನವಾಗಿ ಕರೆತರುತ್ತಿದ್ದೆನು. ಮಾರ್ಗಮಧ್ಯದಲ್ಲಿ ಕೆಲವು ಕೀಳುಮಟ್ಟದ ಅಭೀರರಿಂದ ನಾನು ಸ್ತ್ರೀಯಂತೆ ಸೋಲಿಸಲ್ಪಟ್ಟೆನು. ಆ ಸ್ತ್ರೀಯರನ್ನು ಸಂರಕ್ಷಿಸಲಾರದೇ ಹೋದೆನು. ಯಾವುದರ ಮುಂದೆ ದೊಡ್ಡ-ದೊಡ್ಡ ರಾಜರೂ ತಲೆ ತಗ್ಗಿಸುತ್ತಿದ್ದರೋ ಅದೇ ಗಾಂಡೀವಧನುಸ್ಸು, ಅದೇ ಬಾಣಗಳು, ಅದೇ ರಥ ಮತ್ತು ಅದೇ ಕುದುರೆಗಳು, ಅತಿರಥಿಯಾದ ನಾನೂ ಆ ಹಿಂದಿನವನೇ.

ಆದರೆ ಶ್ರೀಕೃಷ್ಣನನ್ನು ಕಳೆದುಕೊಂಡಿದ್ದರಿಂದ ಅವೆಲ್ಲವೂ ಕ್ಷಣಮಾತ್ರದಲ್ಲಿ ಬೂದಿಯಲ್ಲಿ ಮಾಡಿದ ಹೋಮದಂತೆಯೂ, ನೀಚನಿಗೆ ಮಾಡಿದ ಸೇವೆಯಂತೆಯೂ, ಮರುಭೂಮಿಯಲ್ಲಿ ಬಿತ್ತಿದ ಬೀಜದಂತೆಯೂ–ವ್ಯರ್ಥವಾಗಿಬಿಟ್ಟುವು. ಇನ್ನು ನೀನು ಕುಶಲಪ್ರಶ್ನೆ ಮಾಡಿದ ಬಂಧುಗಳಾದ ಯಾದವರ ಗತಿಯನ್ನು ಹೇಳುತ್ತೇನೆ ; ಕೇಳು :

ಮಿತ್ರನಗರಿಯಾದ ದ್ವಾರಕೆಯಲ್ಲಿ ವಾಸಮಾಡುತ್ತಿದ್ದ ಆ ಯಾದವರು ಬ್ರಾಹ್ಮಣಶಾಪದಿಂದ ಬುದ್ಧಿಯನ್ನು ಕಳೆದುಕೊಂಡು, 'ವಾರುಣೀ' ಎಂಬಮದ್ಯವನ್ನು ಕುಡಿದು ಅದರ ಅಮಲಿನಿಂದಾಗಿ ಬುದ್ಧಿವ್ಯತ್ಯಾಸಹೊಂದಿ ಒಬ್ಬರಿಗೊಬ್ಬರಿಗೆ ಗುರುತು-ಪರಿಚಯಗಳೇ ಇರಲಿಲ್ಲವೇನೋ ಎಂಬಂತೆ ಮುಷ್ಟಿಗಳಿಂದ ಪರಸ್ಪರವಾಗಿ ಹೊಡೆದಾಡಿಕೊಂಡು ಸತ್ತುಹೋದರು. ಅವರಲ್ಲಿ ಉಳಿದಿರುವವರು ನಾಲ್ಕು ಅಥವಾ ಐದು ಮಂದಿ ಮಾತ್ರವೇ. (ಶ್ಲೋಕ 5-23)

**ಪ್ರಾಯೇಣೈತದ್ಭಗವತ ಈಶ್ವರಸ್ಯ ವಿಚೇಷ್ಟಿತಮ್ ।**
**ಮಿಥೋ ನಿಘ್ನನ್ತಿ ಭೂತಾನಿ ಭಾವಯನ್ತಿ ಚ ಯನ್ಮಿಥಃ ॥೨೪॥**

**ಜಲೌಕಸಾಂ ಜಲೇ ಯದ್ವನ್ಮಹಾನ್ತೋಽದನ್ತ್ಯಣೀಯಸಃ ।**
**ದುರ್ಬಲಾನ್ಬಲಿನೋ ರಾಜನ್ಮಹಾನ್ತೋ ಬಲಿನೋ ಮಿಥಃ ॥೨೫॥**

ಈ ಪ್ರಪಂಚದಲ್ಲಿ ಪ್ರಾಣಿಗಳು ಪರಸ್ಪರವಾಗಿ ಹೊಡೆದಾಡಿ ಸಾಯುವಂತೆಯೇ ಪರಸ್ಪರವಾಗಿ ಪಾಲನೆ-ಪೋಷಣೆಗಳನ್ನೂ ಮಾಡುತ್ತವೆ. ಈ ವಿಚಿತ್ರವ್ಯವಹಾರಗಳು ಅವುಗಳಲ್ಲಿರುವುದು ಬಹುಶಃ ಸರ್ವಶಕ್ತಿಶಾಲಿಯಾದ ಭಗವಂತನ ಲೀಲಾವಿಲಾಸದಿಂದಲೇ. ನೀರಿನಲ್ಲಿ ಬದುಕುವ ಮೀನು ಮುಂತಾದ ಜಲಚರಪ್ರಾಣಿಗಳಲ್ಲಿ ದೊಡ್ಡದು-ಚಿಕ್ಕದನ್ನು ತಿಂದುಹಾಕುವಂತೆ–ಜನರಲ್ಲೂ ಬಲಶಾಲಿಗಳು ದುರ್ಬಲರನ್ನು ಕೊಂದುಹಾಕುತ್ತಾರೆ. ಇಬ್ಬರೂ ಬಲಶಾಲಿಗಳಾಗಿದ್ದರೆ ಅವರು ಪರಸ್ಪರವಾಗಿ ಹೊಡೆದಾಡಿಕೊಂಡು ಸಾಯುತ್ತಾರೆ.

ಇದೇ ರೀತಿಯಲ್ಲಿ ಭಗವಂತನು ಮಹಾಬಲಿಷ್ಠರಾಗಿ ದೊಡ್ಡವರಾದ ಯಾದವರ ಮೂಲಕ ಇತರ ರಾಜರನ್ನು ಸಂಹಾರಮಾಡಿಸಿ, ಅನಂತರ ಆ ಯದುವಂಶೀಯರಲ್ಲೇ ಒಬ್ಬರು ಮತ್ತೊಬ್ಬರನ್ನು ಕೊಂದುಹಾಕುವಂತೆ

ಮಾಡಿ ಭೂಮಿಯ ಭಾರವನ್ನು ಇಳಿಸಿದನು. ಆ ಗೋವಿಂದನ ಮಾತುಗಳು ಆಯಾಸ್ಥಳ, ಸಮಯ, ಸನ್ನಿವೇಶ, ಸಂದರ್ಭ, ಉದ್ದೇಶಗಳಿಗೆ ಅನುಗುಣ ವಾಗಿದ್ದು ನನ್ನ ಮನಸ್ಸಿನ ಸಂತಾಪವನ್ನು ಶಮನಗೊಳಿಸುತ್ತಿದ್ದುವು. ಈಗ ಅವು ಸ್ಮರಣೆಗೆ ಬಂದು ನನ್ನ ಮನಸ್ಸನ್ನು ಸೂರೆಗೊಳ್ಳುತ್ತಿವೆ."

(ಶ್ಲೋಕ 26-27)

ಸೂತಪುರಾಣಿಕರು ಹೇಳುತ್ತಾರೆ :

"ಹೀಗೆ ಶ್ರೀಕೃಷ್ಣಪರಮಾತ್ಮನ ಅಡಿದಾವರೆಗಳನ್ನು ಅತಿಗಂಭೀರವಾದ ಸ್ನೇಹದಿಂದ ಸ್ಮರಿಸುತ್ತಿರುವಂತೆಯೇ ಅರ್ಜುನನ ಬುದ್ಧಿಯು ತಿಳಿಯಾಗಿ, ನಿರ್ಮಲವಾಗಿ ಪ್ರಶಾಂತವಾಗಿಬಿಟ್ಟಿತು. ಶ್ರೀಕೃಷ್ಣನ ಪಾದಾರವಿಂದಗಳನ್ನು ಸ್ಮರಣೆಮಾಡಿದ್ದರಿಂದ ಆತನಲ್ಲಿ ಭಕ್ತಿಯ ಪ್ರವಾಹವು ವೇಗವಾಗಿ ಹರಿದು ಬಂದು ಆತನ ಬುದ್ಧಿಯ ಕಶ್ಮಲಗಳನ್ನೆಲ್ಲಾ ತೊಳೆದುಹಾಕಿತು. ಶ್ರೀಕೃಷ್ಣನು ಮಹಾಭಾರತಯುದ್ಧದ ಪ್ರಾರಂಭದಲ್ಲಿ ಆತನಿಗೆ ಮಾಡಿದ್ದ ಗೀತೋಪದೇಶದ ಜ್ಞಾನವು-ಕಾಲ, ಕರ್ಮ ಮತ್ತು ತಮೋಗುಣಗಳ ಪ್ರಭಾವದಿಂದ ಅಲ್ಲಿಯವರೆಗೂ ಮರೆಯಾಗಿದ್ದು—ಈಗ ಮತ್ತೆ ಪುನಃ ಆತನ ಸ್ಮೃತಿಪಥವನ್ನು ಬೆಳಗಿತು. ಬ್ರಹ್ಮಸಮಾಧಿಯಿಂದ ಮಾಯೆಯ ಆವರಣವು ಕಳಚಿಬಿದ್ದು ತ್ರಿಗುಣಾತೀತಸ್ಥಿತಿಯು ಆತನಿಗೆ ಉಂಟಾಯಿತು. ಅನ್ಯಭಾವನೆಯ ಸಂಶಯವು ನಿರ್ಮೂಲವಾಗಿ ಸೂಕ್ಷ್ಮಶರೀರವೂ ದೂರ ಸರಿದು ಆತನು ಜನ್ಮಚಕ್ರದಿಂದ ಪೂರ್ಣವಾಗಿ ಬಿಡುಗಡೆಹೊಂದಿದನು. (ಶ್ಲೋಕ 28-31)

ಶ್ರೀಭಗವಂತನು ಸ್ವಧಾಮಕ್ಕೆ ತೆರಳಿದ ಮತ್ತು ಯದುವಂಶವು ಕ್ಷಯಿಸಿ ಹೋದ ಸಮಾಚಾರವನ್ನು ಕೇಳಿ ಯುಧಿಷ್ಠಿರನು ನಿಶ್ಚಲಬುದ್ಧಿಯಿಂದ ತಾನೂ ಸ್ವರ್ಗದ ಮಾರ್ಗವನ್ನು ಹಿಡಿಯಲು ನಿರ್ಧಾರಮಾಡಿದನು. ಕುಂತೀ ದೇವಿಯೂ ಕೂಡ ಯದುವಂಶಕ್ಷಯ ಮತ್ತು ಶ್ರೀಕೃಷ್ಣನ ಸ್ವಧಾಮ ನಿರ್ಯಾಣದ ವೃತ್ತಾಂತವನ್ನು ಅರ್ಜುನನಿಂದ ಕೇಳಿ ಅನನ್ಯಭಕ್ತಿಯಿಂದ ಆ ಭಗವಂತನಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ಸಂಸಾರಬಂಧನದಿಂದ ಸಂಪೂರ್ಣ ವಾಗಿ ಬಿಡುಗಡೆಯನ್ನು ಹೊಂದಿದಳು. ಜನ್ಮರಹಿತನಾದ ಭಗವಂತನು ಮುಳ್ಳಿನಿಂದಲೇ ಮುಳ್ಳನ್ನು ತೆಗೆದುಹಾಕಿ, ಕೊನೆಗೆ ಎರಡನ್ನೂ ಬಿಸಾಡು

ವಂತೆ–ಯಾವ ಶರೀರವನ್ನು ಭೂಮಿಯಲ್ಲಿ ಪ್ರಕಟಗೊಳಿಸಿ ಅದರಿಂದ ಭೂಮಿಯ ಭಾರವನ್ನು ಇಳಿಸಿದನೋ–ಆ ಶರೀರವನ್ನೂ ತ್ಯಜಿಸಿಬಿಟ್ಟನು. ಭಗವಂತನ ದೃಷ್ಟಿಯಲ್ಲಿ ಆ ಎರಡು ಶರೀರಗಳೂ ಸಮಾನವೇಆಗಿವೆಯಷ್ಟೆ!

**ಯಯಾಹರದ್ಭುವೋ ಭಾರಂ ತಾಂ ತನುಂ ವಿಜಹಾವಜಃ ।**
**ಕಣ್ಟಕಂ ಕಣ್ಟಕೇನೇವ ದ್ವಯಂ ಚಾಪೀಶಿತುಃ ಸಮಮ್ * ॥೩೪॥**

ನಟನಂತೆ ಮತ್ಸ್ಯಾದಿ ಅವತಾರಶರೀರಗಳನ್ನು ಸ್ವೀಕರಿಸುವ ಭಗವಂತನು ಭೂಭಾರವನ್ನಿಳಿಸಲು ಯಾವ ಯಾದವದೇಹದಿಂದ ಭೂಮಿಗಿಳಿದಿದ್ದನೋ–ಆ ಶರೀರವನ್ನೂ ತ್ಯಜಿಸಿಬಿಟ್ಟನು. ಶ್ರವಣಮಂಗಳವಾದ ದಿವ್ಯ ಲೀಲೆಗಳನ್ನು ಯಾವ ದೇಹದಿಂದ ನಡೆಸಿದ್ದನೋ, ಆ ದೇಹವನ್ನು ಭಗವಂತನು ಭೂಮಿಯಲ್ಲಿ ಯಾವ ದಿನದಂದು ತ್ಯಜಿಸಿದನೋ–ಆ ದಿನವೇ ಅವಿವೇಕಿಗಳಿಗೆ ಅಧರ್ಮಪ್ರವೃತ್ತಿಯನ್ನುಂಟುಮಾಡುವ ಕಲಿಯು ಭೂಮಿಗೆ ಧುಮುಕಿದ್ದನ್ನು ವಿವೇಕಿಯಾದ ಧರ್ಮರಾಜನು ಗಮನಿಸಿದನು. ಆತನು ತನ್ನ ರಾಜಧಾನಿಯಲ್ಲೂ, ರಾಷ್ಟ್ರದಲ್ಲೂ, ಮನೆ-ಮನೆಗಳಲ್ಲೂ, ಮನಸ್ಸಿನಲ್ಲೂ ದುರಾಸೆ, ಅಸತ್ಯ, ಕಾಪಟ್ಯ, ಹಿಂಸೆ–ಮುಂತಾದ ಅಧರ್ಮಚಕ್ರವನ್ನು ನಡೆಸುವ ಕಲಿಪುರುಷನ ಆಕ್ರಮಣವನ್ನೂ–ವಿಸ್ತಾ ರವನ್ನೂ ಕಂಡುಮಹಾಪ್ರಸ್ಥಾನ ಮಾಡಲು ನಿಶ್ಚಯಿಸಿದನು. ಆ ಸಾರ್ವಭೌಮನು ವಿನಯಸಂಪನ್ನನಾಗಿದ್ದ, ಗುಣಸಂಪತ್ತಿನಿಂದ ತನ್ನನ್ನೇ ಸರಿಹೋಲುತ್ತಿದ್ದ, ತನ್ನ ಮೊಮ್ಮಗನಾದ ಪರೀಕ್ಷಿತನನ್ನು ಸಮುದ್ರಪರ್ಯಂತವಾದ ಭೂಮಿಯ ಸಾಮ್ರಾಜ್ಯಪದವಿಯಲ್ಲಿ ಕುಳ್ಳಿರಿಸಿ ಹಸ್ತಿನಾವತಿಯಲ್ಲಿ ಪಟ್ಟಾಭಿಷೇಕಮಾಡಿದನು. ಹಾಗೆಯೇ ಆ ಪ್ರಭುವು ಮಧುರಾನಗರಿಯಲ್ಲಿ ಅನಿರುದ್ಧನ ಪುತ್ರನಾದ 'ವಜ್ರ'ನೆಂಬುವನನ್ನು ಶೂರಸೇನದೇಶದ ರಾಜನನ್ನಾಗಿ ನೆಲೆಗೊಳಿಸಿ, ತಾನು ಪ್ರಾಜಾಪತ್ಯವೆಂಬ

---

* **'ಯಯಾಹರದ್ಭುವೋ ಭಾರಂ' 'ಯಥಾ ಮತ್ಸ್ಯಾದಿರೂಪಾಣಿ'** ಎಂಬ ೩೪-೩೫ನೇ ಶ್ಲೋಕಗಳು ಪ್ರಾಚೀನಪ್ರತಿಯಲ್ಲಿಲ್ಲ. ವಿಜಯಧ್ವಜೀಯದಲ್ಲೂ ಈ ಶ್ಲೋಕಗಳು ಕಂಡುಬರುವುದಿಲ್ಲ. ಶ್ರೀಭಗವಂತನ ದೇಹವು ಅವತಾರದೆಶೆಯಲ್ಲೂ ದಿವ್ಯ ಚಿನ್ಮಯಸ್ವರೂಪವಾದುದು. ಅದರ ತ್ಯಾಗದ ಪ್ರಶ್ನೆಯೇ ಏಳುವುದಿಲ್ಲ–ಎಂಬ ಭಾವನೆಯಿಂದ ಈ ಶ್ಲೋಕಗಳನ್ನು ಅವರು ಗೌರವಿಸುವುದಿಲ್ಲವೆಂದು ಊಹಿಸಬಹುದಾಗಿದೆ.

ಇಷ್ಟಿಯನ್ನು ಮಾಡಿ, ಆಹವನೀಯವೇ ಮುಂತಾದ ಹೊರಗಿನ ಅಗ್ನಿಗಳನ್ನು ತನ್ನಲ್ಲಿಯೇ ಲಯಗೊಳಿಸಿಕೊಂಡು ಗೃಹಸ್ಥಾಶ್ರಮಧರ್ಮದಿಂದ ಮುಕ್ತನಾದನು. ತನ್ನ ಅಮೂಲ್ಯವಾದ ಪಟ್ಟೆ-ಪೀತಾಂಬರ, ಕಿರೀಟ-ಕಟಕಾದಿ ವಸ್ತ್ರಾಭರಣಗಳನ್ನೂ ಅಲ್ಲಿಯೇ ತ್ಯಜಿಸಿ, ಅಹಂಕಾರ-ಮಮಕಾರಗಳನ್ನು ತೊರೆದು, ಎಲ್ಲ ಸಾಂಸಾರಿಕಪಾಶಗಳನ್ನೂ ಕತ್ತರಿಸಿಕೊಂಡು ವಾಕ್ಕನ್ನು ಮನಸ್ಸಿನಲ್ಲಿ ಉಪಸಂಹಾರಮಾಡಿಕೊಂಡನು. ಮನಸ್ಸನ್ನು ಪ್ರಾಣದಲ್ಲೂ, ಪ್ರಾಣವನ್ನು ಅಪಾನದಲ್ಲೂ, ತನ್ನ ಕ್ರಿಯೆಯಿಂದ ಸಹಿತವಾದ ಆ ಅಪಾನ ವನ್ನು ಮೃತ್ಯುದೇವತೆಯಲ್ಲೂ, ಮೃತ್ಯುದೇವತೆಯನ್ನು ಪಂಚಭೂತಸೂಕ್ಷ್ಮಗಳಲ್ಲೂ ಲಯಗೊಳಿಸಿದನು. ಮೌನವನ್ನು ತಾಳಿ ಆ ಪಂಚಭೂತಸೂಕ್ಷ್ಮಗಳನ್ನು ತ್ರಿಗುಣಸಮುದಾಯದಲ್ಲಿ ವಿಲಯಗೊಳಿಸಿ, ಆ ತ್ರಿಗುಣಸಮುದಾಯವನ್ನು ಅದಕ್ಕೆ ಮೂಲವಾದ ಪ್ರಕೃತಿಯಲ್ಲಿ ಲಯಗೊಳಿಸಿದನು. ಅವೆಲ್ಲವನ್ನೂ ಜೀವಾತ್ಮನಲ್ಲಿ ಹೋಮಮಾಡಿ ಜೀವಾತ್ಮವನ್ನು ಅವಿನಾಶಿಯಾದ ಪರಬ್ರಹ್ಮದಲ್ಲಿ ಸೇರಿಸಿಬಿಟ್ಟನು. ನಾರುಮಡಿಯನ್ನುಟ್ಟು ಆಹಾರ-ಪಾನೀಯಗಳ ಸೇವನೆಯನ್ನು ತ್ಯಜಿಸಿ, ಮಾತನ್ನು ನಿಲ್ಲಿಸಿ, ಕೇಶವನ್ನು ಬಿಚ್ಚಿ ಕೆದರಿಕೊಂಡು ಜಡನಂತೆಯೂ, ಹುಚ್ಚನಂತೆಯೂ, ಪಿಶಾಚಿಯಂತೆಯೂ, ರೂಪ-ವೇಷ-ಕೃತಿಗಳಿಂದ ಕಾಣಿಸಿಕೊಳ್ಳುತ್ತಾ –ಕುರುಡನಂತೆ ಯಾವುದನ್ನೂ ಕಾಣದೇಕಿವುಡನಂತೆ ಯಾವುದನ್ನೂ ಕೇಳಿಸಿಕೊಳ್ಳದೇ ಮನೆಯಿಂದ ಹೊರಟುಬಿಟ್ಟನು. ಯಾವುದನ್ನು ಸೇರಿದ ಬಳಿಕ ಸಂಸಾರಕ್ಕೆ ಮರಳುವಿಕೆಯಿರುವುದಿಲ್ಲವೋ– ಅಂತಹ ಪರಬ್ರಹ್ಮವನ್ನು ಹೃದಯದಲ್ಲಿ ಧ್ಯಾನಮಾಡುತ್ತಾ ಮಹಾತ್ಮರೆಲ್ಲರೂ ಮಹಾಪ್ರಸ್ಥಾನಮಾಡುವ ಉತ್ತರದಿಕ್ಕಿನ ಕಡೆಗೆ ಹೊರಟನು. ಆತನ ಒಡಹುಟ್ಟಿದವರೆಲ್ಲರೂ, ಅಧರ್ಮದ ಸ್ನೇಹಿತನಾದ ಕಲಿಪುರುಷನು ಲೋಕದಲ್ಲಿ ಎಲ್ಲರನ್ನೂ ಆಕ್ರಮಿಸಿರುವುದನ್ನು ಗಮನಿಸಿ ತಾವೂ ದೃಢನಿಶ್ಚಯಮಾಡಿ ಅಣ್ಣನನ್ನು ಹಿಂಬಾಲಿಸಿ ಹೊರಟರು. ಅವರು ಜೀವನದ ಇತರ ಎಲ್ಲ ಪುರುಷಾರ್ಥಗಳನ್ನೂ ಅನುಭವಿಸಿದ್ದು, ಶ್ರೀಕೃಷ್ಣನೇ ಪರಮಪುರುಷಾರ್ಥವೆಂದು ಕಂಡುಕೊಂಡು, ಜೀವನದ ಕಟ್ಟಕಡೆಯ ಸಮಯ ಬಂದಿತು– ಎಂಬುದನ್ನು ಗಮನಿಸಿ ಆ ಶ್ರೀಕೃಷ್ಣಪರಮಾತ್ಮನ ಪಾದಾರವಿಂದಗಳನ್ನೇ ಮನಸ್ಸಿನಲ್ಲಿ ನೆಲೆಗೊಳಿಸಿಕೊಂಡರು. ಹಾಗೆ ಅವರೆಲ್ಲರೂ ಶ್ರೀಭಗವಂತನ

ಪಾದಾರವಿಂದಗಳ ಧ್ಯಾನದಿಂದ ಉಕ್ಕಿಬರುತ್ತಿದ್ದ ನಿರತಿಶಯವಾದ ಭಕ್ತಿಯಿಂದ ಪರಿಶುದ್ಧಬುದ್ಧಿಯುಳ್ಳವರಾಗಿ ಸರ್ವೋತ್ತಮವೂ–ಸರ್ವಾತೀತವೂ ಆದ ನಾರಾಯಣಪದದಲ್ಲಿ ಅನನ್ಯಭಾವದಿಂದ ಸ್ಥಿರಗೊಂಡರು. ಎಲ್ಲ ಕಲ್ಮಶಗಳನ್ನೂ ತೊಳೆದುಕೊಂಡು, ಯಾವ ಸ್ಥಾನವು ವಿಷಯಗಳಿಂದ ಕಲುಷಿತವಾದ ಮನಸ್ಸುಳ್ಳ ಅಜ್ಞಾನಿಗಳಿಗೆ ಹೊಂದಲು ಅಶಕ್ಯವಾಗಿದೆಯೋ, ಪಾಪರಹಿತರಾದ ಪರಿಶುದ್ಧಾತ್ಮರಿಗೆ ಮಾತ್ರವೇ ಹೊಂದಲು ಸಾಧ್ಯವಾಗಿದೆಯೋ–ಅಂತಹ ದಿವ್ಯಸ್ಥಾನವನ್ನು ತಾವೂ ಪಡೆದರು. ಸಂಯಮಿಯಾಗಿ ಆತ್ಮಜ್ಞಾನಸಿದ್ಧನಾಗಿದ್ದ ವಿದುರನೂ ಶ್ರೀಕೃಷ್ಣಮಯವಾದ ಮನಸ್ಸುಳ್ಳವನಾಗಿ ತನ್ನ ಮಾನುಷದೇಹವನ್ನು ತ್ಯಜಿಸಿ ಪ್ರಭಾಸಕ್ಷೇತ್ರದಲ್ಲಿ ತನ್ನನ್ನು ಕರೆದುಕೊಂಡು ಹೋಗಲು ಬಂದ ಪಿತೃದೇವತೆಗಳೊಡನೆ ಸ್ವಸ್ಥಾನವಾದ ಪಿತೃಲೋಕಕ್ಕೆ ಹೊರಟುಹೋದನು. ದ್ರೌಪದಿಯೂ ಕೂಡ ಪಾಂಡವರು ಅತ್ಯಂತ ಅನಾಸಕ್ತರಾಗಿ ಸ್ವಧಾಮಕ್ಕೆ ತೆರಳಿದ ಸ್ಥಿತಿಯನ್ನು ಗಮನಿಸಿ ಭಗವಂತನಾದ ಶ್ರೀವಾಸುದೇವನನ್ನೇ ಅನನ್ಯಪ್ರೇಮಭಾವದಿಂದ ಧ್ಯಾನಿಸುತ್ತಾ ಆತನ ಪರಮಪದವನ್ನೈದಿದಳು. ಭಗವದ್ಭಕ್ತಶಿರೋಮಣಿಗಳಾದ ಪಾಂಡವರ ಅತ್ಯಂತಮಂಗಳಕರವೂ, ಪವಿತ್ರವೂ ಆಗಿರುವ ಈ ಮಹಾಪ್ರಸ್ಥಾನದ ಕಥೆಯನ್ನು ಶ್ರದ್ಧೆಯಿಂದ ಪೂರ್ಣವಾಗಿ, ಸಂತೋಷ- ಸಂತೃಪ್ತಿಗಳಿಂದ ಕೇಳುವ ಸುಕೃತಿಯು ಶ್ರೀಹರಿಯಲ್ಲಿ ಪೂರ್ಣವಾದ ಭಕ್ತಿಯನ್ನೂ-ಮೋಕ್ಷಸಿದ್ಧಿಯನ್ನೂ ಪಡೆಯುವನು.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತದಲ್ಲಿ ಪ್ರಥಮಸ್ಕಂಧದ ೧೫ನೆಯ ಅಧ್ಯಾಯವು ಮುಗಿಯಿತು.

---

ಪ್ರಥಮಸ್ಕಂಧ ೧೬ನೆಯ ಅಧ್ಯಾಯ

## ಪರೀಕ್ಷಿದ್ರಾಜನ ದಿಗ್ವಿಜಯ ಮತ್ತು ಧರ್ಮ-ಪೃಥ್ವೀಸಂವಾದ

ಸೂತಪುರಾಣಿಕರು ಹೇಳುತ್ತಾರೆ :

**ತತಃ ಪರೀಕ್ಷಿದ್ದ್ವಿಜವರ್ಯಶಿಕ್ಷಯಾ**
**ಮಹೀಂ ಮಹಾಭಾಗವತಃ ಶಶಾಸ ಹ ।**
**ಯಥಾ ಹಿ ಸೂತ್ಯಾಮಭಿಜಾತಕೋವಿದಾಃ**
**ಸಮಾದಿಶನ್ವಿಪ್ರ ಮಹದ್ಗುಣಸ್ತಥಾ ॥೧॥**

"ಬ್ರಾಹ್ಮಣೋತ್ತಮರಾದ ಶೌನಕರೇ! ಪಾಂಡವರ ಮಹಾಪ್ರಸ್ಥಾನಾನಂತರ ಪರಮಭಾಗವತೋತ್ತಮನಾದ ಪರೀಕ್ಷಿದ್ರಾಜನು ಬ್ರಾಹ್ಮಣಶ್ರೇಷ್ಠರ ಶಿಕ್ಷಣಕ್ಕನುಗುಣವಾಗಿ ಭೂಮಿಯನ್ನು ಆಳತೊಡಗಿದನು. ಆತನ ಜನ್ಮ ಸಮಯದಲ್ಲಿ ಜ್ಯೋತಿಶ್ಶಾಸ್ತ್ರನಿಷ್ಣಾತರಾದ ವಿದ್ವಾಂಸರು ಆತನ ಬಗೆಗೆ ಹೇಳಿದ್ದ ಶ್ರೇಷ್ಠಗುಣಗಳೆಲ್ಲವೂ ಆತನಲ್ಲಿ ಪೂರ್ಣವಾಗಿ ಕಂಡುಬಂದುವು.

ಆತನು ತನ್ನ ಸೋದರಮಾವನಾದ ಉತ್ತರನ ಪುತ್ರಿ 'ಇರಾವತೀ' ಎಂಬ ಕನ್ಯೆಯನ್ನು ಮದುವೆಯಾಗಿ ಆಕೆಯಲ್ಲಿ ಜನಮೇಜಯನೇ ಮುಂತಾದ ನಾಲ್ಕು ಮಂದಿ ಪುತ್ರರನ್ನು ಪಡೆದನು. ಕೃಪಾಚಾರ್ಯರನ್ನು ಆಚಾರ್ಯರನ್ನಾಗಿ ಮಾಡಿಕೊಂಡು ಗಂಗಾನದಿಯ ತೀರದಲ್ಲಿ ಮೂರು ಅಶ್ವಮೇಧ ಯಾಗಗಳನ್ನು ಮಾಡಿದನು. ಆ ಎಲ್ಲ ಯಾಗಗಳಲ್ಲೂ ಬ್ರಾಹ್ಮಣರಿಗೆ ಹೇರಳವಾಗಿ ದಕ್ಷಿಣೆಗಳನ್ನು ಸಮರ್ಪಿಸಿದನು. ಆ ಯಾಗಗಳಲ್ಲಿ ದೇವತೆಗಳು ಪ್ರತ್ಯಕ್ಷವಾಗಿಯೇ ಬಂದು ತಮ್ಮ-ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸುತ್ತಿದ್ದರು.

ಮಹಾವೀರನಾದ ಆ ರಾಜೇಂದ್ರನು ದಿಗ್ವಿಜಯಮಾಡುತ್ತಿದ್ದಾಗ ಒಮ್ಮೆ ಒಂದೆಡೆಯಲ್ಲಿ ರಾಜವೇಷಧಾರಿಯಾದ ಒಬ್ಬ ಮನುಷ್ಯನು ಒಂದು ಗೋವಿನ ಜೋಡಿಯನ್ನು ಕಾಲಿನಿಂದ ಒದೆಯುತ್ತಿರುವುದನ್ನು ನೋಡಿದನು. ಆ ಪಾಪ ಕಾರ್ಯವನ್ನು ಮಾಡುತ್ತಿದ್ದವನು ಕಲಿಪುರುಷ. ಪರೀಕ್ಷಿದ್ರಾಜನು ಆತನನ್ನು ತನ್ನ ಪರಾಕ್ರಮದಿಂದ ನಿಗ್ರಹಿಸಿದನು." (ಶ್ಲೋಕ 2-4)

ಆಗ ಶೌನಕರು ಸೂತಪುರಾಣಿಕರನ್ನು ಹೀಗೆಂದು ಪ್ರಾರ್ಥಿಸಿದರು :

"ಪರೀಕ್ಷಿದ್ರಾಜನು ತನ್ನ ದಿಗ್ವಿಜಯದ ಸಮಯದಲ್ಲಿ ಏಕೆ ಕಲಿಪುರುಷ

ನನ್ನು ನಿಗ್ರಹಮಾಡಿದನು? ರಾಜನ ವೇಷವನ್ನು ಧರಿಸಿ ಗೋವಿನ ಜೋಡಿಯನ್ನು ಕಾಲಿನಿಂದ ಒದ್ದ ಆ ದುಷ್ಟನು ಯಾರು?–ಎಂಬುದನ್ನು ಹೇಳು ಮಹಾತ್ಮ! ಆ ಕಥೆಯೂ ಶ್ರೀಕೃಷ್ಣನ ಕಥೆಗೇ ಸಂಬಂಧಪಟ್ಟಿರುವುದೇ ಆದರೆ ಅದನ್ನು ನೀನು ತಿಳಿಸಬೇಕು. ಹಾಗೆ ನೇರವಾಗಿ ಶ್ರೀಕೃಷ್ಣನ ಕಥೆಗೆ ಸಂಬಂಧಪಟ್ಟಿರದೇ ಶ್ರೀಕೃಷ್ಣನ ಅಡಿದಾವರೆಗಳಿಂದ ಸೂಸುವ ದಿವ್ಯಮಕರಂದವನ್ನು ಪಾನಮಾಡುವ ಭಕ್ತಶ್ರೇಷ್ಠರಾದ ಸಂತರ ಕಥೆಗೆ ಸಂಬಂಧಪಟ್ಟಿದ್ದರೂ– ನೀನು ಅದನ್ನು ತಿಳಿಸಬಹುದು. ಆಯುಸ್ಸನ್ನು ವ್ಯರ್ಥವಾಗಿ ಕಳೆಯುವ ಕೆಟ್ಟವರನ್ನು ಕುರಿತ ಮಾತು, ಕಾಡುಹರಟೆಯ ಮಾತು ಇವುಗಳಿಂದೇನೂ ಪ್ರಯೋಜನವಿಲ್ಲ. ಕೆಲವು ಜನರಿಗೆ ಮೋಕ್ಷವನ್ನು ಪಡೆಯುವ ಇಚ್ಛೆಯಿದ್ದರೂ ಅವರು ಅಲ್ಪಾಯುಸ್ಸುಳ್ಳವರಾಗಿ ಮೃತ್ಯುವಿಗೆ ಕಬಳವಾಗಲು ಯೋಗ್ಯರಾಗಿರುತ್ತಾರೆ. ಅಂತಹವರಿಗೆ ಒಳ್ಳೆಯದನ್ನುಂಟುಮಾಡುವುದಕ್ಕಾಗಿ ಋತ್ವಿಜರು ಭಗವಂತನಾದ ಯಮರಾಜನನ್ನು ಇಲ್ಲಿಗೆ ಆಹ್ವಾನಿಸಿ ಶಾಂತಿ ಕರ್ಮದಲ್ಲಿ ನೇಮಿಸಿಬಿಟ್ಟಿದ್ದಾರೆ. ಯಮರಾಜನು ಇಲ್ಲಿ–ಈ ಕರ್ಮದಲ್ಲಿ ಇರುವವರೆಗೂ ಯಾರಿಗೂ ಮರಣವುಂಟಾಗುವುದಿಲ್ಲ. ಮೃತ್ಯುವಿಗೆ ತುತ್ತಾಗುವ ಮನುಷ್ಯಲೋಕದ ಜೀವರಾಶಿಗಳೂ ಕೂಡ ಭಗವಂತನ ಅಮೃತಸದೃಶವಾದ ಲೀಲಾಕಥೆಗಳನ್ನು ಪಾನಮಾಡಲಿ–ಎಂಬ ಉದ್ದೇಶದಿಂದಲೇ ಮಹರ್ಷಿಗಳು ಭಗವಂತನಾದ ಯಮನನ್ನು ಇಲ್ಲಿಗೆ ಕರೆಸಿಬಿಟ್ಟಿದ್ದಾರೆ. ಈ ಯುಗದಲ್ಲಿ ಮನುಷ್ಯರಿಗೆ ಆಯುಸ್ಸು ಕಡಿಮೆಯಾಗಿರುವುದು ಮಾತ್ರವಲ್ಲದೇ ತಿಳಿವಳಿಕೆಯೂ ಕಡಿಮೆಯಾಗಿರುವುದು. ಇಂತಹ ಪರಿಸ್ಥಿತಿಯಲ್ಲಿ ಸಂಸಾರದಲ್ಲಿರುವ ದುರದೃಷ್ಟಶಾಲಿಗಳಾದ ವಿಷಯಾಸಕ್ತಜನರ ಆಯುಸ್ಸು ರಾತ್ರಿವೇಳೆ ನಿದ್ರೆಯಲ್ಲಿಯೂ ಹಗಲುವೇಳೆ ವ್ಯರ್ಥಕಾರ್ಯಗಳಲ್ಲಿಯೂ, ವ್ಯರ್ಥವಾಗಿಯೇ ಕಳೆದುಹೋಗುತ್ತಿದೆ. ಆದುದರಿಂದ ನೀನು ಶ್ರೀಭಗವಂತನ ಅಥವಾ ಭಾಗವತರ ಕಥೆಗೆ ಸಂಬಂಧಪಟ್ಟಿದ್ದರೆ, ಪರೀಕ್ಷಿದ್ರಾಜನ ಕಲಿನಿಗ್ರಹದ ವೃತ್ತಾಂತವನ್ನು ವಿಶದವಾಗಿ ಹೇಳು ; ಕಾಲದ ಸದುಪಯೋಗವಾಗಲಿ.” (ಶ್ಲೋಕ 5-9)

ಶೌನಕರ ಪ್ರಾರ್ಥನೆಗೆ ಸೂತಪುರಾಣಿಕರು ಹೀಗೆ ಉತ್ತರಿಸಿದರು :

“ಪರೀಕ್ಷಿದ್ರಾಜನು ಕುರುಜಾಂಗಲದೇಶದಲ್ಲಿ ಚಕ್ರವರ್ತಿಯಾಗಿದ್ದಾಗ

ತನ್ನ ಚಕ್ರಾಧಿಪತ್ಯಕ್ಕೆ ಒಳಪಟ್ಟಿರುವ ದೇಶಕ್ಕೆ ಕಲಿಪುರುಷನು ಪ್ರವೇಶಿಸಿದ್ದಾನೆಂಬ ಸಮಾಚಾರವನ್ನು ಕೇಳಿದನು.* ಆ ಅಪ್ರಿಯವಾದ ಸಮಾಚಾರವನ್ನು ಕೇಳಿ ಆತನಿಗೆ ದುಃಖವಾಯಿತು. ಆದರೂ ಆ ದುಷ್ಟನಾದ ಕಲಿಯೊಡನೆ ಯುದ್ಧಮಾಡಿ ಆತನನ್ನು ನಿಗ್ರಹಿಸುವ ಅವಕಾಶವಾದರೂ ಸಿಕ್ಕಿದೆಯಲ್ಲಾ ಎಂದು ಸಮಾಧಾನಮಾಡಿಕೊಂಡು ಆ ಯುದ್ಧವೀರನು ಕೈಯಲ್ಲಿ ಧನುಸ್ಸನ್ನೆತ್ತಿಕೊಂಡು ಚೆನ್ನಾಗಿ ಸಿಂಗರಿಸಲ್ಪಟ್ಟಿದ್ದ, ಸಿಂಹಧ್ವಜದಿಂದ ಕೂಡಿ ಶ್ಯಾಮಲ ವರ್ಣದ ಕುದುರೆಗಳನ್ನು ಹೂಡಿದ್ದ ರಥವನ್ನೇರಿ, ರಥಾಶ್ವ-ಗಜ-ಪದಾತಿಗಳೆಂಬ ಚತುರಂಗಬಲದಿಂದ ಕೂಡಿದವನಾಗಿ ದಿಗ್ವಿಜಯಕ್ಕಾಗಿ ತನ್ನ ಪಟ್ಟಣದಿಂದ ಹೊರಟುಬಂದನು. ಭದ್ರಾಶ್ವ, ಕೇತುಮಾಲ, ಭಾರತ, ಉತ್ತರಕುರು ಮತ್ತು ಕಿಂಪುರುಷವರ್ಷ—ಇವೇ ಮುಂತಾದ ಪ್ರದೇಶಗಳೆಲ್ಲವನ್ನೂ ಜಯಿಸಿ ಅಲ್ಲಿಯ ರಾಜರಿಂದ ಕಪ್ಪ-ಕಾಣಿಕೆಗಳನ್ನು ತೆಗೆದುಕೊಂಡನು. ಆ ದೇಶಗಳಲ್ಲಿ ಸಂಚರಿಸುತ್ತಿರುವಾಗ ಎಲ್ಲೆಡೆಗಳಲ್ಲಿಯೂ ಆತನಿಗೆ ತನ್ನ ವಂಶಪೂರ್ವಜರಾದ ಮಹಾಪುರುಷರ ಕೀರ್ತಿಯು ಕಿವಿಗೆ ಬೀಳುತ್ತಿದ್ದುದು ಮಾತ್ರವಲ್ಲದೇ ಆ ಕೀರ್ತಿಯಿಂದ ಶ್ರೀಕೃಷ್ಣಪರಮಾತ್ಮನ ಮಹಿಮೆಯೂ ಪ್ರಕಟವಾಗುತ್ತಿತ್ತು. ಹಾಗೆಯೇ ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರದ ತೇಜಸ್ಸಿನಿಂದ ಶ್ರೀಕೃಷ್ಣಪರಮಾತ್ಮನು ತನ್ನನ್ನು ಕಾಪಾಡಿದ ವೃತ್ತಾಂತ, ಪಾಂಡವರಿಗೆ ಶ್ರೀಕೃಷ್ಣನಲ್ಲಿದ್ದ ಭಕ್ತಿ ಮತ್ತು ಯಾದವರಿಗೂ—ಪಾಂಡವರಿಗೂ ಇದ್ದ ಸ್ನೇಹಸಂಬಂಧ-ಇವುಗಳ ಸಮಾಚಾರವೂ ಅವನ ಕಿವಿಗೆ ಬೀಳುತ್ತಿತ್ತು. ಅಂತಹ ಚರಿತ್ರೆಗಳನ್ನು ತನಗೆ ಹೇಳುತ್ತಿದ್ದ ಜನರ ವಿಷಯದಲ್ಲಿ ಆತನಿಗೆ

---

* ಧರ್ಮಪ್ರಭುವಾದ ತನ್ನ ರಾಜ್ಯಕ್ಕೂ ಕಲಿಯ ಪ್ರವೇಶವಾಯಿತಲ್ಲಾ!—ಎಂದು ಆತನಿಗೆ ದುಃಖವಾಯಿತು. ಇದು ಆತನಿಗೆ ಹೆಚ್ಚು ಪ್ರಿಯವಲ್ಲದ ಸಮಾಚಾರ ಎನ್ನುತ್ತಾರೆ ಸೂತಪುರಾಣಿಕರು. ಕಲಿಪ್ರವೇಶವು ಅಪ್ರಿಯವಾದರೂ ಅದನ್ನು ನಿಗ್ರಹಿಸಿ ತನ್ನ ಪರಾಕ್ರಮವನ್ನು ತೋರಿಸುವ ಅವಕಾಶ ಸಿಕ್ಕುವುದರಿಂದ ಅಷ್ಟೇನೂ ಹೆಚ್ಚು ದುಃಖವಾಗಲಿಲ್ಲ—ಎಂದೂ ವ್ಯಾಖ್ಯಾನಿಸಬಹುದು. ಅಥವಾ ಕಲಿಪ್ರವೇಶವು ಕಾಲ ಧರ್ಮವಾದ್ದರಿಂದ ಅದರ ಬಗೆಗೆ ತುಂಬಾ ದುಃಖಿಸಬಾರದು. ಆದರೂ ಯಥಾಶಕ್ತಿ ಅದನ್ನು ಹತೋಟಿಗೆ ತರುವ ಪ್ರಯತ್ನದ ಅವಕಾಶವಿದೆಯೆಂದು ಆತನು ಭಾವಿಸಿ ಕರ್ತವ್ಯಪರಾಯಣನಾದನೆಂದೂ ಭಾವಿಸಬಹುದು. 'ನಿಶಮ್ಯ ವಾರ್ತಾಮನತಿಪ್ರಿಯಾಂ ತತಃ' (ಶ್ಲೋಕ 10)

ತುಂಬಾ ಪ್ರಸನ್ನತೆಯುಂಟಾಗಿ ಕಣ್ಣುಗಳು ಪ್ರೇಮದಿಂದ ಅರಳುತ್ತಿರಲು, ಆ ಪರಮೋದಾರಿಯು ಅವರಿಗೆ ಕೊಡುಗೈಯಿಂದ ಬಹುಮೂಲ್ಯವಾದ ವಸ್ತ್ರಗಳನ್ನೂ, ಹಾರವೇ ಮುಂತಾದ ಆಭರಣಗಳನ್ನೂ ಬಹುಮಾನವಾಗಿ ನೀಡುತ್ತಿದ್ದನು. ಶ್ರೀಕೃಷ್ಣನು ಪ್ರೇಮವಶನಾಗಿ ಪಾಂಡವರಿಗೆ ಸಾರಥ್ಯಮಾಡಿದ, ಅವರ ಸಭಾಸದನಾಗಿ, ಇಷ್ಟಾನುಸಾರವಾಗಿ ಅವರ ಇತರ ಸೇವೆಗಳನ್ನೂ ಮಾಡಿದ ಸ್ನೇಹಿತನಾಗಿದ್ದುದಲ್ಲದೇ ದೂತನ ಕೆಲಸವನ್ನೂ ಮಾಡಿದ, ವೀರಾಸನದಲ್ಲಿ ಕುಳಿತುಕೊಳ್ಳುತ್ತಿದ್ದ, ಖಡ್ಗಧಾರಿಯಾಗಿ ಕಾವಲು ಕಾಯುತ್ತಿದ್ದ, ಅನುಸರಣೆಮಾಡಿ ಹೊಗಳುತ್ತಿದ್ದ, ನಮಸ್ಕರಿಸುತ್ತಿದ್ದ ಮತ್ತು ಆ ಪ್ರಿಯತಮರಾದ ಪಾಂಡವರಿಗೆ ಇಡೀ ಜಗತ್ತೇ ತಲೆಬಾಗುವಂತೆ ಮಾಡಿದ– ಇವೇ ಮುಂತಾದ ಸಮಾಚಾರಗಳನ್ನು ಕೇಳಿ ಆತನಿಗೆ ಶ್ರೀಕೃಷ್ಣನ ಚರಣಾರವಿಂದಗಳಲ್ಲಿ ಭಕ್ತಿಯು ಮತ್ತೂ ವೃದ್ಧಿಯಾಗುತ್ತಿತ್ತು. ಹೀಗೆ ಆತನು ತನ್ನ ವಂಶದ ಹಿರಿಯರ ವೃತ್ತಿಯನ್ನು ಪ್ರತಿದಿನವೂ ಅನುಸರಿಸುತ್ತಾ ಮುನ್ನಡೆಯುತ್ತಿದ್ದಾಗ ಆತನ ಶಿಬಿರದಿಂದ ಸ್ವಲ್ಪ ದೂರದಲ್ಲಿಯೇ ಆತನ ಮುಂದೆ ಒಂದು ಆಶ್ಚರ್ಯಕರವಾದ ಘಟನೆಯು ನಡೆಯಿತು. ಅದೇನೆಂಬುದನ್ನು ವರ್ಣಿಸುತ್ತೇನೆ ಕೇಳಿರಿ : ಧರ್ಮವು ಒಂದು ವೃಷಭದ ರೂಪವನ್ನು ತಾಳಿ ಒಂಟಿಕಾಲಿನಿಂದ ಸಂಚಾರಮಾಡುತ್ತಿತ್ತು. ದಾರಿಯಲ್ಲಿ ಅದಕ್ಕೆ ಧೇನುವಿನ ರೂಪವನ್ನು ತಾಳಿದ್ದ ಭೂದೇವಿಯ ಭೇಟಿಯಾಯಿತು. ಆ ಧೇನುವು ಮಗುವನ್ನು ಕಳೆದುಕೊಂಡ ತಾಯಿಯಂತೆ ಕಣ್ಣೀರಿಡುತ್ತಾ ಕಳೆಗುಂದಿ ಕಳವಳಗೊಳ್ಳುತ್ತಿರುವುದನ್ನು ಕಂಡು ಧರ್ಮವೃಷಭವು ಅದನ್ನು ಹೀಗೆ ಪ್ರಶ್ನೆ ಮಾಡಿತು :

(ಶ್ಲೋಕ 10-18)

“ಮಂಗಳಾಂಗಿಯೇ! ನಿನ್ನ ಮುಖವು ಸ್ವಲ್ಪ ಮಲಿನವಾಗಿರುವಂತೆ ಕಾಣುತ್ತಿದ್ದು ನೀನು ಕಳೆಗುಂದಿರುವೆ. ನಿನಗೆ ಯಾವುದೋ ದುಃಖವಿರಬೇಕೆಂದು ತೋರುತ್ತದೆ. ನಿನ್ನ ನೆಂಟರಿಷ್ಟರು ಯಾರಾದರೂ ದೂರದೇಶಕ್ಕೆ ಹೋಗಿದ್ದು ಅವರ ಬಗೆಗೆ ನೀನು ಚಿಂತೆಪಡುತ್ತಿದ್ದಿಯೇನಮ್ಮಾ? ‘ಈತನಿಗೆ ಮೂರು ಕಾಲುಗಳು ಮುರಿದುಹೋಗಿ ಒಂಟಿಕಾಲಿನಿಂದ ನಡೆಯುವ ಸ್ಥಿತಿ ಬಂದಿದೆಯಲ್ಲಾ’–ಎಂದು ನನ್ನ ಬಗೆಗೇನಾದರೂ ಚಿಂತೆಯೇ? ಅಥವಾ ‘ಧರ್ಮನಾಶಕರು ನನ್ನನ್ನು ಆಳುತ್ತಿದ್ದಾರಲ್ಲಾ!’–ಎಂದು ನಿನ್ನ

ಬಗೆಗೆ ದುಃಖಪಡುತ್ತಿದ್ದೀಯಾ? 'ದೇವತೆಗಳಿಗೆ ಯಜ್ಞದ ಹವಿರ್ಭಾಗಗಳು ದೊರಕುತ್ತಿಲ್ಲ'-ಎಂದು ಅವರ ಬಗೆಗೆ ಶೋಕವೇ? ಅಥವಾ ಮಳೆಯಿಲ್ಲದೇ ಬೆಳೆಗಳಿಲ್ಲದೇ ಕಷ್ಟಪಡುತ್ತಿರುವ ಪ್ರಜೆಗಳನ್ನು ಕುರಿತು ದುಃಖಪಡುತ್ತಿರುವೆಯಾ? ದೇವಿ! ನರಭಕ್ಷಕರಿಗೆ ಸಮರಾದ ದುಷ್ಟರಿಂದ ಪೀಡಿಸಲ್ಪಡುತ್ತಾ ರಕ್ಷಣಾಹೀನರಾಗಿರುವ ಹೆಂಗಸರ ಬಗೆಗಾಗಲೀ, ಪೀಡೆಗೊಳಗಾಗಿರುವ ಬಾಲಕರ ವಿಷಯದಲ್ಲಾಗಲೀ-ನಿನಗೆ ದುಃಖವಾಗುತ್ತಿದೆಯೇ? ವಿದ್ಯಾದೇವಿಯು ಕುಕರ್ಮಿಗಳಾದ ಬ್ರಾಹ್ಮಣರ ಕೈಗೆ ಸಿಕ್ಕಿ ದುರವಸ್ಥೆಗೆ ಒಳಗಾಗಿರುವುದನ್ನೋ ಅಥವಾ ಬ್ರಾಹ್ಮಣರು ಬ್ರಹ್ಮದ್ರೋಹಿಗಳಾದ ರಾಜರನ್ನು ಸೇವಿಸುತ್ತಿರುವುದನ್ನೋ ನೋಡಿ ನೀನು ಕಳವಳಪಡುತ್ತಿರಬಹುದೇ? 'ಈಗಿನ ಕಾಲದಲ್ಲಿ ರಾಜರೆಂದು ಕರೆಯಲ್ಪಡುತ್ತಿರುವವರು ಹೆಸರಿಗೆ ಮಾತ್ರ ರಾಜರಾಗಿದ್ದು ಕಲಿಯಿಂದ ಪ್ರಭಾವಿತರಾಗಿ ರಾಷ್ಟ್ರಗಳನ್ನು ನಾಶಪಡಿಸುತ್ತಿದ್ದಾರಲ್ಲಾ'!-ಎಂದು ಆ ಕ್ಷತ್ರಿಯಾಧಮರ ವಿಷಯದಲ್ಲಿ ನಿನಗೆ ದುಃಖವುಂಟಾಗಿದೆಯೇ? ಅಥವಾ ಕಂಡಕಂಡ ಜಾಗಗಳಲ್ಲಿ ತಿನ್ನುವುದು, ಕುಡಿಯುವುದು, ಉಡುವುದು, ಸ್ನಾನಮಾಡುವುದು, ಭೋಗಿಸುವುದು-ಇತ್ಯಾದಿಗಳಲ್ಲಿ ಮುಳುಗಿರುವ ಜೀವಿಗಳನ್ನು ಕುರಿತು ಚಿಂತೆಪಡುತ್ತಿದ್ದೀಯಾ? ಅಥವಾ ಓ ಭೂಮಾತೆಯೇ! ನಿನ್ನ ಮೇಲೆ ಬಿದ್ದಿದ್ದ ಅತ್ಯಧಿಕವಾದ ಅಧರ್ಮ ಭಾರವನ್ನು ಇಳಿಸುವುದಕ್ಕಾಗಿ ಅವತಾರಮಾಡಿ ಈಗ ತನ್ನನ್ನು ಉಪಸಂಹಾರ ಮಾಡಿಕೊಂಡಿರುವ ಶ್ರೀಕೃಷ್ಣಪರಮಾತ್ಮನ ಮೋಕ್ಷಾವಲಂಬನವಾದ ದಿವ್ಯ ಲೀಲೆಗಳನ್ನು ನೆನೆಸಿಕೊಂಡು-'ಅಂತಹ ಸ್ವಾಮಿಯು ಕಣ್ಮರೆಯಾಗಿರುವನಲ್ಲಾ'-ಎಂದು ಶೋಕಿಸುತ್ತಿರುವೆಯಾ? ಏತಕ್ಕೆ ಇಷ್ಟು ಕೃಶಳಾಗಿ ಕೊರಗುತ್ತಿದ್ದೀಯೇ? ನಿನ್ನ ಮನೋರೋಗಕ್ಕೆ ಮೂಲಕಾರಣವಾದರೂ ಏನು? ಬಲಶಾಲಿಗಳಲ್ಲೇ ಅತ್ಯಂತಬಲಿಷ್ಠನಾಗಿರುವ ಕಾಲದೇವನು ದೇವತೆ ಗಳಿಗೂ ಪೂಜ್ಯಳಾಗಿರುವ ನಿನ್ನ ಸೌಭಾಗ್ಯವನ್ನೂ ಅಪಹರಿಸಿದ್ದಾನೆಯೇ? ತಿಳಿಸಮ್ಮಾ ಭೂತಾಯಿ!" (ಶ್ಲೋಕ 19-24)

ಧರ್ಮದೇವನ ಆ ಎಲ್ಲ ಕುಶಲಪ್ರಶ್ನೆಗಳಿಗೂ ಭೂದೇವಿಯು ಹೀಗೆ ಉತ್ತರಿಸಿದಳು :

"ಧರ್ಮದೇವನೇ! ನೀನು ನನಗೆ ಏನೆಲ್ಲಾ ಪ್ರಶ್ನೆಗಳನ್ನು ಹಾಕಿ

ದೆಯೋ ಅದರ ಉತ್ತರವೆಲ್ಲಾ ನಿನಗೂ ತಿಳಿದೇ ಇದೆ. ಯಾವನ ಅವಲಂಬನೆ ಯಿಂದ ನೀನು ಲೋಕಗಳಿಗೆ ಸುಖವನ್ನುಂಟುಮಾಡುವ ನಿನ್ನ ನಾಲ್ಕು ಕಾಲುಗಳಿಂದಲೂ ನಡೆಯುತ್ತಿದ್ದೆಯೋ–ಅಂತಹ ಭಗವಂತನ ಅವತಾರವು ಸಮಾಪ್ತಿಯಾಯಿತಲ್ಲಾ!–ಎಂದು ಶೋಕಪಡುತ್ತಿದ್ದೇನೆ. ಸತ್ಯ, ಶುಚಿತ್ವ, ದಯೆ, ತಾಳ್ಮೆ ತ್ಯಾಗ, ಸಂತೋಷ, ಸರಳತೆ, ಒಳ-ಹೊರ ಇಂದ್ರಿಯಗಳ ನಿಗ್ರಹ, ತಪಸ್ಸು, ಸಮತ್ವ, ಸೈರಣೆ, ಮೌನ, ಶಾಸ್ತ್ರಜ್ಞಾನ, ಆತ್ಮಜ್ಞಾನ, ವೈರಾಗ್ಯ, ಐಶ್ವರ್ಯ, ಶೌರ್ಯ, ತೇಜಸ್ಸು, ಬಲ, ಸ್ಮೃತಿ, ಸ್ವಾತಂತ್ರ್ಯ, ಕೌಶಲ, ಕಾಂತಿ, ಧೈರ್ಯ, ಕೋಮಲತೆ, ನಿರ್ಭಯತ್ವ, ವಿನಯ, ಶೀಲ, ಸಾಹಸ, ಉತ್ಸಾಹ, ಬಲ, ಸೌಭಾಗ್ಯ, ಗಾಂಭೀರ್ಯ, ಸ್ಥಿರತ್ವ, ಆಸ್ತಿಕತೆ, ಕೀರ್ತಿ, ಗೌರವ ಮತ್ತು ನಿರಹಂಕಾರತೆ–ಎಂಬಿವೂ ಮತ್ತು ಅನಂತವಾಗಿರುವ ಇತರ ಮಹಾಗುಣಗಳೂ ಶ್ರೀಭಗವಂತನಿಗೇ ಅಸಾಧಾರಣವಾಗಿರುವ ಅಪ್ರಾಕೃತಗುಣಗಳು ; ಮಹತ್ತ್ವವನ್ನು ಬಯಸುವ ಮಹಾಪುರುಷರು ಅಪೇಕ್ಷಿ ಸುವ ದಿವ್ಯಗುಣಗಳು. ಇಂತಹ ಅನಂತಕಲ್ಯಾಣಗುಣಗಳು ಕೊಂಚವೂ ಕ್ಷೀಣಿಸದೇ ಯಾವನಲ್ಲಿ ಸದಾ ನೆಲೆಗೊಂಡಿವೆಯೋ–ಅಂತಹ ಶ್ರೀನಿವಾಸ ನಾದ ಶ್ರೀಕೃಷ್ಣನು ತನ್ನನ್ನು ಉಪಸಂಹಾರಮಾಡಿಕೊಂಡುಬಿಟ್ಟನಲ್ಲಾ! ಮತ್ತು ಈ ಜಗತ್ತು ಪಾಪಮಯನಾದ ಕಲಿಯ ಕುದೃಷ್ಟಿಗೆ ಲಕ್ಷ್ಯವಾಗಿಬಿಟ್ಟಿತಲ್ಲಾ! ಎಂದು ನಾನು ಶೋಕಗ್ರಸ್ತಳಾಗಿದ್ದೇನೆ. ಹಾಗೆಯೇ ಇಂತಹ ಶೋಚನೀಯ ಸ್ಥಿತಿಯಲ್ಲಿರುವ ನನ್ನನ್ನು ಕುರಿತು, ದೇವಶ್ರೇಷ್ಠನಾದ ನಿನ್ನನ್ನು ಕುರಿತು ಮತ್ತು ಆಶ್ರಯಹೀನರಾಗಿರುವ ದೇವತೆಗಳನ್ನೂ, ಪಿತೃಗಳನ್ನೂ, ಋಷಿಗಳನ್ನೂ, ಸಾಧು-ಸಜ್ಜನರನ್ನೂ, ಎಲ್ಲ ವರ್ಣಗಳನ್ನೂ, ಆಶ್ರಮಗಳನ್ನೂ ಕುರಿತಾಗಿಯೂ ದುಃಖಪಡುತ್ತಿದ್ದೇನೆ. ಯಾವಾಕೆಯ ಕೃಪಾಕಟಾಕ್ಷವನ್ನು ಪಡೆಯುವುದಕ್ಕಾಗಿ ಬ್ರಹ್ಮನೇ ಮುಂತಾದ ದೇವತೆಗಳು ಭಗವಂತನಲ್ಲಿ ಶರಣಾಗತರಾಗಿ ಬಹುಕಾಲದವರೆಗೆ ತಪಸ್ಸನ್ನಾಚರಿಸುತ್ತಿದ್ದರೋ–ಅಂತಹ ಶ್ರೀಲಕ್ಷ್ಮೀದೇವಿಯೂ ತನ್ನ ನಿವಾಸಸ್ಥಾನವಾಗಿರುವ ಕಮಲವನವನ್ನು ತ್ಯಜಿಸಿ ಪರಮಪ್ರೇಮದಿಂದ ಯಾವಾತನ ಚರಣಕಮಲಗಳ ಸೊಬಗನ್ನು ಸೇವಿಸು ತ್ತಿರುವಳೋ–ಅಂತಹ ಭಗವಂತನ ಕಮಲ, ವಜ್ರಾಯುಧ, ಅಂಕುಶ, ಧ್ವಜಗಳೇ ಮುಂತಾದ ದಿವ್ಯಚಿಹ್ನೆಗಳಿಂದ ಕೂಡಿದ ಶ್ರೀಪಾದಪದ್ಮಗಳ

ವಿನ್ಯಾಸದಿಂದ ಅಲಂಕೃತಳಾಗಿ ಮಹಾವೈಭವವನ್ನು ಪಡೆದು, ಮೂರು ಲೋಕಗಳನ್ನೂ ಮೀರಿಸಿದ ಕಾಂತಿಯಿಂದ ಗರ್ವಪಡುತ್ತಾ ಮೆರೆಯುತ್ತಿದ್ದ ನನ್ನನ್ನು ಆತನು ಕೈಬಿಟ್ಟುಹೋದನಲ್ಲಾ! ಯಾವ ಮಹಾಪುರುಷನು ನನಗೆ ಅತಿಭಾರವಾಗಿದ್ದ ರಾಕ್ಷಸವಂಶಜರಾದ ರಾಜರ ನೂರಾರು ಅಕ್ಷೌಹಿಣೀ ಸೈನ್ಯವನ್ನು ತನ್ನ ಶಕ್ತಿಯಿಂದ ಧ್ವಂಸಮಾಡಿದನೋ ಮತ್ತು ತನ್ನ ಪರಮಾದ್ಭುತವಾದ ಪೌರುಷದಿಂದ ಕಾಲುಗಳು ಊನವಾಗಿ ಕಷ್ಟಪಡುತ್ತಿದ್ದ ನಿನ್ನನ್ನು ಸರಿಯಾಗಿ ನಿಲ್ಲಿಸುವುದಕ್ಕೋಸ್ಕರ ಯಾದವವಂಶದಲ್ಲಿ ರಮಣಿಯವಾದ ದಿವ್ಯಮಂಗಳಮೂರ್ತಿಯನ್ನು ಸ್ವೀಕರಿಸಿ ಅವತಾರಮಾಡಿದನೋ ಮತ್ತು ಆ ಅವತಾರದಲ್ಲಿ ತನ್ನ ಸುಂದರವಾದ ನೋಟದಿಂದಲೂ, ಮಧುರ ಮಂದಹಾಸದಿಂದಲೂ, ಸವಿಮಾತುಗಳಿಂದಲೂ ಯಾದವರಮಣಿಯರ ಸೌಂದರ್ಯ-ಸೌಭಾಗ್ಯಗಳ ಅಭಿಮಾನದಿಂದುಂಟಾಗಿದ್ದ ಮನಸ್ಸಿನ ಸ್ಥೈರ್ಯವನ್ನು ಅಪಹರಿಸಿದನೋ ಮತ್ತು ಯಾವನ ಪಾದವಿನ್ಯಾಸದ ಗುರುತುಗಳಿಂದ ನನಗೆ ಪ್ರತಿಕ್ಷಣವೂ ಮೈನವಿರೇಳುತ್ತಿತ್ತೋ–ಅಂತಹ ಪುರುಷೋತ್ತಮನ ವಿರಹವನ್ನು ಸಹಿಸಿಕೊಳ್ಳಲು ಯಾವಳಿಗೆ ತಾನೇ ಸಾಧ್ಯವಾದೀತು?”

ಹೀಗೆ ಧರ್ಮದೇವನೂ–ಭೂದೇವಿಯೂ ಪರಸ್ಪರವಾಗಿ ಮಾತನಾಡುತ್ತಿದ್ದಾಗ ಕಾಲಕ್ಕೆ ಸರಿಯಾಗಿ ರಾಜರ್ಷಿಶ್ರೇಷ್ಠನಾದ ಪರೀಕ್ಷಿದ್ರಾಜನು ಸರಸ್ವತೀನದಿಯ ಪೂರ್ವತೀರಕ್ಕೆ ಬಂದು ತಲುಪಿದನು. (ಶ್ಲೋಕ 25-36)

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತದಲ್ಲಿ ಪ್ರಥಮಸ್ಕಂಧದ ೧೬ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೧೭ನೆಯ ಅಧ್ಯಾಯ

## ಪರೀಕ್ಷಿದ್ರಾಜನು ಕಲಿಪುರುಷನನ್ನು ನಿಗ್ರಹಿಸಿದುದು

ಸೂತಪುರಾಣಿಕರು ಹೇಳುತ್ತಾರೆ :

**ತತ್ರ ಗೋಮಿಥುನಂ ರಾಜಾ ಹನ್ಯಮಾನಮನಾಥವತ್ ।**
**ದಣ್ಡಹಸ್ತಂ ಚ ವೃಷಲಂ ದದೃಶೇ ನೃಪಲಾಞ್ಛನಮ್ ॥೧॥**

ಪರೀಕ್ಷಿದ್ರಾಜನು ಸರಸ್ವತೀನದಿಯ ತೀರದಲ್ಲಿ ಒಬ್ಬ ಧರ್ಮಘಾತುಕ

ನಾದ ವೃಷಲನು ರಾಜವೇಷಧಾರಿಯಾಗಿ ಕೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡಿರುವುದನ್ನೂ ಹಾಗೆಯೇ ಒಂದು ಹಸು ಮತ್ತು ಎತ್ತುಗಳು ಅನಾಥರಂತೆ ಅವನಿಂದ ಹೊಡೆಯಲ್ಪಡುತ್ತಿರುವುದನ್ನೂ ನೋಡಿದನು.

ತಾವರೆಯ ದಂಟಿನಂತೆ ಬೆಳ್ಳಗಿದ್ದ ಆ ಎತ್ತು ಒಂಟಿಕಾಲಿನ ಮೇಲೆ ನಿಂತು ಗಡ-ಗಡ ನಡುಗುತ್ತಿದ್ದು ಆ ಘಾತುಕನು ಹೊಡೆಯುತ್ತಿದ್ದ ಏಟುಗಳಿಂದ ಪೀಡಿಸಲ್ಪಟ್ಟು ಮೂತ್ರವಿಸರ್ಜನೆಯನ್ನು ಮಾಡುತ್ತಿತ್ತು. ಅಂತೆಯೇ ಆ ಧರ್ಮಧೇನುವು ಘಾತುಕನ ಒದೆತಗಳಿಗೆ ಸಿಕ್ಕಿ ಬಡಕಲಾಗಿ, ಕರುವನ್ನೂ ಕಳೆದುಕೊಂಡು ದೈನ್ಯದಿಂದ ಕೂಡಿ ಕಣ್ಣೀರಿಡುತ್ತಾ ಹುಲ್ಲನ್ನು ಅಪೇಕ್ಷಿಪಡುತ್ತಿರುವುದನ್ನೂ ಆತನು ಕಂಡನು. ಸುವರ್ಣದಿಂದಲಂಕೃತವಾದ ರಥದಲ್ಲಿ ಕುಳಿತಿದ್ದ ರಾಜನು ಒಡನೆಯೇ ಧನುಸ್ಸಿಗೆ ಹೆದೆಯೇರಿಸಿ ಮೇಘದಂತೆ ಗಂಭೀರವಾದ ವಾಣಿಯಿಂದ ಆ ಧರ್ಮಘಾತುಕನನ್ನು ಹೀಗೆ ಪ್ರಶ್ನಿಸಿದನು :

"ನೀನು ಯಾರು? ಬಲಶಾಲಿಯಾಗಿದ್ದುಕೊಂಡೂ ನನ್ನ ರಾಜ್ಯದಲ್ಲಿ ನನ್ನ ರಕ್ಷಣೆಯಲ್ಲಿರುವ ಈ ದುರ್ಬಲಪ್ರಾಣಿಗಳನ್ನು ಬಲಾತ್ಕಾರದಿಂದ ಏಕೆ ಹಿಂಸೆಮಾಡುತ್ತಿರುವೆ? ನೀನು ಮಾಡುತ್ತಿರುವ ಕೆಲಸ ದ್ವಿಜನದಲ್ಲ. ನಟನಂತೆ ವೇಷದಿಂದ ಮಾತ್ರ ರಾಜನಾಗಿ ಕಾಣುತ್ತಿದ್ದೀಯೆ. ಗಾಂಡೀವ ಧನುರ್ಧರನಾದ ಅರ್ಜುನನೊಡನೆ ಶ್ರೀಕೃಷ್ಣಪರಮಾತ್ಮನೂ ಕಣ್ಮರೆಯಾಗಿ ಪರಂಧಾಮಕ್ಕೆ ತೆರಳಿದ ಬಳಿಕ ನಿರಪರಾಧಿಗಳನ್ನು ಇಂತಹ ಏಕಾಂತಸ್ಥಳದಲ್ಲಿ ಹೊಡೆದು ಹಿಂಸೆಪಡಿಸುತ್ತಿದ್ದೀಯೆ. ಇಂತಹ ನೀನು ಮರಣದಂಡನೆಗೆ ಅರ್ಹನಾಗಿರುವುದರಿಂದ ನಿನ್ನ ಸ್ಥಿತಿಯು ಶೋಚನೀಯವೇ ಆಗಿದೆ."

ಅನಂತರ ರಾಜನು ಆ ವೃಷಭವನ್ನು ಹೀಗೆ ಪ್ರಶ್ನಿಸಿದನು :

"ಅಯ್ಯಾ! ತಾವರೆಯ ದಂಟಿನಂತೆ ಶುಭ್ರವಾದ ಬಣ್ಣದಿಂದ ಕಂಗೊಳಿಸುತ್ತಿರುವ ನೀನಾದರೂ ಯಾರು? ಮೂರು ಕಾಲುಗಳನ್ನೂ ಕಳೆದುಕೊಂಡು ಒಂಟಿ ಕಾಲಿನಿಂದಲೇ ಏಕೆ ನಡೆಯುತ್ತಿರುವೆ? ನೀನು ಎತ್ತಿನರೂಪದಲ್ಲಿರುವ ಯಾವನಾದರೂ ದೇವನಾಗಿದ್ದು ನಮ್ಮನ್ನು ಹೀಗೆ ಖೇದಗೊಳಿಸುತ್ತಿರುವೆಯಾ? ಪುರುವಂಶದ ಅರಸರ ಬಾಹುದಂಡದಿಂದ ಸಂರಕ್ಷಿತವಾಗಿರುವ ಈ ಭೂಮಂಡಲದಲ್ಲಿ ನಿನ್ನನ್ನು ಹೊರತುಪಡಿಸಿ ಬೇರೆ ಯಾವ ಪ್ರಾಣಿಯೂ—ಎಂದೂ ದುಃಖದಿಂದ ಕಣ್ಣೀರುಹರಿಸಿರುವುದಿಲ್ಲ.

ಓ ವೃಷಭವೇ! ನೀನು ದುಃಖಪಡದೇ ಈ ಧರ್ಮಘಾತುಕನ ವಿಷಯದಲ್ಲಿ ನಿರ್ಭಯವಾಗಿರು. ಅಮ್ಮಾ ಗೋಮಾತೆ! ದುಷ್ಟರಿಗೆ ಶಾಸನಮಾಡುವಂತಹ ನಾನೇ ಇರುವಾಗ ನೀನಿನ್ನು ಅಳಬೇಡ ; ನಿನಗೆ ಮಂಗಳವಾಗಲಿ.

**ಯಸ್ಯ ರಾಷ್ಟ್ರೇ ಪ್ರಜಾಃ ಸರ್ವಾಸ್ತ್ರಸ್ಯನ್ತೇ ಸಾಧ್ವ್ಯಸಾಧುಭಿಃ ।**
**ತಸ್ಯ ಮತ್ತಸ್ಯ ನಶ್ಯನ್ತಿ ಕೀರ್ತಿರಾಯುರ್ಭಗೋ ಗತಿಃ ॥೧೦॥**

**ಏಷ ರಾಜ್ಞಾಂ ಪರೋ ಧರ್ಮೋ ಹ್ಯಾರ್ತಾನಾಮಾರ್ತಿನಿಗ್ರಹಃ ।**

ದೇವಿ! ಯಾವ ರಾಜನ ರಾಜ್ಯದಲ್ಲಿ ಪ್ರಜೆಗಳು ದುಷ್ಟರ ಉಪದ್ರವಕ್ಕೆ ಹೆದರುತ್ತಿ ರುತ್ತಾ ರೋ–ಅಂತಹ ಮೈಮರೆತಿರುವ ರಾಜನ ಕೀರ್ತಿಆಯುಸ್ಸು, ಐಶ್ವರ್ಯ ಮತ್ತು ಪರಲೋಕಗಳು ನಾಶವಾಗಿಬಿಡುತ್ತವೆ. ಪೀಡೆಗೊಳ ಗಾಗಿರುವವರ ಪೀಡೆಯನ್ನು ನಿವಾರಿಸುವುದೇ ರಾಜರ ಪರಮಧರ್ಮವು.

ಆದುದರಿಂದ ನಾನು ಈ ಭೂತದ್ರೋಹಿಯಾದ ಮಹಾದುಷ್ಟನನ್ನು ವಧಿಸಿಬಿಡುವೆನು. ಓ ವೃಷಭವೇ! ನೀನು ನಾಲ್ಕು ಕಾಲುಗಳುಳ್ಳ ಪ್ರಾಣಿಯು. ನಿನ್ನ ಮೂರು ಕಾಲುಗಳನ್ನು ಮುರಿದು ಹಾಕಿದವನಾರು? ಶ್ರೀಕೃಷ್ಣನ ಅನುಯಾಯಿಗಳಾಗಿರುವ ರಾಜರ ಆಳ್ವಿಕೆಗೆ ಒಳಪಟ್ಟಿರುವ ರಾಷ್ಟ್ರಗಳಲ್ಲಿ ಯಾರೂ ನಿನ್ನಂತೆ ದುಃಖಿಗಳಾಗಿರಕೂಡದು. ನಿನಗೆ ಮಂಗಳವಾಗಲಿ. ವೃಷಭೋತ್ತಮ! ನಿನ್ನಂತಹ ನಿರಪರಾಧಿಯಾದ ಸಾಧುವಿನ ಅಂಗಗಳಿಗೆ ವಿಕಾರವನ್ನುಂಟುಮಾಡಿ ಪಾಂಡವರ ಕೀರ್ತಿಗೆ ಕಳಂಕವನ್ನು ತಂದೊಡ್ಡಿರುವ ದುಷ್ಟನು ಯಾರು? ನಿರಪರಾಧಿಗಳಾದ ಪ್ರಾಣಿಗಳಿಗೆ ಹಿಂಸೆ ಮಾಡುವವನು ಎಲ್ಲೇ ಇದ್ದರೂ ಆತನು ನನಗೆ ಭಯಪಡುತ್ತಲೇ ಇರಬೇಕಾಗುವುದು. ನಾನು ಅಂತಹವನನ್ನು ಖಂಡಿತವಾಗಿಯೂ ನಿಗ್ರಹಿಸುವೆನು. ದುಷ್ಟರನ್ನು ದಮನಮಾಡಿದಾಗ ಮಾತ್ರವೇ ಸಾಧುಗಳಿಗೆ ಒಳ್ಳೆಯದಾಗುವುದಲ್ಲವೇ? ಯಾವನು ನಿರಂಕುಶನಾಗಿ ನಡೆಯುತ್ತಾ ನಿರಪರಾಧಿಗಳಾದ ಪ್ರಾಣಿಗಳಿಗೆ ದ್ರೋಹಮಾಡುತ್ತಾನೆಯೋ–ಅಂತಹವನು ದೇವಪುರುಷನೇ ಆಗಿದ್ದರೂ ನಾನು ಆತನ ತೋಳ್ಬಳೆಗಳಿಂದಲಂಕೃತವಾದ ತೋಳನ್ನು ಕಡಿದುಹಾಕಿ ಬಿಡುವೆನು.

**ರಾಜ್ಞೋ ಹಿ ಪರಮೋ ಧರ್ಮಃ ಸ್ವಧರ್ಮಸ್ಥಾನುಪಾಲನಮ್ ।**
**ಶಾಸತೋಽನ್ಯಾನ್ಯಥಾಶಾಸ್ತ್ರಮನಾಪದ್ಯುತ್ಪಥಾನಿಹ ॥೧೬॥**

ಈ ಲೋಕದಲ್ಲಿ ಆಪತ್ಕಾಲವೊಂದನ್ನು ಬಿಟ್ಟು ಬೇರೆ ಸಮಯಗಳಲ್ಲಿ ಮರ್ಯಾದೆಮೀರಿ ವರ್ತಿಸುವವರನ್ನು ಶಾಸ್ತ್ರಾನುಸಾರವಾಗಿ ದಂಡಿಸುತ್ತಾ, ತಮ್ಮ ಧರ್ಮದಲ್ಲಿರುವವರನ್ನು ಕಾಪಾಡುತ್ತಾ ಇರುವುದು ರಾಜರಿಗೆ ಪರಮ ಧರ್ಮವೇ ಅಲ್ಲವೇ?"

ಮಹಾರಾಜ ಪರೀಕ್ಷಿತನ ಆ ಅಭಯವಾಣಿಯನ್ನು ಅಭಿನಂದಿಸುತ್ತಾ ಧರ್ಮವೃಷಭವು ರಾಜನಿಗೆ ಹೀಗೆಂದಿತು :

"ಯಾರ ಕಲ್ಯಾಣಗುಣಗಳನ್ನು ಮೆಚ್ಚಿ ಭಗವಂತನಾದ ಶ್ರೀಕೃಷ್ಣನು ಅವರಿಗೆ ದೌತ್ಯವೇ ಮುಂತಾದ ಸೇವೆಯನ್ನು ಮಾಡಿದನೋ–ಅಂತಹ ಮಹಾತ್ಮರಾದ ಪಾಂಡವರ ವಂಶದಲ್ಲಿ ಜನಿಸಿರುವ ನೀನು ದುಃಖಗೊಂಡವರಿಗೆ ಈ ರೀತಿ ಆಶ್ವಾಸನೆಯ ಮಾತನ್ನಾಡುವುದು ಯುಕ್ತವೇ ಆಗಿದೆ.

**ನ ವಯಂ ಕ್ಲೇಶಬೀಜಾನಿ ಯತಃ ಸ್ಯುಃ ಪುರುಷರ್ಷಭ ।**
**ಪುರುಷಂ ತಂ ವಿಜಾನೀಮೋ ವಾಕ್ಯಭೇದವಿಮೋಹಿತಾಃ ॥೧೮॥**

**ಕೇಚಿದ್ವಿಕಲ್ಪವಸನಾ ಆಹುರಾತ್ಮಾನಮಾತ್ಮನಃ ।**
**ದೈವಮನ್ಯೇ ಪರೇ ಕರ್ಮ ಸ್ವಭಾವಮಪರೇ ಪ್ರಭುಮ್ ॥೧೯॥**
**ಅಪ್ರತರ್ಕ್ಯಾದನಿರ್ದೇಶ್ಯಾದಿತಿ ಕೇಷ್ವಪಿ ನಿಶ್ಚಯಃ ।**

ಓ ಪುರುಷಶ್ರೇಷ್ಠನೇ! ಶಾಸ್ತ್ರಗಳಲ್ಲಿ ಹೇಳಿರುವ ಬಗೆ-ಬಗೆಯ ಮಾತುಗಳು ನಮ್ಮನ್ನು ಮೋಹಗೊಳಿಸುವುದರಿಂದ ನಮ್ಮ ಈ ಕ್ಲೇಶಕ್ಕೆ ಯಾವನು ಕಾರಣನೆಂಬುದು ನಮಗೆ ತಿಳಿಯುತ್ತಿಲ್ಲ. ತರ್ಕ-ವಿತರ್ಕಗಳ ಆವರಣಕ್ಕೆ ಒಳಗಾಗಿ ಕೆಲವರು ತಮ್ಮ ಆಗು-ಹೋಗುಗಳೆಲ್ಲಕ್ಕೂ ತಾವೇ ಕಾರಣರೆಂದು ಹೇಳುತ್ತಾರೆ. ಮತ್ತೆ ಕೆಲವರು ಅವೆಲ್ಲಕ್ಕೂ ದೈವವೇ ಕಾರಣವೆಂದೂ, ಇನ್ನೂ ಕೆಲವರು ಕರ್ಮವೇ ಎಲ್ಲದಕ್ಕೂ ಪ್ರಭುವೆಂದೂ, ಇನ್ನೂ ಕೆಲವರು ಸ್ವಭಾವವೇ ಕಾರಣವೆಂದೂ ಹೇಳುತ್ತಾರೆ. ಯಾವ ತರ್ಕ-ವಿತರ್ಕಗಳಿಗೂ ನಿಲುಕದೇ, ಯಾವ ಮಾತಿಗೂ ಗೋಚರವಾಗದೇ ಇರುವ ಯಾವುದೋ ಒಂದು ವಸ್ತುವಿನಿಂದಲೇ ಎಲ್ಲವೂ ನಡೆಯುವುದು–ಎಂದೂ ಕೆಲವರು ನಿರ್ಧರಿಸುತ್ತಾರೆ.

ರಾಜರ್ಷಿಯೇ! ಇವುಗಳಲ್ಲಿ ಯಾವುದು ಸರಿ–ಎಂಬುದನ್ನು ನಿನ್ನ ಬುದ್ಧಿಯಿಂದ ವಿಮರ್ಶೆಮಾಡಿ ಹೇಳು.''

ಸೂತಪುರಾಣಿಕರು ಹೇಳುತ್ತಾರೆ :

''ಬ್ರಾಹ್ಮಣಶ್ರೇಷ್ಠನೇ! ಶೌನಕಮಹಾಮುನಿಯೇ! ಧರ್ಮಪುರುಷನೇ ಹೇಳಿದ ಆ ಧರ್ಮಪ್ರವಚನವನ್ನು ಕೇಳಿ ಚಕ್ರವರ್ತಿಯು ಪ್ರಸನ್ನನಾದನು. ಶಾಂತಚಿತ್ತದಿಂದ ವಿಚಾರವನ್ನು ತಿಳಿದ ಆ ಮಹಾತ್ಮನು ಧರ್ಮಪುರುಷನನ್ನು ಕುರಿತು ಹೀಗೆಂದನು :

''ಧರ್ಮಜ್ಞನೇ! ನೀನು ಧರ್ಮವನ್ನೇ ಉಪದೇಶಮಾಡುತ್ತಿರುವೆ ಯಾದ್ದರಿಂದ ವೃಷಭದ ರೂಪವನ್ನು ಧರಿಸಿರುವ ಧರ್ಮಪುರುಷನೇ ನೀನಾಗಿರುವೆ. ಧರ್ಮದ ವಿಷಯದಲ್ಲಿ ನಿಷ್ಕರ್ಷೆಯಾದ ಅರಿವು ನಿನಗಲ್ಲದೇ ಬೇರೆ ಯಾರಿಗುಂಟು? ಆದರೂ ನೀನು ಮೇಲೆ ಹೇಳಿದ ಸಂದರ್ಭದಲ್ಲಿ ಅಧರ್ಮಕ್ಕೆ ನಿಜವಾಗಿಯೂ ಕಾರಣನು ಯಾರು ಎಂಬುದನ್ನು ಏಕೆ ಹೆಸರಿಸಿಲ್ಲ? ಎಂದರೆ:

**ಯದಧರ್ಮಕೃತಃ ಸ್ಥಾನಂ ಸೂಚಕಸ್ಯಾಪಿ ತದ್ಭವೇತ್ ॥೨೨॥**

'ಅಧರ್ಮವನ್ನು ಆಚರಿಸಿದವನಿಗೆ ಯಾವ ನರಕಾದಿ ಸ್ಥಾನಗಳು ದೊರೆಯುವುವೋ–ಅಧರ್ಮವನ್ನು ಸೂಚಿಸುವವನಿಗೂ ಅದೇ ಸ್ಥಾನವೇ ಸಿಕ್ಕುವುದು.'

**ಅಥವಾ ದೇವಮಾಯಾಯಾ ನೂನಂ ಗತಿರಗೋಚರಾ ।**
**ಚೇತಸೋ ವಚಸಶ್ಚಾಪಿ ಭೂತಾನಾಮಿತಿ ನಿಶ್ಚಯಃ ॥೨೩॥**

ಅಥವಾ 'ಪರಮಾತ್ಮನ ಮಾಯೆಯ ಸ್ವರೂಪವನ್ನೂ, ಗತಿಯನ್ನೂ ಪ್ರಾಣಿಗಳ ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ ನಿರೂಪಿಸುವುದು ಶಕ್ಯವೇ ಇಲ್ಲ'–ಎಂಬುದೇ ನಿಶ್ಚಿತವಾದ ಸಿದ್ಧಾಂತ.

ಓ ಧರ್ಮದೇವನೇ! ಕೃತಯುಗದಲ್ಲಿ ನಿನಗೆ ತಪಸ್ಸು, ಶುಚಿತ್ವ, ದಯೆ ಮತ್ತು ಸತ್ಯ–ಎಂಬ ನಾಲ್ಕು ಪಾದಗಳು ಇದ್ದುವು. ಅವುಗಳಲ್ಲಿ ಮೂರು ಪಾದಗಳು ಅಧರ್ಮದ ಅಂಶಗಳಾದ ಅಹಂಕಾರ, ಆಸಕ್ತಿ ಮತ್ತು ಮದಗಳಿಂದ ಮುರಿದುಹೋದುವು. ಈಗ ನಾಲ್ಕನೆಯ ಪಾದವಾದ 'ಸತ್ಯ' ವೆಂಬುದು ಮಾತ್ರ ಉಳಿದಿದೆ. ಅದರ ಬಲದಿಂದಲೇ ನೀನು ಉಳಿದಿದ್ದೀಯೇ.

ಅಸತ್ಯದಿಂದ ಪೋಷಿತವಾದ, ಅಧರ್ಮರೂಪವಾದ ಕಲಿಯುಗವು ಈಗ ಆ ಪಾದವನ್ನೂ ನುಂಗಿಹಾಕಲು ಪ್ರಯತ್ನಿಸುತ್ತಿದೆ. ಈ ಹಸುವು ಸಾಕ್ಷಾತ್ ಭೂಮಾತೆಯೇ ಆಗಿದ್ದು ಶ್ರೀಕೃಷ್ಣಪರಮಾತ್ಮನು ಈಕೆಯ ಮೇಲಿದ್ದ ಮಹಾ ಭಾರವನ್ನು ಇಳಿಸಿ ಈಕೆಗೆ ಆನಂದವನ್ನುಂಟುಮಾಡಿದ್ದನು. ಆತನ ಸೌಂದರ್ಯನಿಧಿಯಾದ ಪಾದಾರವಿಂದಗಳ ವಿನ್ಯಾಸದಿಂದ ಈಕೆಗೆ ಎಲ್ಲೆಡೆ ಗಳಲ್ಲೂ ಅಲಂಕಾರ-ಆನಂದೋತ್ಸವಗಳು ಸಂಪನ್ನವಾಗುತ್ತಿದ್ದುವು. ಈಗ ಆತನ ಅಗಲಿಕೆಯಿಂದ ಈ ಸಾಧ್ವಿಯು ದುರ್ಭಾಗ್ಯವತಿಯಂತೆ ಕಣ್ಣೀರುಸುರಿ ಸುತ್ತಾ 'ಅಯ್ಯೋ! ಇನ್ನು ಮುಂದೆ ಬ್ರಾಹ್ಮಣದ್ರೋಹಿಗಳಾದ ಧರ್ಮ ಘಾತುಕರು ರಾಜವೇಷಧಾರಿಗಳಾಗಿ ನನ್ನನ್ನು ಆಳುವರಲ್ಲಾ!'–ಎಂದು ಚಿಂತೆ ಪಡುತ್ತಿದ್ದಾಳೆ." (ಶ್ಲೋಕ 24-27)

ಮಹಾರಥಿಯಾದ ಪರೀಕ್ಷಿದ್ರಾಜನು ಈ ರೀತಿಯಲ್ಲಿ ಧರ್ಮದೇವ ನನ್ನೂ, ಭೂದೇವಿಯನ್ನೂ ಸಮಾಧಾನಪಡಿಸಿದನು. ಅನಂತರ ಅಧರ್ಮಕ್ಕೆ ಕಾರಣನಾಗಿರುವ ಕಲಿಪುರುಷನನ್ನು ಸಂಹಾರಮಾಡುವುದಕ್ಕೆಂದು ತೀಕ್ಷ್ಣ ವಾದ ಕತ್ತಿಯನ್ನು ಎತ್ತಿಕೊಂಡನು. ಪರೀಕ್ಷಿದ್ರಾಜನು ತನ್ನನ್ನು ಸಂಹರಿಸಲು ಬಯಸುತ್ತಿದ್ದಾನೆ–ಎಂಬುದು ಕಲಿಪುರುಷನಿಗೆ ತಿಳಿದು ಆತನು ಒಡನೆಯೇ ತನ್ನ ರಾಜವೇಷವನ್ನು ಕಳಚಿಹಾಕಿ ಭಯದಿಂದ ಕಳವಳಗೊಂಡವನಾಗಿ, ತಲೆಯನ್ನು ಆತನ ಪಾದಗಳಲ್ಲಿ ಇರಿಸಿ ಆತನಲ್ಲಿ ಶರಣಾಗತನಾದನು. ಪರೀಕ್ಷಿ ದ್ರಾಜನಾದರೋ ಮಹಾಯಶಸ್ವಿಯೂ, ದೀನವತ್ಸಲನೂ, ಶರಣಾಗತರಕ್ಷ ಕನೂ ಆಗಿದ್ದುದರಿಂದ ಕಲಿಪುರುಷನು ತನ್ನ ಪಾದಗಳಲ್ಲಿ ಬಿದ್ದಿರುವುದನ್ನು ನೋಡಿ ಆತನನ್ನು ಸಾಯಿಸದೇ ಕರುಣೆತೋರಿದನು. ಆ ಮಹಾತ್ಮನು ಕಿರುನಗೆಯನ್ನು ಬೀರುತ್ತಾ ಕಲಿಪುರುಷನನ್ನು ಕುರಿತು ಹೀಗೆಂದನು :

"ನೀನು ಕೈಜೋಡಿಸಿಕೊಂಡು ಶರಣಾಗತನಾಗಿದ್ದೀಯೆ. ಆದ್ದರಿಂದ ಅರ್ಜುನನ ಯಶಸ್ವಿಯಾದ ವಂಶದಲ್ಲಿ ಜನಿಸಿದ ವೀರರಿಂದ ನಿನಗೆ ಯಾವ ಭಯವೂ ಇಲ್ಲ. ಆದರೆ ನೀನು ಅಧರ್ಮಕ್ಕೆ ಸಹಾಯಕನಾಗಿರುವುದರಿಂದ ನನ್ನ ರಾಜ್ಯದಲ್ಲಿ ಖಂಡಿತವಾಗಿಯೂ ಇರಕೂಡದು. ನೀನು ರಾಜರ ಶರೀರ ದಲ್ಲಿ ಸೇರಿಕೊಳ್ಳುವುದರಿಂದಲೇ ಲೋಭ, ಅಸತ್ಯ, ಚೌರ್ಯ, ದುಷ್ಟತನ,

ಸ್ವಧರ್ಮತ್ಯಾಗ, ದಾರಿದ್ರ್ಯ, ಕಪಟ, ಕಲಹ, ದಂಭ ಮತ್ತು ಇತರ ಪಾಪಗಳು ವೃದ್ಧಿಹೊಂದುತ್ತಿವೆ. ಆದುದರಿಂದ, ಓ ಅಧರ್ಮಮಿತ್ರನೇ! ನೀನು ಈ ಬ್ರಹ್ಮಾವರ್ತದೇಶದಲ್ಲಿ ಕ್ಷಣಕಾಲವೂ ಇರಬಾರದು. ಏಕೆಂದರೆ : ಇದು ಧರ್ಮ ಮತ್ತು ಸತ್ಯಗಳ ನಿವಾಸಸ್ಥಾನವು. ಯಜ್ಞವಿಧಿಯನ್ನರಿತ ಮಹಾತ್ಮರು ಯಜ್ಞಗಳ ಮೂಲಕ ಯಜ್ಞಪುರುಷನಾದ ಭಗವಂತನನ್ನು ಆರಾಧಿಸುತ್ತಿರುವ ಕ್ಷೇತ್ರವು. ಈ ದೇಶದಲ್ಲಿ ಭಗವಂತನಾದ ಶ್ರೀಹರಿಯು ಯಜ್ಞರೂಪದಲ್ಲಿ ವಿರಾಜಿಸುತ್ತಿದ್ದಾನೆ. ಯಜ್ಞಗಳ ಮೂಲಕ ಪೂಜೆಯನ್ನು ಸ್ವೀಕರಿಸಿ ಯಜ್ಞಮಾಡುವವರಿಗೆ ಸನ್ಮಂಗಳವನ್ನುಂಟುಮಾಡುತ್ತಾನೆ. ಸರ್ವಾತ್ಮನಾಗಿ ರುವ ಆ ಸ್ವಾಮಿಯು ವಾಯುವಿನಂತೆ ಸಮಸ್ತಚರಾಚರಪ್ರಾಣಿಗಳ ಒಳಗೂ-ಹೊರಗೂ ಏಕರಸವಾಗಿ ತುಂಬಿದ್ದು ಅವರ ಕಾಮನೆಗಳನ್ನು ಪೂರ್ಣ ಗೊಳಿಸುತ್ತಿರುತ್ತಾನೆ." (ಶ್ಲೋಕ 28-34)

ಸೂತಪುರಾಣಿಕರು ಹೇಳುತ್ತಾರೆ :

ಪರೀಕ್ಷಿದ್ರಾಜನ ಆ ಮಾತುಗಳನ್ನು ಕೇಳಿ ಕಲಿಪುರುಷನು ನಡುಗ ತೊಡಗಿದನು. ದಂಡಪಾಣಿಯಾದ ಯಮಧರ್ಮರಾಜನಂತೆ ಪಾಪಿಯನ್ನು ಶಿಕ್ಷಿಸಲು ಕತ್ತಿಯನ್ನು ಹೊರಸೆಳೆದು ನಿಂತಿದ್ದ ಆತನಲ್ಲಿ ಕಲಿಯು ಹೀಗೆ ವಿಜ್ಞಾಪಿಸಿದನು :

"ಓ ಸಾರ್ವಭೌಮನೇ! ನಿನ್ನ ಆಜ್ಞೆಯನ್ನು ಪರಿಪಾಲಿಸುತ್ತಾ ನಾನು ಎಲ್ಲೇ ಇರಲು ಬಯಸಿದರೂ ಅಲ್ಲೆಲ್ಲಾ ಧನುಸ್ಸಿನಲ್ಲಿ ಬಾಣವನ್ನು ಹೂಡಿ ನಿಂತಿರುವ ನಿನ್ನ ಮೂರ್ತಿಯೇ ಕಾಣುತ್ತಿರುತ್ತದೆ. ಆದ್ದರಿಂದ ಓ ಧಾರ್ಮಿಕ ಶಿರೋಮಣಿಯೇ! ನಾನು ನಿನ್ನ ಆಜ್ಞೆಯನ್ನು ಪಾಲನೆಮಾಡುತ್ತಾ ನಿಯತವಾಗಿ ವಾಸಿಸಬಹುದಾದ ಸ್ಥಾನವು ಯಾವುದೆಂಬುದನ್ನು ದಯಮಾಡಿ ನಿರ್ದೇಶಿಸು." (ಶ್ಲೋಕ 35-37)

ಸೂತಪುರಾಣಿಕರು ಹೇಳುತ್ತಾರೆ :

"ಹೀಗೆ ಕಲಿಪುರುಷನು ಪ್ರಾರ್ಥನೆಮಾಡಲು ಮಹಾರಾಜನು ಆತನಿಗೆ ಸ್ಥಿರವಾಗಿ ವಾಸಮಾಡಲು ಜೂಜು, ಮದ್ಯಪಾನ, ಅಧಾರ್ಮಿಕವಾದ ಸ್ತ್ರೀಸಂಗ ಮತ್ತು ಹಿಂಸೆ–ಎಂಬ ನಾಲ್ಕು ಸ್ಥಾನಗಳನ್ನು ನಿರ್ದೇಶನಮಾಡಿದನು.

ಆ ನಾಲ್ಕು ಸ್ಥಾನಗಳಲ್ಲಿ ಕ್ರಮವಾಗಿ ಅಸತ್ಯ, ಮದ, ಆಸಕ್ತಿ ಮತ್ತು ನಿರ್ದಯತೆ–ಎಂಬ ನಾಲ್ಕು ಬಗೆಯ ಅಧರ್ಮಗಳು ವಾಸಮಾಡುತ್ತವೆ. ಇವುಗಳಲ್ಲದೇ ಇನ್ನೂ ಕೆಲವು ಸ್ಥಾನಗಳನ್ನು ತನ್ನ ವಾಸಕ್ಕಾಗಿ ದಯಪಾಲಿಸ ಬೇಕೆಂದು ಕಲಿಪುರುಷನು ಬೇಡಲು ಪರೀಕ್ಷಿದ್ರಾಜನು ಅವನಿಗೆ ವಾಸಕ್ಕಾಗಿ 'ಚಿನ್ನ'ವನ್ನೂ ಸ್ಥಾನವನ್ನಾಗಿ ನಿರ್ದೇಶಿಸಿದನು. ಹೀಗೆ ಕಲಿಪುರುಷನಿಗೆ ಅಸತ್ಯ, ಮದ, ಕಾಮ, ವೈರ ಮತ್ತು ರಜೋಗುಣ–ಎಂಬ ಐದು ಸ್ಥಾನಗಳಾದುವು. ಪರೀಕ್ಷಿದ್ರಾಜನು ತನಗೆ ಕೊಟ್ಟ ಆ ಐದು ಸ್ಥಾನಗಳಲ್ಲೇ ಕಲಿಪುರುಷನು ಆತನ ಆಜ್ಞೆಯಂತೆ ವಾಸಮಾಡತೊಡಗಿದನು. ಆದ್ದರಿಂದಲೇ ಆತ್ಮ ಕಲ್ಯಾಣವನ್ನು ಬಯಸುವ ಪುರುಷನು ಈ ಐದು ಸ್ಥಾನಗಳನ್ನು ಎಂದಿಗೂ ಸೇವಿಸಬಾರದು. ವಿಶೇಷವಾಗಿ ಧರ್ಮಶೀಲರಾದ ರಾಜರು, ಪ್ರಜಾನಾಯಕರು ಮತ್ತು ಧರ್ಮೋಪದೇಶಮಾಡುವ ಗುರುಜನರು ತುಂಬಾ ಸಾವಧಾನವಾಗಿ ಇವುಗಳನ್ನು ತ್ಯಜಿಸಿಬಿಡಬೇಕು.

ಅನಂತರ ಪರೀಕ್ಷಿದ್ರಾಜನು ವೃಷಭರೂಪದಲ್ಲಿದ್ದ ಧರ್ಮದೇವನ ದೇಹದಲ್ಲಿ ತಪಸ್ಸು, ಶೌಚ ಮತ್ತು ದಯೆಗಳೆಂಬ–ಮೂರು ಪಾದಗಳನ್ನೂ ಜೋಡಿಸಿಕೊಟ್ಟು ಸಮಾಧಾನಪಡಿಸಿದನು. ಭೂದೇವಿಯನ್ನೂ ಸಮಾಧಾನ ಪಡಿಸಿ ಆಕೆಯನ್ನು ಸಲಹಿದನು. ಅದೇ ಪರೀಕ್ಷಿದ್ರಾಜನೇ ತನ್ನ ಪಿತಾಮಹನು ಅರಣ್ಯಕ್ಕೆ ತೆರಳುವ ಸಮಯದಲ್ಲಿ ತನಗೆ ಕೊಟ್ಟ ರಾಜ ಸಿಂಹಾಸನದ ಮೇಲೆ ಈಗ ಬೆಳಗುತ್ತಿದ್ದಾನೆ. ಪರಮಯಶಸ್ವಿಯೂ, ಸೌಭಾಗ್ಯ ಸಂಪನ್ನನೂ ಆಗಿರುವ ಆ ಚಕ್ರವರ್ತಿ ರಾಜರ್ಷಿಯು ಹಸ್ತಿನಾವತಿಯಲ್ಲಿ ಕೌರವಕುಲದ ರಾಜ್ಯಲಕ್ಷ್ಮಿಯಿಂದ ರಾರಾಜಿಸುತ್ತಿದ್ದಾನೆ.* ಅಭಿಮನ್ಯುವಿನ

---

* ಈ ಶ್ಲೋಕಗಳಲ್ಲಿ–ಸೂತಪುರಾಣಿಕರು ಕಥೆಯನ್ನು ಹೇಳುತ್ತಿದ್ದ ಸಮಯದಲ್ಲಿ ರಾಜನು ಬದುಕಿದ್ದಂತೆ–ವರ್ತಮಾನಕಾಲದಲ್ಲಿ ನಿರ್ದೇಶಮಾಡಿದೆ. ಆದರೆ ಆ ವೇಳೆಗೆ ಪರೀಕ್ಷಿದ್ರಾಜನು ಪರಂಧಾಮಹೊಂದಿಬಿಟ್ಟಿದ್ದನು. ಆದರೂ ವರ್ತಮಾನಕಾಲವನ್ನು ಆತನ ಬಗೆಗೆ ಏಕೆ ಹೇಳಿದೆ? ಎಂದರೆ :

ಶ್ರೀವಲ್ಲಭಾಚಾರ್ಯರು ತಮ್ಮ ಟೀಕೆಯಲ್ಲಿ ಗಮನಿಸಿರುವಂತೆ–೧) ಪರೀಕ್ಷಿದ್ರಾಜನು ಭೌತಿಕವಾಗಿ ಮೃತನಾಗಿದ್ದರೂ ಆತನ ಕೀರ್ತಿ ಮತ್ತು ಪ್ರಭಾವಗಳು ಜೀವಂತ ವಾಗಿಯೇ ಇದ್ದುವು. ೨) ಆತನು ಭಗವಂತನ ಸಾಯುಜ್ಯವನ್ನು ಹೊಂದಿದ್ದನು. ಆದ್ದ

ಪುತ್ರರತ್ನನಾದ ಪರೀಕ್ಷಿದ್ರಾಜನ ಪ್ರಭಾವ ಹೀಗಿದೆ. ಆ ಮಹಾನುಭಾವನು ಭೂಮಿಯನ್ನು ಪಾಲಿಸುತ್ತಿರುವ ಸಮಯದಲ್ಲಿಯೇ ನೀವು ದೀರ್ಘಕಾಲ ನಡೆಯುವ ಈ ಸತ್ರಯಜ್ಞದಲ್ಲಿ ದೀಕ್ಷಿತರಾಗಿದ್ದೀರಿ.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೧೭ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೧೮ನೆಯ ಅಧ್ಯಾಯ

## ಪರೀಕ್ಷಿದ್ರಾಜನಿಗೆ ಶೃಂಗಿಋಷಿಯಿಂದ ಶಾಪ ಒದಗಿದುದು

ಸೂತಪುರಾಣಿಕರು ಹೇಳುತ್ತಾರೆ :

**ಯೋ ವೈ ದ್ರೌಣ್ಯಸ್ತ್ರವಿಪ್ಲುಷ್ಟೋ ನ ಮಾತುರುದರೇ ಮೃತಃ ।**
**ಅನುಗ್ರಹಾದ್ಭಗವತಃ ಕೃಷ್ಣಸ್ಯಾದ್ಭುತಕರ್ಮಣಃ ॥೧॥**

"ತನ್ನ ತಾಯಿಯ ಗರ್ಭದಲ್ಲಿ ಅಶ್ವತ್ಥಾಮನ ಬ್ರಹ್ಮಾಸ್ತ್ರವು ತನ್ನನ್ನು ದಹಿಸುತ್ತಿದ್ದರೂ ಆ ಮಹಾತ್ಮನಾದ ಪರೀಕ್ಷಿದ್ರಾಜನು ಅದ್ಭುತಕರ್ಮಗಳುಳ್ಳ ಶ್ರೀಕೃಷ್ಣಪರಮಾತ್ಮನ ಅನುಗ್ರಹದಿಂದ ಉಳಿದುಕೊಂಡನು.

ಬ್ರಾಹ್ಮಣಶಾಪದಿಂದ ಪ್ರೇರಿತನಾದ ತಕ್ಷಕನಾಗವು ಕಚ್ಚಲು ಬಂದಾಗಲೂ ಆತನು ಪ್ರಾಣನಾಶವಾಗುವುದೆಂಬ ಭಯದಿಂದ ಮೋಹಕ್ಕೆ ಒಳಗಾಗಲಿಲ್ಲ. ಏಕೆಂದರೆ : ಆತನು ತನ್ನ ಚಿತ್ತವನ್ನು ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಸಮರ್ಪಣೆ ಮಾಡಿಬಿಟ್ಟಿದ್ದನು. ಆತನು ಸರ್ವಸಂಗಪರಿತ್ಯಾಗಮಾಡಿ ಗಂಗಾತೀರಕ್ಕೆ ಹೋಗಿ ಶ್ರೀಶುಕಮಹರ್ಷಿಗಳಿಂದ ಉಪದೇಶಪಡೆದು ಪರ

---

ರಿಂದ ಸೂತಪುರಾಣಿಕರು ಆತನನ್ನು ತಮ್ಮ ಎದುರಿಗೇ ನೋಡುತ್ತಿದ್ದರು. ಅವರಿಗೆ ಮಾತ್ರವಲ್ಲದೇ ಅಲ್ಲಿದ್ದ ಎಲ್ಲರಿಗೂ ಹಾಗೆಯೇ ಅನುಭವವಾಗುತ್ತಿತ್ತು. ೩) ಪರೀಕ್ಷಿ ದ್ರಾಜನು ಮೃತನಾಗಿದ್ದರೂ ಆತನ ಸುಪುತ್ರ ಜನಮೇಜಯನು ಆಗ ಸಿಂಹಾಸನದ ಮೇಲೆ ವಿರಾಜಿಸುತ್ತಿದ್ದನು. 'ಆತ್ಮಾ ವೈ ಪುತ್ರನಾಮಾಸಿ' ಎಂಬ ಶ್ರುತಿಯಂತೆ ಆ ಪುತ್ರನ ರೂಪದಲ್ಲಿ ತಂದೆಯಾದ ಪರೀಕ್ಷಿತನೇ ಆಗ ಸಿಂಹಾಸನದ ಮೇಲೆ ಇದ್ದಂತೆ ಆಯಿತು. ಇದಲ್ಲದೇ 'ವರ್ತಮಾನಸಾಮೀಪ್ಯೇ ವರ್ತಮಾನವದ್ವಾ'– ಎಂಬ ಸೂತ್ರದಂತೆ ನಿಕಟಭೂತ ಮತ್ತು ನಿಕಟಭವಿಷ್ಯತ್ತಿನ ಅರ್ಥದಲ್ಲೂ ವರ್ತಮಾನಪ್ರಯೋಗ ಮಾಡಬಹುದು.

(ಶ್ಲೋಕ ೪೨-೪೫)

ಮಾತ್ಮನ ಸ್ವರೂಪವನ್ನರಿತವನಾಗಿ ಶರೀರತ್ಯಾಗಮಾಡಿದನು. ಯಾವ ಸುಕೃತಿಗಳು ಶ್ರೀಭಗವಂತನ ಕಥೆಯನ್ನು ಹೇಳುತ್ತಲೂ, ಕೇಳುತ್ತಲೂ ಆ ಕಥಾಮೃತವನ್ನು ಸೇವಿಸುತ್ತಲೂ–ಅವನ ಪಾದಾರವಿಂದಗಳನ್ನು ಸ್ಮರಿಸುತ್ತಲೂ ಇರುವರೋ–ಅಂತಹವರಿಗೆ ಪ್ರಾಣಾನ್ತಕಾಲದಲ್ಲಿ ಗಾಬರಿ, ಗಲಿ-ಬಿಲಿಗಳು ಉಂಟಾಗುವುದಿಲ್ಲ. ಕಲಿಯು ಎಲ್ಲ ಕಡೆಗಳಲ್ಲಿಯೂ ವ್ಯಾಪಿಸಿದ್ದರೂ ಆ ಮಹಾತ್ಮನಾದ ಅಭಿಮನ್ಯುಪುತ್ರನು ಚಕ್ರವರ್ತಿಯಾಗಿದ್ದ ಕಾಲದವರೆಗೂ ಅವನ ಆಟವು ಏನೂ ನಡೆಯಲಿಲ್ಲ. ಶ್ರೀಕೃಷ್ಣನು ಯಾವ ದಿನ–ಯಾವ ಕ್ಷಣದಲ್ಲಿ ಭೂಮಿಯನ್ನು ತ್ಯಜಿಸಿದನೋ–ಆ ಕಾಲದಿಂದಲೇ ಅಧರ್ಮದ ಮೂಲಕಾರಣನಾದ ಕಲಿಯು ಪ್ರವೇಶಮಾಡಿಬಿಟ್ಟಿದ್ದನಾದರೂ ಪರೀಕ್ಷಿತನು ಅವನನ್ನು ಹತೋಟಿಯಲ್ಲಿಟ್ಟುಕೊಂಡಿದ್ದನು.

**ನಾನುದ್ವೇಷ್ಟಿ ಕಲಿಂ ಸಮ್ರಾಟ್ಸಾರಙ್ಗ ಇವ ಸಾರಭುಕ್ ।**
**ಕುಶಲಾನ್ಯಾಶು ಸಿದ್ಧ್ಯನ್ತಿ ನೇತರಾಣಿ ಕೃತಾನಿ ಯತ್ ॥೭॥**

ಪರೀಕ್ಷಿದ್ರಾಜನು ದುಂಬಿಯಂತೆ ಸಾರವನ್ನು ಗ್ರಹಿಸುವ ಸ್ವಭಾವವುಳ್ಳವನಾಗಿದ್ದುದರಿಂದಲೇ ಆತನಿಗೆ ಕಲಿಯುಗದ ಮೇಲೆ ಯಾವ ದ್ವೇಷವೂ ಇರಲಿಲ್ಲ. ಅದರಲ್ಲೂ ಗುಣಭಾಗವಿದೆಯೆಂಬುದನ್ನು ಆತನು ಗ್ರಹಿಸಿದ್ದನು. ಆ ಗುಣಭಾಗವೇನೆಂದರೆ : ಈ ಕಲಿಯುಗದಲ್ಲಿ ಆಚರಿಸಿದ ಪುಣ್ಯಕಾರ್ಯಗಳು ಶೀಘ್ರವಾಗಿ ಕೈಗೂಡುತ್ತವೆ. ಆದರೆ ಪಾಪಕಾರ್ಯಗಳು ಬೇಗನೆ ಫಲವನ್ನು ಕೊಡುವುದಿಲ್ಲ.

**ಕಿಂ ನು ಬಾಲೇಷು ಶೂರೇಣ ಕಲಿನಾ ಧೀರಭೀರುಣಾ ।**
**ಅಪ್ರಮತ್ತಃ ಪ್ರಮತ್ತೇಷು ಯೋ ವೃಕೋ ನೃಷು ವರ್ತತೇ ॥೮॥**

ಈ ಕಲಿಪುರುಷನು ತೋಳದಂತೆ. ತೋಳವು ಬಾಲಕರ ಮೇಲೆ ಪರಾಕ್ರಮವನ್ನು ತೋರಿಸಿದರೂ ಶೂರ-ವೀರರಿಗೆ ಭಯಪಡುತ್ತದೆ. ಅಂತೆಯೇ ಕಲಿಯು ಸಾವಧಾನತೆಯಿಲ್ಲದೇ ಇರುವ ಬಡಪಾಯಿಗಳನ್ನು ವಶಪಡಿಸಿಕೊಳ್ಳುವ ವಿಷಯದಲ್ಲೇ ಸಾವಧಾನದಿಂದಿರುತ್ತಾನೆ. ಸಾವಧಾನರಾಗಿರುವ ಧೀರಯೋಗಿಗಳ ಮೇಲೆ ಕೈಮಾಡಲು ಆತನು ಹೆದರುತ್ತಾನೆ.

ಎಲೈ ಮಹರ್ಷಿಗಳೇ! ನಿಮ್ಮ ಕೇಳಿಕೆಯಂತೆ ನಾನು ಶ್ರೀಭಗವಂತನ ಕಥೆಯಿಂದ ಕೂಡಿದ ಪವಿತ್ರವಾದ ಪರೀಕ್ಷಿದ್ರಾಜನ ಕಥೆಯನ್ನು ವರ್ಣಿಸಿ

ದೆನು. ಕೀರ್ತನೆಮಾಡಲು ಯೋಗ್ಯವಾಗಿರುವ ಆಶ್ಚರ್ಯಕರವಾದ ನಾನಾ ಲೀಲಾಕರ್ಮಗಳನ್ನು ಮಾಡಿದ ಶ್ರೀಭಗವಂತನ ದಿವ್ಯಗುಣಗಳನ್ನೂ, ದಿವ್ಯ ಕರ್ಮಗಳನ್ನೂ ಹೇಳುವ ಯಾವ ಯಾವ ದಿವ್ಯಕಥೆಗಳುಂಟೋ–ಅವುಗಳೆಲ್ಲ ವನ್ನೂ ಶ್ರೇಯಸ್ಸನ್ನು ಬಯಸುವ ಪುರುಷರು ಸೇವಿಸಬೇಕು."

ಸೂತಪುರಾಣಿಕರ ಆ ಮಾತುಗಳನ್ನು ಕೇಳಿ ಸಂತೋಷಗೊಂಡ ಶೌನಕಾದಿಮುನಿಗಳು ಆತನನ್ನು ಅಭಿನಂದಿಸಿ ಹೀಗೆ ಪ್ರಾರ್ಥನೆಮಾಡಿದರು :

"ಓ ಸೌಮ್ಯನೇ! ಸೂತಪುರಾಣಿಕನೇ! ನೀನು ಶಾಶ್ವತಕಾಲದವರೆಗೂ ಜೀವಿಸಿರು. ಏಕೆಂದರೆ : ಮೃತ್ಯುವಿನ ಪ್ರವಾಹದಲ್ಲಿ ಬಿದ್ದಿರುವ ನಮಗೆ ನೀನು ಶ್ರೀಕೃಷ್ಣಪರಮಾತ್ಮನ ಅಮೃತಮಯವಾದ ಧವಳಕೀರ್ತಿಯನ್ನು ಶ್ರವಣ ಮಾಡಿಸುತ್ತಿರುವೆ. ನೀನು ಸರ್ವಕಾಲವೂ ಸುಖವಾಗಿ ಬಾಳುತ್ತಿರಬೇಕು. ಬಹಳ ಕಾಲ ಯಜ್ಞಾದಿಕರ್ಮಗಳನ್ನಾಚರಿಸುತ್ತಾ ಅದರ ಹೊಗೆಯಿಂದ ನಮ್ಮ ಶರೀರವು ಬೂದು ಬಣ್ಣಕ್ಕೆ ತಿರುಗಿತು. ಆದರೂ ಆ ಕರ್ಮಗಳ ಫಲವು ದೊರೆಯುವುದೆಂಬ ಭರವಸೆಯಿಲ್ಲ. ನೀನಾದರೋ ಈಗಲೇ ನಮಗೆ ಶ್ರೀಕೃಷ್ಣಪರಮಾತ್ಮನ ಚರಣಕಮಲಗಳ ದಿವ್ಯೋನ್ಮಾದಕರವಾದ ಮಕರಂದ ವನ್ನೇ ಪಾನಮಾಡಿಸಿ ತೃಪ್ತಿಯನ್ನುಂಟುಮಾಡುತ್ತಿದ್ದೀಯೆ.

**ತುಲಯಾಮ ಲವೇನಾಪಿ ನ ಸ್ವರ್ಗಂ ನಾಪುನರ್ಭವಮ್ ।**
**ಭಗವತ್ಸಙ್ಗಿಸಙ್ಗಸ್ಯ ಮರ್ತ್ಯಾನಾಂ ಕಿಮುತಾಶಿಷಃ ॥೧೩॥**

ಭಗವದ್ಭಕ್ತರ ಸತ್ಸಂಗದಿಂದ ಉಂಟಾಗುವ ಸೌಖ್ಯಕ್ಕೆ ಯಾವುದು ತಾನೇ ಸಾಟಿಯಾದೀತು? ಅದರ ಲವಾಂಶಕ್ಕೂ ಸ್ವರ್ಗವನ್ನೂ ಹೋಲಿಸಲಾಗು ವುದಿಲ್ಲ. ಮರುಹುಟ್ಟಿಲ್ಲದ ಮುಕ್ತಿಯನ್ನೂ ಅದಕ್ಕೆ ಹೋಲಿಸಲಾರೆವು. ಹಾಗಿರು ವಾಗ ತುಚ್ಛವಾದ ಮಾನುಷಭೋಗಗಳ ವಿಷಯದಲ್ಲಿ ಹೇಳತಕ್ಕದ್ದೇನು?

ಮಹಾಯೋಗೇಶ್ವರರಾದ ಶಿವ, ಬ್ರಹ್ಮ ಇವರೇ ಮುಂತಾದವರೂ ಕೂಡ ಪ್ರಾಕೃತಗುಣರಹಿತನಾದ ಯಾವನ ಕಲ್ಯಾಣಗುಣಗಳ ಪಾರವನ್ನು ಕಾಣಲಾಗಲಿಲ್ಲವೋ–ಅಂತಹ ಮಹನೀಯತಮರಾದ ಪುರುಷರಿಗೆ ಜೀವನ ಸರ್ವಸ್ವವಾಗಿರುವ ಶ್ರೀಭಗವಂತನ ಕಥಾಮೃತದ ಪಾನದಲ್ಲಿ ರಸಜ್ಞನಾದ ಯಾವನಿಗೆ ತಾನೇ ಎಷ್ಟು ಸವಿದರೂ ತೃಪ್ತಿಯುಂಟಾದೀತು? ಆದುದರಿಂದ

ಎಲೈ ಜ್ಞಾನಿಶಿರೋಮಣಿಯೇ! ಭಗವಂತನನ್ನೇ ಜೀವನದ ಧ್ರುವತಾರೆಯನ್ನಾಗಿ ಭಾವಿಸಿರುವ ನೀನು, ಆತನ ದಿವ್ಯಕಥೆಗಳನ್ನು ಕೇಳಲು ಹಂಬಲಿಸುತ್ತಿರುವ ನಮಗೆ–ಮಹನೀಯತಮರಾದ ಪುರುಷರಿಗೆ ಏಕಮಾತ್ರ ಆಶ್ರಯವಾಗಿರುವ, ಉದಾರವೂ, ಪರಿಶುದ್ಧವೂ ಆದ ಶ್ರೀಹರಿಯ ಚರಿತ್ರವನ್ನೇ ಇನ್ನೂ ವಿಸ್ತಾರವಾಗಿ ವರ್ಣಿಸಿ ಹೇಳು. ಪರಮಭಾಗವತೋತ್ತಮನಾದ ಪರೀಕ್ಷಿದ್ರಾಜನು ಶುಕಮಹಾಮುನಿಗಳು ಉಪದೇಶಮಾಡಿದ ಯಾವ ಜ್ಞಾನದಿಂದ ಮೋಕ್ಷಸ್ವರೂಪವಾದ ಶ್ರೀಭಗವತ್ಪಾದಮೂಲವನ್ನು ಪಡೆದನೋ–ಆ ಜ್ಞಾನವನ್ನೂ ಮತ್ತು ಪರೀಕ್ಷಿದ್ರಾಜನ ಪರಮಪವಿತ್ರವಾದ ಆಖ್ಯಾನವನ್ನೂ ಕೃಪೆಯಿಟ್ಟು ವರ್ಣನೆಮಾಡು. ಅದು ಪರಮಪುಣ್ಯಕರವಾದುದು ; ಅತ್ಯದ್ಭುತವಾದ ಯೋಗರಹಸ್ಯಗಳಿಂದ ಸಂಪನ್ನವಾಗಿರುವುದು ; ಪರಮಾತ್ಮನ ದಿವ್ಯಲೀಲಾಚರಿತ್ರೆಗಳಿಂದ ತುಂಬಿರುವುದು. ಪರೀಕ್ಷಿದ್ರಾಜನಿಗೆ ಉಪದೇಶ ಮಾಡಲ್ಪಟ್ಟ, ಭಾಗವತ ಎಂಬ ನಾಮಧೇಯವುಳ್ಳ, ಭಾಗವತರಿಗೆ ರಮಣೀಯವಾದ, ಆ ರಸಮಯವಾದ ಕಥೆಯ ರಹಸ್ಯವಾದ ಯಾವ ಅರ್ಥವನ್ನೂ ಮರೆಮಾಚದೇ ಸ್ಪಷ್ಟವಾಗಿ ವಿವರಿಸಿ ಹೇಳುವವನಾಗು.”

ಸೂತಪುರಾಣಿಕರು ಹೇಳುತ್ತಾರೆ :

“ಎಂತಹ ಆಶ್ಚರ್ಯವಿದು! ವಿಲೋಮಜಾತಿಯಾದ* ಸೂತಕುಲದಲ್ಲಿ ಹುಟ್ಟಿದ್ದರೂ ನಾವು ಜ್ಞಾನವೃದ್ಧರ ಸೇವೆಯಿಂದ ಜನ್ಮಸಾಫಲ್ಯವನ್ನು ಪಡೆದೆವಲ್ಲಾ! ಶ್ರೇಷ್ಠತಮರಾದ ಮಹಾತ್ಮರೊಡನೆ ಸಂಭಾಷಣೆಮಾಡುವ ಯೋಗವೊದಗಿದ್ದರೆ ಅದರಿಂದಲೇ ದುಷ್ಕುಲದಲ್ಲಿ ಹುಟ್ಟಿದ ಕಾರಣದಿಂದುಂಟಾದ ಮನೋವ್ಯಥೆಯು ತೊಲಗಿಹೋಗುವುದು. ಏಕೆಂದರೆ: ಆ ಸಂಭಾಷಣೆಯು ಜ್ಞಾನಾಧಿಕಾರವನ್ನುಂಟುಮಾಡುವುದು. ಹೀಗಿರುವಾಗ ಶ್ರೀಭಗವಂತನ ದಿವ್ಯನಾಮಗಳನ್ನು ಹಾಡಿ-ಹೊಗಳುತ್ತಿರುವವರಿಗೆ ಮಾನಸಿಕ ರೋಗವು ಹೇಗೆ

---

* ವಿಲೋಮಜಾತಃ= ವಿಲೋಮಜಾತಿಯಲ್ಲಿ ಹುಟ್ಟಿದವನು. ಉಚ್ಚವರ್ಣದ ಸ್ತ್ರೀಯಲ್ಲಿ ನೀಚವರ್ಣದ ಪುರುಷನಿಂದ ಹುಟ್ಟಿದ ಸಂತಾನವು ‘ವಿಲೋಮಜಾತ’ ಎನಿಸುತ್ತದೆ. ಪ್ರಕೃತದಲ್ಲಿ ಸೂತಜಾತಿಯು – ಬ್ರಾಹ್ಮಣಸ್ತ್ರೀಯಲ್ಲಿ ಕ್ಷತ್ರಿಯಪುರುಷನಿಂದ ಉಂಟಾಗುವುದರಿಂದ ಅದು ವಿಲೋಮಜಾತಿ. (ಶ್ಲೋಕ ೧೮)

ತಾನೇ ಉಂಟಾದೀತು? ಅನಂತಶಕ್ತಿಯುಳ್ಳವನಾಗಿ, ಅನಂತಸ್ವರೂಪನಾಗಿ, ಅನಂತಕಲ್ಯಾಣಗುಣಪರಿಪೂರ್ಣನಾಗಿರುವುದರಿಂದ ಯಾವನು ಅನಂತ ನೆಂದೇ ಕರೆಯಲ್ಪಡುತ್ತಾನೆಯೋ–ಅಂತಹ, ಜ್ಞಾನಿಗಳಿಗೆ ಏಕಮಾತ್ರ ಗತಿ ಯಾಗಿರುವ ಅವನ ದಿವ್ಯನಾಮಗಳನ್ನೇ ಗಾನಮಾಡುತ್ತಾ ಅದರಲ್ಲಿ ಮುಳುಗಿ ರುವ ಸುಕೃತಿಗಳಿಗೆ ಎಂತಹ ಮನೋರೋಗ? ಆತನ ಮಹಾವಿಭೂತಿ ಯಾಗಿರುವ ಶ್ರೀಮಹಾಲಕ್ಷ್ಮಿಯೂ ಕೂಡ ತನ್ನನ್ನು ಯಾಚಿಸುತ್ತಿರುವ ಇತರ ರೆಲ್ಲರನ್ನೂ ಬಿಟ್ಟು ತನ್ನನ್ನು ಅಪೇಕ್ಷಿಸದೆಯೇ ನಿತ್ಯತೃಪ್ತನಾಗಿರುವ, ಎಣೆ-ಮಿಗಿಲಿಲ್ಲದ ಕಲ್ಯಾಣಗುಣಗಳಿಂದ ಪೂರ್ಣನಾಗಿರುವ ಆ ಭಗವಂತನ ಶ್ರೀಪಾದಧೂಳಿಯನ್ನು ಸೇವಿಸುತ್ತಾ ಧನ್ಯಳಾಗಿರುವಳಲ್ಲವೇ? ಆತನ ಗುಣ ಗಳ ಅಗ್ಗಳಿಕೆಯನ್ನು ತಿಳಿಯಲು ಈ ಒಂದು ಕಾರಣವೇ ಸಾಕು. ಬ್ರಹ್ಮ ದೇವರು ಯಾವಾತನ ಶ್ರೀಪಾದಪದ್ಮಗಳನ್ನು ತೊಳೆದ ತೀರ್ಥವೇ, ಶಿವ ನನ್ನೂ ಮತ್ತು ಇಡೀ ಜಗತ್ತನ್ನೂ ಪಾವನಗೊಳಿಸುತ್ತಿದೆಯೋ–ಅಂತಹ ಮುಕುಂದನನ್ನು ಬಿಟ್ಟು ಬೇರೆ ಯಾವನು ತಾನೇ *'ಭಗವಾನ್' ಎಂಬ ಶಬ್ದಕ್ಕೆ ಸಂಪೂರ್ಣವಾಗಿ ಅನ್ವರ್ಥವಿಷಯವಾದಾನು? ಆತನಲ್ಲಿ ಪರಮಪ್ರೇಮವನ್ನು ಹೊಂದಿರುವವರೇ ಧೀರರು. ಅಂತಹ ಧೀರರು ಶರೀರ ಮುಂತಾದುವುಗಳಲ್ಲಿ ನೆಟ್ಟಿದ್ದ ಆಸಕ್ತಿಯನ್ನು ಕೂಡಲೇ ತೊರೆದು ಅಹಿಂಸೆ ಮತ್ತು ಉಪಶಾಂ ಗಳನ್ನೇ ತನ್ನ ಧರ್ಮವನ್ನಾಗಿ ಹೊಂದಿರುವ, ಜೀವನದ ಕಟ್ಟಕಡೆಯ ಆಶ್ರಮವಾದ ಪರಮಹಂಸಧರ್ಮವನ್ನು ಯಾವನ ನಿರಂತರ ಧ್ಯಾನಕ್ಕೋಸ್ಕರ ಹೊಂದುತ್ತಾ

---

* **ಭಗವತ್ಪದಾರ್ಥಃ** = ಭೂತಗಳ ಉತ್ಪತ್ತಿ, ವಿನಾಶ, ವಿದ್ಯೆ ಮತ್ತು ಅವಿದ್ಯೆಗಳನ್ನು ಪೂರ್ಣವಾಗಿ ತಿಳಿದಿರುವವನು ಸರ್ವಜ್ಞ. ಭಗವಾನ್ ಎಂಬುದು ಪರಮಾತ್ಮನಿಗೆ ಮಾತ್ರವೇ ಮುಖ್ಯವೃತ್ತಿಯಿಂದ ಅನ್ವಯಿಸುವ ಶಬ್ದ. "**ಉತ್ಪತ್ತಿಂ ಚ ವಿನಾಶಂ ಚ ಭೂತಾನಾಮಾಗತಿಂ ಗತಿಮ್ । ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥**" ಸಮಗ್ರವಾದ ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ, ಜ್ಞಾನ ಮತ್ತು ವೈರಾಗ್ಯ–ಈ ಆರಕ್ಕೂ 'ಭಗ' ಎಂದು ಹೆಸರು. ಅವುಗಳು ಯಾವನಲ್ಲಿ ಪೂರ್ಣ ವಾಗಿವೆಯೋ ಅವನೇ ಭಗವಂತ. "**ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವೈರಾಗ್ಯಯೋಶ್ಚಾಪಿ ಷಣ್ಣಾಂ ಭಗ ಇತೀರಣಾ ॥**" ಷಡ್‌ಗುಣೈ ಶ್ವರ್ಯಸಂಪನ್ನನು. ಪರಮಾತ್ಮನನ್ನು ಬಿಟ್ಟು ಇತರ ಮಹಾತ್ಮರಿಗೆ ಗೌಣಾರ್ಥದಲ್ಲಿ ಮಾತ್ರ ಇದು ಅನ್ವಯಿಸುವುದು. (ಶ್ಲೋಕ ೨೧)

ರೆಯೋ–ಅಂತಹ ಮುಕುಂದನು ತಾನೇ 'ಭಗವಾನ್' ಎಂಬ ಶಬ್ದಕ್ಕೆ ಪೂರ್ಣವಾದ ಅರ್ಥವಾಗುತ್ತಾನೆ!

ಎಲೈ ಸೂರ್ಯಸದೃಶರಾದ ಮಹಾತ್ಮರೇ! ನೀವು ನನ್ನನ್ನು ಕೇಳಬೇಕೆಂದಿರುವ ವಿಷಯದ ಬಗೆಗೆ ನನಗೆ ಎಷ್ಟು ತಿಳಿದಿದೆಯೋ ಅಷ್ಟನ್ನು ಪ್ರಾಮಾಣಿಕವಾಗಿ ಹೇಳುತ್ತೇನೆ. ಪಕ್ಷಿಗಳಿಗೆ ತಮ್ಮ-ತಮ್ಮ ಶಕ್ತಿಗೆ ತಕ್ಕಂತೆಯೇ ಆಕಾಶದಲ್ಲಿ ಹಾರಲು ಸಾಧ್ಯವಾಗುತ್ತದೆ. ಹಾಗೆಯೇ ವಿದ್ವಾಂಸರಿಗೂ ಕೂಡ ಶ್ರೀಭಗವಂತನ ಮಹಿಮೆಯನ್ನು ತಮ್ಮ ಶಕ್ತಿಗೆ ಅನುಗುಣವಾಗಿಯೇ ತಿಳಿದು ವರ್ಣಿಸಲು ಶಕ್ಯವಾಗುತ್ತದೆ.

ಒಂದು ದಿನ ಆ ಪರೀಕ್ಷಿದ್ರಾಜನು ಬಿಲ್ಲನ್ನು ತೆಗೆದುಕೊಂಡು ಬೇಟೆಯಾಡುವುದಕ್ಕಾಗಿ ಅರಣ್ಯಕ್ಕೆ ಹೋದನು. ಆಗ ಮೃಗಗಳ ಹಿಂದೆ ಬಹಳ ದೂರ ಓಡಿ-ಓಡಿ ಆಯಾಸಗೊಂಡ ಅವನಿಗೆ ತುಂಬಾ ಹಸಿವು-ಬಾಯಾರಿಕೆಗಳುಂಟಾದುವು. ಬಾಯಾರಿಕೆಯನ್ನು ಕಳೆಯಲು ಯಾವ ಜಲಾಶಯವೂ ದೊರೆಯದಿರಲು ಆತನು ಹತ್ತಿರದಲ್ಲಿದ್ದ ಒಂದು ಋಷಿಯ ಆಶ್ರಮವನ್ನು ಪ್ರವೇಶಿಸಿದನು. ಅಲ್ಲಿ ಆತನು ಕಣ್ಣುಮುಚ್ಚಿಕೊಂಡು ಧ್ಯಾನಾರೂಢರಾಗಿ ಶಾಂತರಾಗಿ ಕುಳಿತಿದ್ದ ಒಬ್ಬ ಮುನಿವರ್ಯರನ್ನು ಕಂಡನು. ಅವರು ಇಂದ್ರಿಯ, ಪ್ರಾಣ, ಮನಸ್ಸು ಮತ್ತು ಬುದ್ಧಿಗಳೆಲ್ಲವನ್ನೂ ತಡೆಗಟ್ಟಿ ಸಂಸಾರಾತೀತವಾದ ಸ್ಥಿತಿಯಲ್ಲಿದ್ದರು. ಜಾಗ್ರತ್, ಸ್ವಪ್ನ, ಗಾಢನಿದ್ರೆ–ಎಂಬ ಮೂರು ಸ್ಥಿತಿಗಳನ್ನೂ ದಾಟಿ ವಿಕಾರರಹಿತರಾಗಿ ತುರೀಯಾವಸ್ಥೆಯಲ್ಲಿ ಬ್ರಹ್ಮತಾದಾತ್ಮ್ಯವನ್ನನುಭವಿಸುತ್ತಿದ್ದರು. ಕೆದರಿದ್ದ ಜಟೆಗಳು ಅವರ ದೇಹವನ್ನು ಮುಚ್ಚಿದ್ದುವು. ಅವರು ಕೃಷ್ಣಾಜಿನವನ್ನು ಹೊದ್ದಿದ್ದರು. ಅಂತಹ ಸಮಾಧಿಸ್ಥರಾಗಿದ್ದ ಮುನಿಗಳನ್ನು ಒಣಗಿಹೋಗಿದ್ದ ಗಂಟಲು-ನಾಲಿಗೆಗಳಿಂದ ಕೂಡಿದ್ದ ರಾಜನು ಒಂದಿಷ್ಟು ನೀರುಬೇಕೆಂದು ಬೇಡಿದನು. ಆದರೆ ಆತನಿಗೆ ಅಲ್ಲಿ ಕುಳಿತುಕೊಳ್ಳಲು ಹುಲ್ಲಿನ ಆಸನವೂ ದೊರೆಯಲಿಲ್ಲ. ಭೂಮಿಯಲ್ಲಿ ಕುಳಿತುಕೊಳ್ಳುವುದಕ್ಕೂ ಯಾರೂ ಹೇಳಲಿಲ್ಲ. ಅರ್ಘ್ಯವೇ ಮುಂತಾದ ಉಪಚಾರವಾಗಲೀ, ಕಡೆಗೆ ಒಂದು ಸವಿಮಾತಾಗಲೀ, ಯಾವುದೇ ಬಗೆಯ ಸ್ವಾಗತವಾಗಲೀ ದೊರೆಯದಿರಲು ಆತನಿಗೆ ಬೇಸರವಾಯಿತು.* ತನಗೆ ಅಪ

* 'ತೃಣಾನಿ ಭೂಮಿರುದಕಂ ವಾಕ್ ಚತುರ್ಥೀ ಚ ಸೂನೃತಾ । ಏತಾನ್ಯಪಿ ಸತಾಂ

ಮಾನವಾಯಿತೆಂದು ಭಾವಿಸಿ ಆತನು ಬಹಳವಾಗಿ ಕೋಪಗೊಂಡನು. ಹಸಿವು-ಬಾಯಾರಿಕೆಗಳಿಂದ ಪೀಡಿತನಾಗಿದ್ದ ಆತನಿಗೆ ಇದ್ದಕ್ಕಿದ್ದಂತೆಯೇ ಆ ಬ್ರಾಹ್ಮಣನ ಮೇಲೆ ಎಲ್ಲಿಲ್ಲದ ಅಸೂಯೆಯೂ, ಕ್ರೋಧವೂ ಉಂಟಾದುವು. ಆತನು ಹಾಗೆ ಕ್ರೋಧದಿಂದ ಹೋಗುವಾಗ ಒಂದು ಸತ್ತುಹೋಗಿದ್ದ ಹಾವನ್ನು ತನ್ನ ಬಿಲ್ಲಿನ ತುದಿಯಿಂದ ಎತ್ತಿ ಆ ಬ್ರಹ್ಮರ್ಷಿಯ ಕೊರಳಿಗೆ ಹಾಕಿ ರಾಜಧಾನಿಗೆ ಹಿಂದಿರುಗಿದನು. 'ಕಣ್ಣುಮುಚ್ಚಿಕೊಂಡಿರುವ ಆ ಮುನಿಯು ವಾಸ್ತವವಾಗಿಯೂ ಎಲ್ಲ ಇಂದ್ರಿಯವೃತ್ತಿಗಳನ್ನೂ ತಡೆಗಟ್ಟಿ ಸಮಾಧಿಯಲ್ಲಿ ರುವನೋ ಅಥವಾ ಈ ರಾಜನಿಂದ ತನಗೇನಾಗಬೇಕು–ಎಂಬ ತಾತ್ಸಾರ ದಿಂದ ಸಮಾಧಿಯನ್ನು ನಟಿಸುತ್ತಿದ್ದಾನೆಯೋ?' ಎಂದು ಆಲೋಚಿಸುತ್ತಾ ಆತನು ಹೊರಟುಹೋದನು. (ಶ್ಲೋಕ 14-31)

ಆ ಮಹಾಮುನಿಗಳ ಹೆಸರು ಶಮೀಕ. ಅವರ ಪುತ್ರ 'ಶೃಂಗಿ' ಎಂಬು ವನು ಮಹಾತೇಜಸ್ವೀ. ಇತರ ಋಷಿಕುಮಾರರೊಡನೆ ಆಟವಾಡುತ್ತಿದ್ದಾಗ ಆತನಿಗೆ ರಾಜನು ತನ್ನ ಪೂಜ್ಯನಾದ ತಂದೆಯ ವಿಷಯದಲ್ಲಿ ಕೆಟ್ಟ ವ್ಯವಹಾರ ಮಾಡಿದ್ದು ತಿಳಿದು, ಆತನು ಕಿಡಿ-ಕಿಡಿಯಾಗಿ ಹೀಗೆಂದನು. "ಛೆ! ಎಂತಹ ಅಧರ್ಮವಾಯಿತು! ಬೀದಿಯಲ್ಲಿ ಹಾಕಿದ ಬಲಿಯನ್ನು ತಿಂದು ಬದುಕುವ ಕಾಗೆಗಳಂತೆಯೂ, ಬಾಗಿಲನ್ನು ಕಾಯುವ ನಾಯಿಗಳಂತೆಯೂ, ದಾಸ ರಂತೆಯೂ ಇರಬೇಕಾಗಿದ್ದ ಈ ಕ್ಷತ್ರಿಯಾಧಮರು ಕೊಬ್ಬಿ ಹೀಗೆ ಸ್ವಾಮಿ ದ್ರೋಹ ಮಾಡುವುದೇ? ಇಂತಹ ಕ್ಷತ್ರಿಯಾಧಮರನ್ನು ಜ್ಞಾನಿಗಳು ಬಾಗಿಲು ಕಾಯುವ ಕೆಲಸಕ್ಕೆ ನೇಮಿಸಿರುವರು. ಅವರು ಬಾಗಿಲಲ್ಲಿರಬೇಕೇ ಹೊರತು ಒಳಕ್ಕೆ ನುಗ್ಗಿ ಪಾತ್ರೆಯಲ್ಲಿರುವ ಅನ್ನವನ್ನು ತಿನ್ನಲು ಹೇಗೆ ಅರ್ಹ ರಾದಾರು? ದುರ್ಮಾರ್ಗದಲ್ಲಿ ನಡೆಯುವವರನ್ನು ಶಿಕ್ಷಿಸುತ್ತಿದ್ದ ಶ್ರೀಕೃಷ್ಣನು ಪರಂಧಾಮವನ್ನು ಹೊಂದಿದ ಬಳಿಕ ಎಲ್ಲೆಮೀರಿ ನಡೆಯುತ್ತಿರುವ ಇವರಿಗೆ

---

ಗೇಹೇ ನೋಚ್ಛಿದ್ಯತೇ ಕದಾಚನ ॥'–ಎಂಬಂತೆ ಸತ್ಪುರುಷರ ಮನೆಗೆ ಹೋದಾಗ ಆಹಾರ, ವಿಶ್ರಾಂತಿಗೆ ಜಾಗ, ಕುಡಿಯಲು ನೀರು ಮತ್ತು ನಾಲ್ಕನೆಯದಾಗಿ ಸವಿಮಾತು–ಇವುಗಳಿಗೆ ಲೋಪವಾಗಬಾರದು (ಮನುಸ್ಮೃತಿ)

ಆ ಆಶ್ರಮದಲ್ಲಿ ಅವು ಯಾವುವೂ ದೊರೆಯದಿದ್ದುದರಿಂದ ರಾಜನಿಗೆ ಮಿತಿಮೀರಿ ಕೋಪವುಂಟಾಯಿತು. (ಶ್ಲೋಕ ೩೮)

ನಾನೇ ದಂಡನೆಯನ್ನು ವಿಧಿಸುತ್ತೇನೆ. ನನ್ನ ತಪೋಬಲವನ್ನಾದರೂ ನೋಡಲಿ." ಹೀಗೆ ಹೇಳಿ ಆ ಮುನಿಕುಮಾರನು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಕೌಶಿಕೀನದಿಯ ನೀರಿನಲ್ಲಿ ಆಚಮನಮಾಡಿ ತನ್ನ ಮಾತಿನ ರೂಪವಾದ ವಜ್ರವನ್ನು ಹೀಗೆ ಪ್ರಯೋಗಿಸಿದನು : "ಕುಲಗೆಡುಕನಾದ ಆ ಪರೀಕ್ಷಿದ್ರಾಜನು ನನ್ನ ಪೂಜ್ಯನಾದ ತಂದೆಗೆ ಅಪಮಾನಮಾಡಿ ಮರ್ಯಾದೆಮೀರಿ ನಡೆದಿದ್ದಾನೆ. ಆದ್ದರಿಂದ ನನ್ನ ಪ್ರೇರಣೆಯಂತೆ ಇಂದಿನಿಂದ ಏಳನೆಯ ದಿವಸದಲ್ಲಿ ತಕ್ಷಕಸರ್ಪವು ಆ ಕುಲಾಂಗಾರನನ್ನು ಕಚ್ಚಿಬಿಡುವುದು."

(ಶ್ಲೋಕ 32-37)

ಹೀಗೆ ಶಾಪಕೊಟ್ಟ ಬಳಿಕ ಆ ಬಾಲಕನು ತನ್ನ ಆಶ್ರಮಕ್ಕೆ ಬಂದು ತಂದೆಯ ಕೊರಳಿನಲ್ಲಿ ಸತ್ತಹಾವನ್ನು ಕಂಡು ಗಟ್ಟಿಯಾಗಿ ಅಳತೊಡಗಿದನು. ಶೌನಕರೇ! ಆಂಗೀರಸಗೋತ್ರದ ಮುನಿವರ್ಯರಾದ ಆ ಶಮೀಕರು ಪುತ್ರನ ಆ ಅಳುವಿನ ಧ್ವನಿಯನ್ನು ಕೇಳಿ ಎಚ್ಚರಗೊಂಡು ಮೆಲ್ಲಗೆ ಕಣ್ಣುಗಳನ್ನು ತೆರೆದು ತಮ್ಮ ಕೊರಳಿನಲ್ಲಿ ನೇತಾಡುತ್ತಿದ್ದ ಸತ್ತ ಸರ್ಪವನ್ನು ತೆಗೆದುಹಾಕಿ, "ಏಕೆ ಅಳುತ್ತಿರುವೆ ಮಗು? ನಿನಗೆ ಯಾರು ಏನು ಅಪಕಾರಮಾಡಿ ದರು?'–ಎಂದು ಮಗನನ್ನು ಕೇಳಲಾಗಿ ಶೃಂಗಿಯು ಅಲ್ಲಿ ನಡೆದಿದ್ದ ಎಲ್ಲ ಸಮಾಚಾರಗಳನ್ನೂ ತಂದೆಗೆ ತಿಳಿಸಿದನು. ರಾಜನಿಗೆ ಶಾಪಕೊಟ್ಟ ಸಮಾಚಾರವನ್ನು ಕೇಳಿ ಆ ಬ್ರಹ್ಮರ್ಷಿಯು ತನ್ನ ಪುತ್ರನನ್ನು ಅಭಿನಂದಿಸಲಿಲ್ಲ. "ಅಯ್ಯೋ! ಎಂತಹ ಪಾಪಕಾರ್ಯವನ್ನು ಮಾಡಿದೆ? ಓ ಮೂರ್ಖಬಾಲ ಕನೇ! ಒಂದು ಸಣ್ಣ ಅಪರಾಧಕ್ಕೆ ಎಷ್ಟು ದೊಡ್ಡ ಶಿಕ್ಷೆಯನ್ನು ವಿಧಿಸಿದೆ? ಓ ದುಡುಕುಬುದ್ಧಿಯವನೇ! ನಿನ್ನ ಬುದ್ಧಿಯು ಪರಿಪಕ್ವವಾಗಿಲ್ಲ. ಆ ರಾಜನಾದರೋ ಮಹಾವಿಷ್ಣುಸ್ವರೂಪನು. ತಡೆಯಲಸಾಧ್ಯವಾದ ಆತನ ತೇಜಸ್ಸಿನಿಂದಲೇ ಈ ಪ್ರಜೆಗಳೆಲ್ಲರೂ ಸುರಕ್ಷಿತರಾಗಿ ಯಾವ ಭಯವೂ ಇಲ್ಲದೇ ತಮ್ಮ ಯೋಗ-ಕ್ಷೇಮಗಳನ್ನು ಸಾಧಿಸಿಕೊಳ್ಳುತ್ತಿದ್ದು ನೆಮ್ಮದಿಯಿಂದಿದ್ದಾರೆ. ಆ ರಾಜನ ರೂಪವನ್ನು ಧರಿಸಿ ಶ್ರೀಭಗವಂತನು ಭೂಮಿಯಲ್ಲಿ ಕಾಣಿಸಿಕೊಳ್ಳದಿದ್ದರೆ ಕಳ್ಳ-ಕಾಕರು ಹೆಚ್ಚಿ ಈ ಲೋಕವು ಕಾವಲಿಲ್ಲದ ಕುರಿಮಂದೆಯಂತೆ–ಕ್ಷಣಮಾತ್ರದಲ್ಲಿ ನಶಿಸಿಹೋಗುವುದು. ಅಂತಹ ದೈವಸ್ವರೂಪಿಯಾದ ರಾಜ ನನ್ನು ನೀನು ಸಾಧಾರಣಮನುಷ್ಯನಂತೆ ಭಾವಿಸಿ ಹೀಗೆ ಮಾಡಬಾರದಾಗಿತ್ತು.

ರಾಜನನ್ನು ಕಳೆದುಕೊಂಡರೆ ಲೋಕಕ್ಕೇ ಮಹಾ ಅನರ್ಥವೊದಗುವುದು. ಲೂಟಿ-ದರೋಡೆಗಳೂ, ಪರಸ್ಪರ ಹೊಡೆದಾಟ-ಬಡಿದಾಟಗಳೂ, ಬೈಗುಳ ಗಳೂ ಹೆಚ್ಚುತ್ತವೆ. ದನ-ಕರುಗಳೇ ಮುಂತಾದ ಪಶುಗಳೂ, ಹೆಂಗಸರೂ, ಧನ-ಕನಕಾದಿಸಂಪತ್ತುಗಳೂ ಕೊಳ್ಳೆಹೋಗುತ್ತವೆ. ಅವುಗಳನ್ನು ಅಪಹರಿ ಸುವ ಕಳ್ಳ-ಕಾಕರ ಕಾಟದಿಂದ ಜನರು ತಾವೂ ದೊಡ್ಡ ಕಳ್ಳ-ಕಾಕರೂ, ದರೋಡೆಗಾರರೂ ಆಗುತ್ತಾರೆ. ಆ ಪಾಪಕಾರ್ಯಗಳನ್ನು ಮಾಡದೇ ಇರುವ ವರಿಗೂ ಅದರ ಸಂಬಂಧವಾದ ಪಾಪವು ತಗುಲುವುದು. ವರ್ಣ-ಆಶ್ರಮ ಗಳಿಂದ ಕೂಡಿದ ಆರ್ಯಧರ್ಮವು ಆಗ ಲೋಪಹೊಂದುವುದು. ಹಣದ ಆಸೆ ಮತ್ತು ಕಾಮವಾಸನೆಗಳಿಗೆ ಒಳಗಾಗಿ ಜನರು ನಾಯಿ ಮತ್ತು ಕಪಿಗಳ ಸೇರುವೆಯಂತೆ ವರ್ಣಸಾಂಕರ್ಯಹೊಂದುವರು. ನಮ್ಮ ಈ ಪರೀಕ್ಷಿದ್ರಾಜ ನಾದರೋ ಮಹಾಯಶಸ್ವೀ ; ಧರ್ಮದುರಂಧರ ; ಅನೇಕ ಅಶ್ವಮೇಧ ಯಾಗಗಳನ್ನಾಚರಿಸಿದವನು. ಪರಮಭಾಗವತೋತ್ತಮನೂ ಆಗಿರುವನು. ಅಂತಹ ರಾಜರ್ಷಿಯು ಹಸಿವು-ಬಾಯಾರಿಕೆಗಳಿಂದ ಪೀಡಿತನಾಗಿ ಶೋಚ ನೀಯ ಸ್ಥಿತಿಯಲ್ಲಿ ಬಂದಿದ್ದನು. ಆತನು ಖಂಡಿತವಾಗಿಯೂ ನಮ್ಮ ಶಾಪಕ್ಕೆ ಯೋಗ್ಯನಾಗಿರಲಿಲ್ಲ. ತಿಳಿವಳಿಕೆಯಿಲ್ಲದ ಈ ಬಾಲಕನು ನಿರಪರಾಧಿಯಾಗಿ ನಮ್ಮ ಸೇವೆಮಾಡುತ್ತಿದ್ದ, ಮಹಾತ್ಮನಾದ ರಾಜರ್ಷಿಯಲ್ಲಿ ಅಪರಾಧವನ್ನೆಸಗಿ ದ್ದಾನೆ. ಸರ್ವಾತ್ಮನಾದ ಭಗವಂತನು ಕೃಪೆಯಿಟ್ಟು ಈತನನ್ನು ಕ್ಷಮಿಸಲಿ. ಭಗವಂತನ ಭಕ್ತರಲ್ಲಿ ಶಕ್ತಿಯಿದ್ದರೂ ಅವರು ಸೇಡುತೀರಿಸಿಕೊಳ್ಳಲು ಹೋಗುವುದಿಲ್ಲ. ಇತರರಿಂದ ತಮಗೆ ಅಪಮಾನ, ಮೋಸ, ಬೈಗಳು, ಆಕ್ಷೇಪಣೆ, ಹೊಡೆದಾಟ, ಬಡಿದಾಟ–ಮುಂತಾದುವುಗಳಾದರೂ ಅವು ಗಳನ್ನು ಸಹಿಸಿಕೊಳ್ಳುತ್ತಾರೆ"–ಎಂದು ತಮ್ಮ ಪುತ್ರನಿಗೆ ತಿಳಿವಳಿಕೆ ನೀಡಿದರು. ಶಮೀಕಮಹರ್ಷಿಗಳಿಗೆ ತಮ್ಮ ಪುತ್ರನು ಮಾಡಿದ ಅಪರಾಧಕ್ಕಾಗಿ ತುಂಬಾ ಪಶ್ಚಾತ್ತಾಪವುಂಟಾಯಿತು. ಪರೀಕ್ಷಿದ್ರಾಜನು ತಮಗೆ ಮಾಡಿದ್ದ ಅಪಮಾನ ವನ್ನಾದರೋ ಅವರು ಮನಸ್ಸಿಗೆ ಹಚ್ಚಿಕೊಳ್ಳಲೇ ಇಲ್ಲ.

**ಪ್ರಾಯಶಃ ಸಾಧವೋ ಲೋಕೇ ಪರೈರ್ದ್ವನ್ದ್ವೇಷು ಯೋಜಿತಾಃ ।**
**ನ ವ್ಯಥನ್ತಿ ನ ಹೃಷ್ಯನ್ತಿ ಯತ ಆತ್ಮಾऽಗುಣಾಶ್ರಯಃ ॥೫೦॥**

ಸಾಧು-ಸಂತರ ಸ್ವಭಾವವೇ ಹೀಗೆ. ಇತರರು ಅವರನ್ನು ನಿಂದಾಸ್ತುತಿ

ಮುಂತಾದ ದ್ವಂದ್ವಗಳಿಗೆ ಈಡುಮಾಡಿದರೂ ಅವರು ಸಾಮಾನ್ಯವಾಗಿ ಅವುಗಳಿಂದ ವ್ಯಥೆಯನ್ನಾಗಲೀ–ಸಂತೋಷವನ್ನಾಗಲೀ ಅನುಭವಿಸುವುದಿಲ್ಲ. ಏಕೆಂದರೆ : ಅವರು ಆತ್ಮಸ್ವರೂಪವನ್ನರಿತು ಅದರಲ್ಲಿ ನೆಲೆಸಿರುತ್ತಾರೆ. ಆತ್ಮನು ತ್ರಿಗುಣಾತೀತನಲ್ಲವೇ?"

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ಪ್ರಥಮಸ್ಕಂಧದ ೧೮ನೆಯ ಅಧ್ಯಾಯವು ಮುಗಿಯಿತು.

ಪ್ರಥಮಸ್ಕಂಧ ೧೯ನೆಯ ಅಧ್ಯಾಯ

## ಪರೀಕ್ಷಿದ್ರಾಜನ ಪ್ರಾಯೋಪವೇಶ : ಶುಕದೇವರ ಆಗಮನ

ಸೂತಪುರಾಣಿಕರು ಹೇಳುತ್ತಾರೆ :

**ಮಹೀಪತಿಸ್ತ್ವಥ ತತ್ಕರ್ಮ ಗರ್ಹ್ಯಂ**
**ವಿಚಿನ್ತಯನ್ನಾತ್ಮಕೃತಂ ಸುದುರ್ಮನಾಃ ।**
**ಅಹೋ ಮಯಾ ನೀಚಮನಾರ್ಯವತ್ಕೃತಂ**
**ನಿರಾಗಸಿ ಬ್ರಹ್ಮಣಿ ಗೂಢತೇಜಸಿ ॥೧॥**

ಅನಂತರ ಪರೀಕ್ಷಿದ್ರಾಜನಿಗಾದರೋ ತಾನು ಮಾಡಿದ ನಿಂದ್ಯವಾದ ಕಾರ್ಯವನ್ನು ನೆನೆ-ನೆನೆದು ತುಂಬಾ ಬೇಸರವಾಯಿತು. "ಅಯ್ಯೋ! ನಾನು ಆ ಬ್ರಹ್ಮಜ್ಞಾನಿಯಾದ ಋಷಿಯಲ್ಲಿ ಎಂತಹ ಅಪಚಾರವನ್ನೆಸಗಿದೆನು? ಆ ಮಹಾತ್ಮನಾದರೋ ನಿರಪರಾಧಿಯು ; ಗೂಢವಾದ ಬ್ರಹ್ಮತೇಜಸ್ಸಿನಿಂದ ತುಂಬಿದ್ದವನು. ಅಂತಹವನ ವಿಷಯದಲ್ಲಿ ನಾನು ಅನಾರ್ಯನಂತೆ ನೀಚ ಕಾರ್ಯವನ್ನು ಮಾಡಿಬಿಟ್ಟೆನು.

ಹೀಗೆ ದೈವಾಪಚಾರವನ್ನು ಮಾಡಿದ್ದರಿಂದ ಅತಿಶೀಘ್ರದಲ್ಲೇ ನನಗೆ ದಾಟಲು ಅಸಾಧ್ಯವೇ ಆಗಿರುವ ಅತಿದೊಡ್ಡ ವಿಪತ್ತು ನಿಶ್ಚಯವಾಗಿಯೂ ಒದಗುವುದು. ಅದು ನನ್ನ ಪಾಪಗಳಿಗೆ ಪ್ರಾಯಶ್ಚಿತ್ತವಾಗಿ ಬಂದೇಬರಲಿ. ನಾನು ಮತ್ತೆ ಎಂದೆಂದಿಗೂ ಇಂತಹ ಪಾತಕವನ್ನು ಆಚರಿಸದಂತೆ ಆಗಬೇಕು. ನನ್ನಿಂದ ಕೆರಳಿಸಲ್ಪಟ್ಟ ಬ್ರಾಹ್ಮಣಕುಲದಿಂದ ಬರುವ ಶಾಪವೆಂಬ ಅಗ್ನಿಯು ಇಂದೇ ನನ್ನ ರಾಜ್ಯವನ್ನೂ, ಸೇನೆಯನ್ನೂ ಮತ್ತು ಸಮೃದ್ಧವಾಗಿರುವ

ಭಂಡಾರವನ್ನೂ ಸುಟ್ಟುಹಾಕಲಿ. ಅಶುಭಾಚಾರನಾದ ನನಗೆ ಪುನಃ ಎಂದಿಗೂ ಬ್ರಾಹ್ಮಣರ ವಿಷಯದಲ್ಲೂ, ದೇವತೆಗಳ ವಿಷಯದಲ್ಲೂ, ಗೋವುಗಳ ವಿಷಯದಲ್ಲೂ ಪಾಪವನ್ನಾಚರಿಸುವ ಬುದ್ಧಿಯು ಉಂಟಾಗದಿರಲಿ"–ಎಂದು ಆತನು ಅಂದುಕೊಂಡನು.

(ಶ್ಲೋಕ 2-3)

ಆತನು ಹೀಗೆ ಚಿಂತಿಸುತ್ತಿರುವಾಗಲೇ ಶಮೀಕಮಹರ್ಷಿಗಳು ಗೌರಮುಖನೆಂಬ ಶಿಷ್ಯನ ಮೂಲಕ ಹೇಳಿಕಳುಹಿಸಿದ ಒಂದು ಸಮಾಚಾರವು ಆತನ ಕಿವಿಗೆ ಬಿದ್ದಿತು. 'ಋಷಿಪುತ್ರನಾದ ಶೃಂಗಿಯಿಂದ ಪ್ರೇರಿತನಾದ ತಕ್ಷಕನೆಂಬ ಸರ್ಪವು ತನ್ನ ಮೃತ್ಯುವಿಗೆ ಕಾರಣವಾಗುತ್ತದೆ'–ಎಂಬುದು ಆ ಸಮಾಚಾರ. ಅದನ್ನು ಕೇಳಿ ರಾಜನು 'ಆ ತಕ್ಷಕನೆಂಬ ಬೆಂಕಿಯು ರಾಜಕಾರ್ಯಗಳಲ್ಲಿ ಮತ್ತು ಭೋಗಗಳಲ್ಲಿ ಆಸಕ್ತನಾಗಿರುವ ನನಗೆ ವೈರಾಗ್ಯಕ್ಕೆ ಶ್ರೇಷ್ಠವಾದ ಕಾರಣವಾಯಿತು'–ಎಂದು ಭಾವಿಸಿಕೊಂಡನು.

ಒಡನೆಯೇ ಆತನು ಆ ಹಿಂದೆಯೇ 'ಇದು ಹೇಯವಾದುದು, ತ್ಯಜಿಸ ಬೇಕಾದದ್ದು'–ಎಂದು ತಾನು ವಿಮರ್ಶಿಸಿಕೊಂಡಿದ್ದ ಇಹಲೋಕ-ಪರಲೋಕ ಗಳ ಬಾಳಾಟದ ಆಸೆಯನ್ನು ಕೈಬಿಟ್ಟು, ಶ್ರೀಕೃಷ್ಣನ ಚರಣಾರವಿಂದಗಳ ಸೇವೆಯೇ ಪರಮೋತ್ತಮವಾದುದೆಂದು ನಿಶ್ಚಯಿಸಿದವನಾಗಿ ದೇವಗಂಗಾ ನದಿಯ ದಡದಲ್ಲಿ ಕುಳಿತು ಪ್ರಾಯೋಪವೇಶದ ಉಪವಾಸವ್ರತವನ್ನು ಕೈಗೊಂಡನು. ಯಾವುದು ಘಮ-ಘಮಿಸುತ್ತಿರುವ ತುಲಸೀದಳಗಳು ಬೆರೆತ ಶ್ರೀಕೃಷ್ಣನ ಪಾದಧೂಳಿಯಿಂದ ಪರಮಪವಿತ್ರವಾಗಿರುವ ತೀರ್ಥದಿಂದ ಕೂಡಿ ಪ್ರವಹಿಸುತ್ತಾ, ಲೋಕಪಾಲಸಹಿತವಾದ ಸಮಸ್ತಲೋಕಗಳನ್ನೂ ಒಳಗೂ-ಹೊರಗೂ, ಎಲ್ಲ ಕಡೆಗಳಲ್ಲೂ ಪಾವನಗೊಳಿಸುತ್ತಿದೆಯೋ–ಅಂತಹ ಪವಿತ್ರ ನದಿಯನ್ನು ಸಾಯುವ ಸಮಯದಲ್ಲಿರುವ ಯಾವನು ತಾನೇ ಸೇವಿಸುವು ದಿಲ್ಲ? ಹೀಗೆ ಆ ಪಾಂಡವಕುಲತಿಲಕನು ಗಂಗಾನದಿಯ ತೀರದಲ್ಲಿ ಪ್ರಾಯೋ ಪವೇಶ ಮಾಡಬೇಕೆಂದು ನಿಶ್ಚಯಮಾಡಿಕೊಂಡು, ಸರ್ವಸಂಗಪರಿತ್ಯಾಗ ಮಾಡಿ, ಮುನಿಧರ್ಮವನ್ನು ಹಿಡಿದು ಏಕಾಗ್ರಭಾವದಿಂದ ಶ್ರೀಭಗವಂತನ ಚರಣಾರವಿಂದಗಳನ್ನು ಧ್ಯಾನಿಸತೊಡಗಿದನು. ಆಗ ಅಲ್ಲಿಗೆ ಜಗತ್ತನ್ನೇ ಪವಿತ್ರ

ಗೊಳಿಸುವ, ಮಹಾನುಭಾವರಾದ ಅನೇಕ ಮಹರ್ಷಿಗಳು ಶಿಷ್ಯಸಮೇತ ರಾಗಿ ದಯಮಾಡಿಸಿದರು.

ಪ್ರಾಯೇಣ ತೀರ್ಥಾಭಿಗಮಾಪದೇಶೈಃ
ಸ್ವಯಂ ಹಿ ತೀರ್ಥಾನಿ ಪುನನ್ತಿ ಸನ್ತಃ ॥೮॥

ಸಾಮಾನ್ಯವಾಗಿ ಮಹಾತ್ಮರಾದ ಸಾಧು-ಸಂತರು ತೀರ್ಥಯಾತ್ರೆ ಮಾಡುವ ನೆಪದಿಂದ ಸಂಚಾರಮಾಡುತ್ತಾ ಆಯಾ ತೀರ್ಥಗಳನ್ನು ತಾವೇ ಪವಿತ್ರಗೊಳಿಸುವರಲ್ಲವೇ?

ಅತ್ರಿ, ವಸಿಷ್ಠ, ಚ್ಯವನ, ಕೃಪ, ಅರಿಷ್ಟನೇಮಿ, ಭೃಗು, ಅಂಗಿರಸ್ಸು, ಪರಾಶರ, ಗಾಧಿಪುತ್ರನಾದ ವಿಶ್ವಾಮಿತ್ರ, ಪರಶುರಾಮ, ಉತಥ್ಯ, ಇಂದ್ರ ಪ್ರಮದ, ಇಧ್ಮವಾಹ, ಮೇಧಾತಿಥಿ, ದೇವಲ, ಆರ್ಷ್ಟಿಷೇಣ, ಭಾರದ್ವಾಜ, ಗೌತಮ, ಪಿಪ್ಪಲಾದ, ಮೈತ್ರೇಯ, ಔರ್ವ, ಕವಷ, ಆಗಸ್ತ್ಯ, ಕೃಷ್ಣದ್ವೈಪಾಯನ ಮತ್ತು ನಾರದಮಹರ್ಷಿ—ಇವರುಗಳೂ, ಹಾಗೆಯೇ ಇತರ ದೇವರ್ಷಿ-ಬ್ರಹ್ಮರ್ಷಿಶ್ರೇಷ್ಠರೂ, ರಾಜರ್ಷಿಶ್ರೇಷ್ಠರೂ, ಅರುಣನೇ ಮುಂತಾದ ಕಾಂಡರ್ಷಿಗಳೂ ಎಲ್ಲರೂ ಅಲ್ಲಿಗೆ ಬಂದು ಸೇರಿದರು. ಪರೀಕ್ಷಿದ್ರಾಜನೂ ಕೂಡ, ಹಾಗೆ ಒಟ್ಟುಗೂಡಿ ಬಂದ ನಾನಾಋಷಿಗೋತ್ರ-ಪ್ರವರಗಳುಳ್ಳ ಮಹರ್ಷಿಗಳೆಲ್ಲರನ್ನೂ ಪೂಜಿಸಿ ಶಿರಸ್ಸಾಷ್ಟಾಂಗಪ್ರಣಾಮಮಾಡಿದನು. ಅನಂತರ ಅವರೆಲ್ಲರೂ ಸುಖವಾಗಿ ಕುಳಿತುಕೊಳ್ಳಲು, ರಾಜನು ಅವರಿಗೆ ಮತ್ತೆ-ಮತ್ತೆ ನಮಸ್ಕಾರಮಾಡಿ, ಅವರ ಮುಂದೆ ಕೈಮುಗಿದುಕೊಂಡು ನಿಂತು, ವಿವೇಕದಿಂದ ಕೂಡಿದ ಪರಿಶುದ್ಧವಾದ ಮನಸ್ಸಿನಿಂದ ತಾನು ಮುಂದೆ ಕೈಗೊಳ್ಳಬೇಕೆಂದಿದ್ದ ಕಾರ್ಯನಿಶ್ಚಯವನ್ನು ಹೀಗೆ ವಿಜ್ಞಾಪನೆಮಾಡಿದನು :

(ಶ್ಲೋಕ 9-12)

"ಎಂತಹ ಧನ್ಯತೆ! ತಮ್ಮಂತಹ ಶ್ರೇಷ್ಠತಮರಾದ ಮಹಾತ್ಮರ ಅನುಗ್ರಹಕ್ಕೆ ಪಾತ್ರರಾದ ನಾವೇ ರಾಜರಲ್ಲಿ ಅತಿಧನ್ಯರು. ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರ ಶ್ರೀಪಾದತೀರ್ಥದಿಂದ ಪರಿಶುದ್ಧರಾಗದೇ ದೂರದಲ್ಲಿರುವ ರಾಜರ ಕುಲವು ತಾನೇ ನೀಚಕರ್ಮಕ್ಕೆ ತುತ್ತಾಗುವುದು? ಗೃಹಸ್ಥರಿಗೆ ಸಂಬಂಧಪಟ್ಟ ವಿಷಯಗಳಲ್ಲಿಯೇ ಸದಾ ಲಂಪಟನಾಗಿದ್ದು ಪಾಪವನ್ನಾಚರಿಸಿದ ನನಗೆ ಪರಾವರತತ್ತ್ವಗಳಿಗೆ ಅಧಿಪತಿಯಾದ ಪರಮಾತ್ಮನೇ ವೈರಾಗ್ಯ

ವನ್ನು ಹುಟ್ಟಿಸುವಂತಹ ಬ್ರಾಹ್ಮಣಶಾಪರೂಪದಲ್ಲಿ ಬಂದು ಕರುಣೆ ತೋರಿಸಿದ್ದಾನೆ. ಆ ವೈರಾಗ್ಯದಲ್ಲಿ ನೆಲೆಗೊಂಡಿರುವ ನಾನು ಶೀಘ್ರದಲ್ಲೇ ಆತನಿಂದ ಅಭಯವನ್ನು ಪಡೆಯುತ್ತೇನೆ. ಎಲೈ ಬ್ರಾಹ್ಮಣಶ್ರೇಷ್ಠರೇ! ಹೀಗೆ ಭಗವಂತನಲ್ಲಿ ನೆಟ್ಟ ಮನಸ್ಸುಳ್ಳ ನಾನು ತಮ್ಮಲ್ಲಿ ಶರಣಾಗತನಾಗಿದ್ದೇನೆಂದು ತಿಳಿಯಿರಿ. ದೇವಿಯಾದ ಗಂಗಾಮಾತೆಯೂ ಹಾಗೆಯೇ ತಿಳಿಯಲಿ. ಬ್ರಾಹ್ಮಣನಿಂದ ಪ್ರೇರಿತನಾಗಿ ಬರುವ, ವಂಚಕನಾದ ತಕ್ಷಕನೇ ಬಂದು ನನ್ನನ್ನು ಕಚ್ಚಿದರೂ ಸರಿಯೇ, ನೀವು ಮಾತ್ರ ಬಿಡದೇ ನನ್ನ ಮುಂದೆ ಶ್ರೀಮಹಾವಿಷ್ಣುವಿನ ಕೀರ್ತನೆಗಳನ್ನು ಹಾಡುತ್ತಿರಿ. ಮುಂದೆ ನಾನು ಯಾವ ಯಾವ ಜನ್ಮವನ್ನು ತಳೆದರೂ ಆ ಎಲ್ಲ ಜನ್ಮಗಳಲ್ಲೂ ನನಗೆ ಶ್ರೀಭಗವಂತನಲ್ಲೇ ಭಕ್ತಿಯು ನೆಲೆಸಲಿ. ಆತನನ್ನು ಆಶ್ರಯಿಸಿರುವ ಮಹಾತ್ಮರ ಸಹವಾಸದ ಭಾಗ್ಯವು ದೊರೆಯಲಿ. ಎಲ್ಲರಲ್ಲಿಯೂ ಸ್ನೇಹಭಾವವಿರಲಿ, ಬ್ರಾಹ್ಮಣಶ್ರೇಷ್ಠರೆಲ್ಲರಿಗೂ ನಮೋ ನಮಃ"

(ಶ್ಲೋಕ 13-16)

ಹೀಗೆ ದೃಢನಿಶ್ಚಯಮಾಡಿದ ಧೀರನಾದ ಆ ರಾಜೇಂದ್ರನು ರಾಜ್ಯಭಾರವನ್ನು ಪುತ್ರರಾದ ಜನಮೇಜಯನೇ ಮುಂತಾದವರಿಗೆ ಒಪ್ಪಿಸಿ ಗಂಗಾನದಿಯ ದಕ್ಷಿಣತೀರದಲ್ಲಿ ಪೂರ್ವಾಗ್ರವಾದ ದರ್ಭೆಗಳ ಮೇಲೆ ಉತ್ತರಾಭಿಮುಖವಾಗಿ ಕುಳಿತುಕೊಂಡುಬಿಟ್ಟನು.

(ಆ ರಾಜರ್ಷಿಯು ರಾಜರಿಗೆ ಅಸಾಧಾರಣವಾದ ಛತ್ರ-ಚಾಮರಾದಿ ಸಮಸ್ತಚಿಹ್ನೆಗಳನ್ನೂ ಬಿಟ್ಟು, ತೋಳ್ಬಳೆ, ಹಾರ, ಕೈಬಳೆ–ಮುಂತಾದ ಅಮೂಲ್ಯವಾದ ಆಭರಣಗಳನ್ನೂ ತೊರೆದು, ಶುದ್ಧವಾದ ರತ್ನದ ಉಂಗುರಗಳನ್ನೂ ಕಳಚಿಟ್ಟು ಪವಿತ್ರಹಸ್ತನಾಗಿ ಮುನಿವೇಷವನ್ನು ಧರಿಸಿ ಕುಳಿತುಕೊಂಡನು.)*

ಹೀಗೆ ಆ ಮಹಾಸಾರ್ವಭೌಮನು ಪ್ರಾಯೋಪವೇಶವ್ರತವನ್ನು ಕೈಗೊಂಡಿದ್ದನ್ನು ಕಂಡು ದೇವಲೋಕದಲ್ಲಿದ್ದ ದೇವತೆಗಳು ಆತನನ್ನು ಪ್ರಶಂಸೆಮಾಡಿ ಪರಮಸಂತೋಷದಿಂದ ಭೂಮಿಯ ಮೇಲೆ ಹೂಮಳೆಗರೆದರು. ದೇವದುಂದುಭಿವಾದ್ಯಗಳೂ ಮತ್ತೆ-ಮತ್ತೆ ಮೊಳಗಿದುವು. ಹಾಗೆಯೇ ಅಲ್ಲಿ ಬಂದು ನೆರೆದಿದ್ದ ಮಹರ್ಷಿಗಳೂ ಆತನನ್ನು ಭಲೇ! ಭಲೇ! ಎಂದು

* ಈ ಶ್ಲೋಕವು ಕೆಲವು ಸಂಸ್ಕರಣಗಳಲ್ಲಿ ಇಲ್ಲ.

ಮೆಚ್ಚಿ ಅನುಮೋದನೆ ಮಾಡುತ್ತಾ ಪುಣ್ಯಶ್ಲೋಕನಾದ ಆ ರಾಜರ್ಷಿಯ ಗುಣಗಳಿಗೆ ಅನುಸಾರವಾದ ಮಾತುಗಳನ್ನಾಡಿದರು. ಏಕೆಂದರೆ : ಆ ಮಹರ್ಷಿಗಳು ಎಲ್ಲ ಪ್ರಜೆಗಳಲ್ಲಿಯೂ ಅನುಗ್ರಹಬುದ್ಧಿಯುಳ್ಳವರು.

ಅವರು ಆತನಿಗೆ ಹೀಗೆಂದರು : 'ಓ ರಾಜರ್ಷಿಶ್ರೇಷ್ಠನೇ! ಪಾಂಡವ ವಂಶಜರಾದ ನೀವು ಶ್ರೀಭಗವಂತನ ಸಾನ್ನಿಧ್ಯವನ್ನು ಪಡೆಯುವ ಉತ್ಕಟಾಭಿ ಲಾಷೆಯಿಂದ ಸಮಸ್ತಸಾಮಂತರಾಜರ ಕಿರೀಟಗಳಿಂದ ಸೇವಿಸಲ್ಪಡುತ್ತಿದ್ದ ರಾಜಸಿಂಹಾಸನವನ್ನು ತ್ಯಜಿಸಿ ಬಂದಿರುವುದು ಸಹಜವೇ ಆಗಿದೆ. ಶ್ರೀಕೃಷ್ಣ ಪರಮಾತ್ಮನ ಅನನ್ಯಭಕ್ತರಾಗಿ ಆತನನ್ನೇ ಏಕನಿಷ್ಠೆಯಿಂದ ಅನುಸರಿಸುತ್ತಿರುವ ನಿಮ್ಮಲ್ಲಿ ಈ ವರ್ತನೆಯು ಆಶ್ಚರ್ಯಕರವೇನೂ ಅಲ್ಲ'–ಎಂದು ಹೇಳಿ, 'ಈ ಪರಮಭಾಗವತೋತ್ತಮನಾದ ಪರೀಕ್ಷಿದ್ರಾಜನು ತನ್ನ ನಶ್ವರ ವಾದ ದೇಹವನ್ನು ತ್ಯಜಿಸಿ ರಜೋದೋಷದಿಂದಲೂ, ಶೋಕದಿಂದಲೂ ರಹಿತವಾದ ಪರಂಧಾಮವನ್ನು ಹೊಂದುವವರೆಗೂ ಇಲ್ಲಿಯೇ ಇರೋಣ'– ಎಂದೂ ಅವರು ನಿಶ್ಚಯಿಸಿಕೊಂಡರು. (ಶ್ಲೋಕ 17-21)

ಮಹಾಯೋಗಿಗಳಾದ ಆ ಮಹರ್ಷಿಗಳ ಮಧುರವೂ, ಗಂಭೀರವೂ, ಸತ್ಯವೂ, ಸಮವೂ ಆದ ಆ ಮಾತುಗಳನ್ನು ಕೇಳಿ ಪರೀಕ್ಷಿದ್ರಾಜನು ಅವರನ್ನು ಅಭಿನಂದಿಸಿ ಶ್ರೀಭಗವಂತನ ಮನೋಹರವಾದ ಚರಿತ್ರವನ್ನು ಕೇಳುವ ಇಚ್ಛೆಯಿಂದ ಋಷಿಗಳನ್ನು ಹೀಗೆ ಪ್ರಶ್ನೆಮಾಡಿದನು :

"ಎಲೈ ಮಹಾತ್ಮರೇ! ಎಲ್ಲ ಕಡೆಗಳಿಂದಲೂ ಇಲ್ಲಿಗೆ ದಯಮಾಡಿಸಿ ರುವ ತಾವು ಸತ್ಯಲೋಕದಲ್ಲಿರುವ ಸಾಕಾರವಾದ ವೇದಗಳಿಗೆ ಸಮಾನರಾಗಿ ದ್ದೀರಿ. ಇತರರ ಮೇಲೆ ಅನುಗ್ರಹ ತೋರುವುದು ನಿಮ್ಮ ಸಹಜಸ್ವಭಾವವೇ ಆಗಿದ್ದು ನಿಮಗೆ ಇದನ್ನು ಬಿಟ್ಟು ಇಹಲೋಕದಲ್ಲಿ ಅಥವಾ ಪರಲೋಕದಲ್ಲಿ ಬೇರೆ ಯಾವ ಸ್ವಾರ್ಥವೂ ಇಲ್ಲ. ಓ ಬ್ರಾಹ್ಮಣಶ್ರೇಷ್ಠರೇ! ನಿಮ್ಮ ಮೇಲೆ ಪೂರ್ಣವಾದ ನಂಬಿಕೆಯನ್ನಿಟ್ಟು ನಾನು ನನ್ನ ಕರ್ತವ್ಯದ ಬಗೆಗೆ ಎರಡು ಪ್ರಶ್ನೆಗಳನ್ನು ಕೇಳುತ್ತೇನೆ. ಅವೆರಡೂ ಕೇಳಲು ಯೋಗ್ಯವಾದ ಪ್ರಶ್ನೆಗಳೇ ಆಗಿವೆ. ವಿದ್ವಾಂಸರಾದ ನೀವೆಲ್ಲರೂ ಪರಸ್ಪರವಾಗಿ ವಿಚಾರಮಾಡಿರಿ. ಎಲ್ಲರೂ ಎಲ್ಲ ಅವಸ್ಥೆಗಳಲ್ಲಿಯೂ ಮತ್ತು ವಿಶೇಷವಾಗಿ ಮರಣಸಮಯವು

ಹತ್ತಿರದಲ್ಲಿರುವಾಗಲೂ ಅಂತಃಕರಣ ಮತ್ತು ಶರೀರಗಳಿಂದ ಮಾಡಬೇಕಾದ ಶುದ್ಧವಾದ ಕರ್ಮವಾವುದು?"* (ಶ್ಲೋಕ 22-24)

ಆ ಸಮಯಕ್ಕೆ ಸರಿಯಾಗಿ ಭೂಮಿಯಲ್ಲಿ ಯಥೇಷ್ಟವಾಗಿ ಸಂಚಾರ ಮಾಡುತ್ತಿದ್ದ, ವಿರಕ್ತಶಿಖಾಮಣಿಗಳಾದ ವ್ಯಾಸಪುತ್ರರಾದ ಭಗವಾನ್ ಶುಕ ಮಹಾಮುನಿಗಳು ಅಲ್ಲಿ ಕಾಣಿಸಿಕೊಂಡರು. ಆ ಮಹಾತ್ಮರಾದರೋ ಪರ ಮಾತ್ಮನ ಲಾಭದಿಂದ ಸದಾ ಸಂತುಷ್ಟರಾಗಿದ್ದವರು. ವರ್ಣ ಅಥವಾ ಆಶ್ರಮ ಗಳಿಗೆ ಸಂಬಂಧಪಟ್ಟ ಯಾವ ಹೊರಚಿಹ್ನೆಗಳೂ ಇಲ್ಲದೇ ಅವಧೂತವೇಷ ದಲ್ಲಿದ್ದರು. ಹುಡುಗರೂ, ಹೆಂಗಸರೂ ಅವರ ಸುತ್ತಲೂ ನೆರೆದಿದ್ದರು. **ಹದಿನಾರು ವರ್ಷ ತಾರುಣ್ಯದ ಅವರು ಚೆಲುವಿನ ಗಣಿಯಾಗಿದ್ದರು. ಅವರ ಕೈಕಾಲುಗಳು, ಮೊಣಕಾಲುಗಳು, ಭುಜಗಳು, ಕೆನ್ನೆಗಳು ಮತ್ತು ಉಳಿದ ಎಲ್ಲ ಅಂಗಗಳೂ ಸುಕುಮಾರವಾಗಿದ್ದುವು. ಅಂದ-ಚೆಂದಗಳಿಂದ ಕೂಡಿದ ವಿಶಾಲವಾದ ನೇತ್ರಗಳು, ಎತ್ತರವಾದ ಮೂಗು, ಸಮವಾದ ಕಿವಿಗಳು ಮತ್ತು ರಮಣೀಯವಾದ ಹುಬ್ಬುಗಳಿಂದ ಕಂಗೊಳಿಸುವ ಮುಖ, ಶಂಖ ದಂತೆ ಸುಂದರವಾದ ಸುಳಿಯುಳ್ಳ ಕಂಠ, ಮುಚ್ಚಿದ ಹೆಗಲುಸಂದುಗಳು, ವಿಶಾಲವೂ–ಉನ್ನತವೂ ಆದ ಎದೆ, ಸುಳಿಯನ್ನು ಹೋಲುವ ಹೊಕ್ಕುಳು ಮತ್ತು ತ್ರಿವಳಿಗಳಿಂದ ರಮಣೀಯವಾದ ಉದರಪ್ರದೇಶ, ಉದ್ದವಾದ ತೋಳುಗಳು ಮತ್ತು ಮುಖದ ಮೇಲೆ ಕೆದರಿ ಹರಡಿದ್ದ ಕೂದಲುಗಳಿಂದ ಮನಮೋಹಕವಾದ ಮೂರ್ತಿಯಾಗಿ, ದಿಗಂಬರರಾಗಿ, ಅವರು ದೇವೋತ್ತಮ ರಂತೆ ರಾರಾಜಿಸುತ್ತಿದ್ದರು. ಶ್ಯಾಮಲವಾದ ದೇಹಕಾಂತಿ, ವಯಸ್ಸಿಗೆ ತಕ್ಕ

---

* ಇಲ್ಲಿ ರಾಜನು ಮಹರ್ಷಿಗಳಲ್ಲಿ ಎರಡು ಪ್ರಶ್ನೆಗಳನ್ನು ಇಟ್ಟಿದ್ದಾನೆ. ೧) ಜೀವನು ಸದಾ ಮಾಡಬೇಕಾದ ಕರ್ತವ್ಯವೇನು? ೨) ಸ್ವಲ್ಪಕಾಲದಲ್ಲೇ ಮರಣಹೊಂದಲಿರು ವವರು ಮಾಡಬೇಕಾದ ಕರ್ತವ್ಯವೇನು?–ಎಂಬಿವು ಆ ಎರಡು ಪ್ರಶ್ನೆಗಳು. ಆ ಎರಡು ಪ್ರಶ್ನೆಗಳನ್ನೇ ಆತನು ಶುಕಮಹಾಮುನಿಗಳಲ್ಲೂ ಇಡುವನು. ಆ ಪ್ರಶ್ನೆಗಳ ಉತ್ತರವೇ ಎರಡನೇ ಸ್ಕಂಧದಿಂದ ಹನ್ನೆರಡನೇ ಸ್ಕಂಧಪೂರ್ತಿಯಾಗಿ ವಿಸ್ತಾರವಾಗಿದೆ. (ಶ್ಲೋಕ ೨೪)

** 'ವೃತಸ್ತ್ರೀಬಾಲೈಃ' –ಎಂಬ ಪಾಠದಂತೆ ಹೀಗೆ ಅನುವಾದಮಾಡಿದೆ. 'ವೃತಶ್ಚ ಬಾಲೈಃ'–ಎಂಬ ಪಾಠಾಂತರವನ್ನಿಟ್ಟುಕೊಂಡರೆ : 'ಅನೇಕ ಹುಡುಗರೂ ಅವರನ್ನು ಸುತ್ತುವರಿದಿದ್ದರು'–ಎಂದು ಅರ್ಥವಾಗುತ್ತದೆ. (ಶ್ಲೋಕ ೨೫)

ರೂಪ-ಲಾವಣ್ಯ ಮತ್ತು ಮಧುರಮಂದಹಾಸಗಳಿಂದ ಸ್ತ್ರೀಯರ ಕಣ್ಮನ ಗಳನ್ನು ಸದಾ ಸೆಳೆಯುತ್ತಿದ್ದರು. ತಮ್ಮ ಬ್ರಹ್ಮತೇಜಸ್ಸನ್ನು ಅವರು ಅಡಗಿ ಸಿಟ್ಟುಕೊಂಡಿದ್ದರೂ–ಅವರ ಲಕ್ಷಣಗಳನ್ನರಿತಿದ್ದ ಮುನಿಗಳು ಅವರನ್ನು ಗುರುತಿಸಿದರು. ಎಲ್ಲರೂ ಒಡನೆಯೇ ತಮ್ಮ-ತಮ್ಮ ಆಸನಗಳಿಂದ ಮೇಲೆದ್ದು ಅವರನ್ನು ಗೌರವಿಸಲು ಎದ್ದು ನಿಂತುಕೊಂಡರು. (ಶ್ಲೋಕ 25-28)

ವಿಷ್ಣುರಾತ ಪರೀಕ್ಷಿದ್ರಾಜನು ಅತಿಥಿಗಳಾಗಿ ದಯಮಾಡಿಸಿದ ಅವರಿಗೆ ತಲೆಬಾಗಿ ನಮಸ್ಕರಿಸಿ ಪೂಜೆಮಾಡಿದನು. ಅವರ ಸ್ವರೂಪವನ್ನರಿಯದೇ ಅವರ ಸುತ್ತಲೂ ನೆರೆದಿದ್ದ ಹೆಂಗಸರೂ ಮತ್ತು ಬಾಲಕರೂ ಅವರ ಆ ಮಹಿಮೆಯನ್ನು ಕಂಡು ಹಿಂದಿರುಗಿ ಹೊರಟುಹೋದರು. ಆಗ ಎಲ್ಲ ರಿಂದಲೂ ಸತ್ಕರಿಸಲ್ಪಟ್ಟ ಶುಕಮಹರ್ಷಿಗಳು ಶ್ರೇಷ್ಠವಾದ ಆಸನದಲ್ಲಿ ಮಂಡಿಸಿದರು. ಅಲ್ಲಿ ಅತಿಪೂಜ್ಯರಾಗಿ, ಮಹಾತೇಜಸ್ವಿಗಳಲ್ಲೂ ಅತಿತೇಜಸ್ವಿ ಗಳಾಗಿದ್ದ ಆ ಮಹಾತ್ಮರು–ಬ್ರಹ್ಮರ್ಷಿಗಳು, ರಾಜರ್ಷಿಗಳು ಮತ್ತು ದೇವರ್ಷಿ ಗಳ ಸಮೂಹದ ಮಧ್ಯೆ ಗ್ರಹ-ನಕ್ಷತ್ರ ಮತ್ತು ತಾರಾಮಂಡಲಗಳಿಂದ ಸುತ್ತುವರಿಯಲ್ಪಟ್ಟ ಭಗವಂತನಾದ ಸೋಮದೇವನಂತೆ ಬೆಳಗುತ್ತಿದ್ದರು. ಪರಮಭಾಗವತೋತ್ತಮನಾದ ಆ ರಾಜರ್ಷಿಯು ಪ್ರಶಾಂತರಾಗಿ ಕುಳಿತಿದ್ದ, ಅದ್ಭುತಮೇಧಾಸಂಪನ್ನರಾದ ಆ ಶುಕಮಹಾಮುನಿಗಳ ಬಳಿ ಬಂದು ಸಾವಧಾನವಾಗಿ ಅವರಿಗೆ ತಲೆಬಾಗಿ ನಮಸ್ಕಾರಮಾಡಿದನು. ಕೈಗಳನ್ನು ಜೋಡಿಸಿಕೊಂಡು ಮತ್ತೊಮ್ಮೆ ನಮಸ್ಕಾರಮಾಡಿ ಸತ್ಯವೂ-ಪ್ರಿಯವೂ ಆದ ವಾಣಿಯಿಂದ ಅವರಲ್ಲಿ ಹೀಗೆ ಅರಿಕೆ ಮಾಡಿಕೊಂಡನು : (ಶ್ಲೋಕ 29-31)

"ಓ ಬ್ರಹ್ಮವಿತ್ತಮರಾದ ಮುನಿವರ್ಯರೇ! ಈಗ ನಾವು ಧನ್ಯ ರಾದೆವು ; ಕ್ಷತ್ರಿಯಾಧಮರಾದ ನಾವೂ ಕೂಡ ಈಗ ಸತ್ಸಂಗಕ್ಕೆ ಅಧಿಕಾರಿ ಗಳಾದೆವು ; ಸಾಧು-ಸಜ್ಜನರ ಸಮಾಜದಲ್ಲಿ ಸೇರಿಕೊಂಡೆವು. ಎಂತಹ ಆಶ್ಚರ್ಯ! ತಾವು ಕೃಪೆಯಿಟ್ಟು ಅತಿಥಿಗಳಾಗಿ ಇಲ್ಲಿಗೆ ದಯಮಾಡಿಸಿ ನಮ್ಮೆಲ್ಲರನ್ನೂ ತೀರ್ಥದಂತೆ ಪವಿತ್ರರನ್ನಾಗಿ ಮಾಡಿದಿರಲ್ಲವೇ! ನಿಮ್ಮಂತಹವರ ಸ್ಮರಣಮಾತ್ರದಿಂದಲೇ ಗೃಹಸ್ಥರ ಮನೆ-ಮಠಗಳು ಪವಿತ್ರವಾಗಿಬಿಡು ವುವು. ಹೀಗಿರುವಾಗ ನಿಮ್ಮ ನೇರವಾದ ದರ್ಶನ, ಸ್ಪರ್ಶನ, ಪಾದಪ್ರಕ್ಷಾಳನ

ಮತ್ತು ಆಸನಸಮರ್ಪಣೆ–ಮುಂತಾದುವುಗಳನ್ನು ಮಾಡುವ ಶುಭ ಯೋಗವು ಒದಗಿರುವಾಗ ಹೇಳತಕ್ಕದ್ದೇನಿದೆ? ಓ ಮಹಾಯೋಗಿಗಳೇ! ಮಹಾವಿಷ್ಣುವಿನ ಮುಂದೆ ದೈತ್ಯರು ನಾಶಹೊಂದುವಂತೆ–ತಮ್ಮ ಸಾನ್ನಿಧ್ಯ ಮಾತ್ರದಿಂದಲೇ ಮಹಾಪಾತಕಗಳೂ ಕೂಡ ಒಡನೆಯೇ ಧ್ವಂಸವಾಗಿಬಿಡುತ್ತವೆ. ಪಾಂಡವರಿಗೆ ಮಿತ್ರನಾದ ಭಗವಾನ್ ಶ್ರೀಕೃಷ್ಣನು ನಿಜವಾಗಿಯೂ ನನ್ನಲ್ಲಿ ಅತ್ಯಂತ ಪ್ರಸನ್ನನಾಗಿದ್ದಾನೆ. ತನ್ನ ಸೋದರತ್ತೆಯ ಮಕ್ಕಳಿಗೆ ಪ್ರೀತಿಯನ್ನುಂಟುಮಾಡುವುದಕ್ಕೋಸ್ಕರ ಅವರ ವಂಶದಲ್ಲಿ ಹುಟ್ಟಿದ ನನ್ನ ವಿಷಯದಲ್ಲಿ ತುಂಬಾ ಆತ್ಮೀಯವಾಗಿ ವ್ಯವಹರಿಸಿದ್ದಾನೆ. ಹಾಗೆ ಆತನ ಕರುಣೆಯಿಲ್ಲದೇ ಇದ್ದರೆ ತಮ್ಮಂತಹ ಏಕಾಂತಜೀವಿಗಳೂ ಮತ್ತು ಗೂಢಸಂಚಾರಿಗಳೂ ಆದ ಮಹಾತ್ಮರು ತಾವಾಗಿಯೇ ದಯಮಾಡಿಸಿ ಮರಣವು ಸಮೀಪಿಸಿರುವ ನಮ್ಮಂತಹ ಪ್ರಾಕೃತಮನುಷ್ಯರಿಗೆ ದರ್ಶನಕೊಡುತ್ತಿದ್ದರೇ? ತಾವಾದರೋ ಯೋಗಿಗಳಿಗೂ ಪರಮಗುರುಗಳಾದವರು. ಆದ್ದರಿಂದ ತಮ್ಮನ್ನು–'ಪರಮಸಿದ್ಧಿ ಯಾವುದು? ಅದರ ಸ್ವರೂಪವೇನು? ಸಾಧನವೇನು?'–ಎಂಬುದರ ಬಗೆಗೆ ಪ್ರಶ್ನೆ ಮಾಡುತ್ತೇನೆ. ತಪ್ಪಿಸಿಕೊಳ್ಳಲು ಅಸಾಧ್ಯವಾದ ಮರಣದ ಸಮೀಪದಲ್ಲಿರುವ ಮನುಷ್ಯನು ಸಿದ್ಧಿಗಾಗಿ ಕೈಗೊಳ್ಳಬೇಕಾದ ಕಾರ್ಯವೇನು? ಅಂತಹವನು ಏನನ್ನು ಶ್ರವಣಮಾಡಬೇಕು? ಏನನ್ನು ಸ್ಮರಿಸಬೇಕು? ಏನನ್ನು ಭಜಿಸಬೇಕು? ಹಾಗೆಯೇ ಏನನ್ನು ತ್ಯಜಿಸಬೇಕು? ಎಲ್ಲವನ್ನೂ ದಯವಿಟ್ಟು ತಿಳಿಸೋಣವಾಗಲಿ. ಓ ಪೂಜ್ಯರೇ! ಬ್ರಹ್ಮತೇಜೋಮಯರೇ! ತಮ್ಮ ದರ್ಶನವು ಅತ್ಯಂತದುರ್ಲಭವಾದದ್ದು. ಏಕೆಂದರೆ : ತಾವು ಗೃಹಸ್ಥರ ಮನೆಗಳಲ್ಲಾಗಲೀ ಅಥವಾ ಬೇರೆಡೆಗಳಲ್ಲಾಗಲೀ ಹಸುವು ಹಾಲು ಕರೆಯುವಷ್ಟು ಕಾಲದವರೆಗೂ ಸಹ ನಿಲ್ಲುವುದನ್ನು ಪ್ರಾಯಶಃ ನೋಡಲು ಶಕ್ಯವಿಲ್ಲವಷ್ಟೇ?" (ಶ್ಲೋಕ 29-39)

ಸೂತಪುರಾಣಿಕರು ಹೇಳುತ್ತಾರೆ :

**ಏವಮಾಭಾಷಿತಃ ಪೃಷ್ಟಃ ಸ ರಾಜ್ಞಾ ಶ್ಲಕ್ಷ್ಣಯಾ ಗಿರಾ ।**
**ಪ್ರತ್ಯಭಾಷತ ಧರ್ಮಜ್ಞೋ ಭಗವಾನ್ಬಾದರಾಯಣಿಃ ॥೪೦॥**

ಆ ಸಾರ್ವಭೌಮನು ಹೀಗೆ ಅತಿಮಧುರವಾದ ವಾಣಿಯಿಂದ ಸಂಭಾ

ಷಿಸಿ ಪ್ರಶ್ನೆಮಾಡಲು ಸಕಲಧರ್ಮಗಳ ಮರ್ಮವನ್ನೂ ಅರಿತಿದ್ದ ವ್ಯಾಸ ನಂದನರಾದ ಭಗವಾನ್ ಶುಕಮಹರ್ಷಿಗಳು ಆತನಿಗೆ ಹೀಗೆ ಉತ್ತರ ಹೇಳಿದರು.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ಪ್ರಥಮಸ್ಕಂಧದ ೧೯ನೆಯ ಅಧ್ಯಾಯವು ಮುಗಿಯಿತು.

---

**ಪ್ರಥಮಸ್ಕಂಧವು ಸಂಪೂರ್ಣವಾಯಿತು.**



**ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ**
**ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।**
**ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ**
**ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥**

**ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।**
**ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥**

**ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।**
**ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥**

**ಕಾಯೇನ ವಾಚಾ ಮನಸೇನ್ದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।**
**ಕರೋಮಿ ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ॥**

**ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।**
**ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥**

ಶ್ರೀಕೃಷ್ಣಾರ್ಪಣಮಸ್ತು ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು.

ಓಂ ತತ್ಸತ್

ಶ್ರೀಮಹಾಗಣಪತಯೇ ನಮಃ     ಶ್ರೀಮಹಾಸರಸ್ವತ್ಯೈ ನಮಃ     ಶ್ರೀಸದ್ಗುರವೇ ನಮಃ



# ಶ್ರೀ ಮ ದ್ಭಾ ಗ ವ ತ

ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯನ್ತಿ ಯತ್ಸೂರಯಃ ।
ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋಽಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥

ದ್ವಿತೀಯಸ್ಕಂಧ                                        ೧ನೆಯ ಅಧ್ಯಾಯ

## ಧ್ಯಾನವಿಧಿ ಮತ್ತು ಶ್ರೀಭಗವಂತನ ವಿರಾಟ್‌ಸ್ವರೂಪದ ವರ್ಣನೆ

ಪರೀಕ್ಷಿದ್ರಾಜನು ಮಧುರವಾಣಿಯಿಂದ ಅರಿಕೆಮಾಡಿಕೊಂಡ ಪ್ರಶ್ನೆಗೆ ಶುಕಮಹರ್ಷಿಗಳು ಹೀಗೆ ಉತ್ತರ ನೀಡಿದರು :

**ವರೀಯಾನೇಷ ತೇ ಪ್ರಶ್ನಃ ಕೃತೋ ಲೋಕಹಿತೋ ನೃಪ ।**
**ಆತ್ಮವಿತ್ಸಮ್ಮತಃ ಪುಂಸಾಂ ಶ್ರೋತವ್ಯಾದಿಷು ಯಃ ಪರಃ ॥೧॥**

"ಮಹಾರಾಜ! ನೀನು ಕೇಳಿರುವ ಪ್ರಶ್ನೆ, ತುಂಬಾ ಶ್ರೇಷ್ಠವಾದುದು. ಎಲ್ಲ ಲೋಕಗಳಿಗೂ ಹಿತವನ್ನುಂಟುಮಾಡುವ ಪ್ರಶ್ನೆಯನ್ನೇ ಕೇಳಿದ್ದೀಯೆ. ಇದು ಆತ್ಮಜ್ಞಾನಿಗಳಿಗೆ ಸಮ್ಮತವಾದ ಪ್ರಶ್ನೆ. ಮನುಷ್ಯರ ಶ್ರವಣ, ಸ್ಮರಣ, ಕೀರ್ತನೆ–ಇತ್ಯಾದಿಗಳಿಗೆ ಯೋಗ್ಯವಾದ ಮಾತು ಯಾವುದುಂಟೋ ಅವುಗಳಲ್ಲಿ ಅತ್ಯಂತ ಉತ್ತಮವಾದುದು ಇದು.

ಓ ರಾಜೇಂದ್ರನೇ! ಆತ್ಮತತ್ತ್ವವನ್ನರಿಯದೇ ಮನೆಯ ಕಾರ್ಯಭಾರಗಳಲ್ಲಿಯೇ ಮಗ್ನರಾಗಿರುವ ಗೃಹಸ್ಥರಿಗೆ ಕೇಳುವುದಕ್ಕೂ, ಯೋಚಿಸುವುದಕ್ಕೂ, ಮಾಡುವುದಕ್ಕೂ ಸಾವಿರಾರು ವಿಷಯಗಳಿರುತ್ತವೆ. ಅವರ ಆಯುಸ್ಸೆಲ್ಲಾ ಅವುಗಳಲ್ಲೇ ಕಳೆದುಹೋಗುತ್ತದೆ. ಅವರ ರಾತ್ರಿಯು ನಿದ್ರೆಯಲ್ಲಿ ಅಥವಾ ಸ್ತ್ರೀಪ್ರಸಂಗದಲ್ಲಿ ಕಳೆದುಹೋಗುತ್ತದೆ. ಹಗಲು ಹಣಸಂಪಾದನೆಯ

ಹಗರಣದಲ್ಲಾಗಲೀ, ಕುಟುಂಬದ ರಕ್ಷಣೆ-ಪೋಷಣೆಗಳಲ್ಲಾಗಲೀ ಕಳೆದು ಹೋಗುತ್ತದೆ.

**ದೇಹಾಪತ್ಯಕಲತ್ರಾದಿಷ್ವಾತ್ಮಸೈನ್ಯೇಷ್ವಸತ್ಸ್ವಪಿ ।**
**ತೇಷಾಂ ಪ್ರಮತ್ತೋ ನಿಧನಂ ಪಶ್ಯನ್ನಪಿ ನ ಪಶ್ಯತಿ ॥೪॥**

**ತಸ್ಮಾದ್ಭಾರತ ಸರ್ವಾತ್ಮಾ ಭಗವಾನೀಶ್ವರೋ ಹರಿಃ ।**
**ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾಭಯಮ್ ॥೫॥**

ಮನುಷ್ಯನು ಸಂಸಾರದಲ್ಲಿ ತುಂಬಾ ಗಾಢವಾದ ಸಂಬಂಧ ಬೆಳೆಸಿಕೊಂಡಿರುವ ಶರೀರ, ಹೆಂಡತಿ, ಮಕ್ಕಳು ಮುಂತಾದುವುಗಳೆಲ್ಲಾ ಅಸತ್ಪದಾರ್ಥಗಳು. ಆದರೂ ಜೀವನಿಗೆ ಅವುಗಳ ಮೋಹದ ಹುಚ್ಚು ಎಷ್ಟು ಇರುತ್ತದೆ?—ಎಂದರೆ : ಅವೆಲ್ಲವೂ ಸಾವಿಗೆ ಈಡಾಗುತ್ತಿರುವುದನ್ನು ನೋಡುತ್ತಲೇ ಇದ್ದರೂ ಅವನು ಎಚ್ಚರಗೊಳ್ಳುವುದಿಲ್ಲ. ದಿನದಿನವೂ ನೋಡಿದರೂ ಆ ಬಗೆಗೆ ಕುರುಡನಾಗಿಯೇ ಇರುತ್ತಾನೆ. ಆದುದರಿಂದ ಅಭಯಸ್ಥಾನವನ್ನು ಬಯಸುವವನು ಯಾರನ್ನು ಕುರಿತು ಶ್ರವಣಮಾಡಬೇಕು? ಕೀರ್ತನೆ ಮಾಡಬೇಕು ಮತ್ತು ಸ್ಮರಣೆ ಮಾಡಬೇಕು?—ಎಂದರೆ ಸರ್ವಾತ್ಮನೂ ಸರ್ವಶಕ್ತನೂ ಆಗಿರುವ ಭಗವಂತನಾದ ಶ್ರೀಹರಿ, ಶ್ರೀಕೃಷ್ಣ ಪರಮಾತ್ಮನನ್ನು ಕುರಿತು—ಎಂದು ತಿಳಿ.

ಜ್ಞಾನಯೋಗದಿಂದಾಗಲೀ, ಭಕ್ತಿಯೋಗದಿಂದಾಗಲೀ, ಸ್ವಧರ್ಮನಿಷ್ಠೆಯಿಂದಾಗಲೀ,* ಹೇಗಾದರೂ ಅಂತ್ಯಕಾಲದಲ್ಲಿ ನಾರಾಯಣನ ಸ್ಮರಣೆ

---

* ಸಾಂಖ್ಯಯೋಗಾಭ್ಯಾಂ ಸ್ವಧರ್ಮಪರಿನಿಷ್ಠಯಾ = ಸಾಂಖ್ಯವೆಂದರೆ ಆತ್ಮಾನಾತ್ಮ ವಿವೇಕ, ಯೋಗವೆಂದರೆ ಅಷ್ಟಾಂಗಯೋಗ, ಸ್ವಧರ್ಮನಿಷ್ಠೆ ಎಂದರೆ ವಿಹಿತವಾದ ಧರ್ಮದ ಅನುಷ್ಠಾನ. (ಶ್ರೀಧರೀಯ)

ಸಾಂಖ್ಯವೆಂದರೆ ದೇಹವಿಲಕ್ಷಣವಾದ ಆತ್ಮನ ಜ್ಞಾನ ; ಗೀತೆಯ ಪ್ರಥಮಷಟ್ಕದಲ್ಲಿ ಉಪದಿಷ್ಟವಾಗಿರುವುದು. ಯೋಗವೆಂದರೆ : ಗೀತೆಯ ದ್ವಿತೀಯಷಟ್ಕದಲ್ಲಿ ಪ್ರತಿಪಾದಿತವಾದ ಭಕ್ತಿಯೋಗ. ಸ್ವಧರ್ಮ ಪರಿನಿಷ್ಠಾ ಎಂದರೆ : ಅವಶ್ಯವಾಗಿ ಅನುಷ್ಠಾನಮಾಡಬೇಕಾದ ವರ್ಣಾಶ್ರಮಧರ್ಮಗಳಾದ, ಅಮಾನಿತ್ವ, ಅದಂಭಿತ್ವ—ಮುಂತಾದ ಧರ್ಮಗಳು. ಇವುಗಳಲ್ಲಿ ಪೂರ್ಣವಾದ ನಿಷ್ಠೆ. (ಚಂದ್ರಿಕಾವ್ಯಾಖ್ಯಾನ)

ಸಾಂಖ್ಯ ಎಂದರೆ : ಜ್ಞಾನಯೋಗ. ಯೋಗ ಎಂದರೆ : ಕರ್ಮಯೋಗ. ಸ್ವಧರ್ಮ

ಉಂಟಾಗುವಂತೆ ಮಾಡಿಕೊಳ್ಳುವುದು ಮನುಷ್ಯನು ಜೀವನದಲ್ಲಿ ಗಳಿಸ ಬೇಕಾದ ಪರಮಲಾಭವು.

ಓ ರಾಜೇಂದ್ರ! ಶಾಸ್ತ್ರೀಯ ಅಥವಾ ಸಾಮಾಜಿಕವಾದ ವಿಧಿ-ನಿಷೇಧ ನಿಯಮಗಳನ್ನು* ಮೀರಿದವರಾಗಿ ನಿರ್ಗುಣಸ್ವರೂಪದಲ್ಲಿ ನೆಲೆಗೊಂಡಿರುವ ಮುನಿಗಳೂ ಕೂಡ ಸಾಮಾನ್ಯವಾಗಿ ಶ್ರೀಹರಿಯ ಕಲ್ಯಾಣಗುಣಗಳ ವರ್ಣನೆ ಯಲ್ಲೇ ರಮಿಸುತ್ತಿರುತ್ತಾರೆ. ಅಂತಹ ಮಹಾಮಹಿಮೆಯ ದಿವ್ಯಪ್ರಬಂಧವಾಗಿ ವೇದಸದೃಶವೂ ಬ್ರಹ್ಮರೂಪವೂ ಆಗಿರುವ ಈ ಭಾಗವತವೆಂಬ ಮಹಾಪುರಾಣವನ್ನು ನಾನು ದ್ವಾಪರಯುಗದ ಪ್ರಾರಂಭಸಮಯದಲ್ಲಿ ನನ್ನ

---

ಪರಿನಿಷ್ಠಾ ಎಂದರೆ : ಭಗವಂತನಲ್ಲೇ ಶೇಷತ್ವಹೊಂದಿರುವುದರಲ್ಲಿ ನಿಷ್ಠೆಯುಳ್ಳ ವೃತ್ತಿ.
(ವೀರರಾಘವೀಯ) (ಶ್ಲೋಕ ೬)

* **ನಿವೃತ್ತಾ ವಿಧಿ-ನಿಷೇಧತಃ** = ವಿಧಿ-ನಿಷೇಧರೂಪವಾದ ವೇದವು ಬೋಧಿಸುವ ಕಾಮ್ಯರೂಪವಾದ ಕರ್ಮಗಳಿಂದ ನಿವೃತ್ತರಾಗಿ ಎಂದೇ ಅರ್ಥಮಾಡಬೇಕು. ಆವಶ್ಯಕವಾದ ಪಂಚಮಹಾಯಜ್ಞಾದಿಗಳನ್ನು ಬಿಡಬಾರದು. ನಿಷಿದ್ಧವಾದ ಕಳಂಜಭಕ್ಷಣಾದಿಗಳನ್ನು ಮಾಡಬಾರದು. ಏಕೆಂದರೆ : **'ಸರ್ವಾಪೇಕ್ಷಾ ಚ ಯಜ್ಞಾದಿ ಶ್ರುತೇರಶ್ವವತ್' 'ತಮೇತಂ ವೇದಾನುವಚನೇನ' 'ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ'**–ಇತ್ಯಾದಿ ಶಾಸ್ತ್ರಗಳು ಹೇಳುವಂತೆ ವಿಧಿ-ನಿಷೇಧಗಳನ್ನು ಅನುಸರಿಸದೇ ಇದ್ದರೆ ಉಪಾಸನೆಯೇ ಸಿದ್ಧಿಸುವುದಿಲ್ಲ. **ನೈರ್ಗುಣ್ಯಸ್ಥಾಃ** = ಎಂದರೆ : ರಜಸ್ಸು-ತಮಸ್ಸುಗಳು ಬೆರೆತಿರುವ ಸತ್ತ್ವಗುಣದಿಂದ ರಹಿತನಾದ ಪರಮಾತ್ಮನಲ್ಲಿ ನೆಲೆಗೊಂಡ. ಅಂತಹ ಬ್ರಹ್ಮವನ್ನು ಉಪಾಸನೆಮಾಡುವ ಮಹಾತ್ಮರು ಶ್ರೀಹರಿಯ ಗುಣಕೀರ್ತನೆಯಲ್ಲಿಯೇ ರಮಿಸುತ್ತಾರೆ.
(ವೀರರಾಘವೀಯ)

ಸತ್ತ್ವ-ರಜಸ್ತಮೋರೂಪವಾದ ಗುಣತ್ರಯರಹಿತರಾಗಿ ಶುದ್ಧಸತ್ತ್ವಪ್ರಧಾನರನ್ನು **ನೈರ್ಗುಣ್ಯಸ್ಥಾಃ**–ಎಂದು ಕರೆದಿದೆ. ಅಂತಹವರು ಶಾಸ್ತ್ರೀಯವಿಧಿ-ನಿಷೇಧಗಳಿಗೆ ಅಧೀನರಾಗುವುದಿಲ್ಲ. ತ್ರಿಗುಣಪ್ರಧಾನರಾದ ಜನರಿಗೆ ಮಾತ್ರವೇ ಆ ವಿಧಿ-ನಿಷೇಧಗಳು ಅನ್ವಯಿಸುವುದು. **'ತ್ರೈಗುಣ್ಯವಿಷಯಾ ವೇದಾಃ'**–ಎಂದು ಶ್ರೀಗೀತೆಯು ಇದನ್ನೇ ಹೇಳುತ್ತದೆ. ಹಾಗೆ ವಿಧಿ-ನಿಷೇಧಗಳನ್ನು ಮೀರಿದ ಮಹಾತ್ಮರು ಸನಕಾದಿಗಳು. ಅಂತಹವರೂ ಕೂಡ ಶ್ರೀಹರಿಯ ಗುಣಗಾನಮಾಡುತ್ತಾರೆ. ಶಾಸ್ತ್ರೀಯವಾದ ಧರ್ಮಗಳನ್ನು ಮೀರಿದ್ದರೂ ಕೂಡ ಭಗವಂತನ ಗುಣಾಮೃತವನ್ನು ಆಸ್ವಾದಿಸುವುದರಲ್ಲಿ ಅವರು ನಿರತರಾಗಿರುತ್ತಾರೆ.
(ಚಂದ್ರಿಕಾವ್ಯಾಖ್ಯಾನ) (ಶ್ಲೋಕ ೭)

ತೀರ್ಥರೂಪರಾದ ಕೃಷ್ಣದ್ವೈಪಾಯನರಲ್ಲಿ ಅಧ್ಯಯನಮಾಡಿದೆನು.* ನಾನು ನಿರ್ಗುಣಸ್ವರೂಪವಾದ ಬ್ರಹ್ಮದಲ್ಲಿ ನಿಷ್ಠೆಯುಳ್ಳವನು. ಆ ಪುಣ್ಯಕೀರ್ತಿಯಾದ ಶ್ರೀಕೃಷ್ಣಪರಮಾತ್ಮನ ದಿವ್ಯಲೀಲೆಗಳು ನನ್ನ ಮನಸ್ಸನ್ನು ಸೂರೆಗೊಂಡವು. ಆದ್ದರಿಂದ ನಾನು ಈ ಪುರಾಣವನ್ನೂ ಅಧ್ಯಯನಮಾಡಿದೆನು. ನೀನೂ ಆ ಪರಮಪುರುಷನಲ್ಲಿ ಪರಮಭಕ್ತಿಯುಳ್ಳವನು. ಆದ್ದರಿಂದ ನಿನಗೂ ಆ ಪುರಾಣವನ್ನು ಶ್ರವಣಮಾಡಿಸುತ್ತೇನೆ. ಇದರಲ್ಲಿ ಶ್ರದ್ಧೆಯನ್ನು ಇಡುವ ಸುಕೃತಿಗಳಿಗೆ ಶೀಘ್ರದಲ್ಲಿಯೇ ಮುಕುಂದನ ವಿಷಯದಲ್ಲಿ ಶುದ್ಧವಾದ ಚಿತ್ತವೃತ್ತಿಯುಂಟಾಗುವುದು. (ಶ್ಲೋಕ 6-10)

**ಏತನ್ನಿರ್ವಿದ್ಯಮಾನಾನಾಮಿಚ್ಛತಾಮಕುತೋಭಯಮ್ ।**
**ಯೋಗಿನಾಂ ನೃಪ ನಿರ್ಣೀತಂ ಹರೇರ್ನಾಮಾನುಕೀರ್ತನಮ್ ॥೧೧॥**

ರಾಜರ್ಷಿವರೇಣ್ಯ! ಸಂಸಾರದಲ್ಲಿ ನಿರ್ವೇದವನ್ನು ಹೊಂದಿ** ಇಹಲೋಕ, ಪರಲೋಕಗಳ ಸುಖ-ಭೋಗಗಳಲ್ಲಿ ವಿರಕ್ತರಾಗಿ, ನಿರ್ಭಯಸ್ಥಾನವಾದ ಮುಕ್ತಿಯನ್ನು ಬಯಸುವ ಸಾಧಕರೂ, ಯೋಗಸಿದ್ಧರೂ, ಜ್ಞಾನಿಗಳೂ ಏನು ಮಾಡಬೇಕು?–ಎಂದರೆ : ಶ್ರೀಹರಿಯ ನಾಮಗಳನ್ನು ಸಂಕೀರ್ತನೆ ಮಾಡಬೇಕು. ಇದೇ ಸಕಲಶಾಸ್ತ್ರಗಳ ನಿರ್ಣಯವು.

ತನ್ನ ಶ್ರೇಯಸ್ಸಾಧನೆಯ ವಿಷಯದಲ್ಲಿ ಎಚ್ಚರಿಕೆಯಿಲ್ಲದವರು ಎಷ್ಟೇ

---

* ತಾವು ಸನಕಾದಿಗಳಂತೆ ತ್ರಿಗುಣಾತೀತವಾದ ಬ್ರಹ್ಮದಲ್ಲಿ ನೆಲೆಸಿದ್ದರೂ ಸನಕಾದಿ ಗಳಂತೆ ಪರಮಾತ್ಮನ ರಾಮಕೃಷ್ಣಾದ್ಯವತಾರಲೀಲೆಗಳನ್ನು ಅನುಸಂಧಾನಮಾಡುವುದರಲ್ಲಿ ಆಕರ್ಷಣೆಗೊಂಡು ಶ್ರೀಭಗವಂತನನ್ನು ಅಧ್ಯಯನಮಾಡಿದುದಾಗಿ ಶುಕಮುನಿಗಳು ಹೇಳುತ್ತಾರೆ. (ಚಂದ್ರಿಕಾ)

ನಾನು ಸಿದ್ಧನಾಗಿದ್ದೇನೆ. ಶಾಸ್ತ್ರಗಳಿಲ್ಲದೆಯೇ ಬ್ರಹ್ಮಾನುಸಂಧಾನಮಾಡಬಲ್ಲೆನು. ಆದರೂ ಭಗವಲ್ಲೀಲೆಗಳಿಂದ ಅಕೃಷ್ಟನಾಗಿ ಶ್ರೀಭಗವಂತನನ್ನು ಅಧ್ಯಯನಮಾಡಿದೆನು.
(ವೀರರಾಘವೀಯ) (ಶ್ಲೋಕ ೮)

** ಏತನ್ನಿರ್ವಿದ್ಯಮಾನಾನಾಂ = ಇದಕ್ಕೆ ಎರಡು ಬಗೆಯಲ್ಲಿ ಅರ್ಥೈಸಬಹುದು. ಸಂಸಾರದಲ್ಲಿ, ಐಹಿಕಾಮುಷ್ಮಿಕಭೋಗಗಳಲ್ಲಿ ನಿರ್ವೇದಹೊಂದಿದವರಿಗೆ ಎಂದು ಒಂದು ಅರ್ಥ. 'ಪಾಂಡಿತ್ಯಂ ನಿರ್ವಿದ್ಯ'–ಎಂದು ಶ್ರುತಿಯು ಹೇಳುವಂತೆ ಬ್ರಹ್ಮತತ್ತ್ವವನ್ನು ಚೆನ್ನಾಗಿ ತಿಳಿದು–ಎಂದು ಮತ್ತೊಂದು ಅರ್ಥ. 'ದೇಹ-ಗೇಹಾದಿಗಳಲ್ಲಿ ಹೇಯತಾಬುದ್ಧಿಯುಳ್ಳವರಿಗೆ'–ಎಂದು. (ಚಂದ್ರಿಕಾವ್ಯಾಖ್ಯಾನ)

ಹೆಚ್ಚು ವರ್ಷಗಳ ಕಾಲ ಬದುಕಿದರೂ ಏನು ಫಲ? ಅವರಿಗರಿವಿಲ್ಲದೆಯೇ ಅವರ ಆಯುಸ್ಸು ವ್ಯರ್ಥವಾಗಿ ಕಳೆದುಹೋಗುವುದು. ಶ್ರೇಯಸ್ಸಾಧನೆಯ ವಿಷಯದಲ್ಲಿ ಸಾವಧಾನವಾಗಿ, ಜ್ಞಾನಪೂರ್ವಕವಾಗಿ ಒಂದು ಮುಹೂರ್ತ ಕಾಲ ಬದುಕಿದ್ದರೂ ಅದು ಸಫಲವೇ ಆಗುವುದು. ಏಕೆಂದರೆ : ಅದರಲ್ಲಿ ಆತ್ಮಕಲ್ಯಾಣಸಿದ್ಧಿಯ ಪ್ರಯತ್ನವು ನಡೆಯುವುದು.

**ಖಟ್ವಾಙ್ಗೋ ನಾಮ ರಾಜರ್ಷಿರ್ಜ್ಞಾತ್ವೇಯತ್ತಾಮಿಹಾಯುಷಃ ।**
**ಮುಹೂರ್ತಾತ್ಸರ್ವಮುತ್ಸೃಜ್ಯ ಗತವಾನಭಯಂ ಹರಿಮ್ ॥೧೩॥**

ಹಿಂದೆ ಖಟ್ವಾಂಗನೆಂಬ ಒಬ್ಬ ರಾಜರ್ಷಿಯಿದ್ದನು. ತನ್ನ ಆಯುಸ್ಸು ಅತ್ಯಲ್ಪ ಕಾಲ ಮಾತ್ರ ಉಳಿದಿದೆ–ಎಂದು ಆತನಿಗೆ ತಿಳಿಯಿತು. ಆ ಅಲ್ಪಾವಧಿಯಲ್ಲಿಯೇ ಅಂದರೆ–ಒಂದು ಮುಹೂರ್ತಕಾಲದಲ್ಲೇ–ಆತನು ಸರ್ವಸ್ವವನ್ನೂ ತ್ಯಾಗಮಾಡಿ ನಿರ್ಭಯವಾದ ಭಗವತ್ಪದವನ್ನು ಸೇರಿಕೊಂಡುಬಿಟ್ಟನು.

ಕುರುಕುಲನಂದನನೇ! ನಿನಗಾದರೋ ಆಯುಸ್ಸಿನ ಅವಧಿಯು ಇನ್ನೂ ಏಳು ದಿವಸಗಳ ಕಾಲ ಇರುವುದು. ಅಷ್ಟರೊಳಗೇ ನೀನು ನಿನ್ನ ಮರಣಾನಂತರ ಆತ್ಮಕಲ್ಯಾಣಕ್ಕೆ ಏನು ಬೇಕೋ ಅವೆಲ್ಲವನ್ನೂ ಸಾಧಿಸಿಕೊಳ್ಳ ಬಹುದಾದಷ್ಟು ಕಾಲಾವಕಾಶವಿದೆಯಪ್ಪಾ!

ಅಂತ್ಯಕಾಲ ಬಂದಾಗ ಮನುಷ್ಯನು ಏನು ಮಾಡಬೇಕು–ಎಂದು ಕೇಳಿದೆಯಲ್ಲವೇ? ಆಗ ಆತನು ಗಾಬರಿಗೊಳ್ಳಬಾರದು. ನಿರ್ಭಯನಾಗಿರಬೇಕು. ವೈರಾಗ್ಯವೆಂಬ ಶಸ್ತ್ರದಿಂದ ದೇಹದಲ್ಲೂ ಮತ್ತು ಅದಕ್ಕೆ ಸಂಬಂಧ

---

'ತಾಪತ್ರಯಗಳ ಹೊಡೆತದಿಂದ ನಿರ್ವೇದಹೊಂದಿದವರಿಗೆ' (ವೀರರಾಘವೀಯ)

'ಮುಮುಕ್ಷತಾಂ' ಎಂದು ಶ್ರೀಧರೀಯವ್ಯಾಖ್ಯಾನ. ಸಾಧಕರಿಗೆ ಮತ್ತು ಸಿದ್ಧರಿಗೆ ಇಬ್ಬರಿಗೂ ಶ್ರೀಹರಿನಾಮಾನುಕೀರ್ತನವೇ ಶ್ರೇಯಸ್ಸಾಧಕವು. ಸಕಾಮಭಕ್ತರಿಗೆ ಫಲ ಸಾಧನವು ಇದೇ. ಮುಮುಕ್ಷುಗಳಿಗೂ ಇದೇ ಮೋಕ್ಷಸಾಧನವು. ಯೋಗಿ (ಜ್ಞಾನಿ)ಗಳಿಗೆ ಭಯರಹಿತವಾದ ಫಲವನ್ನು ಕೊಡುವುದೂ ಇದೇ. (ಶ್ರೀಧರೀಯ)

ಮೋಕ್ಷವನ್ನು ಬಯಸುವವರು ಅದರ ಪ್ರಾಪ್ತಿಗಾಗಿ ಭಗವಂತನ ಗುಣಕೀರ್ತನೆ-ಸೇವೆಗಳನ್ನು ಮಾಡಬೇಕು. ಸನಕಾದಿ ಸಿದ್ಧರು ಸದಾ ಬ್ರಹ್ಮಧ್ಯಾನಾನಂದವನ್ನು ಅನುಭವಿಸುತ್ತಿರುವವರು, ಸಮಾಧಿನಿಷ್ಠರು. ಅರೆನಿಮಿಷವೂ ಬ್ರಾಹ್ಮೀವೃತ್ತಿಯನ್ನು ತೊರೆಯದವರು. 'ನಿಮೇಷಾರ್ಧಂ ನ ತಿಷ್ಠನ್ತಿ ವೃತ್ತಿಂ ಬ್ರಹ್ಮಮಯೀಂ ವಿನಾ ।

ಪಟ್ಟವರ ವಿಷಯದಲ್ಲೂ ಇರುವ ಮಮತೆಯನ್ನು ಕಡಿದುಹಾಕಬೇಕು. ಧೈರ್ಯದಿಂದ ಮನೆಯನ್ನು ಬಿಟ್ಟು ಹೊರಟು ಯಾವುದಾದರೂ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಶುಚಿಯಾಗಿ ಏಕಾಂತವಾದ ಜಾಗದಲ್ಲಿ ವಿಧಿಪೂರ್ವಕವಾಗಿ ರಚಿತವಾದ ಆಸನದಲ್ಲಿ ಕುಳಿತುಕೊಳ್ಳಬೇಕು. ಅಕಾರ, ಉಕಾರ, ಮಕಾರಗಳೆಂಬ ಮೂರು ಮಾತ್ರೆಗಳಿಂದ ಕೂಡಿದ ಪರಮಪವಿತ್ರವಾದ ಪ್ರಣವವನ್ನು ಮನಸ್ಸಿನಲ್ಲೇ ಜಪಿಸಿಕೊಳ್ಳಬೇಕು. ಪ್ರಾಣವಾಯುವನ್ನು ವಶಪಡಿಸಿಕೊಂಡು, ಬ್ರಹ್ಮಬೀಜವಾದ ಪ್ರಣವವನ್ನು ಕಿಂಚಿತ್ತೂ ಮರೆಯದೇ ಮನಸ್ಸನ್ನು ದಮನ ಮಾಡಬೇಕು. ಬುದ್ಧಿಯೆಂಬ ಸಾರಥಿಯ ಸಹಾಯದಿಂದ ಮನಸ್ಸೆಂಬ ಹಗ್ಗದ ಮೂಲಕ ಇಂದ್ರಿಯಗಳನ್ನು ಆಯಾ ವಿಷಯಗಳ ದೆಸೆಯಿಂದ ಸೆಳೆದು ದೂರವಾಗಿಸಿ, ಕರ್ಮದ ವಾಸನೆಗಳಿಂದ ಚಂಚಲವಾಗಿರುವ ಮನಸ್ಸನ್ನು ವಿಚಾರದಿಂದ ತಡೆಗಟ್ಟಿ ಶ್ರೀಭಗವಂತನ ದಿವ್ಯಮಂಗಳವಿಗ್ರಹದಲ್ಲಿ ನೆಲೆಗೊಳಿಸಬೇಕು. ಆ ದಿವ್ಯಮಂಗಳವಿಗ್ರಹದಲ್ಲಿ ಯಾವುದಾದರೂ ಒಂದು ಅವಯವವನ್ನು ಸ್ಥಿರವಾದ ಚಿತ್ತದಿಂದ ಚೆನ್ನಾಗಿ ಧ್ಯಾನಿಸಬೇಕು. ಹೀಗೆ ಒಂದೊಂದು ಅವ ಯವವನ್ನೂ ಧ್ಯಾನಮಾಡುತ್ತಾ ಮಾಡುತ್ತಾ ವಿಷಯವಾಸನಾರಹಿತವಾದ ಮನಸ್ಸನ್ನು ಮತ್ತೆ ಯಾವ ವಿಷಯವನ್ನೂ ಕುರಿತು ಚಿಂತನೆಮಾಡದ ರೀತಿ ಯಲ್ಲಿ ಪೂರ್ಣವಾಗಿ ಭಗವಂತನಲ್ಲಿ ಲಯಗೊಳಿಸಬೇಕು. ಅದೇ ವಿಷ್ಣುವಿನ ಪರಮಪದವು. ಅದನ್ನು ಪಡೆದರೇ ಮನಸ್ಸು ಪರಮಾನಂದಪರಿಪೂರ್ಣವಾಗಿ ಪ್ರಸನ್ನವಾಗುವುದು. ಹಾಗೆ ಶ್ರೀಭಗವಂತನನ್ನು ಧ್ಯಾನಮಾಡುವ ಸಮಯದಲ್ಲಿ ಮನಸ್ಸು ರಜೋಗುಣದಿಂದ ಚಂಚಲವಾದರೆ ಅಥವಾ ತಮೋಗುಣದಿಂದ

---

ಬ್ರಹ್ಮಾದ್ಯಾ ನಾರದಾದ್ಯಾಶ್ಚ ಸನಕಾದ್ಯಾಃ ಶುಕಾದಯಃ ॥' ಇಂತಹವರೂ ಏಕೆ ಭಗವಂತನ ಗುಣಕೀರ್ತನೆ ಮಾಡಬೇಕು? ನಿತ್ಯಮುಕ್ತರೂ ಏಕೆ ಪರಮಾತ್ಮನನ್ನು ಸ್ತುತಿಸುತ್ತಾರೆ? ಈ ಪ್ರಶ್ನೆಗೆ ಆಚಾರ್ಯ ಶ್ರೀವೇಂಕಟನಾಥರು ರಹಸ್ಯತ್ರಯಸಾರದಲ್ಲಿ ಹೀಗೆ ಸುಂದರವಾಗಿ ಉತ್ತರಿಸುತ್ತಾರೆ: ಬಾಯಾರಿಕೆಯನ್ನು ನೀಗಿಸಿಕೊಳ್ಳುವುದು, ಖಾಯಿಲೆಯ ಪರಿಹಾರ, ದೇಹಪುಷ್ಟಿ–ಇತ್ಯಾದಿ ಕಾರಣಗಳಿಗಾಗಿ ಜನರು ಕ್ಷೀರವನ್ನು ಸೇವಿಸುತ್ತಾರೆ. ಆದರೆ ಯಾವ ರೋಗವೂ ಇಲ್ಲದೇ, ಹಸಿವು-ಬಾಯಾರಿಕೆಗಳೂ ಇಲ್ಲದೇ, ದೇಹಪುಷ್ಟಿ ಇರುವ ತರುಣರೂ ಕೂಡ ಯಾವ ಅವಶ್ಯಕತೆ ಇಲ್ಲದಿದ್ದರೂ ಕೇವಲ ಸಂತೋಷಕ್ಕೋಸ್ಕರ ಹಾಲು ಕುಡಿಯುವುದುಂಟು. ಹಾಗೆಯೇ ಮುಕ್ತಾತ್ಮರೂ ಸಮಾಧಿಸಿದ್ಧರೂ ಕೂಡ ಸಂತೋಷದಿಂದ ಪ್ರೇರಿತರಾಗಿ ಭಗವಂತನ ಗುಣ

ಮೂಢವಾದರೆ ಆಗ ಗಾಬರಿಪಡಬಾರದು. ಧೈರ್ಯದಿಂದ ಯೋಗಧಾರಣೆಯಿಂದ ಅದನ್ನು ವಶಪಡಿಸಿಕೊಳ್ಳಬೇಕು. ಧಾರಣಾಯೋಗವು ಆ ಎರಡು ಗುಣಗಳ ದೋಷಗಳನ್ನೂ ತೊಲಗಿಸುವುದು. ಆ ಧಾರಣೆಯಿಂದ ಸ್ಥಿರನಾಗಿ ಯೋಗಿಯು ಧ್ಯಾನದಿಂದ ತನ್ನ ಅತ್ಯಂತಶುಭಾಶ್ರಯವಾದ ಭಗವದ್ರೂಪವನ್ನೇ ನೋಡುತ್ತಿದ್ದರೆ ಶೀಘ್ರದಲ್ಲಿಯೇ ಆತನಿಗೆ ಭಕ್ತಿಯೋಗವು ಸಿದ್ಧಿಸುವುದು." (ಶ್ಲೋಕ 14-21)

ಮಹರ್ಷಿಗಳು ಹೇಳಿದ ಈ ಧಾರಣಾಯೋಗದ ಬಗೆಗೆ ರಾಜನಿಗೆ ವಿವರಣೆ ಬೇಕಾಯಿತು. ಆತನು ಅವರನ್ನು "ಬ್ರಹ್ಮರ್ಷಿಗಳೇ! ಈ ಧಾರಣೆಯನ್ನು ಮಾಡಲು ಸಾಧನ ಯಾವುದು? ಯಾವ ವಸ್ತುವಿನಲ್ಲಿ ಧಾರಣೆಯನ್ನು ಮಾಡಬೇಕು? ಮನುಷ್ಯನ ಮನಸ್ಸಿನ ಮಲವನ್ನು ಶೀಘ್ರವಾಗಿಯೇ ನಾಶಪಡಿಸುವ ಈ ಧಾರಣೆಯ ಸ್ವರೂಪವಾದರೂ ಏನು? ಅಪ್ಪಣೆಕೊಡಿಸಬೇಕು"–ಎಂದು ಪ್ರಾರ್ಥಿಸಿದನು.

ಶುಕಮುನಿಗಳು ಆತನಿಗೆ ಹೀಗೆ ಉತ್ತರ ನೀಡಿದರು :

"ಮಹಾರಾಜ! ಆಸನವನ್ನೂ, ಶ್ವಾಸವನ್ನೂ, ಆಸಕ್ತಿಯನ್ನೂ, ಇಂದ್ರಿಯಗಳನ್ನೂ ಜಯಿಸಿದ ಬಳಿಕ ಬುದ್ಧಿಯ ಮೂಲಕ ಮನಸ್ಸನ್ನು ಭಗವಂತನ ಸ್ಥೂಲವಾದ ರೂಪದಲ್ಲಿ ಸ್ಥಿರವಾಗಿ ಧರಿಸಬೇಕು. ಭೂತ-ಭವಿಷ್ಯತ್ತು ಮತ್ತು ವರ್ತಮಾನಕಾಲಗಳಿಗೆ ಸೇರಿರುವ ಈ ಎಲ್ಲವೂ ಯಾವುದರಲ್ಲಿ ಕಾಣಿಸುತ್ತದೆಯೋ–ಆ ಸಂಪೂರ್ಣವಾದ ಕಾರ್ಯರೂಪವಾದ ಈ ಇಡೀ ವಿಶ್ವವು ಶ್ರೀಭಗವಂತನ ಅತ್ಯಂತಸ್ಥೂಲವಾದ ಶರೀರವು ; ವಿರಾಟ್ ಶರೀರವು. ಜಲ,

---

ಸಂಕೀರ್ತನೆ ಮಾಡುತ್ತಾರೆ. ಇದು ಅವರಿಗೆ ಸ್ವಭಾವವೇ ಆಗಿದೆ. ಅವರ ಈ ಸ್ವಭಾವವು ಇತರ ಸಾಧಕರಿಗೆ ಆದರ್ಶವಾಗುತ್ತದೆ. 'ತದ್ಧಿ ಜಿಜ್ಞಾಸುಭಿಃ ಸಾಧ್ಯಂ ಜ್ಞಾನಿನಾಂ ಯತ್ತು ಲಕ್ಷಣಮ್' ಸನಕಾದಿಗಳು ವಿಧಿ-ನಿಷೇಧಗಳನ್ನು ಮೀರಿದವರು, ಕೃತಕೃತ್ಯರು. ಆದರೂ ಭಗವಂತನ ಗುಣಗಳಿಗೆ ಮಾರುಹೋಗಿ ಆತನ ಗುಣಸಂಕೀರ್ತನೆ ಮಾಡುತ್ತಾರೆ. ಸಾಧಕರು ತಮ್ಮ ಶ್ರೇಯಸ್ಸಿನ ಪ್ರಾಪ್ತಿಗಾಗಿ ಆ ಗುಣಸಂಕೀರ್ತನೆ ಮಾಡಬೇಕೆಂಬುದರಲ್ಲಿ ಸಂಶಯವೇ ಇಲ್ಲ. ಮುಕ್ತರಿಗೆ ಯಾವುದು ಸ್ವಭಾವ ಮತ್ತು ಅಲಂಕಾರವಾಗಿದೆಯೋ ಮುಮುಕ್ಷುಗಳಿಗೆ ಅದು ಸಾಧನವೆನಿಸುತ್ತದೆ.

(ಶ್ಲೋಕ ೧೧)

ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ತತ್ತ್ವ ಮತ್ತು ಪ್ರಕೃತಿ–ಎಂಬ ಏಳು ಆವರಣಗಳಿಂದ ಸುತ್ತುವರಿಯಲ್ಪಟ್ಟ ಈ ಬ್ರಹ್ಮಾಂಡವೆಂಬ ಶರೀರದಲ್ಲಿ ಯಾವ ವಿರಾಟ್‌ಪುರುಷನಾದ ಭಗವಂತನುಂಟೋ–ಆತನೇ ಧಾರಣಾ ಯೋಗಕ್ಕೆ ಆಶ್ರಯನು, ಆಲಂಬನೆಯು. ಆತನಲ್ಲೇ ಧಾರಣೆಯನ್ನು ಮಾಡಬೇಕು. ಧಾರಣಾಯೋಗಕ್ಕೆ ಶುಭಾಶ್ರಯನಾದ ಆ ಪ್ರಭುವನ್ನು ಯೋಗಿಗಳು ಹೀಗೆ ವರ್ಣಿಸುತ್ತಾರೆ. (ಶ್ಲೋಕ 22-25)

ಪಾತಾಳವು ಆ ವಿರಾಟ್‌ಪುರುಷನ ಪಾದಮೂಲವು. ಆತನ ಹಿಮ್ಮಡಿ ಮತ್ತು ತುದಿಗಾಲುಗಳು ರಸಾತಲವೆಂದು ಹೇಳಲ್ಪಡುತ್ತವೆ. ಆತನ ಎರಡು ಹರಡುಗಳೂ ಮಹಾತಲಲೋಕವು ಮತ್ತು ತಲಾತಲವು ಆ ವಿರಾಟ್ ಪುರುಷನ ಮೊಣಕಾಲುಗಳು. ಆ ವಿಶ್ವಮೂರ್ತಿಯ ಎರಡು ಮಂಡಿಗಳೂ ಸುತಲಲೋಕವೆಂದೂ ತಿಳಿಯಬೇಕು. ವಿತಲ ಮತ್ತು ಅತಲಲೋಕಗಳು ಆತನ ಎರಡು ತೊಡೆಗಳಾಗಿವೆ. ಭೂತಲವು ಆತನ ಸೊಂಟದ ಮುಂಭಾಗ ವಾಗಿದೆ. ಮಹಾರಾಜ! ಆತನ ನಾಭೀಸರೋವರದಂತಿರುವ ಹೊಕ್ಕಳೇ ಆಕಾಶವು. ಆದಿಪುರುಷನಾದ ಆ ಪರಮಾತ್ಮನ ಎದೆಯನ್ನು ಸ್ವರ್ಗಲೋಕ ವೆಂದೂ, ಕತ್ತನ್ನು ಮಹರ್ಲೋಕವೆಂದೂ, ಮುಖವನ್ನು ಜನೋಲೋಕ ವೆಂದೂ, ಹಣೆಯನ್ನು ತಪೋಲೋಕವೆಂದೂ ಹೇಳುತ್ತಾರೆ. ಆ ಸಾಸಿರ ತಲೆಗಳುಳ್ಳ ಪುರುಷನ ಶಿರಸ್ಸುಗಳ ಸಮೂಹವೇ ಸತ್ಯಲೋಕವು. ಇಂದ್ರಾದಿ ದೇವತೆಗಳು ಆತನ ಭುಜಗಳು. ಆತನಿಗೆ ದಿಕ್ಕುಗಳೇ ಕಿವಿಗಳು ಮತ್ತು ಶಬ್ದವೇ ಶ್ರವಣೇಂದ್ರಿಯಗಳು. ಅಶ್ವಿನೀದೇವತೆಗಳಿಬ್ಬರೂ ಪರಮಪುರುಷನ ಮೂಗುಹೊಳ್ಳೆಗಳು. ಗಂಧವು ಆತನ ಘ್ರಾಣೇಂದ್ರಿಯ ಮತ್ತು ಉರಿಯು ತ್ತಿರುವ ಅಗ್ನಿಯು ಆತನ ಮುಖವು. ದ್ಯುಲೋಕವು ಆ ಮಹಾವಿಷ್ಣುವಿನ ನೇತ್ರಗಳು. ಅವುಗಳಲ್ಲಿ ನೋಡುವ ಶಕ್ತಿಯೇ ಸೂರ್ಯನು. ಎರಡು ರೆಪ್ಪೆಗಳೂ ಹಗಲು-ರಾತ್ರಿಗಳು ಮತ್ತು ಆತನ ಹುಬ್ಬುಗಳ ವಿಲಾಸವೇ ಬ್ರಹ್ಮ ಲೋಕವು. ನೀರು ಆತನ ದವಡೆಗಳು ಮತ್ತು ರಸವೇ ಆತನ ನಾಲಿಗೆ ಯೆಂದು ತಿಳಿಯಬೇಕು. ವೇದಗಳನ್ನು ಆ ಅನಂತನ ಬ್ರಹ್ಮರಂಧ್ರಸ್ಥಾನ ವೆಂದು ಹೇಳುತ್ತಾರೆ. ಆತನ ಕೋರೆದಾಡೆಯು ಜವರಾಯನು. ಎಲ್ಲ ಬಗೆಯ ಸ್ನೇಹಗಳೂ ಆತನ ದಂತಗಳು ಮತ್ತು ಜಗತ್ತನ್ನು ಮೋಹಗೊಳಿ

ಸುವ ಮಾಯೆಯು ಆತನ ಮುಗುಳುನಗೆಯೆನಿಸುತ್ತದೆ. ಅನಂತವಾದ ಸೃಷ್ಟಿಯು ಆತನ ಕಡೆಗಣ್ಣುಗಳ ನೋಟವು. ಲಜ್ಜೆಯೆಂಬುದು ಆತನ ಮೇಲ್ತುಟಿ ಮತ್ತು ಆತನ ಕೆಳದುಟಿಯೇ ಲೋಭವು. ಧರ್ಮವು ಆತನ ಸ್ತನಗಳು ಮತ್ತು ಅಧರ್ಮಮಾರ್ಗವು ಆತನ ಬೆನ್ನು. ಪ್ರಜಾಪತಿಯು ಆತನ ಜನನೇಂದ್ರಿಯ ಮತ್ತು ಮಿತ್ರಾ-ವರುಣರು ಆತನ ವೃಷಣಗಳು. ಸಮುದ್ರ ಗಳು ಆತನ ಹೊಟ್ಟೆ ಮತ್ತು ಪರ್ವತಗಳು ಆತನ ಮೂಳೆಗಳು. ಓ ರಾಜೇಂದ್ರ! ವಿಶ್ವಮೂರ್ತಿಯಾದ ಆ ವಿರಾಟ್‌ಪುರುಷನ ನಾಡಿಗಳೇ ನದಿ ಗಳು. ಮೈಗೂದಲುಗಳೇ ವೃಕ್ಷಗಳು. ಅನಂತಬಲಸಂಪನ್ನನಾದ ವಾಯು ದೇವನು ಆತನ ಉಸಿರು. ಕಾಲವು ಆತನ ನಡೆ ಮತ್ತು ಗುಣಗಳ ಹರಿ ದಾಟವೇ ಆತನ ಕರ್ಮವು. ಮೋಡಗಳನ್ನು ಆ ಮಹಾಪ್ರಭುವಿನ ಕೇಶ ಗಳೆಂದು ತಿಳಿಯುತ್ತಾರೆ. ಸಂಧ್ಯೆಯು ಆ ಅನಂತನ ವಸ್ತ್ರವೆನಿಸುತ್ತದೆ. ಅವ್ಯಕ್ತ ವನ್ನು ಆತನ ಹೃದಯವೆನ್ನುತ್ತಾರೆ ಮತ್ತು ಎಲ್ಲ ವಿಕಾರಗಳ ಕೋಶವಾದ ಆತನ ಮನಸ್ಸೇ ಚಂದ್ರನು. ಮಹತ್ತತ್ತ್ವವನ್ನು ಆ ಸರ್ವಾತ್ಮಕನಾದ ಸ್ವಾಮಿಯ ಚಿತ್ತವೆನ್ನುತ್ತಾರೆ. ರುದ್ರದೇವರನ್ನು ಆತನ ಅಹಂಕಾರವೆನ್ನುತ್ತಾರೆ. ಕುದುರೆ, ಹೇಸರಗತ್ತೆ, ಒಂಟೆ ಮತ್ತು ಆನೆಗಳು ಆತನ ಉಗುರುಗಳು. ಅರಣ್ಯವಾಸಿ ಗಳಾದ ಎಲ್ಲ ಮೃಗಗಳೂ ಆತನ ನಡುವಿನಲ್ಲಿವೆ. ಬಗೆ-ಬಗೆಯ ಪಕ್ಷಿಗಳು ಆತನ ಅದ್ಭುತವಾದ ರಚನಾಕೌಶಲವಾಗಿದೆ. ಸ್ವಾಯಂಭುವಮನುವೇ ಆತನ ಬುದ್ಧಿಯು ಮತ್ತು ಮನುವಿನ ಸಂತಾನಗಳಾದ ಮನುಷ್ಯರು ಆತನ ವಾಸಸ್ಥಾನವು. ಗಂಧರ್ವರು, ವಿದ್ಯಾಧರರು, ಚಾರಣರು ಮತ್ತು ಅಪ್ಸರ ಸ್ತ್ರೀಯರು ಆತನ ಷಡ್ಜವೇ ಮುಂತಾದ ಸ್ವರಗಳ ಸ್ಮೃತಿಗಳು. ದೈತ್ಯರು ಆತನ ವೀರ್ಯವು. ಆತನಿಗೆ ಬ್ರಾಹ್ಮಣರು–ಮುಖ, ಕ್ಷತ್ರಿಯರು–ಬಾಹುಗಳು, ವೈಶ್ಯರು–ತೊಡೆಗಳು ಮತ್ತು ಶೂದ್ರರು ಕಾಲುಗಳು. ಬಗೆ-ಬಗೆಯ ದೇವತೆಗಳ ಹೆಸರಿನಲ್ಲಿ ಮಾಡುವ ದೊಡ್ಡ ದೊಡ್ಡ ದ್ರವ್ಯಮಯವಾದ ಯಜ್ಞ ಗಳು ಆತನ ಕರ್ಮಗಳು. ಹೀಗೆ ವಿರಾಟ್‌ಪುರುಷನಾದ ಭಗವಂತನ ಸ್ಥೂಲ ಶರೀರದ ಸ್ವರೂಪವು ಇದೇ ಎಂಬುದನ್ನು ನಿನಗೆ ತಿಳಿಸಿದ್ದೇನೆ. ಮೋಕ್ಷವನ್ನು ಬಯಸುವ ಮನುಷ್ಯರು ತಮ್ಮ ಬುದ್ಧಿಯ ಮೂಲಕ ಈ ಸ್ಥೂಲತಮರೂಪ

ದಲ್ಲೇ ಮನಸ್ಸನ್ನು ಸ್ಥಿರವಾಗಿ ಇರಿಸುತ್ತಾರೆ. ಏಕೆಂದರೆ : ಇದನ್ನು ಬಿಟ್ಟು ಬೇರೆ ಯಾವ ವಸ್ತುವೂ ಇಲ್ಲವೇ ಇಲ್ಲ.

ಕನಸುಕಾಣುವವನಿಗೆ ಆ ಅವಸ್ಥೆಯಲ್ಲಿ ವಿವಿಧಪದಾರ್ಥಗಳ ರೂಪದಲ್ಲಿ ಕಾಣಿಸುವವನು ಆತನೊಬ್ಬನೇ ಅಲ್ಲವೇ? ಹಾಗೆಯೇ ಎಲ್ಲರ ಬುದ್ಧಿವೃತ್ತಿಗಳ ಮೂಲಕ ಎಲ್ಲ ಅನುಭವಗಳನ್ನೂ ಪಡೆಯುವವನು ಸರ್ವಾಂತರ್ಯಾಮಿಯಾಗಿರುವ ಪರಮಾತ್ಮನೊಬ್ಬನೇ–ಎಂದು ತಿಳಿಯಬೇಕು. ಆ ಸತ್ಯಸ್ವರೂಪನೂ ಆನಂದನಿಧಿಯೂ ಆದ ಪರಮಾತ್ಮನನ್ನು ಮಾತ್ರವೇ ಭಜಿಸಬೇಕು. ಬೇರಾವ ವಸ್ತುವಿನಲ್ಲೂ ಆಸಕ್ತಿ ಇಡಬಾರದು. ಏಕೆಂದರೆ : ಬೇರೆ ವಸ್ತುಗಳಲ್ಲಿ ಆಸಕ್ತಿಯನ್ನಿಟ್ಟರೆ ಅದರಿಂದ ಜೀವನದ ಅಧಃಪತನವೇ ಆಗುವುದು. (ಶ್ಲೋಕ 26-39)

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತದಲ್ಲಿ ಪ್ರಥಮಸ್ಕಂಧದ ೧ನೆಯ ಅಧ್ಯಾಯವು ಮುಗಿಯಿತು.

ದ್ವಿತೀಯಸ್ಕಂಧ ೨ನೆಯ ಅಧ್ಯಾಯ

## ಶ್ರೀಭಗವಂತನ ಸ್ಥೂಲ ಮತ್ತು ಸೂಕ್ಷ್ಮರೂಪಗಳಲ್ಲಿ ಧಾರಣಾಯೋಗ ಮತ್ತು ಮುಕ್ತಿಗಳು

ಶ್ರೀಶುಕಮುನಿಗಳು ತಮ್ಮ ಹೇಳಿಕೆಯನ್ನು ಮುಂದುವರಿಸುತ್ತಾರೆ :

**ಏವಂ ಪುರಾ ಧಾರಣಯಾಽತ್ಮಯೋನಿ-**
**ರ್ನಷ್ಟಾಂ ಸ್ಮೃತಿಂ ಪ್ರತ್ಯವರುಧ್ಯ ತುಷ್ಟಾತ್ ।**
**ತಥಾ ಸಸರ್ಜೇದಮಮೋಘದೃಷ್ಟಿ-**
**ರ್ಯಥಾಪ್ಯಯಾತ್ಪ್ರಾಗ್ವ್ಯವಸಾಯಬುದ್ಧಿಃ ॥೧॥**

“ಮಹಾರಾಜ! ಬ್ರಹ್ಮದೇವರು ಸೃಷ್ಟಿಯ ಪ್ರಾರಂಭದಲ್ಲಿ ಇದೇ ಧಾರಣಾಯೋಗದ ಮೂಲಕವೇ ಶ್ರೀಭಗವಂತನನ್ನು ಪ್ರಸನ್ನಗೊಳಿಸಿ, ಹಿಂದೆ ಪ್ರಳಯಕಾಲದಲ್ಲಿ ವಿಲುಪ್ತವಾಗಿಬಿಟ್ಟಿದ್ದ ಸೃಷ್ಟಿವಿಷಯಕವಾದ ನೆನಪನ್ನು ಆತನ ಅನುಗ್ರಹದಿಂದ ಪಡೆದರು. ಅದರಿಂದಲೇ ಅಮೋಘವೂ ನಿಶ್ಚಯಾತ್ಮಕವೂ ಆದ ಬುದ್ಧಿಯನ್ನು ಪಡೆದು ಈ ಜಗತ್ತನ್ನು ಅದು ಪ್ರಳಯಕ್ಕೆ

ಮೊದಲು ಹೇಗಿತ್ತೋ ಹಾಗೆಯೇ ಸೃಷ್ಟಿಮಾಡಿದರು. ಬಗೆ-ಬಗೆಯ ಫಲಗಳ ಪ್ರಲೋಭನಕ್ಕೆ ಒಳಗಾಗದೇ ವಿರಕ್ತನಾಗಿ ಶ್ರೀಭಗವಂತನಲ್ಲಿ ಧಾರಣಾಯೋಗ ವನ್ನು ಅವಲಂಬಿಸಬೇಕು. ವೇದಗಳು ಅತ್ಯಂತ ಆಕರ್ಷಕವಾದ ಶೈಲಿಯಲ್ಲಿ ಕರ್ಮಫಲಗಳನ್ನು ಉಪದೇಶಿಸುತ್ತವೆ. ಸಾಮಾನ್ಯಜನರು ಅವುಗಳಿಂದ ಮರುಳಾಗುತ್ತಾರೆ. ಅವರ ಬುದ್ಧಿಯು ಸ್ವರ್ಗವೇ ಮುಂತಾದ ನಿರರ್ಥಕ ನಾಮಧೇಯಗಳಿಗೆ ಸಿಲುಕಿ ಸುಖವಾಸನೆಯ ಕನಸು ಕಾಣುತ್ತಾ ಅಲೆದಾಡು ತ್ತದೆ. ಆದರೆ ಆ ಮಾಯಾಮಯಲೋಕಗಳಲ್ಲಿ ನಿಜವಾದ ಸುಖ ದೊರಕು ವುದಿಲ್ಲ. ಆದ್ದರಿಂದ ವಿವೇಕಿಯು ಈ ಬಗೆ-ಬಗೆಯ ನಾಮಧೇಯಗಳುಳ್ಳ ಪದಾರ್ಥಗಳೊಡನೆ ಪ್ರಯೋಜನಕ್ಕೆ ಎಷ್ಟು ಬೇಕೋ ಅಷ್ಟು ಮಾತ್ರ ವ್ಯವ ಹಾರವನ್ನು ಇಟ್ಟುಕೊಳ್ಳಬೇಕು. ಅವುಗಳು ನಿಸ್ಸಾರವೇ ಆಗಿವೆ–ಎಂಬ ನಿಶ್ಚಯವು ಅವನ ಬುದ್ಧಿಯಲ್ಲಿ ತುಂಬಿಕೊಳ್ಳಬೇಕು. ಕ್ಷಣಕಾಲವೂ ಎಚ್ಚರ ತಪ್ಪಬಾರದು. ಸಾಂಸಾರಿಕವಾಗಿ ಆವಶ್ಯಕವಾಗುವ ಸುಖಸಾಧನೆಗಳು ನಮ್ಮ ಪ್ರಯತ್ನವೇ ಇಲ್ಲದೇ ಪ್ರಾರಬ್ಧಕರ್ಮದ ಫಲವಾಗಿಯೇ ದೊರೆಯುವ ಹಾಗಿ ದ್ದರೆ ಅವುಗಳನ್ನು ಸಂಪಾದನೆಮಾಡಲು ಶ್ರಮಪಡುವುದು ವ್ಯರ್ಥವೆಂದು ಭಾವಿಸಬೇಕು. ಅವುಗಳಿಗಾಗಿ ಯಾವ ಪ್ರಯತ್ನವನ್ನೂ ಮಾಡಬಾರದು.

**ಸತ್ಯಾಂ ಕ್ಷಿತೌ ಕಿಂ ಕಶಿಪೋಃ ಪ್ರಯಾಸೈ-**
**ರ್ಬಾಹೌ ಸ್ವಸಿದ್ಧೇ ಹ್ಯುಪಬರ್ಹಣೈಃ ಕಿಮ್ ।**
**ಸತ್ಯಞ್ಜಲೌ ಕಿಂ ಪುರುಧಾನ್ನಪಾತ್ರ್ಯಾ**
**ದಿಗ್ವಲ್ಕಲಾದೌ ಸತಿ ಕಿಂ ದುಕೂಲೈಃ ॥೪॥**

**ಚೀರಾಣಿ ಕಿಂ ಪಥಿ ನ ಸನ್ತಿ ದಿಶನ್ತಿ ಭಿಕ್ಷಾಂ**
**ನೈವಾಙ್ಘ್ರಿಪಾಃ ಪರಭೃತಃ ಸರಿತೋಽಪ್ಯಶುಷ್ಯನ್ ।**
**ರುದ್ಧಾ ಗುಹಾಃ ಕಿಮಜಿತೋಽವತಿ ನೋಪಸನ್ನಾ-**
**ನ್ಕಸ್ಮಾದ್ಭಜನ್ತಿ ಕವಯೋ ಧನದುರ್ಮದಾನ್ಧಾನ್ ॥೫॥**

ಭೂಮಿಯ ಮೇಲೆ ಮಲಗುವುದರಿಂದಲೇ ಸುಖನಿದ್ರೆ, ಆಯಾಸಪರಿ ಹಾರ ಆಗುವ ಪಕ್ಷದಲ್ಲಿ ಮಲಗುವ ಮಂಚಕ್ಕಾಗಿ ಏಕೆ ಪ್ರಯತ್ನಮಾಡ ಬೇಕು? ದೇವರು ಅನುಗ್ರಹದಿಂದ ಕೊಟ್ಟಿರುವ ತೋಳುಗಳೇ ಇರುವಾಗ

ತಲೆದಿಂಬುಗಳು ಏಕೆ ಬೇಕು? ಬೊಗಸೆಯಿಂದಲೇ ಆಹಾರವನ್ನು ಸ್ವೀಕರಿಸಿ ತಿನ್ನಲು ಸಾಧ್ಯವಿರುವಾಗ ಅನ್ನಪಾತ್ರೆಗಳ ಆವಶ್ಯಕತೆಯಾದರೂ ಏನು? ನಾರುಮಡಿಗಳನ್ನೇ ಉಟ್ಟುಕೊಂಡು ಅಥವಾ ದಿಗಂಬರನಾಗಿಯೇ ಇದ್ದು ಕೊಂಡು ಜೀವನವನ್ನು ನಿರ್ವಹಿಸುವುದು ಸಾಧ್ಯವಾಗುವ ಪಕ್ಷದಲ್ಲಿ ಪಟ್ಟೆ ವಸ್ತ್ರಗಳು ಏಕೆ ಬೇಕು? ಉಟ್ಟುಕೊಳ್ಳುವುದಕ್ಕೆ ಮಾರ್ಗದಲ್ಲಿ ಚಿಂದಿಬಟ್ಟೆಗಳು ದೊರೆಯುವುದಿಲ್ಲವೇ? ಹಸಿವಾದಾಗ ಪರೋಪಕಾರಕ್ಕೋಸ್ಕರವೇ ಬದುಕಿ-ಬಾಳುತ್ತಿರುವ ವೃಕ್ಷಗಳು ಹೂವು-ಹಣ್ಣುಗಳ ಭಿಕ್ಷೆ ನೀಡುವುದಿಲ್ಲವೇ? ಬಾಯಾರಿಕೆಯಾದಾಗ ನದಿಗಳು ಒಣಗಿಹೋದಾವೇ? ವಸತಿಗೆ ಜಾಗ ಬೇಕಾದಾಗ ಗುಹೆಗಳ ಬಾಗಿಲುಗಳು ಮುಚ್ಚಿಕೊಳ್ಳುತ್ತವೆಯೇ? ಎಲ್ಲಕ್ಕೂ ಮೇಲೆ ಶ್ರೀಭಗವಂತನೇ ಶರಣುಬಂದವರನ್ನು ರಕ್ಷಿಸುವುದಿಲ್ಲವೇ? ಹೀಗಿದ್ದರೂ ವಿವೇಕಿಗಳು ಅಹಂಕಾರದ ಅಮಲಿನಲ್ಲಿರುವ ಹಣಗಾರರನ್ನು ಏಕೆ ಸೇವಿಸಬೇಕು?

ಹೀಗೆ ವೈರಾಗ್ಯ ಬಂದ ಬಳಿಕ, ನಮ್ಮ ಹೃದಯದಲ್ಲೇ ಸರ್ವದಾ ಸ್ವತಸ್ಸಿದ್ಧನಾಗಿ, ನಮ್ಮ ಆತ್ಮಸ್ವರೂಪನೇ ಆಗಿ, ಪರಮಪ್ರಿಯತಮನಾಗಿರುವ ಪರಮಸತ್ಯಸ್ವರೂಪನಾದ ಪರಮಾತ್ಮನಾದ ಅನಂತನು ಬೆಳಗುತ್ತಿರುವುದನ್ನು ನಿಶ್ಚಯಿಸಿಕೊಂಡು ಪರಮಪ್ರೇಮದಿಂದಲೂ, ಆನಂದದಿಂದಲೂ ಆತನನ್ನೇ ಭಜಿಸಬೇಕು. ಏಕೆಂದರೆ : ಆತನ ಭಜನೆಯಿಂದಲೇ ಸಂಸಾರಕಾರಣವಾದ ಅಜ್ಞಾನವು ತೊಲಗುವುದು. ಸತ್ಯವು ಹೀಗಿರುವಾಗ ಯಾವ ಮನುಷ್ಯನು ತಾನೇ–ಈ ಸಂಸಾರವೆಂಬ ವೈತರಣೀನದಿಯಲ್ಲಿ ಬಿದ್ದು ಜನರು ತಮ್ಮ ಕರ್ಮಗಳ ಫಲವಾದ ದುಃಖವನ್ನನುಭವಿಸುತ್ತಿರುವುದನ್ನು ನೋಡಿಯೂ ಕೂಡ–ಶ್ರೀಭಗವಂತನ ಮಂಗಳಮಯವಾದ ಧ್ಯಾನವನ್ನು ಮಾಡದೇ ಈ ಅಸತ್ತಾದ ವಿಷಯಭೋಗಗಳಲ್ಲಿಯೇ ಮನಸ್ಸನ್ನು ಅಲೆದಾಡಲು ಬಿಡುವನು? ಪಶುಗಳು ಮಾತ್ರವೇ ಹಾಗೆ ಮಾಡುವುವು.

ರಾಜೇಂದ್ರ! ಸ್ಥೂಲವಾದ ಭಗವದ್ರೂಪದಲ್ಲಿ ಮಾಡುವ ಯೋಗ ಧಾರಣೆಯನ್ನು ಹಿಂದೆ ಹೇಳಿದೆನು. ಕೆಲವು ಸಾಧಕರು ತಮ್ಮ ಶರೀರದ ಒಳಗಡೆ ಹೃದಯಾಕಾಶದಲ್ಲಿ ಬೆಳಗುತ್ತಿರುವ ಭಗವಂತನ ಚೋಟುದ್ದುದ

ರೂಪದಲ್ಲಿ ಯೋಗಧಾರಣೆಯನ್ನು ಮಾಡುತ್ತಾರೆ. ಆ ಭಗವಂತನಿಗೆ ನಾಲ್ಕು ಭುಜಗಳು. ಅವುಗಳಲ್ಲಿ ಆತನು ಶಂಖ, ಚಕ್ರ, ಗದೆ ಮತ್ತು ಪದ್ಮಗಳನ್ನು ಧರಿಸಿದ್ದಾನೆ–ಎಂದು ಧಾರಣೆಯಿಂದ ಧ್ಯಾನಿಸುತ್ತಾರೆ. ಆತನಿಗೆ ಪ್ರಸನ್ನವಾದ ಮುಖಕಮಲ ; ಕಮಲದಂತೆ ವಿಶಾಲವೂ–ಕೋಮಲವೂ ಆದ ಕಣ್ಣು ಗಳು; ಕದಂಬಪುಷ್ಪದ ಕೇಸರದಂತೆ ಕಂಗೊಳಿಸುವ ಪೀತಾಂಬರದ ಉಡುಗೆ ; ತೋಳುಗಳಲ್ಲಿ ಶ್ರೇಷ್ಠವಾದ ರತ್ನಗಳಿಂದ ಘಟಿತವಾದ ಭುಜಕೀರ್ತಿಗಳು ಕಂಗೊಳಿಸುತ್ತಿವೆ. ತಲೆ ಮತ್ತು ಕಿವಿಗಳಲ್ಲಿ ಅಮೂಲ್ಯರತ್ನಗಳಿಂದ ಥಳ-ಥಳಿ ಸುತ್ತಿರುವ ಕಿರೀಟ-ಕುಂಡಲಗಳು ಬೆಳಗುತ್ತಿವೆ. ಯೋಗೇಶ್ವರರು ತಮ್ಮ ಅರಳಿದ ಹೃದಯಕಮಲದ ಕರ್ಣಿಕೆಯಲ್ಲಿ ಆತನ ಚಿಗುರಿನಂತಹ ಚಂದದ ಚರಣಗಳನ್ನು ಸ್ಥಾಪಿಸಿಕೊಂಡಿರುತ್ತಾರೆ. ಆತನ ಹೃದಯದಲ್ಲಿ ಶ್ರೀವತ್ಸಚಿಹ್ನೆ ಕಂಗೊಳಿಸುತ್ತಿದೆ. ಕುತ್ತಿಗೆಯಲ್ಲಿ ಕೌಸ್ತುಭಮಣಿಯ ಶೋಭೆ. ವಕ್ಷಃಸ್ಥಳವು ಎಂದಿಗೂ ಬಾಡದಿರುವ ವನಮಾಲೆಯಿಂದ ಅಲಂಕೃತವಾಗಿದೆ. ನಡುವಿನಲ್ಲಿ ಕಟಿಸೂತ್ರ, ಕೈಬೆರಳುಗಳಲ್ಲಿ ಉಜ್ಜ್ವಲವಾದ ಉಂಗುರಗಳು. ಕಾಲುಗಳಲ್ಲಿ ಕಾಲಂದುಗೆ ಮತ್ತು ಕೈಗಳಲ್ಲಿ ಕಂಕಣ–ಇವೇ ಮುಂತಾದ ದಿವ್ಯಾಭರಣಗಳ ಸೊಗಸು. ನಯವಾದ, ನಿರ್ಮಲವಾದ, ನೀಲವರ್ಣವಾದ ಗುಂಗುರು ಗೂದಲುಗಳಿಂದ ಕೂಡಿದ ಕಮನೀಯವಾದ ಕೇಶಪಾಶಗಳು. ಮಂದಹಾಸ ದಿಂದ ಮನೋಜ್ಞವಾದ ಮುಖಕಮಲ. ಸುಂದರವಾದ ಲೀಲೆಯ ನಗೆ ನೋಟದಿಂದ ಬೆಳಗುತ್ತಾ ಭಕ್ತರ ಮೇಲೆ ಅನುಗ್ರಹದ ಮಳೆಯನ್ನು ಕರೆಯು ತ್ತಿರುವ ಹುಬ್ಬುಗಳು–ಇಂತಹ ಸೌಂದರ್ಯ-ಲಾವಣ್ಯಪೂರ್ಣವಾದ ದಿವ್ಯ ಮಂಗಳ ವಿಗ್ರಹದಲ್ಲಿ ಮನಸ್ಸನ್ನು ಧರಿಸುತ್ತಾರೆ. ಮನಸ್ಸು ಧಾರಣಾಯೋಗ ದಿಂದ ಸ್ಥಿರವಾಗುವವರೆಗೂ ಈ ಧ್ಯಾನಮೂರ್ತಿಯನ್ನು ಚಿಂತಿಸುತ್ತಿರಬೇಕು. ಹೀಗೆ ಚರಣಕಮಲದವರೆಗಿನ ಒಂದೊಂದು ಅವಯವವನ್ನೂ ಬುದ್ಧಿಯಿಂದ ಧರಿಸಬೇಕು. ಚಿತ್ತವು ಸ್ಥಿರವಾದಂತೆಲ್ಲಾ ಬುದ್ಧಿಯೂ ಸ್ಥಿರವಾಗುತ್ತಾ ಹೋಗುವುದು. ಒಂದು ಅಂಗದಲ್ಲಿ ಧ್ಯಾನವು ಸ್ಥಿರವಾದನಂತರ ಅದನ್ನು ಬಿಟ್ಟು ಮತ್ತೊಂದು ಅಂಗವನ್ನು ಧ್ಯಾನಿಸತೊಡಗಬೇಕು. ಹೀಗೆ ಪರಾತ್ಪರನೂ, ಸಾಕ್ಷಿಸ್ವರೂಪನೂ ಆದ ಜಗತ್ಪತಿಯಲ್ಲಿ ಭಕ್ತಿಯೋಗಸಮಾಧಿ ಉಂಟಾಗುವ

ವರೆಗೂ ನಿತ್ತ-ನೈಮಿತ್ತಿಕಕರ್ಮಾಚರಣೆಯನಂತರ ಏಕಾಗ್ರತೆಯಿಂದ ಮೇಲೆ ಹೇಳಿದ ಶ್ರೀಭಗವಂತನ ಸ್ಥೂಲರೂಪವನ್ನು ಧ್ಯಾನಿಸುತ್ತಿರಬೇಕು.

(ಶ್ಲೋಕ 8-14)

ಮಹಾರಾಜ! ಈ ಲೋಕವನ್ನು ಬಿಡುವ ಇಚ್ಛೆಯುಂಟಾದಾಗ ಯೋಗಿಯು ಮನಸ್ಸನ್ನು ದೇಶ-ಕಾಲಗಳಿಗೆ ತಗುಲಿಸಬಾರದು. ಸ್ಥಿರವೂ ಸುಖವೂ ಆದ ಆಸನದಲ್ಲಿ ಕುಳಿತು ಪ್ರಾಣಗಳನ್ನು ಜಯಿಸಿ ಮನಸ್ಸಿನಿಂದ ಇಂದ್ರಿಯಗಳನ್ನು ದಮನಮಾಡಬೇಕು. ಅನಂತರ ತನ್ನ ಶುದ್ಧವಾದ ಬುದ್ಧಿಯಿಂದ ಮನಸ್ಸನ್ನು ಸಂಯಮಗೊಳಿಸಿ, ಮನಸ್ಸಿನೊಡನೆ ಕೂಡಿದ ಬುದ್ಧಿಯನ್ನು ಕ್ಷೇತ್ರಜ್ಞನಲ್ಲಿಯೂ, ಆ ಕ್ಷೇತ್ರಜ್ಞನನ್ನು ಅಂತರಾತ್ಮನಲ್ಲೂ, ಆ ಅಂತರಾತ್ಮನನ್ನು ಪರಮಾತ್ಮನಲ್ಲೂ ಲಯಗೊಳಿಸಿ ಪರಮಶಾಂತಿಪರಿಪೂರ್ಣವಾದ ಸ್ಥಿತಿಯಲ್ಲಿ ನೆಲೆಗೊಳ್ಳಬೇಕು. ಇಲ್ಲಿಗೆ ಅವನು ಕೃತಕೃತ್ಯನಾಗುವನು. ಅವನಿಗೆ ಯಾವ ಕರ್ತವ್ಯಶೇಷವೂ ಇರುವುದಿಲ್ಲ. ಈ ಸ್ಥಿತಿಯಲ್ಲಿ ಸತ್ತ್ವಗುಣವೂ ಇರುವುದಿಲ್ಲ. ಅಂದ ಬಳಿಕ ರಜೋಗುಣ-ತಮೋಗುಣ ಪ್ರಸಂಗವಾದರೂ ಎಲ್ಲಿ ಬಂದೀತು? ಅಹಂಕಾರ, ಮಹತ್ತತ್ತ್ವ ಮತ್ತು ಪ್ರಕೃತಿಗಳ ಇರವೂ ಇಲ್ಲದ ಸ್ಥಿತಿ ಇದು. ದೇವತೆಗಳಿಗೆ ನಿಯಾಮಕನಾಗಿರುವ ಕಾಲನ ಬೇಳೆಯೂ ಬೇಯದಿರುವ ಆ ಸರ್ವಾತೀತಸ್ಥಿತಿಯಲ್ಲಿ ದೇವತೆಗಳಾಗಲೀ, ಅವರಿಗೆ ಅಧೀನರಾಗಿರುವ ಇತರ ಪ್ರಾಣಿಗಳಾಗಲೀ ಎಲ್ಲಿ ಬಂದಾರು? ಪರಮಾತ್ಮನಿಂದ ಭಿನ್ನವಾದ ಸಮಸ್ತವನ್ನೂ ತ್ಯಾಗಮಾಡಲು ಬಯಸುವ ಯೋಗಿಗಳು 'ನೇತಿ ನೇತಿ'–'ಇದೂ ಅಲ್ಲ! ಇದೂ ಅಲ್ಲ! ಇದು ಯಾವುದೂ ಅಲ್ಲ!'–ಎಂಬ ಭಾವನೆಯಿಂದ ಉಳಿದ ಎಲ್ಲದರಲ್ಲೂ ಆತ್ಮಬುದ್ಧಿಯನ್ನು ಬಿಟ್ಟವರಾಗಿ ಯಾವ ಪರಮಾತ್ಮಸ್ವರೂಪವನ್ನು ಹೃದಯದಿಂದ ಹೆಜ್ಜೆ-ಹೆಜ್ಜೆಯಲ್ಲೂ ಆಲಿಂಗಿಸಿಕೊಳ್ಳುತ್ತಾ ಅನನ್ಯಪ್ರೇಮದಿಂದ ಪೂರ್ಣರಾಗುವರೋ– ಅದೇ ಶ್ರೀಮಹಾವಿಷ್ಣುವಿನ ಪರಮಪದವು. (ಶ್ಲೋಕ 15-18)

ಜ್ಞಾನದೃಷ್ಟಿಯ ಬಲದಿಂದ ಚಿತ್ತದ ವಾಸನೆಯನ್ನು ಕಳೆದುಕೊಂಡ ಬ್ರಹ್ಮನಿಷ್ಠನಾದ ಯೋಗಿಯು ಈ ರೀತಿಯಲ್ಲಿ ತನ್ನ ಶರೀರವನ್ನು ತ್ಯಜಿಸಬೇಕು. ಮೊದಲು ಹಿಮ್ಮಡಿಯಿಂದ ತನ್ನ ಗುದವನ್ನು ಒತ್ತಿಕೊಂಡು ಸ್ಥಿರನಾಗಬೇಕು. ಮತ್ತು ಗಾಬರಿಯಿಲ್ಲದೇ ಪ್ರಾಣವಾಯುವನ್ನು ಷಟ್‌ಚಕ್ರ

ಭೇದನಕ್ರಮದಲ್ಲಿ ಅನಾಯಾಸವಾಗಿ ಮೇಲಕ್ಕೆ ತೆಗೆದುಕೊಂಡು ಹೋಗಬೇಕು. ಪ್ರಶಸ್ತವಾದ ಮನಸ್ಸುಳ್ಳ ಯೋಗಿಯು ನಾಭಿಚಕ್ರವಾದ ಮಣಿಪುರದಲ್ಲಿರುವ ವಾಯುವನ್ನು ಹೃದಯಚಕ್ರವಾದ ಅನಾಹತಚಕ್ರಕ್ಕೂ, ಅಲ್ಲಿಂದ ಉದಾನವಾಯುವಿನ ಮೂಲಕ ವಕ್ಷಃಸ್ಥಳಕ್ಕೆ ಮೇಲಿರುವ ವಿಶುದ್ಧಿಚಕ್ರಕ್ಕೂ ಮತ್ತು ಅನಂತರ ವಾಯುವನ್ನು ಮೆಲ್ಲ-ಮೆಲ್ಲನೆ ತಾಲುಮೂಲಕ್ಕೂ–ಅಂದರೆ ವಿಶುದ್ಧಿಚಕ್ರದ ಅಗ್ರಕ್ಕೂ-ಹತ್ತಿಸಬೇಕು. ಅನಂತರ ಎರಡು ಕಣ್ಣು ಗಳು, ಕಿವಿಗಳು, ಮೂಗುಹೊಳ್ಳೆಗಳು ಮತ್ತು ಬಾಯಿ–ಎಂಬ ಈ ಏಳು ರಂಧ್ರಗಳನ್ನು ಮುಚ್ಚಿಕೊಂಡು ಆ ತಾಲುಮೂಲದಲ್ಲಿರುವ ವಾಯುವನ್ನು ಹುಬ್ಬುಗಳ ಮಧ್ಯದಲ್ಲಿರುವ ಆಜ್ಞಾಚಕ್ರಕ್ಕೆ ಕೊಂಡೊಯ್ಯಬೇಕು. ಯಾವುದೇ ಲೋಕಕ್ಕೂ ಹೋಗುವ ಇಚ್ಛೆಯಿಲ್ಲದಿದ್ದ ಪಕ್ಷಕ್ಕೆ ಅರ್ಧಘಳಿಗೆ ಕಾಲ ಆ ವಾಯುವನ್ನು ಅಲ್ಲಿಯೇ ತಡೆದು ಸ್ಥಿರವಾದ ಲಕ್ಷ್ಯದೊಡನೆ ಅದನ್ನು ಸಹಸ್ರಾರಕ್ಕೆ ಕೊಂಡೊಯ್ದು ಪರಮಾತ್ಮನಲ್ಲಿ ನೆಲೆಗೊಳಿಸಬೇಕು. ಅನಂತರ ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಶರೀರ-ಇಂದ್ರಿಯಾದಿಗಳನ್ನು ತ್ಯಜಿಸಿ ಬಿಡಬೇಕು. (ಶ್ಲೋಕ 19-21)

ಓ ರಾಜೇಂದ್ರ! ಯೋಗಿಗೆ ಬ್ರಹ್ಮಲೋಕಕ್ಕೆ ಹೋಗುವ ಇಚ್ಛೆಯಾಗಲೀ, ಎಂಟು ಸಿದ್ಧಿಗಳನ್ನು ಪಡೆದು–ಆಕಾಶದಲ್ಲಿ ಸಂಚರಿಸುವ ಸಿದ್ಧರೊಡನೆ ವಿಹರಿಸುವ ಅಥವಾ ತ್ರಿಗುಣಮಯವಾದ ಬ್ರಹ್ಮಾಂಡದ ಯಾವುದೇ ಜಾಗದಲ್ಲಿ ಸಂಚರಿಸುವ ಇಚ್ಛೆಯಾಗಲೀ ಇದ್ದ ಪಕ್ಷದಲ್ಲಿ–ಆತನು ಮನಸ್ಸು ಮತ್ತು ಇಂದ್ರಿಯಗಳನ್ನು ಜೊತೆಯಲ್ಲಿಯೇ ತೆಗೆದುಕೊಂಡು ಶರೀರದಿಂದ ಹೊರಹೊರಡಬೇಕು. ಯೋಗಿಗಳ ಶರೀರವು ವಾಯುವಿನಂತೆ ಸೂಕ್ಷ್ಮವಾಗಿರುತ್ತದೆ. ಉಪಾಸನೆ, ತಪಸ್ಸು, ಯೋಗ ಮತ್ತು ಸಮಾಧಿಗಳನ್ನೂ ಸೇವನೆ ಮಾಡಿದ ಅವರಿಗೆ ಮೂರು ಲೋಕಗಳ ಹೊರಗೂ, ಒಳಗೂ, ಎಲ್ಲೆಡೆಗಳಲ್ಲಿಯೂ ಯಥೇಷ್ಟವಾಗಿ ಸಂಚಾರಮಾಡುವ ಅಧಿಕಾರ ಇರುತ್ತದೆ. ಕೇವಲ ಕರ್ಮಗಳಿಂದ ಯಥೇಷ್ಟವಾಗಿ ಸಂಚರಿಸುವ ಇಂತಹ ಶಕ್ತಿಯು ಬರುವುದಿಲ್ಲ. ಯೋಗಿಯು ಜ್ಯೋತಿರ್ಮಯಮಾರ್ಗವಾದ ಸುಷುಮ್ನೆಯ ಮೂಲಕ ಬ್ರಹ್ಮಲೋಕಕ್ಕೆ ಹೊರಡುವಾಗ ಆತನು ಮೊದಲು ಆಕಾಶಮಾರ್ಗದಿಂದ ಅಗ್ನಿಲೋಕಕ್ಕೆ ಹೋಗುತ್ತಾನೆ. ಆಗ ಅವನಲ್ಲಿರಬಹುದಾದ ದೋಷಗಳ ಉಳಿ

ಕೆಯೂ ನಾಶಹೊಂದುತ್ತದೆ. ಅನಂತರ ಅವನು ಅಲ್ಲಿಂದ ಮೇಲಕ್ಕೆ ಮಹಾ ವಿಷ್ಣುವಿನ ಶಿಂಶುಮಾರವೆಂಬ ಜ್ಯೋತಿರ್ಮಯವಾದ ಚಕ್ರವನ್ನು ತಲುಪುತ್ತಾನೆ. ಭಗವಂತನ ಆ ಶಿಂಶುಮಾರಚಕ್ರವು ವಿಶ್ವಬ್ರಹ್ಮಾಂಡಕ್ಕೆ ಸುತ್ತುವ ಕೇಂದ್ರವಾಗಿ ನಾಭಿಯಂತಿದೆ. ಮಹಾಯೋಗಿಯು ಅದನ್ನು ದಾಟಿ ಅತ್ಯಂತ ಸೂಕ್ಷ್ಮವೂ, ನಿರ್ಮಲವೂ ಆದ ಶರೀರದಿಂದ ಒಂಟಿಯಾಗಿಯೇ ಹೊರಟು ಮಹರ್ಲೋಕಕ್ಕೆ ಹೋಗುತ್ತಾನೆ. ಆ ಮಹರ್ಲೋಕವು ಬ್ರಹ್ಮಜ್ಞಾನಿಗಳಿಂದಲೂ ನಮಸ್ಕರಿಸಲ್ಪಡುವ ಸ್ಥಾನ ಮತ್ತು ಒಂದು ಕಲ್ಪಕಾಲದವರೆಗೆ ಬದುಕುವ ದೇವತೆಗಳು ವಿಹರಿಸುವ ಜಾಗ. ಅನಂತರ ಆ ಯೋಗಿಯು ಪ್ರಳಯಸಮಯದಲ್ಲಿ-ಕೆಳಗಿನ ಲೋಕಗಳೆಲ್ಲವೂ ಆದಿಶೇಷನ ಮುಖದಿಂದ ಹೊರಡುವ ಬೆಂಕಿಯಿಂದ ಸುಟ್ಟುಹೋಗುವುದನ್ನು ನೋಡಿ–ಬ್ರಹ್ಮಲೋಕಕ್ಕೆ ಹೊರಟುಹೋಗುತ್ತಾನೆ. ಆ ಬ್ರಹ್ಮಲೋಕವು ದೊಡ್ಡ-ದೊಡ್ಡ ಸಿದ್ಧೇಶ್ವರರು ವಿಮಾನದಲ್ಲಿ ವಿಹರಿಸುವ ದಿವ್ಯಸ್ಥಾನ. ಈ ಲೋಕದ ಆಯುಸ್ಸು ಬ್ರಹ್ಮದೇವರ ಆಯುಸ್ಸಿನಷ್ಟೇ ಕಾಲಪರ್ಯಂತವಾಗಿ ಅಂದರೆ ಎರಡು ಪರಾರ್ಧಗಳ ಕಾಲ ಇರುತ್ತದೆ. ಅಲ್ಲಿ ಶೋಕ-ಮೋಹಗಳಿಲ್ಲ. ಮುಪ್ಪಾಗಲೀ, ಮರಣವಾಗಲೀ ಇರುವುದಿಲ್ಲ. ಯಾರಿಂದಲೂ ಯಾವುದೇ ಬಗೆಯ ಉದ್ವೇಗವಾಗಲೀ, ಭಯವಾಗಲೀ ಇರಲು ಸಾಧ್ಯವೇ ಇಲ್ಲ. ಅಲ್ಲಿ ಮನಸ್ಸಿಗೆ ದುಃಖವನ್ನುಂಟುಮಾಡುವುದು ಒಂದೇ ವಿಷಯ. ಅದೇನೆಂದರೆ ; ಪರಮಪದಕ್ಕೆ ಹೋಗದೇ ಇರುವ ಜನರು ಅನುಭವಿಸುವ ಹುಟ್ಟು-ಸಾವುಗಳ ಅತಿ ಘೋರವಾದ ಸಂಕಟವನ್ನು ಕಂಡು ದಯೆಯಿಂದ ಅಲ್ಲಿಯ ಜನರ ಮನಸ್ಸಿಗೆ ನೋವಾಗುವುದು. ಸತ್ಯಲೋಕವನ್ನು ತಲುಪಿದನಂತರ ಆ ಯೋಗಿಯು ನಿರ್ಭಯನಾಗಿ ತನ್ನ ಸೂಕ್ಷ್ಮಶರೀರವನ್ನು ಪೃಥ್ವೀತತ್ತ್ವದಲ್ಲಿ ಸೇರಿಸಿಬಿಟ್ಟು ಆತುರವಿಲ್ಲದೇ, ಸಡಗರವಿಲ್ಲದೇ ಏಳು ಆವರಣಗಳನ್ನೂ ಭೇದಿಸುತ್ತಾನೆ. ಪೃಥ್ವೀರೂಪದಿಂದ ಜಲವನ್ನೂ ಮತ್ತು ಜಲರೂಪದಿಂದ ತೇಜೋರೂಪವಾದ ಆವರಣಗಳನ್ನೂ ತಲುಪಿ ಆತನು ಆ ಜ್ಯೋತೀರೂಪದಿಂದ ವಾಯುರೂಪವಾದ ಆವರಣಕ್ಕೆ ಬರುವನು ಮತ್ತು ಅಲ್ಲಿಂದ ಸಕಾಲದಲ್ಲಿ ಬ್ರಹ್ಮನ ಅನಂತತ್ತ್ವದ ಅರಿವನ್ನುಂಟುಮಾಡುವ ಆಕಾಶರೂಪದ ಆವರಣವನ್ನು ಹೊಂದುತ್ತಾನೆ. ಈ ರೀತಿಯಲ್ಲಿ ಸ್ಥೂಲವಾದ ಆವರಣಗಳನ್ನು

ದಾಟಿಹೋಗುವ ಸಮಯದಲ್ಲಿ ಆತನ ಇಂದ್ರಿಯಗಳೂ ಕೂಡ ತಮ್ಮ-ತಮ್ಮ ಸೂಕ್ಷ್ಮವಾದ ಅಧಿಕರಣಗಳಲ್ಲಿ ಲಯಹೊಂದುತ್ತಾ ಹೋಗುತ್ತವೆ. ಘ್ರಾಣೇಂದ್ರಿಯವು ಗಂಧತನ್ಮಾತ್ರೆಯಲ್ಲಿಯೂ, ರಸನೇಂದ್ರಿಯವು ರಸದ ತನ್ಮಾತ್ರೆಯಲ್ಲಿಯೂ, ನೇತ್ರವು ರೂಪತನ್ಮಾತ್ರೆಯಲ್ಲಿಯೂ, ತ್ವಗಿಂದ್ರಿಯವು ಸ್ಪರ್ಶತನ್ಮಾತ್ರೆಯಲ್ಲಿಯೂ, ಶ್ರವಣೇಂದ್ರಿಯವು ಶಬ್ದತನ್ಮಾತ್ರೆಯಲ್ಲಿಯೂ ಮತ್ತು ಕರ್ಮೇಂದ್ರಿಯಗಳು ತಮ್ಮ-ತಮ್ಮ ಕ್ರಿಯಾಶಕ್ತಿಗಳಲ್ಲಿಯೂ ಸೇರಿ ಕೊಂಡು ತಮ್ಮ-ತಮ್ಮ ಸೂಕ್ಷ್ಮಸ್ವರೂಪವನ್ನು ಹೊಂದಿಬಿಡುತ್ತವೆ. ಈ ರೀತಿ ಯೋಗಿಯು ಪಂಚಭೂತಗಳ ಸ್ಥೂಲ, ಸೂಕ್ಷ್ಮ ಆವರಣಗಳನ್ನು ದಾಟಿ ಅಹಂಕಾರತತ್ತ್ವದಲ್ಲಿ ಪ್ರವೇಶಮಾಡುತ್ತಾನೆ. ಅಲ್ಲಿ* ಸೂಕ್ಷ್ಮಭೂತಗಳನ್ನು ತಾಮಸ ಅಹಂಕಾರದಲ್ಲಿಯೂ, ಇಂದ್ರಿಯಗಳನ್ನು ರಾಜಸ ಅಹಂಕಾರ ದಲ್ಲಿಯೂ, ಮನಸ್ಸು ಮತ್ತು ಇಂದ್ರಿಯಾದಿ ದೇವತೆಗಳನ್ನು ಸಾತ್ತ್ವಿಕ ಅಹಂಕಾರದಲ್ಲಿಯೂ ಲಯಗೊಳಿಸುತ್ತಾನೆ.

ನಂತರ ಅಹಂಕಾರತತ್ತ್ವದೊಡನೆ ಲಯರೂಪವಾದ ಗತಿಯ ಮೂಲಕ ಮಹತ್ತತ್ತ್ವದಲ್ಲಿ ಪ್ರವೇಶಮಾಡಿ ಕೊನೆಗೆ ಸಮಸ್ತಗುಣಗಳಿಗೂ ಲಯಸ್ಥಾನವಾದ ಪ್ರಕೃತಿರೂಪವಾದ ಆವರಣದಲ್ಲಿ ಹೋಗಿ ಸೇರಿಕೊಳ್ಳು ತ್ತಾನೆ. ಮಹಾರಾಜ! ಮಹಾಪ್ರಳಯದ ಸಮಯದಲ್ಲಿ ಪ್ರಕೃತಿರೂಪವಾದ ಆವರಣವು ಲಯಹೊಂದಿದಾಗ ಆ ಯೋಗಿಯು ತಾನೂ ಆನಂದಸ್ವರೂಪ ನಾಗಿ, ಆವರಣರಹಿತನಾಗಿ ಪರಮಾನಂದಸ್ವರೂಪನೂ, ಪ್ರಶಾಂತನೂ ಆಗಿರುವ ಪರಮಾತ್ಮನನ್ನು ಹೊಂದಿಬಿಡುತ್ತಾನೆ. ಆ ಭಗವನ್ಮಯವಾದ ಗತಿಯನ್ನು ಪಡೆದವನು ಈ ಸಂಸಾರಕ್ಕೆ ಹಿಂದಿರುಗಬೇಕಾಗಿ ಬರುವುದಿಲ್ಲ. ರಾಜೇಂದ್ರ! ನಿನ್ನ ಪ್ರಶ್ನೆಗೆ ಉತ್ತರವಾಗಿ ನಾನು ವೇದಗಳು ಹೇಳುವ ಸನಾತನವಾದ ಎರಡು ಮಾರ್ಗಗಳನ್ನೂ ವರ್ಣಿಸಿದ್ದೇನೆ. ಇವುಗಳಲ್ಲಿ

---

* ಭೂತಸೂಕ್ಷ್ಮಗಳು ಸೃಷ್ಟಿಯಾಗುವುದು ತಾಮಸ ಅಹಂಕಾರದಿಂದ. ಇಂದ್ರಿಯ ಗಳು ಸೃಷ್ಟಿಯಾಗುವುದು ರಾಜಸ ಅಹಂಕಾರದಿಂದ. ಮನಸ್ಸು ಮತ್ತು ಇಂದ್ರಿಯಾದಿ ದೇವತೆಗಳು ಸೃಷ್ಟಿಯಾಗುವುದು ಸಾತ್ತ್ವಿಕ ಅಹಂಕಾರದಿಂದ. ಆಯಾ ಕಾರ್ಯತತ್ತ್ವಗಳು ಆಯಾ ಕಾರಣತತ್ತ್ವಗಳಲ್ಲಿಯೇ ಲಯಗೊಳ್ಳುತ್ತವೆ. (ಶ್ಲೋಕ ೩೦)

ಮೊದಲನೆಯದು ನೇರವಾದ ಮುಕ್ತಿಮಾರ್ಗ ಮತ್ತು ಎರಡನೆಯದು ಕ್ರಮಮುಕ್ತಿಯ ಮಾರ್ಗ. ಹಿಂದೆ ಬ್ರಹ್ಮದೇವರು ತನ್ನನ್ನು ಆರಾಧಿಸಿ ಪ್ರಶ್ನೆಮಾಡಿದಾಗ ಭಗವಂತನಾದ ವಾಸುದೇವನು ಆತನಿಗೆ ಉತ್ತರವನ್ನಾಗಿ ಇದನ್ನೇ ಹೇಳಿದ್ದನು. (ಶ್ಲೋಕ 22-32)

ಸಂಸಾರಚಕ್ರಕ್ಕೆ ಸಿಲುಕಿದ ಮನುಷ್ಯನಿಗೆ ಭಗವಂತನಾದ ವಾಸುದೇವನಲ್ಲಿ ಅನನ್ಯವಾದ ಭಕ್ತಿಯೋಗವನ್ನು ಯಾವುದು ಉಂಟುಮಾಡುತ್ತದೆಯೋ–ಅದು ತಾನೇ ಶ್ರೇಷ್ಠತಮವಾದ ಶ್ರೇಯಸ್ಸಿನ ಮಾರ್ಗ! ಅದನ್ನು ಬಿಟ್ಟು ಬೇರಾವುದೂ ಶ್ರೇಯಸ್ಸಿನ ದಾರಿಯಾಗುವುದಿಲ್ಲ.

ಪೂಜ್ಯರಾದ ಬ್ರಹ್ಮದೇವರು ಏಕಾಗ್ರಚಿತ್ತದಿಂದ ಎಲ್ಲ ವೇದಗಳನ್ನೂ ಮೂರು ಬಾರಿ ಪರಿಶೀಲನೆಮಾಡಿ ಬುದ್ಧಿಯಿಂದ ಇದನ್ನೇ ನಿಶ್ಚಯಮಾಡಿದರು. ಯಾವುದರಿಂದ ಶ್ರೀಕೃಷ್ಣಪರಮಾತ್ಮನ ವಿಷಯದಲ್ಲಿ ಅನನ್ಯವಾದ ಪ್ರೇಮ ಉಂಟಾಗುತ್ತದೆಯೋ–ಅದೇ ಸರ್ವೋತ್ತಮವಾದ ಧರ್ಮವು. ಸಮಸ್ತಭೂತಗಳಲ್ಲಿಯೂ–ಅವುಗಳಿಗೆಲ್ಲಾ ಆತ್ಮಸ್ವರೂಪನಾಗಿ–ಶ್ರೀಕೃಷ್ಣಪರಮಾತ್ಮನೇ ಲಕ್ಷಿತನಾಗುತ್ತಾನೆ. ಏಕೆಂದರೆ : ಇವೆಲ್ಲಕ್ಕೂ ಸಾಕ್ಷಿಯಾಗಿರುವ ಏಕಮಾತ್ರ ದ್ರಷ್ಟೃ ಆತನೇ. ದೃಶ್ಯಪದಾರ್ಥಗಳಾದ ಬುದ್ಧಿ ಮುಂತಾದುವುಗಳು ತರ್ಕದಿಂದ ಆತನಲ್ಲಿಗೆ ಒಯ್ಯುವ ಲಕ್ಷಣಗಳೇ ಆಗಿವೆ.

**ತಸ್ಮಾತ್ಸರ್ವಾತ್ಮನಾ ರಾಜನ್ಹರಿಃ ಸರ್ವತ್ರ ಸರ್ವದಾ ।**
**ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯೋ ಭಗವಾನ್ನೃಣಾಮ್ ॥೩೬॥**

ಆದ್ದರಿಂದ–ಮನುಷ್ಯರು ಎಲ್ಲ ಸಮಯಗಳಲ್ಲಿಯೂ, ಎಲ್ಲ ಸ್ಥಿತಿಗಳಲ್ಲಿಯೂ, ಎಲ್ಲೆಡೆಗಳಲ್ಲಿಯೂ, ಎಲ್ಲ ಶಕ್ತಿಗಳಿಂದಲೂ, ಶ್ರವಣಮಾಡಬೇಕಾಗಿರುವುದು, ಕೀರ್ತನೆ ಮಾಡಬೇಕಾಗಿರುವುದು ಮತ್ತು ಸ್ಮರಣೆಮಾಡಬೇಕಾಗಿರುವುದು ಆ ಭಗವಂತನಾದ ಶ್ರೀಹರಿಯನ್ನು ಕುರಿತಾಗಿಯೇ–ಎಂಬುದು ಸಿದ್ಧಾಂತವಪ್ಪಾ, ಮಹಾರಾಜ!

ಯಾವ ಸತ್ಪುರುಷರು ಆತ್ಮಸ್ವರೂಪನಾಗಿರುವ ಭಗವಂತನ ಕಥಾಮೃತವನ್ನು ತಮ್ಮ ಕಿವಿಗಳಲ್ಲಿ ತುಂಬಿಕೊಂಡು ಪಾನಮಾಡುತ್ತಿರುತ್ತಾರೋ–ಅವರು ವಿಷಯಗಳಿಂದ ಕಲುಷಿತವಾಗಿರುವ ಹೃದಯವುಳ್ಳವರನ್ನು ಪವಿತ್ರ

ಗೊಳಿಸುತ್ತಾರೆ ಮತ್ತು ಭಗವಂತನಾದ ಶ್ರೀಕೃಷ್ಣನ ಚರಣಕಮಲಗಳ ಸಾನ್ನಿಧ್ಯವನ್ನೂ ಹೊಂದುತ್ತಾರೆ.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ದ್ವಿತೀಯಸ್ಕಂಧದ ೨ನೆಯ ಅಧ್ಯಾಯವು ಮುಗಿಯಿತು.

---

ದ್ವಿತೀಯಸ್ಕಂಧ ೩ನೆಯ ಅಧ್ಯಾಯ

## ಬೇರೆ-ಬೇರೆ ಕಾಮನೆಗಳಿಗೆ ತಕ್ಕಂತೆ ಬೇರೆ-ಬೇರೆ ದೇವತೆಗಳ ಉಪಾಸನೆ ಮತ್ತು ಭಗವದ್ಭಕ್ತಿಯ ಪ್ರಾಧಾನ್ಯ

ಉಪದೇಶವನ್ನು ಮುಂದುವರಿಸುತ್ತಾ ಶುಕಮುನಿಗಳು ಪರೀಕ್ಷಿದ್ರಾಜನಿಗೆ ಹೀಗೆಂದರು :

**ಏವಮೇತನ್ನಿಗದಿತಂ ಪೃಷ್ಟವಾನ್ಯದ್ಭವಾನ್ಮಮ ।**
**ನೃಣಾಂ ಯನ್ಮ್ರಿಯಮಾಣಾನಾಂ ಮನುಷ್ಯೇಷು ಮನೀಷಿಣಾಮ್ ॥**

"ಮಹಾರಾಜ! ಮರಣಸಮಯವು ಸಮೀಪಿಸಿದಾಗ ವಿವೇಕಿಗಳಾದ ಮನುಷ್ಯರು ಏನು ಮಾಡಬೇಕು? ಎಂದು ನೀನು ಪ್ರಶ್ನಿಸಿದೆ. ಅದಕ್ಕೆ ಉತ್ತರ ಹೇಳಿಯಾಯಿತು.

ಬ್ರಹ್ಮವರ್ಚಸ್ಸನ್ನು ಬಯಸುವವನು ಬೃಹಸ್ಪತಿಯನ್ನೂ, ಇಂದ್ರಿಯಗಳ ವಿಶೇಷಶಕ್ತಿಯನ್ನು ಇಚ್ಛಿಸುವವನು ಇಂದ್ರನನ್ನೂ, ಸಂತಾನದ ಅಪೇಕ್ಷೆ ಇರುವವನು ಪ್ರಜಾಪತಿಗಳನ್ನೂ ಉಪಾಸನೆಮಾಡಬೇಕು. ಸಂಪತ್ತನ್ನು ಬಯಸುವವನು ಶ್ರೀದೇವಿಯನ್ನೂ, ತೇಜಸ್ಸನ್ನು ಇಚ್ಛಿಸುವವನು ಅಗ್ನಿಯನ್ನೂ, ಧನದ ಅಪೇಕ್ಷೆಯುಳ್ಳವನು ವಸುಗಳನ್ನೂ, ವೀರ್ಯವನ್ನು ಬಯಸುವವನು ರುದ್ರನನ್ನೂ ಉಪಾಸನೆಮಾಡಬೇಕು. ಹೇರಳವಾಗಿ ಅನ್ನವನ್ನು ಪಡೆಯುವ ಇಚ್ಛೆಯುಳ್ಳವನು ಅದಿತಿದೇವಿಯನ್ನೂ, ಸ್ವರ್ಗಕಾಮನೆಯುಳ್ಳವನು ವಿಶ್ವೇದೇವತೆಗಳನ್ನೂ ಮತ್ತು ಪ್ರಜೆಗಳನ್ನು ತನಗೆ ಅನುಕೂಲರನ್ನಾಗಿ ಮಾಡಿಕೊಳ್ಳಬಯಸುವವನು ಸಾಧ್ಯದೇವರನ್ನೂ ಆರಾಧಿಸಬೇಕು. ಆಯುಸ್ಸನ್ನು ಇಚ್ಛಿಸುವವನು ಅಶ್ವಿನೀಕುಮಾರರನ್ನೂ, ಪುಷ್ಟಿಯನ್ನು

ಬಯಸುವವನು ಪೃಥಿವೀದೇವತೆಯನ್ನೂ, ಪ್ರತಿಷ್ಠೆಯನ್ನು ಬಯಸುವವನು ಲೋಕದ ತಾಯಿ-ತಂದೆಗಳಾದ ದ್ಯಾವಾ-ಪೃಥಿವಿಗಳನ್ನೂ ಆರಾಧಿಸಬೇಕು. ಸೌಂದರ್ಯದ ಇಚ್ಛೆ ಇದ್ದರೆ ಗಂಧರ್ವರನ್ನೂ, ಪತ್ನಿಯನ್ನು ಪಡೆಯುವ ಆಸೆಯಿದ್ದರೆ ಉರ್ವಶಿಯೆಂಬ ಅಪ್ಸರಸೆಯನ್ನೂ ಮತ್ತು ಎಲ್ಲರಿಗೂ ಅಧಿಪತಿ ಯಾಗಬೇಕೆಂಬ ಆಸೆಯಿದ್ದರೆ ಪರಮೇಷ್ಠಿ ಬ್ರಹ್ಮದೇವರನ್ನೂ ಉಪಾಸಿಸ ಬೇಕು. ಯಶಸ್ಸನ್ನು ಬಯಸುವವನು ಯಜ್ಞಪುರುಷನನ್ನೂ, ಕೋಶದ ಆಸೆಯುಳ್ಳವನು ವರುಣನನ್ನೂ, ವಿದ್ಯಾಕಾಮನಾದವನು ಶಂಕರನನ್ನೂ, ದಾಂಪತ್ಯಪ್ರೇಮವನ್ನು ಬಯಸುವವನು ಸಾಧ್ವೀಮಣಿಯಾದ ಉಮಾದೇವಿ ಯನ್ನೂ ಪೂಜಿಸಬೇಕು. ಧರ್ಮವನ್ನು ಸಂಪಾದಿಸುವ ಇಚ್ಛೆಯಿದ್ದರೆ ಉತ್ತಮ ಶ್ಲೋಕನಾದ ವಿಷ್ಣುವನ್ನೂ, ವಂಶಸಂತಾನಪರಂಪರೆಯನ್ನು ಬಯಸುವವನು ಪಿತೃದೇವತೆಗಳನ್ನೂ ಕುರಿತು ಯಜ್ಞಮಾಡಬೇಕು. ಪೀಡೆಗಳ ದೆಸೆಯಿಂದ ರಕ್ಷಣೆಯನ್ನು ಬಯಸುವವನು ಯಕ್ಷರನ್ನೂ, ಬಲಶಾಲಿಯಾಗಲು ಬಯಸು ವವನು ಮರುದ್ದೇವತಾಗಣಗಳನ್ನೂ ಪೂಜಿಸಬೇಕು. ರಾಜ್ಯಕಾಮನಾದವನು ಮನ್ವಂತರಗಳಿಗೆ ಒಡೆಯರಾದ ಮನುಗಳನ್ನೂ, ಅಭಿಚಾರಿಕ ಕರ್ಮಗಳಲ್ಲಿ ಸಫಲತೆಯನ್ನು ಬಯಸುವವನು ನಿರ್ಋತಿಯನ್ನೂ, ಕಾಮಭೋಗಗಳನ್ನು ಇಚ್ಛಿಸುವವನು ಚಂದ್ರನನ್ನೂ ಮತ್ತು ನಿಷ್ಕಾಮಭಾವವನ್ನು ಪಡೆಯುವ ಆಸೆಯುಳ್ಳವನು ಪರಮಪುರುಷನಾದ ಶ್ರೀಮನ್ನಾರಾಯಣನನ್ನೂ ಆರಾಧಿಸಬೇಕು. ಉದಾರವಾದ ಮನಸ್ಸುಳ್ಳ ಬುದ್ಧಿಶಾಲಿಯಾದ ಮನುಷ್ಯನು ನಿಷ್ಕಾಮನಾಗಿರಲಿ ಇಲ್ಲವೇ ಎಲ್ಲ ಕಾಮನೆಗಳಿಂದಲೂ ಕೂಡಿರಲಿ ಅಥವಾ ಮೋಕ್ಷಕಾಮನಾಗಿರಲಿ—ಆತನು ತೀವ್ರವಾದ ಭಕ್ತಿಯೋಗದಿಂದ ಆ ಭಗವಂತ ನಾದ ಪುರುಷೋತ್ತಮನನ್ನೇ ಭಜಿಸಬೇಕು. ಎಲ್ಲ ಉಪಾಸಕರಿಗೂ ಪರಮ ಶ್ರೇಯಸ್ಸು ಉಂಟಾಗುವುದು—ಭಗವದ್ಭಕ್ತರ ಸಹವಾಸ ಮತ್ತು ಭಗವಂತನಲ್ಲಿ ಇಡುವ ನಿಶ್ಚಲವಾದ ಭಕ್ತಿ—ಇವುಗಳಿಂದಲೇ. ಭಗವಂತನ ದಿವ್ಯಲೀಲಾ ಕಥೆ ಗಳನ್ನು ವರ್ಣಿಸುವ ಅಂತಹ ಸತ್ಪುರುಷರ ಸಹವಾಸದಿಂದ ದುರ್ಲಭವಾದ ದಿವ್ಯಜ್ಞಾನವು ದೊರೆಯುವುದು. ಯಾವ ಜ್ಞಾನದಿಂದ ಸಂಸಾರಸಾಗರದ ತ್ರಿಗುಣಾತ್ಮಕವಾದ ಅಲೆಗಳ ಹೊಡೆತವು ನಿಲ್ಲುವುದೋ, ಹೃದಯವು ಶುದ್ಧ ವಾಗಿ ಆನಂದಾನುಭವ ಉಂಟಾಗುವುದೋ, ಇಂದ್ರಿಯಗಳ ವಿಷಯಗಳಲ್ಲಿ

ಆಸಕ್ತಿಯು ಹೊರಟುಹೋಗುವುದೋ, ಸರ್ವಸಮ್ಮತವಾದ ಮೋಕ್ಷಕ್ಕೆ ಮಾರ್ಗವಾದ ಭಕ್ತಿಯೋಗವು ಉಂಟಾಗುವುದೋ–ಅಂತಹ ದಿವ್ಯಜ್ಞಾನವು ಲಭಿಸುವುದು. ಶ್ರೀಭಗವಂತನನ್ನು ಕುರಿತ ಅಂತಹ ರಸಮಯವಾದ ಕಥೆಗಳ ರುಚಿಹತ್ತಿದ ಬಳಿಕ ಯಾವನಿಗೆ ತಾನೇ ಅದರಲ್ಲಿ ಭಕ್ತಿ ಉಂಟಾಗುವುದಿಲ್ಲ?"
(ಶ್ಲೋಕ 2-12)

ಆ ಸಂಭಾಷಣೆಯನ್ನು ಕೇಳಿದ ಶೌನಕರು ಸೂತಪುರಾಣಿಕರಲ್ಲಿ ಹೀಗೆ ವಿಜ್ಞಾಪಿಸಿದರು:

"ಮಹಾತ್ಮನೇ! ಶುಕಮಹರ್ಷಿಗಳು ಅಪ್ಪಣೆಕೊಡಿಸಿದ ಆ ಉತ್ತರವನ್ನು ಕೇಳಿ ಭರತಕುಲತಿಲಕನಾದ ಪರೀಕ್ಷಿದ್ರಾಜನು ಜ್ಞಾನಿಶ್ರೇಷ್ಠರೂ, ವರ್ಣನಕಲಾನಿಪುಣರೂ ಆದ ವ್ಯಾಸಪುತ್ರರನ್ನು ಮತ್ತೇನು ಪ್ರಶ್ನಿಸಿದನು? ಹೇಳುವವನಾಗು. ನಮಗೆ ಅದನ್ನು ಕೇಳಬೇಕೆಂದು ತುಂಬಾ ಕುತೂಹಲ. ನೀನು ಜ್ಞಾನಿಶ್ರೇಷ್ಠನು. ಸತ್ಪುರುಷರು ಸೇರಿದ ಸಭೆಯಲ್ಲಿ ಭಗವಂತನ ಕಥಾಮೃತದ ಆಸ್ವಾದನೆಯಲ್ಲಿ ಪರ್ಯವಸಾನಹೊಂದುವ ಮಾತುಗಳು ತಾನೇ ನಿಜವಾಗಿ ನಡೆಯುವುದು? ಪಾಂಡವಕುಲನಂದನನಾದ ಆ ಮಹಾರಥಿ ಪರೀಕ್ಷಿದ್ರಾಜನಾದರೋ ಪರಮಭಾಗವತೋತ್ತಮನು. ಹುಡುಗನಾಗಿದ್ದಾಗ ಆಟದ ಸಾಮಾನುಗಳನ್ನಿಟ್ಟುಕೊಂಡು ಆಡುತ್ತಿದ್ದಾಗಲೂ ಶ್ರೀಕೃಷ್ಣನ ಸಂಬಂಧವಾದ ಆಟಗಳಲ್ಲೇ ಹೆಚ್ಚಿನ ರಸವನ್ನು ಅನುಭವಿಸುತ್ತಿದ್ದವನು. ಭಗವಂತರಾದ ವ್ಯಾಸಪುತ್ರರೂ ಸದಾ ವಾಸುದೇವಪರಾಯಣರಾಗಿದ್ದ ಭಾಗವತಶಿಖಾಮಣಿಗಳು. ಅಂತಹ ಸತ್ಪುರುಷರ ಪರಸ್ಪರಸಮಾಗಮವಾದಾಗ ಭಗವಂತನ ಮಂಗಳಮಯವಾದ ಗುಣವಿಸ್ತಾರದ ಶ್ರವಣ, ಭಾಷಣ ಮತ್ತು ಅನುಸಂಧಾನಗಳು ಅವಶ್ಯವಾಗಿ ನಡೆದಿರಬೇಕು. ಮನುಷ್ಯರ ಜೀವನದಲ್ಲಿ ಶ್ರೀಕೃಷ್ಣಪರಮಾತ್ಮನ ಕಲ್ಯಾಣಗುಣಗಳ ಗಾನ-ಶ್ರವಣಗಳಲ್ಲಿ ಕಳೆಯುವ ಕಾಲವೇ ಸಫಲವಾದ ಕಾಲವು. ಬೇರೆ ರೀತಿಯಲ್ಲಿ ಕಾಲಕಳೆಯುವವರ ಆಯುಸ್ಸು ವ್ಯರ್ಥವೇ ಸರಿ. ಆ ವ್ಯರ್ಥವಾದ ಆಯುಸ್ಸನ್ನು ಸೂರ್ಯ ದೇವನು ತಾನು ಉದಯಿಸುವಾಗ ಮತ್ತು ಅಸ್ತಮನಹೊಂದುವಾಗ ಸುಮ್ಮನೇ ಸೆಳೆದುಕೊಳ್ಳುತ್ತಾ ಹೋಗುತ್ತಾನೆಂದು ತಿಳಿಯಬೇಕು.

ವೃಕ್ಷಗಳು ಜೀವಿಸುತ್ತಿಲ್ಲವೇ? ಕಮ್ಮಾರನ ಚರ್ಮದ ತಿದಿಯು ಉಸಿರಾಡುವುದಿಲ್ಲವೇ? ಗ್ರಾಮದ ಇತರ ಸಾಕುಪ್ರಾಣಿಗಳೂ ಪಶುಗಳೂ ತಿಂದು-ಕುಡಿದು-ಮಲವಿಸರ್ಜನೆಮಾಡುವುದಿಲ್ಲವೇ? ಸಂತಾನವನ್ನು ಪಡೆ ಯುವುದಿಲ್ಲವೇ? ಶ್ರೀಕೃಷ್ಣನ ಕಥಾಮೃತವು ಯಾವಾಗಲೂ ಕಿವಿದರೆಗೆ ಬೀಳದೇ ಇರುವ ನರಪಶುವು ನಾಯಿ, ಹಂದಿ, ಒಂಟೆ ಮತ್ತು ಕತ್ತೆಗಳಿಗಿಂತಲೂ ನೀಚನೆಂದು ತಿಳಿಯಬೇಕು. (ಶ್ಲೋಕ 13-19)

ಬಿಲೇ ಬತೋರುಕ್ರಮವಿಕ್ರಮಾನ್ಯೇ
ನ ಶೃಣ್ವತಃ ಕರ್ಣಪುಟೇ ನರಸ್ಯ ।
ಜಿಹ್ವಾಸತೀ ದಾರ್ದುರಿಕೇವ ಸೂತ
ನ ಚೋಪಗಾಯತ್ಯುರುಗಾಯಗಾಥಾಃ ॥೨೦॥

ಪುರಾಣಿಕನೇ! ತ್ರಿವಿಕ್ರಮನ ಕಥೆಗಳನ್ನು ಕೇಳದೆ ಇರುವ ಮನುಷ್ಯನ ಕಿವಿಗಳು ಕೇವಲ ಬಿಲಗಳಿಗೆ ಸಮಾನವಷ್ಟೇ! ಹಾಗೆಯೇ ಆ ಭಗವಂತನ ಕಥೆಗಳನ್ನು ಗಾನಮಾಡದೇ ಇರುವ ದುಷ್ಟನಾಲಿಗೆಯು ಕಪ್ಪೆಯ ನಾಲಿಗೆಗೆ ಸಮಾನವಲ್ಲವೇ!

ಭಾರಃ ಪರಂ ಪಟ್ಟಕಿರೀಟಜುಷ್ಟ-
ಮಪ್ಯುತ್ತಮಾಙ್ಗಂ ನ ನಮೇನ್ಮುಕುನ್ದಮ್ ।
ಶಾವೌ ಕರೌ ನೋ ಕುರುತಃ ಸಪರ್ಯಾಂ
ಹರೇರ್ಲಸತ್ಕಾಞ್ಚನಕಙ್ಕಣೌ ವಾ ॥೨೧॥

ಮುಕುಂದನ ಚರಣಾರವಿಂದಗಳಿಗೆ ನಮಸ್ಕಾರಮಾಡದೇ ಇರುವ ತಲೆಯು–ರೇಷ್ಮೆಯ ರುಮಾಲು, ರತ್ನಕಿರೀಟಗಳಿಂದ ಕೂಡಿದ್ದರೂ–ಕೇವಲ ಹೊರೆಯೆಂದೇ ತಿಳಿಯಬೇಕು. ಶ್ರೀಭಗವಂತನ ಸೇವಾ-ಪೂಜೆಗಳನ್ನು ಮಾಡದ ಕೈಗಳು ಥಳ-ಥಳಿಸುವ ಚಿನ್ನದ ಕಂಕಣದಿಂದ ಕೂಡಿದ್ದರೂ ಹೆಣದಕೈಗಳಿಗೆ ಸಮಾನವೆಂದೇ ಭಾವಿಸಬೇಕು.

ಬರ್ಹಾಯಿತೇ ತೇ ನಯನೇ ನರಾಣಾಂ
ಲಿಙ್ಗಾನಿ ವಿಷ್ಣೋರ್ನ ನಿರೀಕ್ಷತೋ ಯೇ ।

**ಪಾದೌ ನೃಣಾಂ ತೌ ದ್ರುಮಜನ್ಮಭಾಜೌ**
**ಕ್ಷೇತ್ರಾಣಿ ನಾನುವ್ರಜತೋ ಹರೇರ್ಯೌ ॥೨೨॥**

ಮೂರ್ತಿ, ತೀರ್ಥ, ಪರ್ವತ ಇವೇ ಮುಂತಾದ ಆತನ ಗುರುತುಗಳನ್ನು ದರ್ಶನಮಾಡದೇ ಇರುವ ಕಣ್ಣುಗಳು ನವಿಲುಗರಿಯಲ್ಲಿರುವ ಕಣ್ಣುಗಳಿಗೆ ಸಮಾನ. ಭಗವಂತನ ಕ್ಷೇತ್ರಗಳಿಗೆ ಹೋಗದಿರುವ ಮನುಷ್ಯರ ಕಾಲುಗಳು ಮರದ ಹುಟ್ಟಿನ ಕಾಲುಗಳೇ.*

**ಜೀವನ್ ಶವೋ ಭಾಗವತಾಙ್ಘ್ರಿರೇಣುಂ**
**ನ ಜಾತು ಮರ್ತ್ಯೋಽಭಿಲಭೇತ ಯಸ್ತು ।**
**ಶ್ರೀವಿಷ್ಣುಪದ್ಯಾ ಮನುಜಸ್ತುಲಸ್ಯಾಃ**
**ಶ್ವಸನ್ ಶವೋ ಯಸ್ತು ನ ವೇದ ಗನ್ಧಮ್ ॥೨೩॥**

ಭಗವದ್ಭಕ್ತರಾದ ಸಂತರ ಚರಣಗಳ ಧೂಳಿಯನ್ನು ಎಂದೂ ತಲೆಯ ಮೇಲೆ ಧರಿಸದ ಮನುಷ್ಯನು ಜೀವಂತನಾಗಿದ್ದರೂ ಶವಕ್ಕೆ ಸಮನು. ಶ್ರೀಕೃಷ್ಣನ ಚರಣಗಳಿಗೆ ಸಮರ್ಪಿಸಿದ ತುಳಸಿಯ ಗಂಧವನ್ನು ಅನುಭವಿಸಿ ಸಂತೋಷಿಸದ ಮನುಷ್ಯನು ಉಸಿರಾಡುತ್ತಿದ್ದರೂ ಹೆಣಕ್ಕೆ ಎಣೆಯಾದವನು.

**ತದಶ್ಮಸಾರಂ ಹೃದಯಂ ಬತೇದಂ**
**ಯದ್ಗೃಹ್ಯಮಾಣೈರ್ಹರಿನಾಮಧೇಯೈಃ ।**
**ನ ವಿಕ್ರಿಯೇತಾಥ ಯದಾ ವಿಕಾರೋ**
**ನೇತ್ರೇ ಜಲಂ ಗಾತ್ರರುಹೇಷು ಹರ್ಷಃ ॥೨೪॥**

ಶ್ರೀಹರಿಯ ದಿವ್ಯನಾಮಗಳ ಶ್ರವಣ-ಸಂಕೀರ್ತನೆಗಳು ನಡೆಯುತ್ತಿದ್ದರೂ ಯಾವನ ಹೃದಯವು ಕರಗುವುದಿಲ್ಲವೋ, ಅದರ ಪರಿಣಾಮವಾಗಿ ಕಣ್ಣುಗಳಲ್ಲಿ ಆನಂದಬಾಷ್ಪಗಳು ಒಸರುವುದಿಲ್ಲವೋ, ಹರ್ಷದ ರೋಮಾಂಚ ಉಂಟಾಗುವುದಿಲ್ಲವೋ–ಅದು ವಾಸ್ತವವಾಗಿ ಹೃದಯವಲ್ಲ. ಕಬ್ಬಿಣದ ತುಂಡು ಎಂದು ತಿಳಿಯಬೇಕು.

---

* ದ್ರುಮಜನ್ಮಭಾಜೌ ಪಾದೌ = ಮರಗಾಲುಗಳು ಅಥವಾ ವೃಕ್ಷಜಾತಿಯ ಜೀವಿಗಳಿಗೆ ಸಮನಾದ ಕಾಲುಗಳು. ವೃಕ್ಷಗಳು ಜೀವಿಗಳಾದರೂ ಅವುಗಳಿಗೆ ನಡೆಯುವ ಸಾಮರ್ಥ್ಯವಿಲ್ಲ. (ಶ್ಲೋಕ ೨೨)

ಪರೀಕ್ಷಿದ್ರಾಜನು ಶ್ರದ್ಧಾ-ಭಕ್ತಿ-ವಿನಯಗಳಿಂದ ಈ ಉತ್ತಮವಾದ ಪ್ರಶ್ನೆಯನ್ನು ಕೇಳಿದಾಗ ಆ ಆತ್ಮವಿದ್ಯಾವಿಶಾರದರೂ ಭಾಗವತಶಿಖಾಮಣಿಗಳೂ ಆದ ಶುಕಮಹಾಮುನಿಗಳು ಏನು ಅಪ್ಪಣೆಕೊಡಿಸಿದರೆಂಬುದನ್ನು ಹೇಳಪ್ಪ, ಪುರಾಣಿಕಶಿರೋಮಣಿಯೇ! ನಿನ್ನ ಚೆನ್ನುಡಿ ಮನಸ್ಸಿಗೆ ಅತಿ ರಮಣೀಯ, ಅತ್ಯಂತಹಿತಕರವಾಗಿದೆ."

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತದಲ್ಲಿ ದ್ವಿತೀಯಸ್ಕಂಧದ ೭ನೆಯ ಅಧ್ಯಾಯವು ಮುಗಿಯಿತು.

---

ದ್ವಿತೀಯಸ್ಕಂಧ ೯ನೆಯ ಅಧ್ಯಾಯ

## ಸೃಷ್ಟಿಯ ವಿಷಯವಾಗಿ ರಾಜನ ಪ್ರಶ್ನೆ: ಶ್ರೀಶುಕರ ಉತ್ತರ

ಸೂತಪುರಾಣಿಕರು ಶೌನಕಾದಿ ಮಹರ್ಷಿಗಳಿಗೆ ಹೇಳುತ್ತಿದ್ದಾರೆ :

**ವೈಯಾಸಕೇರಿತಿ ವಚಸ್ತತ್ತ್ವನಿಶ್ಚಯಮಾತ್ಮನಃ ।**
**ಉಪಧಾರ್ಯ ಮತಿಂ ಕೃಷ್ಣೇ ಔತ್ತರೇಯಃ ಸತೀಂ ವ್ಯಧಾತ್ ॥೧॥**

"ಪರಮಾತ್ಮತತ್ತ್ವದ ಬಗೆಗೆ ನಿಶ್ಚಯವನ್ನುಂಟುಮಾಡಿದ ವ್ಯಾಸಪುತ್ರರ ಆ ಉಪದೇಶವನ್ನು ಕೇಳಿದೊಡನೆಯೇ ಪರೀಕ್ಷಿದ್ರಾಜನು ತನ್ನ ಪರಿಶುದ್ಧವಾದ ಬುದ್ಧಿಯನ್ನು ಅನನ್ಯಭಾವದಿಂದ ಶ್ರೀಕೃಷ್ಣಪರಮಾತ್ಮನಿಗೆ ಸಂಪೂರ್ಣವಾಗಿ ಸಮರ್ಪಿಸಿಬಿಟ್ಟನು.

ದೇಹ, ಮಡದಿ, ಮಕ್ಕಳು, ಮನೆ, ಪಶು, ಧನ, ಬಂಧು-ಮಿತ್ರರು ಮತ್ತು ನಿಷ್ಕಂಟಕವಾಗಿದ್ದ ರಾಜ್ಯ ಇವುಗಳಲ್ಲಿ ತಾನು ದೃಢವಾಗಿ ಬೆಳೆಸಿಕೊಂಡಿದ್ದ ಮಮತೆಯನ್ನು ಆತನು ತೊರೆದುಬಿಟ್ಟನು.

ಎಲೈ ಮುನಿಶ್ರೇಷ್ಠರೇ! ಶ್ರೀಕೃಷ್ಣನ ಮಹಿಮೆಯನ್ನು ಶ್ರವಣಮಾಡುವುದರಲ್ಲಿ ಶ್ರದ್ಧಾಪೂರ್ಣನಾದ ಆ ಮಹಾತ್ಮನು–ನೀವು ಯಾವ ವಿಷಯವನ್ನು ಕುರಿತು ಪ್ರಶ್ನಿಸಿದಿರೋ–ಅದೇ ವಿಷಯವನ್ನು ಕುರಿತು ಪ್ರಶ್ನೆಮಾಡಿದನು. ಏಕೆಂದರೆ : ಆ ಉತ್ತರಾನಂದನನು ತನ್ನ ಮೃತ್ಯುವು ಯಾವಾಗ ಆಗುವುದು ಎಂಬುದನ್ನು ನಿಶ್ಚಯವಾಗಿ ತಿಳಿದಿದ್ದು ಧರ್ಮ, ಅರ್ಥ ಮತ್ತು

ಕಾಮಗಳಿಗೆ ಸಂಬಂಧಪಟ್ಟ ಎಲ್ಲ ಕರ್ಮಗಳನ್ನೂ ಸಂನ್ಯಾಸಮಾಡಿ ಭಗವಂತನಾದ ವಾಸುದೇವನಲ್ಲಿ ದೃಢವಾದ ಆತ್ಮಭಾವವನ್ನು ಹೊಂದಿ ಬಿಟ್ಟಿದ್ದನು. (ಶ್ಲೋಕ 2-4)

ಪರೀಕ್ಷಿದ್ರಾಜನು ಶುಕಮಹರ್ಷಿಗಳಲ್ಲಿ ಹೀಗೆ ವಿಜ್ಞಾಪನೆ ಮಾಡಿದನು:

**ಸಮೀಚೀನಂ ವಚೋ ಬ್ರಹ್ಮನ್ಸರ್ವಜ್ಞಸ್ಯ ತವಾನಘ ।**
**ತಮೋ ವಿಶೀರ್ಯತೇ ಮಹ್ಯಂ ಹರೇಃ ಕಥಯತಃ ಕಥಾಮ್ ॥೫॥**

**ಭೂಯ ಏವ ವಿವಿತ್ಸಾಮಿ ಭಗವಾನಾತ್ಮಮಾಯಯಾ ।**
**ಯಥೇದಂ ಸೃಜತೇ ವಿಶ್ವಂ ದುರ್ವಿಭಾವ್ಯಮಧೀಶ್ವರೈಃ ॥೬॥**

**ಯಥಾ ಗೋಪಾಯತಿ ವಿಭುರ್ಯಥಾ ಸಂಯಚ್ಛತೇ ಪುನಃ ।**
**ಯಾಂ ಯಾಂ ಶಕ್ತಿಮುಪಾಶ್ರಿತ್ಯ ಪುರುಶಕ್ತಿಃ ಪರಃ ಪುಮಾನ್ ।**
**ಆತ್ಮಾನಂ ಕ್ರೀಡಯನ್ಕ್ರೀಡನ್ಕರೋತಿ ವಿಕರೋತಿ ಚ ॥೭॥**

**ನೂನಂ ಭಗವತೋ ಬ್ರಹ್ಮನ್ಹರೇರದ್ಭುತಕರ್ಮಣಃ ।**
**ದುರ್ವಿಭಾವ್ಯಮಿವಾಭಾತಿ ಕವಿಭಿಶ್ಚಾಪಿ ಚೇಷ್ಟಿತಮ್ ॥೮॥**

"ಓ ಬ್ರಹ್ಮರ್ಷಿಗಳೇ! ಸರ್ವಜ್ಞರೂ, ಪರಮಪವಿತ್ರರೂ ಆದ ಮಹಾತ್ಮರೇ! ತಮ್ಮ ಮಾತು ಅತ್ಯಂತಶ್ರೇಷ್ಠ ಹಾಗೂ ಸಮುಚಿತವಾಗಿದೆ. ತಾವು ಶ್ರೀಭಗವಂತನ ಕಥೆಗಳನ್ನು ಹೇಳುತ್ತಿರುವಂತೆಯೇ ನನ್ನನ್ನು ಆವರಿಸಿರುವ ಅಜ್ಞಾನದ ತೆರೆಯೂ ಕಳಚಿಕೊಳ್ಳುತ್ತಿದೆ. ಭಗವಂತನು ತನ್ನ ಮಾಯೆಯಿಂದ ಈ ವಿಶ್ವವನ್ನು ಹೇಗೆ ಸೃಷ್ಟಿಮಾಡುತ್ತಾನೆ?–ಎಂಬುದನ್ನು ಕುರಿತು ಮತ್ತೂ ವಿಸ್ತಾರವಾಗಿ ತಿಳಿಯಬಯಸುತ್ತೇನೆ. ಈ ಸೃಷ್ಟಿಯು ಅತ್ಯಂತರಹಸ್ಯಮಯವಾದುದು. ಬ್ರಹ್ಮದೇವರೇ ಮುಂತಾದ ಪ್ರಜಾಪತಿಗಳಿಗೂ ಅರ್ಥಮಾಡಿಕೊಳ್ಳಲು ಕಷ್ಟವಾದುದು. ಭಗವಂತನು ಈ ವಿಶ್ವದ ರಕ್ಷಣೆಯನ್ನು ಹೇಗೆ ಮಾಡುತ್ತಾನೆ? ಸಂಹಾರವನ್ನು ಹೇಗೆ ಮಾಡುತ್ತಾನೆ? ಅನಂತಶಕ್ತಿಯುಳ್ಳ ಆ ಪರಮಾತ್ಮನು ಯಾವ ಯಾವ ಶಕ್ತಿಗಳನ್ನಾಶ್ರಯಿಸಿ ಈ ಸೃಷ್ಟಿ-ಸ್ಥಿತಿ-ಲಯರೂಪಗಳಲ್ಲಿ ತನ್ನನ್ನೇ ಆಟವಾಡಿಸುತ್ತಾ ಆಟವಾಡು

ತ್ತಾನೆ? ಮಕ್ಕಳು ಆಟಕ್ಕಾಗಿ ಮನೆಗಳನ್ನು ಕಟ್ಟುವಂತೆ–ಹೇಗೆ ಬ್ರಹ್ಮಾಂಡಗಳನ್ನು ರಚಿಸಿ ಅವುಗಳನ್ನು ನಾಶಪಡಿಸುವ ಆಟವನ್ನು ಆಡುತ್ತಾನೆ? ಮಹಾತ್ಮರೇ! ನಿಜವಾಗಿಯೂ ಶ್ರೀಹರಿಯ ಲೀಲೆಗಳು ಅತ್ಯದ್ಭುತವಾದುವು; ಅಚಿಂತ್ಯವಾದುವು. ಅವನ ಲೀಲೆಗಳ ರಹಸ್ಯವನ್ನು ತಿಳಿಯುವುದು ಮಹಾಜ್ಞಾನಿಗಳಿಗೂ ಅತಿಕಷ್ಟವೇ ಸರಿ.

**ಯಥಾ ಗುಣಾಂಸ್ತು ಪ್ರಕೃತೇರ್ಯುಗಪತ ಮಶೋಽಪಿ ವಾ ।**
**ಬಿಭರ್ತಿ ಭೂರಿಶಸ್ತ್ವೇಕಃ ಕುರ್ವನ್ಕರ್ಮಾಣಿ ಜನ್ಮಭಿಃ ॥೯॥**

**ವಿಚಿಕಿತ್ಸಿತಮೇತನ್ಮೇ ಬ್ರವೀತು ಭಗವಾನ್ಯಥಾ ।**
**ಶಾಬ್ದೇ ಬ್ರಹ್ಮಣಿ ನಿಷ್ಣಾತಃ ಪರಸ್ಮಿಂಶ್ಚ ಭವಾನ್ಖಲು ॥೧೦॥**

ಒಬ್ಬಂಟಿಗನಾಗಿಯೇ ಇವೆಲ್ಲವನ್ನೂ ಮಾಡುವ ಆ ಮಹಾಪ್ರಭುವು ಬಹುಕರ್ಮಗಳನ್ನು ಮಾಡುವುದಕ್ಕಾಗಿ ಪುರುಷರೂಪದಿಂದ ಪ್ರಕೃತಿಯ ಭಿನ್ನ-ಭಿನ್ನವಾದ ಗುಣಗಳನ್ನು ಒಟ್ಟಿಗೇ ಧರಿಸಿಕೊಳ್ಳುತ್ತಾನೋ ಅಥವಾ ಅನೇಕ ಅವತಾರಗಳನ್ನು ತಾಳಿ ಅವುಗಳನ್ನು ಕ್ರಮಶಃ ಧರಿಸಿಕೊಳ್ಳುತ್ತಾನೋ? ಪೂಜ್ಯರಾದ ತಾವು ಶಬ್ದಬ್ರಹ್ಮವಾದ ವೇದ ಮತ್ತು ಪರಬ್ರಹ್ಮವಾದ ಪರಮಾತ್ಮತತ್ತ್ವ–ಈ ಎರಡು ವಿಷಯಗಳಲ್ಲೂ ನಿಷ್ಣಾತರಾದವರು. ಆದ್ದರಿಂದ ನನ್ನ ಸಂದೇಹವನ್ನು ಕೃಪೆಯಿಟ್ಟು ನಿವಾರಣೆಮಾಡಬೇಕು.”

ಸೂತಪುರಾಣಿಕರು ಹೇಳುತ್ತಾರೆ :

**ಇತ್ಯುಪಾಮನ್ತ್ರಿತೋ ರಾಜ್ಞಾ ಗುಣಾನುಕಥನೇ ಹರೇಃ ।**
**ಹೃಷೀಕೇಶಮನುಸ್ಮೃತ್ಯ ಪ್ರತಿವಕ್ತುಂ ಪ್ರಚಕ್ರಮೇ ॥೧೧॥**

“ಹೀಗೆ ಶ್ರೀಹರಿಯ ಗುಣಗಳನ್ನು ವರ್ಣನೆಮಾಡಬೇಕೆಂದು ರಾಜನು ಪ್ರಾರ್ಥಿಸಲು–ಶುಕಮುನಿಗಳು ಸ್ವಾಮಿ ಶ್ರೀಹೃಷೀಕೇಶನನ್ನು ಮತ್ತೆ ಮತ್ತೆ ಸ್ಮರಣೆಮಾಡಿ ಹೀಗೆ ಪ್ರತ್ಯುತ್ತರ ಹೇಳಿದರು :

**ನಮಃ ಪರಸ್ಮೈ ಪುರುಷಾಯ ಭೂಯಸೇ**
**ಸದುದ್ಭವಸ್ಥಾನನಿರೋಧಲೀಲಯಾ ।**
**ಗೃಹೀತಶಕ್ತಿತ್ರಿತಯಾಯ ದೇಹಿನಾ-**
**ಮನ್ತರ್ಭವಾಯಾನುಪಲಕ್ಷ್ಯವರ್ತ್ಮನೇ ॥೧೨॥**

ಯಾವನು ವಿಶ್ವದ ಸೃಷ್ಟಿ-ಸ್ಥಿತಿ-ಪ್ರಳಯಕಾರ್ಯಗಳ ಲೀಲೆಯನ್ನು ಆಡುವುದಕ್ಕಾಗಿ ಸತ್ತ್ವ, ರಜಸ್ಸು ಮತ್ತು ತಮೋಗುಣರೂಪವಾದ ಮೂರು ಶಕ್ತಿಗಳನ್ನು ಧರಿಸಿ ಬ್ರಹ್ಮ, ವಿಷ್ಣು ಮತ್ತು ರುದ್ರರೂಪಿಯಾಗಿರುವನಲ್ಲದೇ ಸಮಸ್ತಚರಾಚರಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿಯೂ ಬೆಳಗುತ್ತಿದ್ದಾನೆಯೋ ಮತ್ತು ಯಾವನ ಸ್ವರೂಪವನ್ನೂ ಮತ್ತು ಮಾರ್ಗವನ್ನೂ ಬುದ್ಧಿಯು ತಿಳಿಯಲಾರದೋ–ಅಂತಹ ಅನಂತನೂ, ಅನಂತಮಹಿಮನೂ ಆದ ಪರಬ್ರಹ್ಮ-ಪರಮಪುರುಷನಿಗೆ ಕೋಟಿ ಕೋಟಿ ಪ್ರಣಾಮಗಳು.

**ಭೂಯೋ ನಮಃ ಸದ್ವೃಜಿನಚ್ಛಿದೇಽಸತಾ–**
**ಮಸಮ್ಭವಾಯಾಖಿಲಸತ್ತ್ವಮೂರ್ತಯೇ ।**
**ಪುಂಸಾಂ ಪುನಃ ಪಾರಮಹಂಸ್ಯ ಆಶ್ರಮೇ**
**ವ್ಯವಸ್ಥಿತಾನಾಮನುಮೃಗ್ಯದಾಶುಷೇ ॥೧೩॥**

ಸಾಧು-ಸಂತರ ದುಃಖಗಳನ್ನು ಹೋಗಲಾಡಿಸಿ ದುಷ್ಟರನ್ನು ದಮನ ಮಾಡುವವನು, ಸಕಲಸತ್ತ್ವರೂಪಿಯಾಗಿ, ಸರ್ವಸಮನಾಗಿ ಸರ್ವರಿಗೂ ಕಲ್ಯಾಣವನ್ನುಂಟುಮಾಡುವವನೂ, ಪರಮಹಂಸಾಶ್ರಮದಲ್ಲಿ ನೆಲೆಗೊಂಡವರಿಗೆ ಅಭೀಷ್ಟವಾದ ಮುಕ್ತಿಯನ್ನು ದಯಪಾಲಿಸುವವನೂ ಆದ ಆ ಪರಮಾತ್ಮನಿಗೆ ಮತ್ತೂ ಪ್ರಣಾಮಗಳು. ಬಾರಿ-ಬಾರಿಗೂ ಪ್ರಣಾಮಗಳು.

**ನಮೋ ನಮಸ್ತೇಽಸ್ತ್ವೃಷಭಾಯ ಸಾತ್ವತಾಂ**
**ವಿದೂರಕಾಷ್ಠಾಯ ಮುಹುಃ ಕುಯೋಗಿನಾಮ್ ।**
**ನಿರಸ್ತಸಾಮ್ಯಾತಿಶಯೇನ ರಾಧಸಾ**
**ಸ್ವಧಾಮನಿ ಬ್ರಹ್ಮಣಿ ರಂಸ್ಯತೇ ನಮಃ ॥೧೪॥**

ಓ ಯದುಕುಲಶಿರೋಮಣಿಯೇ! ನಿನಗೆ ನಮೋ ನಮಃ. ಎಣೆ ಮಿಗಿಲಿಲ್ಲದ ಗುಣೈಶ್ವರ್ಯಗಳಿಂದ ಸಂಪನ್ನನಾಗಿ ಸರ್ವೋತ್ತಮವಾದ ಪರಬ್ರಹ್ಮವೆಂಬ ಸ್ವಧಾಮದಲ್ಲಿಯೇ ಸರ್ವದಾ ರಮಿಸುತ್ತಿರುವವನು ನೀನು. ಭಕ್ತಿರಹಿತರಾದ ಕುಯೋಗಿಗಳಿಗೆ ಎಷ್ಟೇ ಪ್ರಯತ್ನಮಾಡಿದರೂ ನಿನ್ನ ದಿಕ್ಕು-ದೆಸೆಗಳು ಹೇಗೆತಾನೇ ದೊರೆತಾವು?

ಯತ್ಕೀರ್ತನಂ ಯತ್ಸ್ಮರಣಂ ಯದೀಕ್ಷಣಂ
ಯದ್ವನ್ದನಂ ಯಚ್ಛ್ರವಣಂ ಯದರ್ಹಣಮ್ ।
ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಂ
ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥೧೫॥

ಯಾವನ ಕೀರ್ತನೆ, ಸ್ಮರಣೆ, ದರ್ಶನ, ವಂದನ, ಶ್ರವಣ ಮತ್ತು ಪೂಜೆಗಳು ಜೀವರ ಪಾಪಗಳನ್ನು ತತ್‌ಕ್ಷಣದಲ್ಲಿಯೇ ಧ್ವಂಸಮಾಡುತ್ತವೆಯೋ–ಅಂತಹ ಪುಣ್ಯಕೀರ್ತಿಯಾದ ಪರಮಾತ್ಮನಿಗೆ ನಮೋ ನಮಃ.

ವಿಚಕ್ಷಣಾ ಯಚ್ಚರಣೋಪಸಾದನಾ-
ತ್ಸಙ್ಗಂ ವ್ಯುದಸ್ಯೋಭಯತೋಽನ್ತರಾತ್ಮನಃ ।
ವಿನ್ದನ್ತಿ ಹಿ ಬ್ರಹ್ಮಗತಿಂ ಗತಕ್ಲಮಾ-
ಸ್ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥೧೬॥

ಯಾವನ ಚರಣಾರವಿಂದಗಳಲ್ಲಿ ಶರಣಾಗತಿಮಾಡಿದ ವಿವೇಕಿಗಳು ಇಹಲೋಕ ಮತ್ತು ಪರಲೋಕಗಳೆರಡರ ಆಸಕ್ತಿಯನ್ನೂ ಹೃದಯದಿಂದ ತೊರೆದು ಆಯಾಸವಿಲ್ಲದೆಯೇ ಪರಬ್ರಹ್ಮಪದವನ್ನು ಹೊಂದಿ ಪರಮ ವಿಶ್ರಾಂತಿಯನ್ನೂ ಪಡೆಯುತ್ತಾರೆಯೋ–ಆ ಮಂಗಳಕೀರ್ತಿಯಾದ ಮಹಾ ವಿಷ್ಣುವಿಗೆ ನಮೋ ನಮಃ.

ತಪಸ್ವಿನೋ ದಾನಪರಾ ಯಶಸ್ವಿನೋ
ಮನಸ್ವಿನೋ ಮನ್ತ್ರವಿದಃ ಸುಮಙ್ಗಲಾಃ ।
ಕ್ಷೇಮಂ ನ ವಿನ್ದನ್ತಿ ವಿನಾ ಯದರ್ಪಣಂ
ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥೧೭॥

ಎಷ್ಟೇ ದೊಡ್ಡ ತಪಸ್ವಿಗಳಾಗಲೀ, ದಾನಿಗಳಾಗಲೀ, ಯಶಸ್ವಿಗಳಾಗಲೀ, ಪ್ರಶಸ್ತಮನಸ್ಸುಳ್ಳವರಾಗಲೀ, ಮಂತ್ರಜ್ಞರಾಗಲೀ, ಮಂಗಳಾಚಾರ-ವಿಚಾರ ಸಂಪನ್ನರಾಗಲೀ–ತಮ್ಮ ಸಾಧನೆಗಳನ್ನೂ ಮತ್ತು ತಮ್ಮನ್ನೂ ಆತನ ಪಾದಾರವಿಂದಗಳಲ್ಲಿ ಸಮರ್ಪಣೆಮಾಡದೇ ಹೋದರೆ ಕ್ಷೇಮವನ್ನು ಪಡೆಯಲಾರರು. ಅಂತಹ ಕಲ್ಯಾಣಕೀರ್ತಿಯಾದ ಕೃಷ್ಣಪರಮಾತ್ಮನಿಗೆ ಕೋಟಿ-ಕೋಟಿ ಪ್ರಣಾಮಗಳು.

**ಕಿರಾತಹೂಣಾನ್ಧ್ರಪುಲಿನ್ದಪುಲ್ಕಸಾ**
**ಆಭೀರಕಙ್ಕಾ ಯವನಾಃ ಖಸಾದಯಃ ।**
**ಯೇಽನ್ಯೇ ಚ ಪಾಪಾ ಯದುಪಾಶ್ರಯಾಶ್ರಯಾಃ**
**ಶುಧ್ಯನ್ತಿ ತಸ್ಮೈ ಪ್ರಭವಿಷ್ಣವೇ ನಮಃ ॥೧೮॥**

ಕಿರಾತರಾಗಲೀ, ಹೂಣರಾಗಲೀ, ಆಂಧ್ರರಾಗಲೀ, ಪುಲಿಂದರಾಗಲೀ, ಪುಲ್ಕಸರಾಗಲೀ, ಆಭೀರರಾಗಲೀ, ಕಂಕರಾಗಲೀ, ಯವನರಾಗಲೀ, ಖಸ ರಾಗಲೀ, ಇತರ ಯಾವುದೇ ಜಾತಿಯವರೇ ಆಗಲೀ, ಎಂತಹ ಪಾಪಿಷ್ಠರೇ ಆಗಲೀ–ಯಾವನನ್ನು ಆಶ್ರಯಿಸಿದ ಭಕ್ತರಲ್ಲಿ ಶರಣುಬಂದರೂ ಪರಿಶುದ್ಧ ರಾಗುವರೋ–ಅಂತಹ ಸರ್ವಶಕ್ತನಾದ ಸ್ವಾಮಿಗೆ ನಮಸ್ಕಾರಗಳು.

**ಸ ಏಷ ಆತ್ಮಾತ್ಮವತಾಮಧೀಶ್ವರ-**
**ಸ್ತ್ರಯೀಮಯೋ ಧರ್ಮಮಯಸ್ತಪೋಮಯಃ ।**
**ಗತವ್ಯಲೀಕೈರಜಶಙ್ಕರಾದಿಭಿ-**
**ರ್ವಿತರ್ಕ್ಯಲಿಙ್ಗೋ ಭಗವಾನ್ಪ್ರಸೀದತಾಮ್ ॥೧೯॥ ***

ಆತ್ಮವಂತರಾದ ಜ್ಞಾನಿಗಳಿಗೆ ಆತ್ಮಸ್ವರೂಪನಾಗಿ, ಸ್ವಾಮಿನಾಥನಾಗಿ, ವೇದಮೂರ್ತಿಯಾಗಿ, ಧರ್ಮಮೂರ್ತಿಯಾಗಿ, ತಪೋಮೂರ್ತಿಯಾಗಿ, ಶುದ್ಧಹೃದಯದಿಂದ ತನ್ನನ್ನು ಚಿಂತಿಸುವ ಬ್ರಹ್ಮ-ರುದ್ರಾದಿಗಳಿಗೂ ತರ್ಕಕ್ಕೆ ವಿಷಯವಾಗಿರುವ ಗುರುತುಗಳುಳ್ಳ ಭಗವಂತನು ಅನುಗ್ರಹದ ಮಳೆ ಗರೆಯಲಿ.

**ಶ್ರಿಯಃ ಪತಿರ್ಯಜ್ಞಪತಿಃ ಪ್ರಜಾಪತಿ-**
**ರ್ಧಿಯಾಂ ಪತಿರ್ಲೋಕಪತಿರ್ಧರಾಪತಿಃ ।**
**ಪತಿರ್ಗತಿಶ್ಚಾನ್ಧಕವೃಷ್ಣಿಸಾತ್ವತಾಂ**
**ಪ್ರಸೀದತಾಂ ಮೇ ಭಗವಾನ್ಸತಾಂ ಪತಿಃ ॥೨೦॥**

ಶ್ರೀದೇವಿಯ ಪತಿಯೂ, ಯಜ್ಞಗಳ ಅಧಿಪತಿಯೂ, ಪ್ರಜಾಪತಿಯೂ

---

* ವಿತರ್ಕ್ಯಲಿಙ್ಗಃ– ಎಂಬುದರ ಬದಲಿಗೆ 'ವ್ಯತರ್ಕ್ಯಲಿಙ್ಗಃ' ಎಂಬ ಪಾಠಾಂತರವುಂಟು. ಅದರ ಪ್ರಕಾರ ' ಬ್ರಹ್ಮ-ರುದ್ರಾದಿಗಳಿಗೂ ಊಹಿಸಲು ಅಸಾಧ್ಯವಾದ ಚಿಹ್ನೆಗಳುಳ್ಳ '– ಎಂದು ಅರ್ಥವಾಗುತ್ತದೆ. (ಶ್ಲೋಕ ೧೯)

ಬುದ್ಧಿಗಳ ಅಧಿಪತಿಯೂ, ಸರ್ವಲೋಕಪತಿಯೂ, ಧರಾಪತಿಯೂ, ಯದುಕುಲದಲ್ಲಿ ಅವತರಿಸಿ ಅಂಧಕ-ವೃಷ್ಣಿ-ಸಾತ್ವತರೇ ಮುಂತಾದ ಯಾದವರಿಗೆ ಪತಿಯೂ-ಗತಿಯೂ ಆಗಿ ಬೆಳಗಿದ ಸಾಧು-ಸಂತರ ಸ್ವಾಮಿಯೂ ಆದ ಭಗವಂತನು ನನ್ನಲ್ಲಿ ಪ್ರಸನ್ನನಾಗಲಿ.

**ಯದಙ್ಘ್ರ್ಯಭಿಧ್ಯಾನಸಮಾಧಿಧೌತಯಾ**
**ಧಿಯಾನುಪಶ್ಯನ್ತಿ ಹಿ ತತ್ತ್ವಮಾತ್ಮನಃ ।**
**ವದನ್ತಿ ಚೈತತ್ಕವಯೋ ಯಥಾರುಚಂ**
**ಸ ಮೇ ಮುಕುನ್ದೋ ಭಗವಾನ್ಪ್ರಸೀದತಾಮ್ ॥೨೧॥**

ಜ್ಞಾನಿಗಳು ಯಾವನ ಪಾದಾರವಿಂದಗಳ ಧ್ಯಾನಸಮಾಧಿಯಿಂದಲೇ ಶುದ್ಧವಾದ ಬುದ್ಧಿಯಿಂದ ಆತ್ಮತತ್ತ್ವವನ್ನು ಸಾಕ್ಷಾತ್ಕರಿಸಿ, ತಮ್ಮ ಬುದ್ಧಿ ಮತ್ತು ಅಭಿರುಚಿಗಳಿಗೆ ಅನುಗುಣವಾಗಿ ಆ ಅನುಭವವನ್ನು ವರ್ಣಿಸುತ್ತಾರೆಯೋ–ಅಂತಹ ಭಕ್ತಿ, ಮುಕ್ತಿ ಮತ್ತು ಸ್ತೋತ್ರಶಕ್ತಿಪ್ರದಾತನಾದ ಭಗವಂತ ಶ್ರೀಮುಕುಂದನು ನನಗೆ ಅನುಗ್ರಹಮಾಡಲಿ.

**ಪ್ರಚೋದಿತಾ ಯೇನ ಪುರಾ ಸರಸ್ವತೀ**
**ವಿತನ್ವತಾಜಸ್ಯ ಸತೀಂ ಸ್ಮೃತಿಂ ಹೃದಿ ।**
**ಸ್ವಲಕ್ಷಣಾ ಪ್ರಾದುರಭೂತ್ಕಿಲಾಸ್ಯತಃ**
**ಸ ಮೇ ಋಷೀಣಾಮೃಷಭಃ ಪ್ರಸೀದತಾಮ್ ॥೨೨॥***

ಸೃಷ್ಟಿಸಮಯದಲ್ಲಿ ಯಾವನು ಬ್ರಹ್ಮದೇವರ ಹೃದಯದಲ್ಲಿ ಸ್ಮೃತಿಯನ್ನು ಉಂಟುಮಾಡಿ ಬೆಳೆಸುವುದಕ್ಕಾಗಿ ಜ್ಞಾನದೇವತೆಯಾದ ಸರಸ್ವತಿಯನ್ನು ಪ್ರೇರಣೆಮಾಡಿದನೋ ಮತ್ತು ಅವರ ಮುಖದಿಂದ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪಗಳೆಂಬ ಆರು ಅಂಗಗಳಿಂದ

---

* ಹೋಲಿಕೆ : ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ । ತಗ್ಂ ಹ ದೇವಮಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ ॥ ಆದಿನಾರಾಯಣನು ಬ್ರಹ್ಮದೇವರಿಗೆ ಸ್ಮೃತಿ ಪ್ರಚೋದನೆ ಮತ್ತು ಕೃತಿಶಕ್ತಿಗಳನ್ನು ಅನುಗ್ರಹಿಸಿದ ವಿಷಯವು ಶ್ರೀಮದ್ಭಾಗವತದಲ್ಲಿ ಮುಂದೆ ಬರುತ್ತದೆ. (ಶ್ಲೋಕ ೨೨)

ಕೂಡಿದ ವೇದಸರಸ್ವತಿಯನ್ನೂ ಪ್ರಕಟಗೊಳಿಸಿದನೋ—ಅಂತಹ ಋಷಿಗಳಿಗೆ ಮೊದಲಿಗನಾದ, ಜ್ಞಾನಿಗಳಿಗೂ ಆದಿಜ್ಞಾನಿಯಾದ ಆತ್ಮಬುದ್ಧಿಪ್ರಕಾಶನು ನನ್ನಲ್ಲಿ ಪ್ರಸನ್ನನಾಗಲಿ.

**ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭು-**
**ರ್ನಿರ್ಮಾಯ ಶೇತೇ ಯದಮೂಷು ಪೂರುಷಃ ।**
**ಭುಙ್ಕ್ತೇ ಗುಣಾನ್ ಷೋಡಶ ಷೋಡಶಾತ್ಮಕಃ**
**ಸೋಽಲಙ್ಕೃಷೀಷ್ಟ ಭಗವಾನ್ವಚಾಂಸಿ ಮೇ ॥೨೩॥**

ಸೃಷ್ಟೀಶನಾದ ಯಾವ ಪ್ರಭುವು ಹಿಂದೆ ಪಂಚಮಹಾಭೂತಗಳಿಂದ ಈ ಶರೀರವನ್ನು ನಿರ್ಮಿಸಿ ಅದರಲ್ಲಿ ತಾನೂ ಅಂತರ್ಯಾಮಿಯಾಗಿ ಶಯನಿಸಿ "ಪುರುಷಶರೀರವೆಂಬ ಪುರದಲ್ಲಿ ಶಯನಿಸಿರುವವನು"—ಎಂದು ಕರೆಸಿಕೊಳ್ಳಲ್ಪಡುತ್ತಾನೋ ಮತ್ತು ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ಪ್ರಾಣಗಳು ಮತ್ತು ಮನಸ್ಸು—ಎಂಬ ಹದಿನಾರು ಕಲೆಗಳಿಂದ ಕೂಡಿದವನಾಗಿ ಅವುಗಳ ಮೂಲಕ ಹದಿನಾರು ವಿಷಯಗಳನ್ನು ಅನುಭವಿಸುತ್ತಾನೆಯೋ—ಆ ಸರ್ವಭೂತಮಯನಾದ ಭಗವಂತನು ನನ್ನ ವಾಣಿಯನ್ನು ಅಲಂಕರಿಸಲಿ.

**ನಮಸ್ತಸ್ಮೈ ಭಗವತೇ ವಾಸುದೇವಾಯ ವೇಧಸೇ ।**
**ಪಪುರ್ಜ್ಞಾನಮಯಂ ಸೌಮ್ಯಾ ಯನ್ಮುಖಾಮ್ಬುರುಹಾಸವಮ್ ॥೨೪॥**

ಆ ವಾಸುದೇವನ ಅವತಾರವಾದ, ಸರ್ವಜ್ಞರಾದ, ಋಷಿಕವಿಗಳಾದ ಭಗವಾನ್ ವೇದವ್ಯಾಸರಿಗೆ ನಮಸ್ಕಾರಗಳು. ಆ ಮಹಾನುಭಾವರ ಮುಖಕಮಲದಲ್ಲಿ ಮಕರಂದದಂತೆ ಹರಿಯುತ್ತಿರುವ ಜ್ಞಾನಸುಧೆಯನ್ನೇ ಅಲ್ಲವೇ ಶಾಂತರಾದ ಸತ್ಪುರುಷರು ಸದಾ ಪಾನಮಾಡುತ್ತಿರುವುದು!

**ಏತದೇವಾತ್ಮಭೂ ರಾಜನ್ನಾರದಾಯ ವಿಪೃಚ್ಛತೇ ।**
**ವೇದಗರ್ಭೋಽಭ್ಯಧಾತ್ಸಾಕ್ಷಾದ್ಯದಾಹ ಹರಿರಾತ್ಮನಃ ॥೨೫॥**

ಓ ರಾಜೇಂದ್ರನೇ! ಇದನ್ನು ಸಾಕ್ಷಾತ್ ಶ್ರೀಮನ್ನಾರಾಯಣನೇ ಬ್ರಹ್ಮದೇವರಿಗೆ ಉಪದೇಶಮಾಡಿದ್ದನು. ತಮ್ಮನ್ನು ಪ್ರಶ್ನೆಮಾಡಿದ ನಾರದ

ರಿಗೆ ಬ್ರಹ್ಮದೇವರು ಅದನ್ನು ಉಪದೇಶಮಾಡಿದರು. ಅದನ್ನೇ ನಾನೂ ನಿನಗೆ ಈಗ ಉಪದೇಶಿಸುತ್ತಿದ್ದೇನೆ."

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ದ್ವಿತೀಯಸ್ಕಂಧದ ೪ನೆಯ ಅಧ್ಯಾಯವು ಮುಗಿಯಿತು.

ದ್ವಿತೀಯಸ್ಕಂಧ ೫ನೆಯ ಅಧ್ಯಾಯ

## ಸೃಷ್ಟಿಯ ವರ್ಣನೆ

ನಾರದರು ಬ್ರಹ್ಮದೇವರಲ್ಲಿ ಹೀಗೆ ಅರಿಕೆಮಾಡಿಕೊಂಡರು :

**ದೇವದೇವ ನಮಸ್ತೇಽಸ್ತು ಭೂತಭಾವನ ಪೂರ್ವಜ ।**
**ತದ್ವಿಜಾನೀಹಿ ಯಜ್ಜ್ಞಾನಮಾತ್ಮತತ್ತ್ವನಿದರ್ಶನಮ್ ॥೧॥**

"ಓ ದೇವದೇವನೇ! ನಿನಗೆ ನಮಸ್ಕಾರವು. ನೀನು ಎಲ್ಲ ಭೂತ ಗಳನ್ನೂ ಸೃಷ್ಟಿಸಿದವನು. ಎಲ್ಲರಿಗೂ ಮೊದಲು ಹುಟ್ಟಿದವನು. ಆತ್ಮತತ್ತ್ವದ ಸಾಕ್ಷಾತ್ಕಾರವು ಯಾವುದರಿಂದ ಆಗುತ್ತದೆಯೋ–ಆ ಜ್ಞಾನವನ್ನು ನನಗೆ ಅನುಗ್ರಹಿಸು.

ಪ್ರಭೋ! ಈ ಜಗತ್ತಿನ ರೂಪವೇನು?* ಲಕ್ಷಣವೇನು? ಇದರ ಆಧಾರ ಯಾವುದು? ಇದನ್ನು ಯಾರು ಸೃಷ್ಟಿಸಿದರು? ಯಾವುದರಲ್ಲಿ ಇದು ಲಯಹೊಂದುವುದು? ಇದು ಯಾರಿಗೆ ಅಧೀನವಾಗಿದೆ? ವಾಸ್ತವ ವಾಗಿ ಈ ಜಗತ್ತು ಎಂದರೆ ಏನು?–ಇದರ ತತ್ತ್ವವನ್ನು ನನಗೆ ತಿಳಿಸು. ನಿನಗೆ ಇದೆಲ್ಲವೂ ತಿಳಿದಿದೆ. ಏಕೆಂದರೆ : ನೀನು ಭೂತ, ಭವಿಷ್ಯ ಮತ್ತು

---

* **ಯದ್ರೂಪಂ ಯದಧಿಷ್ಠಾನಂ** = ಯಾರಿಂದ ಪ್ರಕಾಶಿತವಾಗಿದೆ? ಯಾರನ್ನು ಆಶ್ರಯಿಸಿದೆ? (ಶ್ರೀಧರೀಯ)

ಯಾವನ ಶರೀರವಾಗಿದೆ? ಯಾರಿಂದ ಧರಿಸಲ್ಪಟ್ಟಿದೆ? 'ರೂಪಂ ಎನ್ನುವ ಪದವು ಭಗವಂತನಿಗೂ–ಜಗತ್ತಿಗೂ ಇರುವ ಶರೀರ-ಶರೀರಿಭಾವಸಂಬಂಧ'ವನ್ನು ಹೇಳುತ್ತದೆ. (ಚಂದ್ರಿಕಾ)

ಯದ್ರೂಪಂ : ಈ ವಿಶ್ವವು ಭಗವಂತನ ಸಾಕ್ಷಾದ್ರೂಪವಲ್ಲ. ಚಿತ್ತದಿಂದಲೂ ಸತ್ತ್ವದಿಂದಲೂ ಆತನಿಗೆ ಸದೃಶವಾಗಿ ಆತನಿಗೆ ವಶವಾಗಿರುವುದರಿಂದ ಅವನ ರೂಪದಂತಿದೆ. ತದ್ವಶತ್ವಾದಿದಂ ರೂಪಂ ಹರೇರ್ನೈವ ಸ್ವರೂಪತಃ । (ವಿಜಯಧ್ವಜೀಯ)

(ಶ್ಲೋಕ ೨)

ವರ್ತಮಾನಗಳಾದ ಎಲ್ಲಕ್ಕೂ ಅಧಿಪತಿಯಾಗಿದ್ದೀಯೆ. ನೀನು ಸರ್ವಜ್ಞನು. ವಿಶ್ವವೆಲ್ಲವೂ ಅಂಗೈನೆಲ್ಲಿಯಂತೆ ಸಮಗ್ರವಾಗಿ ಮತ್ತು ಸ್ಪಷ್ಟವಾಗಿ ನಿನ್ನ ಅರಿವಿಗೆ ಗೋಚರವಾಗಿದೆ. ನಿನಗೆ ಈ ವಿಜ್ಞಾನವು ಎಲ್ಲಿಂದ ಬಂದಿತು? ನೀನು ಯಾರನ್ನು ಆಧರಿಸಿದ್ದೀಯೆ? ನಿನ್ನ ಸ್ವಾಮಿಯು ಯಾರು? ಸ್ವರೂಪ ಯಾವುದು? ಮಹಾಶಕ್ತಿಯಿಂದ ನೀನೊಬ್ಬನೇ ಪಂಚಭೂತಗಳಿಂದ ಪ್ರಾಣಿಗಳನ್ನು ಸೃಷ್ಟಿಸುತ್ತಿರುವೆಯಲ್ಲಾ! ಜೇಡರಹುಳುವು ಅನಾಯಾಸವಾಗಿ ತನ್ನ ಮುಖದಿಂದಲೇ ಬಲೆಯನ್ನು ಹೊರಪಡಿಸಿ ಅದರಲ್ಲಿ ಆಡುವಂತೆ ನೀನು ನಿನ್ನ ಶಕ್ತಿಯನ್ನೇ ಆಶ್ರಯಿಸಿ ನಿರಾಯಾಸವಾಗಿ ಪ್ರಾಣಿಗಳನ್ನು ನಿನ್ನಲ್ಲಿಯೇ ಸೃಷ್ಟಿಸಿಕೊಂಡು ಸೃಷ್ಟಿಕಾರ್ಯದಿಂದ ವಿಕೃತನಾಗದೆಯೇ ಅದರಲ್ಲಿ ವಿಹರಿಸುತ್ತಿದ್ದೀಯೆ. ನಾಮ-ರೂಪ-ಗುಣಗಳಿಂದ ತಿಳಿಯಲ್ಪಡುತ್ತಿರುವ ಜಗತ್ತಿನಲ್ಲಿ ಸತ್ ಆಗಲೀ, ಅಸತ್ತಾಗಲೀ, ಉತ್ತಮವಾಗಲೀ, ಮಧ್ಯಮವಾಗಲೀ, ಅಧಮವೇ ಆಗಲೀ–ಯಾವುದೂ ನಿನ್ನನ್ನು ಬಿಟ್ಟು ಬೇರೆ ಯಾರಿಂದಲಾದರೂ ಉತ್ಪನ್ನವಾಗಿರುವುದಾಗಿ ನನಗೆ ತಿಳಿದು ಬಂದಿಲ್ಲ. ಹೀಗೆ ಸರ್ವ ಕಾರಣನಾಗಿ, ಸರ್ವೇಶ್ವರನಾಗಿ, ಸರ್ವಶಕ್ತನಾಗಿದ್ದರೂ ನೀನು ಏಕಾಗ್ರವಾದ ಚಿತ್ತದಿಂದ ಘೋರವಾದ ತಪಸ್ಸನ್ನು ಆಚರಿಸಿದ್ದನ್ನು ನೋಡಿ ನನಗೆ ಮೋಹವುಂಟಾಗಿದೆ. ನಿನಗಿಂತಲೂ ದೊಡ್ಡವನು ಯಾವನಾದರೂ ಇರಬಹುದೇ–ಎಂಬ ಶಂಕೆಯೂ ಉಂಟಾಗಿದೆ. ಸರ್ವಜ್ಞನೂ, ಸಕಲೇಶ್ವರನೂ ಆದ ನೀನು ನನ್ನ ಪ್ರಶ್ನೆಗಳಿಗೆ ಉತ್ತರವನ್ನು ದಯಪಾಲಿಸು. ನನಗೆ ಚೆನ್ನಾಗಿ ಮನವರಿಕೆ ಯಾಗುವಂತೆ ಉಪದೇಶಮಾಡು." (ಶ್ಲೋಕ 1-8)

ನಾರದರ ಆ ಕೇಳಿಕೆಗೆ ಬ್ರಹ್ಮದೇವರು ಹೀಗೆ ಉತ್ತರಿಸಿದರು :

"ಮಗು, ನಾರದ! ಜೀವಗಳ ಮೇಲೆ ಕರುಣೆಯಿಟ್ಟು ನೀನು ತುಂಬಾ ಒಳ್ಳೆಯ ಪ್ರಶ್ನೆಗಳನ್ನೇ ಕೇಳಿರುವೆ. ಏಕೆಂದರೆ : ಇದರಿಂದ ನನಗೆ ಭಗವಂತನ ಗುಣ ಮತ್ತು ಶಕ್ತಿಗಳನ್ನು ವರ್ಣಿಸುವ ಪ್ರೇರಣೆಯುಂಟಾಗಿದೆ. ನೀನು ನನ್ನ ವಿಷಯದಲ್ಲಿ ಹೇಳಿದುದೆಲ್ಲವೂ ಸತ್ಯವೇ. ಅದನ್ನು ಅಸತ್ಯವೆಂದು ಹೇಳಲಿಕ್ಕಾಗುವುದಿಲ್ಲ. ಏಕೆಂದರೆ : ನನಗಿಂತಲೂ ಶ್ರೇಷ್ಠವಾಗಿರುವ ಪರತತ್ತ್ವದ ಅರಿವು ಉಂಟಾಗುವವರೆಗೂ ನೀನು ಹೇಳಿದ ಆ ಎಲ್ಲ ಪ್ರಭಾವಗಳೂ ನನ್ನಲ್ಲಿ ಇರುವಂತೆಯೇ ಕಂಡುಬರುತ್ತದೆ. ಸೂರ್ಯ, ಅಗ್ನಿ, ಚಂದ್ರ, ಗ್ರಹ, ನಕ್ಷತ್ರ

ಮತ್ತು ತಾರೆಗಳು–ಪರಮಾತ್ಮನ ಪ್ರಕಾಶದಿಂದಲೇ ಪ್ರಕಾಶವನ್ನು ಪಡೆದು ಜಗತ್ತಿನಲ್ಲಿ ಪ್ರಕಾಶವನ್ನು ಹರಡುತ್ತಿಲ್ಲವೇ? ಹಾಗೆಯೇ ನಾನೂ ಆ ಸ್ವಯಂಪ್ರಕಾಶನಾದ ಭಗವಂತನ ಚಿನ್ಮಯವಾದ ಪ್ರಕಾಶದಿಂದಲೇ ಪ್ರಕಾಶವನ್ನು ಹೊಂದಿ ಜಗತ್ತನ್ನು ಪ್ರಕಾಶಪಡಿಸುತ್ತಿದ್ದೇನೆ.

**ಯೇನ ಸ್ವರೋಚಿಷಾ ವಿಶ್ವಂ ರೋಚಿತಂ ರೋಚಯಾಮ್ಯಹಮ್ ।**
**ಯಥಾರ್ಕೋಽಗ್ನಿರ್ಯಥಾ ಸೋಮೋ ಯಥರ್ಕ್ಷಗ್ರಹತಾರಕಾಃ ॥** *

ಆದರೂ ನೀನು ನನ್ನನ್ನೇ ಸರ್ವಪ್ರಕಾಶಕನೆಂದು ತಿಳಿದುಕೊಂಡಿರುವುದಕ್ಕೆ ಆ ಭಗವಂತನ ಮಾಯೆಯೇ ಕಾರಣ. ಯಾವಾತನ ದುರ್ಜಯವಾದ ಮಾಯೆಯಿಂದ ಮೋಹಿತರಾಗಿ ಜನರು ನನ್ನನ್ನೇ ಜಗತ್ತಿಗೆಲ್ಲಾ ಗುರುವೆಂದೇ ಹೇಳುತ್ತಾರೆಯೋ–ಆ ಮಾಯಾಧೀಶನಾದ ಭಗವಾನ್ ವಾಸುದೇವನನ್ನು ಕುರಿತು ನಮ್ಮ ಧ್ಯಾನ-ವಂದನೆಗಳು.[1] (ಶ್ಲೋಕ 9-12)

ಆ ಮಾಯೆಯು ಆತನ ಮೇಲೆ ಯಾವ ಪ್ರಭಾವವನ್ನೂ ಬೀರಲಾರದು. ಆತನ ಕಣ್ಣುಗಳ ಮುಂದೆ ನಿಲ್ಲಲೂ ನಾಚಿ ದೂರದಿಂದಲೇ ಓಡಿ ಹೋಗುವುದು. ಆದರೆ ಜಗತ್ತಿನಲ್ಲಿರುವ ಅಜ್ಞಾನಿಗಳು ಅದರ ಮೋಹಕ್ಕೆ ಒಳಗಾಗಿ 'ನಾನು' 'ನನ್ನದು' ಎಂದು ಮೊದಲಾಗಿ ಹರಟುತ್ತಾರೆ. ದ್ರವ್ಯವಾಗಲೀ, ಕರ್ಮವಾಗಲೀ, ಕಾಲವಾಗಲೀ, ಸ್ವಭಾವವಾಗಲೀ, ಜೀವವೇ ಆಗಲೀ– ಯಾವುದೂ ವಾಸ್ತವವಾಗಿ ಆ ವಾಸುದೇವನಿಂದ ಅನ್ಯವಾದ ಪದಾರ್ಥವಲ್ಲ.[2]

---

* 'ಯೇನ ಸ್ವರೋಚಿಷಾ ವಿಶ್ವಂ'–ಹೋಲಿಕೆ: 'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾನ್ತಿ ಕುತೋಽಯಮಗ್ನಿಃ । ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥' (ಶ್ಲೋಕ ೧೧)

[1] ಇಲ್ಲಿ 'ಯದ್ರೂಪಂ' ಎಂಬ ಪ್ರಶ್ನೆಗೆ ಉತ್ತರ ಬಂದಿದೆ. ಎಲ್ಲವೂ ಆ ಭಗವಂತನಿಂದಲೇ ಪ್ರಕಾಶಿತವಾಗುತ್ತದೆ. ಎಲ್ಲವೂ ಅವನ ರೂಪವೇ. (ಶ್ಲೋಕ ೧೨)

[2] 'ಯದಧಿಷ್ಠಾನಂ'–ಎಂಬ ಪ್ರಶ್ನೆಗೆ ಇದು ಉತ್ತರ. 'ಪರಮಾತ್ಮನೇ ಸರ್ವಕಾರಣ. ಕಾರಣದಿಂದ ಬೇರೆಯಾದ ಕಾರ್ಯವಿಲ್ಲವಾದ್ದರಿಂದ ಎಲ್ಲವೂ ಆ ವಾಸುದೇವನೇ.' (ಶ್ರೀಧರೀಯ)

'ಎಲ್ಲವೂ ವಾಸುದೇವಾತ್ಮಕ.' (ಚಂದ್ರಿಕಾ)

'ವಾಸುದೇವಾತ್ಪರೋ ಬ್ರಹ್ಮನ್ನ ಚಾನ್ಯೋಽರ್ಥೋಽಸ್ತಿ ತತ್ತ್ವತಃ ॥' – ದ್ರವ್ಯ

**ನಾರಾಯಣಪರಾ ವೇದಾ ದೇವಾ ನಾರಾಯಣಾಙ್ಗಜಾಃ ।**
**ನಾರಾಯಣಪರಾ ಲೋಕಾ ನಾರಾಯಣಪರಾ ಮಖಾಃ ॥೧೫॥**

**ನಾರಾಯಣಪರೋ ಯೋಗೋ ನಾರಾಯಣಪರಂ ತಪಃ ।**
**ನಾರಾಯಣಪರಂ ಜ್ಞಾನಂ ನಾರಾಯಣಪರಾ ಗತಿಃ ॥೧೬॥**

ನಾರಾಯಣನೇ ವೇದಗಳಿಗೆ ತಾತ್ಪರ್ಯವು.* ಆ ವೇದಗಳಲ್ಲಿ ಸ್ತುತಿಸಲ್ಪಡುವ ದೇವತೆಗಳೂ ನಾರಾಯಣನ ಅಂಗಗಳಿಂದ ಹುಟ್ಟಿದವರೇ. ಎಲ್ಲ ಯಜ್ಞಗ್ಗಳಿಂದ ಆರಾಧಿಸಲ್ಪಡುವವನೂ ನಾರಾಯಣನೇ. ಆ ಯಜ್ಞಗ್ಗಳಿಂದ ಹೊಂದಲ್ಪಡುವ ಲೋಕಗಳೂ ನಾರಾಯಣನನ್ನೇ ಆಶ್ರಯಿಸಿವೆ. ಯೋಗಕ್ಕೆ ಲಕ್ಷ್ಯನಾಗಿರುವವನೂ ನಾರಾಯಣನೇ. ತಪಸ್ಸಿನ ಆಚರಣೆಯೂ ನಾರಾಯಣನಿಗೋಸ್ಕರವೇ. ಜ್ಞಾನಗಮ್ಯನಾದವನೂ ನಾರಾಯಣನೇ. ಎಲ್ಲಕ್ಕೂ ಪರಮಗತಿ ಆ ನಾರಾಯಣನೇ. ಆತನು ಸಾಕ್ಷಿಸ್ವರೂಪನಾಗಿದ್ದರೂ ಸರ್ವಾತ್ಮಕನಾಗಿದ್ದಾನೆ. ನನ್ನನ್ನು ಸೃಷ್ಟಿಸಿದವನೂ ಆತನೇ. ಆತನಿಂದ ಸೃಷ್ಟಿಸಲ್ಪಟ್ಟ ನಾನು–ಆತನ ನೋಟದಿಂದಲೇ ಪ್ರೇರಿತನಾಗಿ, ಆತನ ಇಚ್ಛೆಯಂತೆ ಸೃಷ್ಟಿಯೋಗ್ಯವಾದುದನ್ನು ಸೃಷ್ಟಿಮಾಡುತ್ತೇನೆ. ಆ ಪರಮಾತ್ಮನು ಗುಣಾ

---

ಕರ್ಮ ಇತ್ಯಾದಿ ಯಾವುದೂ ವಾಸುದೇವನಿಗಿಂತಲೂ ಪರ (ಅಧಿಕ)ವಲ್ಲ. ಹಾಗೆಯೇ ಆತನಿಗೆ ಸಮವೂ ಅಲ್ಲ. (ವಿಜಯಧ್ವಜೀಯ) (ಶ್ಲೋಕ ೧೪)

* '**ಶಾಸ್ತ್ರಯೋನಿತ್ವಾತ್**'–ಎಂಬ ಬ್ರಹ್ಮಸೂತ್ರವು ಸಾರುವಂತೆ–ನಾರಾಯಣನೇ ವೇದಗಳಿಗೆ ಪರಮಕಾರಣವು. ದೇವತೆಗಳೂ ಆತನ ಅಂಗಗಳಿಂದ ಹುಟ್ಟಿದವರು. ಆದ್ದ ರಿಂದ ಸ್ವರ್ಗಾದಿಲೋಕಗಳೂ, ಅವುಗಳ ಆನಂದಗಳೂ ನಾರಾಯಣನಿಂದ ಬೇರೆ ಅಲ್ಲ. ಅವುಗಳಿಗೆ ಸಾಧನವಾದ ಯಜ್ಞಗ್ಗಳೂ ನಾರಾಯಣನೇ. ಪ್ರಾಣಾಯಾಮಾದಿ ಯೋಗಗಳೂ, ಅವುಗಳಿಂದ ಸಾಧ್ಯವಾದ ಚಿತ್ತದ ಏಕಾಗ್ರತೆಯೂ, ಅವುಗಳಿಂದ ಸಾಧ್ಯ ವಾದ ಜ್ಞಾನವೂ, ಅದರ ಫಲವೂ ನಾರಾಯಣನೇ. ಎಲ್ಲವೂ ನಾರಾಯಣಾಧೀನ.

(ಶ್ರೀಧರೀಯ)

ಎಲ್ಲ ವೇದಗಳೂ ನಾರಾಯಣನ ವೈಭವವನ್ನೇ ಪ್ರತಿಪಾದಿಸುತ್ತಾ ಆತನನ್ನೇ (ಮುಖ್ಯ ) ತಾತ್ಪರ್ಯವನ್ನಾಗಿ ಹೊಂದಿವೆ. ಬ್ರಹ್ಮ-ರುದ್ರಾದಿ ಸರ್ವದೇವರೂ ಆತನ ಅಂಗಗಳಿಂದಲೇ ಹುಟ್ಟುತ್ತಾರೆ. '**ನಾರಾಯಣಾದ್ಬ್ರಹ್ಮಾ ಜಾಯತೇ । ನಾರಾಯಣಾದ್ರುದ್ರೋ ಜಾಯತೇ ।**' ಸರ್ವಲೋಕಗಳಿಗೂ ನಾರಾಯಣನೇ ನಿಯಾಮಕ. ಸರ್ವ

ತೀತನು. ಆದರೆ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುವಾಗ ಸತ್ತ್ವ-ರಜಸ್ಸು-ತಮಸ್ಸುಗಳೆಂಬ ಮೂರು ಗುಣಗಳನ್ನು ತನ್ನ ಮಾಯಾಶಕ್ತಿಯಿಂದ ಸ್ವೇಚ್ಛೆಯಿಂದ ಸ್ವೀಕರಿಸುತ್ತಾನೆ. ಆ ಮೂರು ಗುಣಗಳೇ ದ್ರವ್ಯ, ಜ್ಞಾನ ಮತ್ತು ಕ್ರಿಯೆಗಳ ಆಶ್ರಯಪಡೆದು ಸ್ವರೂಪತಃ ನಿತ್ಯಮುಕ್ತನೂ, ಮಾಯಾತೀತನೂ ಆದ ಪುರುಷನನ್ನು ಮಾಯೆಗೆ ಒಳಪಡಿಸಿ ಸಂಸಾರದ ಕಟ್ಟಿಗೆ ಸಿಕ್ಕಿಸುತ್ತವೆ. ಓ ನಾರದ! ಇಂದ್ರಿಯಗಳನ್ನು ಮೆಟ್ಟಿ ನಿಂತಿರುವ ಆ ಸ್ವಾಮಿಯೇ ತ್ರಿಗುಣಗಳ ಆವರಣಗಳಿಂದ ತನ್ನ ಸ್ವರೂಪವನ್ನು ಚೆನ್ನಾಗಿ ಮರೆಸಿಕೊಂಡು ಬಿಡುವುದರಿಂದ ಜನರು ಆತನನ್ನು ತಿಳಿಯಲಾರರು. ಇಡೀ ಜಗತ್ತಿಗೂ ಮತ್ತು ಅದರ ಕರ್ತನಾಗಿ ಅದಕ್ಕೆ ತಂದೆಯಂತಿರುವ ನನಗೂ ಆತನೇ ಸ್ವಾಮಿಯು. (ಶ್ಲೋಕ 13-20)

ಮಾಯಾಧೀಶನಾದ ಆ ಭಗವಂತನು 'ಬಹು ಸ್ಯಾಂ ಪ್ರಜಾ ಯೇಯ' – 'ತಾನು ಬಹುವಾಗಬೇಕು'–ಎಂಬ ಇಚ್ಛೆಯು ಬಂದಾಗ ತನ್ನ ಮಾಯೆಯಿಂದ ತನ್ನಲ್ಲಿ ಬಂದು ಸೇರಿದ ಕಾಲ-ಕರ್ಮ ಮತ್ತು ಸ್ವಭಾವಗಳನ್ನು ಸ್ವೀಕಾರಮಾಡಿದನು. ಆತನ ಶಕ್ತಿಯಿಂದಲೇ ಕಾಲವು ತ್ರಿಗುಣಗಳಲ್ಲಿ ಕ್ಷೋಭೆಯನ್ನುಂಟುಮಾಡಿತು. ಸ್ವಭಾವವು ಅವುಗಳಿಗೆ ರೂಪಾಂತರವನ್ನು ಕೊಟ್ಟಿತು ಮತ್ತು ಕರ್ಮವು ಮಹತ್ತತ್ತ್ವಕ್ಕೆ ಜನ್ಮಕೊಟ್ಟಿತು. ರಜೋಗುಣ ಮತ್ತು ಸತ್ತ್ವಗುಣಗಳು ವೃದ್ಧಿಗೊಂಡಾಗ ಮಹತ್ತತ್ತ್ವದಲ್ಲಿ ಯಾವ ವಿಕಾರವುಂಟಾಯಿತೋ – ಅದರಿಂದ ಜ್ಞಾನ, ಕ್ರಿಯೆ ಮತ್ತು ದ್ರವ್ಯ

---

ಯಜ್ಞಗಳೂ ಆತನ ಆರಾಧನಾರೂಪವೇ ಆಗಿವೆ. ಕರ್ಮಯೋಗಾದಿ ಸಮಸ್ತಯೋಗ ಗಳೂ ಆತನ ಪ್ರೀತಿಗೋಸ್ಕರವಾಗಿಯೇ ಇವೆ. ಕೃಚ್ಛ್ರಚಾಂದ್ರಾಯಣಾದಿ ತಪಸ್ಸುಗಳೂ ಅವನ ಆರಾಧನಾರೂಪವಾಗಿವೆ. ಪರಮಭಕ್ತಿರೂಪವಾದ ಜ್ಞಾನವೂ ನಾರಾಯಣನಿಗೇ ಅಧೀನವಾಗಿದೆ. (ಚಂದ್ರಿಕಾ)

ನಾರಾಯಣಪರಾ ವೇದಾಃ : ವೇದಗಳಲ್ಲಿ ಪ್ರತಿಪಾದ್ಯವಾದ ವಸ್ತುಗಳಲ್ಲಿ ನಾರಾಯಣನೇ ಅಧಿಕನು. ಎಲ್ಲರಿಗಿಂತಲೂ ಉತ್ಕೃಷ್ಟನನ್ನಾಗಿ ನಾರಾಯಣನನ್ನೇ ಪ್ರತಿಪಾದಿಸುತ್ತದೆ. ಹಿರಣ್ಯಗರ್ಭಃ ಸಮವರ್ತತಾಗ್ರೇ–ಇತ್ಯಾದಿ ಶ್ರುತಿಗಳಲ್ಲಿ ಹಿರಣ್ಯಗರ್ಭ ಪದವು ಚತುರ್ಮುಖಾದಿ ಪರವಲ್ಲ. ನಾರಾಯಣಪರವೇ ಆಗಿದೆ. ಸರ್ವೇ ವೇದಾ ಯತ್ಪದ ಮಾಮನನ್ತಿ–ಎಂದು ಶ್ರುತಿಯು ಹೇಳುವುದಲ್ಲವೇ? (ವಿಜಯಧ್ವಜೀಯ)

ರೂಪವಾಗಿ ತಮಃಪ್ರಧಾನವಾದ ವಿಕಾರವುಂಟಾಯಿತು. ಆ ವಿಕಾರವೇ ಅಹಂಕಾರ. ಅದು ವಿಕಾರಗೊಂಡು ವೈಕಾರಿಕಾಹಂಕಾರ, ತೈಜಸಾಹಂಕಾರ ಮತ್ತು ತಾಮಸಾಹಂಕಾರ–ಎಂದು ಮೂರು ಬಗೆಯಾಯಿತು. ಅವು ಮೂರೂ ಕ್ರಮವಾಗಿ ಜ್ಞಾನಶಕ್ತಿ, ಕ್ರಿಯಾಶಕ್ತಿ ಮತ್ತು ದ್ರವ್ಯಶಕ್ತಿ ಪ್ರಧಾನ ವಾದುವು. ಪಂಚಮಹಾಭೂತಗಳಿಗೆ ಕಾರಣರೂಪವಾದ ತಾಮಸಾಹಂಕಾರ ದಲ್ಲಿ ವಿಕಾರವುಂಟಾದಾಗ ಅದರಿಂದ ಆಕಾಶವು ಉತ್ಪನ್ನವಾಯಿತು. ಆಕಾಶದ ತನ್ಮಾತ್ರೆ ಮತ್ತು ಗುಣವು ಶಬ್ದ. ಈ ಶಬ್ದದ ಮೂಲಕವೇ ದ್ರಷ್ಟಾ, ದೃಶ್ಯ–ಇವುಗಳ ಅರಿವು ಉಂಟಾಗುವುದು. ಆಕಾಶದಲ್ಲಿ ವಿಕಾರವುಂಟಾದಾಗ ಅದರಿಂದ ವಾಯುವು ಜನಿಸಿತು. ಅದರ ಗುಣವು ಸ್ಪರ್ಶ. ಇದಲ್ಲದೇ ತನ್ನ ಕಾರಣದ ಗುಣವಾದ ಶಬ್ದವೂ ವಾಯುವಿನಲ್ಲಿರುತ್ತದೆ. ಇಂದ್ರಿಯಗಳಲ್ಲಿ ಇರುವ ಸ್ಫೂರ್ತಿ, ಶರೀರದಲ್ಲಿ ಇರುವ ಜೀವನಶಕ್ತಿ, ಓಜಸ್ಸು ಮತ್ತು ಬಲಗಳು ಇದರ ರೂಪಗಳೇ ಆಗಿವೆ. ಕಾಲ, ಕರ್ಮ ಮತ್ತು ಸ್ವಭಾವಗಳಿಂದ ವಾಯುವಿನಲ್ಲೂ ವಿಕಾರವುಂಟಾಯಿತು. ಅದರಿಂದ ತೇಜಸ್ಸಿನ ಉತ್ಪತ್ತಿ ಯಾಯಿತು. ತೇಜಸ್ಸಿನ ಪ್ರಧಾನಗುಣ ರೂಪ. ಇದರ ಜೊತೆಯಲ್ಲಿ ತನ್ನ ಕಾರಣಗಳಾದ ಆಕಾಶ ಮತ್ತು ವಾಯುಗಳ ಗುಣಗಳಾದ ಶಬ್ದ ಮತ್ತು ಸ್ಪರ್ಶಗಳು ತೇಜಸ್ಸಿನಲ್ಲಿರುತ್ತವೆ. ತೇಜಸ್ಸಿನ ವಿಕಾರದಿಂದ ಜಲವು ಉಂಟಾಯಿತು. ಇದರ ಗುಣವು ರಸ. ಇದರ ಜೊತೆಗೆ ತನ್ನ ಕಾರಣತತ್ತ್ವ ಗಳ ಗುಣಗಳಾದ ಶಬ್ದ, ಸ್ಪರ್ಶ ಮತ್ತು ರೂಪಗಳೂ ಜಲದಲ್ಲಿರುತ್ತವೆ. ಜಲದ ವಿಕಾರದಿಂದ ಪೃಥ್ವಿಯ ಉತ್ಪತ್ತಿಯಾಯಿತು. ಇದರ ಪ್ರಧಾನಗುಣವು ಗಂಧ ಮತ್ತು ಇದಲ್ಲದೇ ತನ್ನ ಕಾರಣತತ್ತ್ವಗಳ ಗುಣಗಳಾದ ಶಬ್ದ-ಸ್ಪರ್ಶ-ರೂಪ-ರಸಗಳನ್ನೂ ಪೃಥ್ವಿಯು ಹೊಂದಿರುತ್ತದೆ. ವೈಕಾರಿಕಾ ಹಂಕಾರದಿಂದ ಮನಸ್ಸೂ ಮತ್ತು ಇಂದ್ರಿಯಗಳ ಅಧಿಷ್ಠಾತೃಗಳಾದ ಹತ್ತು ದೇವತೆಗಳೂ ಉತ್ಪನ್ನರಾದರು. ದಿಕ್ಕುಗಳು, ವಾಯು, ಸೂರ್ಯ, ವರುಣ, ಅಶ್ವಿನೀದೇವತೆಗಳು, ಅಗ್ನಿ, ಇಂದ್ರ, ಉಪೇಂದ್ರ, ಮಿತ್ರ ಮತ್ತು ಪ್ರಜಾಪತಿ ಇವರೇ ಆ ಹತ್ತು ಅಧಿಷ್ಠಾತೃದೇವತೆಗಳು. ತೈಜಸಾಹಂಕಾರದ ವಿಕಾರದಿಂದ ಕಿವಿ, ತ್ವಕ್ಕು, ಕಣ್ಣು, ರಸನೇಂದ್ರಿಯವಾದ ನಾಲಿಗೆ ಮತ್ತು ಘ್ರಾಣ–ಎಂಬ ಐದು ಜ್ಞಾನೇಂದ್ರಿಯಗಳೂ ಮತ್ತು ವಾಗಿಂದ್ರಿಯವಾದ

ನಾಲಿಗೆ, ಕೈಗಳು, ಕಾಲುಗಳು, ಗುದ ಮತ್ತು ಜನನೇಂದ್ರಿಯ–ಎಂಬ ಐದು ಕರ್ಮೇಂದ್ರಿಯಗಳೂ ಉತ್ಪನ್ನವಾದುವು. ಜೊತೆಯಲ್ಲೇ ಜ್ಞಾನಶಕ್ತಿ ರೂಪವಾದ ಬುದ್ಧಿಯೂ ಮತ್ತು ಕ್ರಿಯಾಶಕ್ತಿರೂಪವಾದ ಪ್ರಾಣವೂ ತೈಜಸಾಹಂಕಾರದಿಂದಲೇ ಉತ್ಪನ್ನವಾದುವು. (ಶ್ಲೋಕ 21-31)

ವತ್ಸ! ನಾರದ! ಈ ಪಂಚಮಹಾಭೂತಗಳೂ, ಇಂದ್ರಿಯಗಳೂ ಮನಸ್ಸೂ ಮತ್ತು ತ್ರಿಗುಣಗಳೂ ಪರಸ್ಪರವಾಗಿ ಸೇರದೇ ಪ್ರತ್ಯೇಕವಾಗಿದ್ದಾಗ ಅವುಗಳಿಗೆ ತಮ್ಮ ವಾಸಕ್ಕಾಗಿ ಭೋಗಗಳಿಗೆ ಸಾಧನವಾದ ಶರೀರವೆಂಬ ಮನೆಯನ್ನು ನಿರ್ಮಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಆಗ ಭಗವಂತನು ಇವುಗಳನ್ನು ತನ್ನ ಶಕ್ತಿಯಿಂದ ಪ್ರೇರಿಸಿದನು. ಆಗ ಇವು ಒಂದರೊಡನೊಂದು ಬೆರೆತು ಕಾರ್ಯ-ಕಾರಣಭಾವವನ್ನು ಪಡೆದು ಕ್ರಮವಾಗಿ ವ್ಯಷ್ಟಿ ಮತ್ತು ಸಮಷ್ಟಿರೂಪವಾದ ಪಿಂಡಾಂಡ ಮತ್ತು ಬ್ರಹ್ಮಾಂಡಗಳೆರಡನ್ನೂ ರಚನೆ ಮಾಡಿದುವು. ಆ ಬ್ರಹ್ಮಾಂಡರೂಪವಾದ ಅಂಡವು ಒಂದು ಸಾವಿರ ವರ್ಷಗಳವರೆಗೆ ನಿರ್ಜೀವವಾಗಿ ನೀರಿನಲ್ಲಿ ಬಿದ್ದಿತ್ತು. ಆಗ ಮತ್ತೆ ಕಾಲ-ಕರ್ಮ ಮತ್ತು ಸ್ವಭಾವಗಳನ್ನು ಸ್ವೀಕರಿಸಿದ ಭಗವಂತನು ಅದನ್ನು ಜೀವಂತಗೊಳಿಸಿದನು. ಆ ಅಂಡವನ್ನು ಒಡೆದುಕೊಂಡು ಅದರಿಂದ ಹೊರಟುಬಂದವನೇ ಸಾವಿರ ತೊಡೆ, ಸಾವಿರ ಪಾದ, ಸಾವಿರ ಭುಜ, ಸಾವಿರ ನೇತ್ರ, ಸಾವಿರ ಮುಖ ಮತ್ತು ಸಾವಿರ ತಲೆಗಳುಳ್ಳ ವಿರಾಟ್‌ಪುರುಷನು. ವಿದ್ವಾಂಸರು ಉಪಾಸನೆಗೋಸ್ಕರ ಆ ವಿರಾಟ್‌ಪುರುಷನ ಅಂಗಗಳಲ್ಲೇ ಸಮಸ್ತಲೋಕಗಳನ್ನೂ ಮತ್ತು ಅವುಗಳಲ್ಲಿರುವ ವಸ್ತುಗಳನ್ನೂ ಕಲ್ಪಿಸಿಕೊಳ್ಳುತ್ತಾರೆ. ಆತನ ನಡುವಿನಿಂದ ಕೆಳಗಿನ ಅಂಗಗಳಲ್ಲಿ ಏಳು ಪಾತಾಳಗಳನ್ನೂ, ಸೊಂಟದಿಂದ ಮೇಲಿರುವ ಅಂಗಗಳಲ್ಲಿ ಏಳು ಸ್ವರ್ಗಗಳನ್ನೂ ಕಲ್ಪಿಸಿಕೊಳ್ಳುತ್ತಾರೆ. ಬ್ರಾಹ್ಮಣರು ಆ ವಿರಾಟ್‌ಪುರುಷನ ಬಾಯಿ. ಆತನ ಭುಜಗಳು ಕ್ಷತ್ರಿಯರು. ವೈಶ್ಯರು ಆ ಭಗವಂತನ ತೊಡೆಗಳಿಂದಲೂ ಮತ್ತು ಶೂದ್ರರು ಪಾದಗಳಿಂದಲೂ ಜನಿಸಿದರು. ಕಾಲುಗಳಿಂದ ಕಟಿಯವರೆಗಿನ ಅಂಗಗಳಲ್ಲಿ ಸಪ್ತಪಾತಾಳಗಳೂ ಮತ್ತು ಭೂಲೋಕವೂ ಕಲ್ಪಿತವಾಗುತ್ತವೆ. ಆತನ ನಾಭಿಯಲ್ಲಿ ಭುವರ್ಲೋಕವನ್ನೂ, ಹೃದಯದಲ್ಲಿ ಸ್ವರ್ಲೋಕವನ್ನೂ ಮತ್ತು ವಕ್ಷಃಸ್ಥಳದಲ್ಲಿ ಮಹರ್ಲೋಕವನ್ನೂ ಕಲ್ಪಿಸುತ್ತಾರೆ. ಕತ್ತಿನಲ್ಲಿ

ಜನೋಲೋಕವೂ, ಎರಡು ಸ್ತನಗಳಲ್ಲಿ ತಪೋಲೋಕವೂ ಮತ್ತು ಮಸ್ತಕ ದಲ್ಲಿ ನನ್ನ ನಿವಾಸಸ್ಥಾನ, ನಿತ್ಯನಿವಾಸಸ್ಥಾನವಾದ ಸತ್ಯಲೋಕವೂ ಭಾವಿತ ವಾಗುತ್ತದೆ. ಆ ವಿರಾಟ್‌ಪುರುಷನ ನಡುವಿನಲ್ಲಿ ಅತಲಲೋಕವೂ, ತೊಡೆ ಗಳಲ್ಲಿ ವಿತಲವೂ, ಮಂಡಿಗಳಲ್ಲಿ ಪವಿತ್ರವಾದ ಸುತಲಲೋಕವೂ, ಮೊಣ ಕಾಲುಗಳಲ್ಲಿ ತಲಾತಲಲೋಕವೂ ಕಲ್ಪಿತವಾಗಿವೆ. ಕಾಲಿನ ಹರಡುಗಳಲ್ಲಿ ಮಹಾತಲವನ್ನೂ, ಪಾದಾಗ್ರದಲ್ಲಿ ರಸಾತಲವನ್ನೂ, ಅಂಗಾಲಿನಲ್ಲಿ ಪಾತಾಳ ವನ್ನೂ ಭಾವಿಸುತ್ತಾರೆ. ಹೀಗೆ ವಿರಾಟ್‌ಪುರುಷನು ಸರ್ವಲೋಕಮಯ ನಾಗಿದ್ದಾನೆ. ಅಥವಾ ಆತನ ಅಂಗಗಳಲ್ಲಿ ಲೋಕಗಳನ್ನು ಹೀಗೂ ಕಲ್ಪಿಸ ಬಹುದು ; ಪಾದಗಳಲ್ಲಿ ಭೂಲೋಕ, ನಾಭಿಯಲ್ಲಿ ಭುವರ್ಲೋಕ ಮತ್ತು ಶಿರಸ್ಸಿನಲ್ಲಿ ಸ್ವರ್ಲೋಕಗಳು ಇವೆ.” (ಶ್ಲೋಕ 32-42)

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ದ್ವಿತೀಯಸ್ಕಂಧದ ೫ನೆಯ ಅಧ್ಯಾಯವು ಮುಗಿಯಿತು.

---

ದ್ವಿತೀಯಸ್ಕಂಧ ೬ನೆಯ ಅಧ್ಯಾಯ

## ವಿರಾಟ್‌ಸ್ವರೂಪದ ವಿಭೂತಿಗಳ ವರ್ಣನೆ

ಬ್ರಹ್ಮದೇವರು ನಾರದರಿಗೆ ಉಪದೇಶವನ್ನು ಮುಂದುವರಿಸುತ್ತಾ ಹೇಳಿದರು :

**ವಾಚಾಂ ವಹ್ನೇರ್ಮುಖಂ ಕ್ಷೇತ್ರಂ ಛನ್ದಸಾಂ ಸಪ್ತ ಧಾತವಃ ।**
**ಹವ್ಯಕವ್ಯಾಮೃತಾನ್ನಾನಾಂ ಜಿಹ್ವಾ ಸರ್ವರಸಸ್ಯ ಚ ॥೧॥**

“ದೇವರ್ಷಿಯೇ! ವಾಣಿಗೂ ಮತ್ತು ವಾಣಿಯ ಅಧಿಷ್ಠಾತೃದೇವತೆ ಯಾದ ಅಗ್ನಿಗೂ ಆ ವಿರಾಟ್‌ಪುರುಷನ ಮುಖವೇ ಉತ್ಪತ್ತಿಸ್ಥಾನವು. ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್ ಮತ್ತು ಜಗತೀ–ಎಂಬ ಏಳು ಛಂದಸ್ಸುಗಳೂ ಆತನ ಸಪ್ತಧಾತುಗಳಿಂದ ಉದ್ಭವಿಸಿದುವು. ಮನುಷ್ಯರು, ಪಿತೃದೇವತೆಗಳು ಮತ್ತು ದೇವತೆಗಳು, ಇವರುಗಳಿಗೆ ಭೋಜ್ಯವಾಗಿರುವ ಅಮೃತಮಯವಾದ ಅನ್ನವೂ, ಎಲ್ಲ

ಬಗೆಯ ರಸಗಳೂ, ರಸನೇಂದ್ರಿಯವೂ ಮತ್ತು ಅದರ ಅಧಿಷ್ಠಾತೃದೇವತೆಯಾದ ವರುಣನೂ ಆತನ ನಾಲಿಗೆಯಿಂದ ಉತ್ಪನ್ನರಾದರು.

ಆತನ ಮೂಗಿನ ಹೊಳ್ಳೆಗಳಿಂದ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನಗಳೆಂಬ–ಐದು ಪ್ರಾಣಗಳೂ ಅವುಗಳ ದೇವತೆಯಾದ ಪ್ರಾಣದೇವರೂ ಮತ್ತು ಮೂಗಿನ ಇಂದ್ರಿಯದಿಂದ ಅಶ್ವಿನೀಕುಮಾರರೂ, ಸಮಸ್ತ ಔಷಧಿಗಳೂ ಮತ್ತು ಸಾಮಾನ್ಯ-ವಿಶೇಷಗಂಧಗಳೂ ಉತ್ಪನ್ನವಾದುವು. ಅವನ ನೇತ್ರೇಂದ್ರಿಯವು ರೂಪ ಮತ್ತು ತೇಜಸ್ಸುಗಳಿಗೂ ಮತ್ತು ನೇತ್ರಗೋಳಕವು ಸ್ವರ್ಗಕ್ಕೂ, ಸೂರ್ಯನಿಗೂ ಜನ್ಮಭೂಮಿಯಾಯಿತು. ಸಮಸ್ತದಿಕ್ಕುಗಳೂ ಮತ್ತು ಪವಿತ್ರವಾದ ತೀರ್ಥಗಳೂ ಆತನ ಕಿವಿ ಗಳಿಂದಲೂ ಮತ್ತು ಆಕಾಶ-ಶಬ್ದಗಳು ಆತನ ಶ್ರೋತ್ರೇಂದ್ರಿಯದಿಂದಲೂ ಹೊರಬಂದುವು. ಆತನ ಶರೀರವು ಪ್ರಪಂಚದ ಎಲ್ಲ ವಸ್ತುಗಳ ಸಾರ ಮತ್ತು ಸೌಂದರ್ಯಗಳ ಕೋಶ. ಸಮಸ್ತಯಜ್ಞಗಳೂ, ಸ್ಪರ್ಶಗುಣವೂ, ವಾಯುವೂ ಆತನ ತ್ವಗಿಂದ್ರಿಯದಿಂದ ಉದ್ಭವಿಸಿದುವು. ಆತನ ರೋಮಗಳು ಎಲ್ಲ ವೃಕ್ಷಗಳಿಗೆ ಅಥವಾ ಯಜ್ಞಕ್ಕೆ ಉಪಯೋಗಪಡುವ ಅರಳಿ, ಅತ್ತಿ, ಕಗ್ಗಲಿ, ಮುತ್ತುಗ–ಇತ್ಯಾದಿ ವೃಕ್ಷಗಳಿಗೆ ಮಾತ್ರ ಉತ್ಪತ್ತಿಸ್ಥಾನವು. ಮೇಘ, ಮಿಂಚು, ಶಿಲೆ, ಕಬ್ಬಿಣ ಮುಂತಾದ ಲೋಹಗಳು ಆತನ ಕೇಶ-ಗಡ್ಡ-ಮೀಸೆಗಳಿಂದಲೂ, ಪ್ರಾಯಶಃ ಪ್ರಪಂಚವನ್ನು ರಕ್ಷಿಸುವ ಲೋಕಪಾಲರು ಆತನ ಭುಜಗಳಿಂದಲೂ ಹೊರಬಂದರು. ಆತನ ಓಡಾಟ, ಪಾದವಿನ್ಯಾಸಗಳು ಭೂಃ, ಭುವಃ ಸುವಃ–ಎಂಬ ಮೂರು ಲೋಕಗಳಿಗೂ* ಆಶ್ರಯವು. ಶರಣಾಗತರ ಸಂರಕ್ಷಣೆ, ಭಯನಿವಾರಣೆ ಮತ್ತು ಸಮಸ್ತ ಇಷ್ಟಾರ್ಥಗಳ ಈಡೇರಿಕೆಗಳಿಗೂ ಆ ಶ್ರೀಹರಿಯ ಚರಣಕಮಲಗಳೇ ಉಪಾಯಸ್ಥಾನಗಳು. ಆ ವಿರಾಟ್‌ಪುರುಷನ ಲಿಂಗವು ಜಲ, ವೀರ್ಯ, ಸೃಷ್ಟಿ, ಮೇಘ, ಮತ್ತು ಪ್ರಜಾಪತಿದೇವರಿಗೆ ಆಧಾರವು ಮತ್ತು ಜನನೇಂದ್ರಿಯವು ಸಂತಾನ ಮತ್ತು ಇಂದ್ರಿಯಸುಖಕ್ಕೆ ಉತ್ಪತ್ತಿಸ್ಥಾನವಾಗಿದೆ. ಆತನ ಪಾಯು ಇಂದ್ರಿಯವು ಯಮನಿಗೂ, ಮಿತ್ರನಿಗೂ, ಮಲವಿಸರ್ಜನೆಗೂ ಆಶ್ರಯವಾಗಿ ಮತ್ತು

---

* ಹೋಲಿಕೆ :-“ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ। ಸಮೂಢಮಸ್ಯ ಪಾಗ್ಂ ಸುರೇ” (ಶ್ಲೋಕ ೬)

ಗುದದ್ವಾರವು ಹಿಂಸೆಗೂ, ಮೃತ್ಯುದೇವತೆಗೂ, ನರಕಕ್ಕೂ ಉತ್ಪತ್ತಿಸ್ಥಾನವು. ಆತನ ಬೆನ್ನಿನಿಂದ ಪರಾಜಯ, ಅಧರ್ಮ, ಅಜ್ಞಾನಗಳೂ–ನಾಡಿಗಳಿಂದ ನದೀ-ನದಗಳೂ, ಮೂಳೆಗಳಿಂದ ಪರ್ವತಗಳೂ ನಿರ್ಮಾಣಹೊಂದಿದುವು. ಮೂಲಪ್ರಕೃತಿ, ರಸವೆಂಬ ಧಾತು ಮತ್ತು ಸಮುದ್ರಗಳೂ, ಸಮಸ್ತಪ್ರಾಣಿಗಳೂ ಮತ್ತು ಅವುಗಳ ಮೃತ್ಯುವೂ ಆತನ ಉದರದಲ್ಲಿ ಅಡಗಿವೆ. ಆ ಪುರುಷನ ಹೃದಯವು ಮನಸ್ಸಿಗೆ ಜನ್ಮಭೂಮಿಯು. ಧರ್ಮಕ್ಕೂ, ನನಗೂ, ನಿನಗೂ, ಸನಕಾದಿಕುಮಾರರಿಗೂ, ಶಂಕರನಿಗೂ, ವಿಜ್ಞಾನಕ್ಕೂ, ಪ್ರಕೃತಿಗೂ, ಎಲ್ಲಕ್ಕೂ ಆತನ ಚಿತ್ತವೇ ಆಶ್ರಯವು.* ಹೆಚ್ಚೇನು! ನಾನೂ,

---

* ಪುರುಷಸೂಕ್ತಾರ್ಥದ ಮೂಲಕ ವಿರಾಟ್‌ಪುರುಷನ ಸ್ವರೂಪ–ಮಹಿಮೆಗಳನ್ನು ಇಲ್ಲಿ ವರ್ಣನೆಮಾಡಿದೆ. **'ಸಹಸ್ರಶೀರ್ಷಾ ಪುರುಷಃ' 'ಬ್ರಾಹ್ಮಣೋಽಸ್ಯ ಮುಖಮಾಸೀತ್'**–ಇತ್ಯಾದಿಗಳ ಅರ್ಥವನ್ನು ಹಿಂದೆ ಹೇಳಿಯಾಗಿದೆ. ಇಲ್ಲಿ **'ಪುರುಷ ಏವೇದಗ್ಂ ಸರ್ವಂ.....ದಶಾಙ್ಗುಲಂ'**–ಇತ್ಯಾದಿ ವಾಕ್ಯಗಳ ಅರ್ಥವನ್ನು ಪ್ರತಿಪಾದನೆ ಮಾಡಿದೆ. ಹತ್ತು ಅಂಗುಲಗಳಷ್ಟು ಮೀರಿದ್ದಾನೆ–ಎಂದರೆ : ಈ ವಿಶ್ವಕ್ಕಿಂತಲೂ ತುಂಬಾ ಮೇಲಿರುವವನು. ಎಲ್ಲವನ್ನೂ ತುಂಬಾ ಮೀರಿರುವವನು–ಎಂದು ಆಧಿಕ್ಯದಲ್ಲಿ ಮಾತ್ರವೇ ತಾತ್ಪರ್ಯ. ಅಪರಿಚ್ಛಿನ್ನನಾದ ಅವನು ಕೇವಲ ಹತ್ತು ಅಂಗುಲಗಳಷ್ಟು ದೊಡ್ಡವನು–ಎಂದು ಪರಿಮಾಣದ ನಿರ್ದೇಶವಲ್ಲ. (ಶ್ರೀಧರೀಯ)

ತನ್ನ ಹತ್ತು ಅಂಗುಲಗಳ ಪ್ರದೇಶದಿಂದಲೇ ಅನಂತಕೋಟಿಬ್ರಹ್ಮಾಂಡಗಳನ್ನು ವ್ಯಾಪಿಸಿರುವವನು. ಇದಕ್ಕಿಂತಲೂ ತುಂಬಾ ದೊಡ್ಡವನು. (ಚಂದ್ರಿಕಾ)

ಈ ಎಲ್ಲವೂ ಪುರುಷನೇ. ಏಕೆಂದರೆ : ಎಲ್ಲವೂ ಅವನ ಶರೀರವಾಗಿದೆ. ಎಲ್ಲವೂ ಅವನೇ. 'ಸರ್ವಂ ಖಲ್ವಿದಂ ಬ್ರಹ್ಮ' 'ಅಯಮಾತ್ಮಾ ಬ್ರಹ್ಮ' 'ತತ್ತ್ವಮಸಿ'–ಇತ್ಯಾದಿ ವೇದಾಂತ ವಾಕ್ಯಗಳಲ್ಲೂ ಇದೇ ಅರ್ಥವು. ಇಲ್ಲಿ ಸ್ವರೂಪೈಕ್ಯವನ್ನು ಹೇಳಿಲ್ಲ. ಎಲ್ಲವನ್ನೂ ವ್ಯಾಪಿಸಿರುವ ಕಾರಣ ಅವನೇ ಎಲ್ಲವೂ ಎಂದು ಸಾಮಾನಾಧಿಕರಣ್ಯವನ್ನು ಹೇಳಿದೆ. **'ತೇನೇದಂ ಆವೃತಂ ವಿಶ್ವಂ'** ಎಂಬ ಶ್ರೀಮದ್ಭಾಗವತ ವಾಕ್ಯದಿಂದಲೂ ಇದು ಸ್ಪಷ್ಟ ವಾಗಿದೆ. **(ಚಂದ್ರಿಕಾ)**

ಆತನು ಈ ಬ್ರಹ್ಮಾಂಡರೂಪವಾದ ಪ್ರಪಂಚವನ್ನು ಎಲ್ಲೆಡೆಗಳಲ್ಲೂ ವ್ಯಾಪಿಸಿದವನಾಗಿ ಹತ್ತು ಅಂಗುಲಗಳಷ್ಟು ಮೀರಿದ್ದಾನೆ. ಇಲ್ಲಿ ಹತ್ತು ಅಂಗುಲಗಳು–ಹತ್ತೇ ಅಂಗುಲಗಳು ಎಂದು ನಿಖರವಾದ ಪ್ರಮಾಣವಲ್ಲ. ಅತ್ಯಧಿಕ ಪ್ರಮಾಣದಲ್ಲಿ ಎಂದಷ್ಟೇ ಅಭಿಪ್ರಾಯ. **'ಅಧೋನಿಷ್ಟ್ಯಾ ವಿತಸ್ತ್ಯಾನ್ತೇ ನಾಭ್ಯಾಮುಪರಿ ತಿಷ್ಠತಿ'** ಎಂದು

**ನೀನೂ, ಶಂಕರನೂ, ನಿನ್ನ ಅಣ್ಣಂದಿರಾದ ಸನಕಾದಿಗಳೂ, ದೇವಾಸುರ-ಮನುಷ್ಯರೂ, ನಾಗರೂ, ಪಕ್ಷಿಗಳೂ, ಮೃಗಗಳೂ, ತೆವಳುವ ಪ್ರಾಣಿಗಳೂ, ಗಂಧರ್ವರೂ, ಅಪ್ಸರಸ್ಸುಗಳೂ, ಯಕ್ಷರೂ, ರಾಕ್ಷಸರೂ, ಭೂತ-ಪ್ರೇತಗಳೂ, ಸರ್ಪಗಳೂ, ಪಶುಗಳೂ, ಪಿತೃದೇವತೆಗಳೂ, ಸಿದ್ಧರೂ, ವಿದ್ಯಾಧರರೂ, ಚಾರಣರೂ, ವೃಕ್ಷಗಳೂ ಆಕಾಶ-ನೀರು-ನೆಲದಲ್ಲಿ ವಾಸಿಸುವ ಇತರ ನಾನಾಜೀವಿಗಳೂ, ಗ್ರಹ-ನಕ್ಷತ್ರಗಳೂ, ಬಾಲವುಳ್ಳ ತಾರೆಗಳೂ, ಚುಕ್ಕಿಗಳೂ, ತಾರೆಗಳೂ, ಮಿಂಚು-ಮೋಡಗಳೂ–ಎಲ್ಲವೂ ಆ ವಿರಾಟ ಪುರುಷನೇ. ಭೂತ-ಭವಿಷ್ಯ-ವರ್ತಮಾನಗಳಿಗೆ ಸೇರಿದ ಎಲ್ಲವೂ ಆತನೇ. ಇವೆಲ್ಲವನ್ನೂ ಎಲ್ಲೆಡೆಗಳಿಂದಲೂ ಆವರಿಸಿ ತುಂಬಿರುವುದಲ್ಲದೇ ಹತ್ತು ಅಂಗುಲಗಳಷ್ಟು ಮೇಲೆ ಇದನ್ನು ಮೀರಿದವನಾಗಿದ್ದಾನೆ.**

---

ಶ್ರುತಿಯು ಹೇಳುವಂತೆ ವಿತಸ್ತಿಪ್ರದೇಶದಲ್ಲಿರುವ ಸ್ಥಾನವು ಹೃದಯ. ಅದರಲ್ಲಿರುವ ಪರಮಪುರುಷನಿಂದ ಈ ವಿಶ್ವವೆಲ್ಲವೂ ವ್ಯಾಪ್ತವಾಗಿದೆ. (ವೀರರಾಘವೀಯ)

ಭೂತ ಮತ್ತು ವರ್ತಮಾನವಾಗಿರುವ ಈ ಮಹದಹಂಕಾರಾದಿಗಳೆಲ್ಲವನ್ನೂ **'ಸ ಪುರುಷ ಏವ ಯದ್ಭೂತಂ ಯಚ್ಚ ಭವ್ಯಂ ಇದಂ । ಸರ್ವಂ ವಿಶ್ವತೋ ವೃತ್ವಾऽತ್ಯತಿಷ್ಠದ್ದಶಾಙ್ಗುಲಮ್ ।'**–ದೇಶ-ಕಾಲ-ಗುಣಗಳಿಂದ ಭೂಮಿಯನ್ನು ಅಂದರೆ ಪ್ರಕೃತಿಯಾಗಿ ಜೀವಭೂತೆಯಾಗಿರುವ ರಮಾದೇವಿಯನ್ನು ವ್ಯಾಪಿಸಿಕೊಂಡು ಆಕೆಯನ್ನು ಸ್ವಾತಂತ್ರ್ಯ-ಸರ್ವಜ್ಞತ್ವಾದಿ ಗುಣಗಳಿಂದ ಹತ್ತು ಅಂಗುಲಗಳಷ್ಟು ಎಂದರೆ : ಹತ್ತರಷ್ಟು (ಅತ್ಯಂತ ಅಧಿಕವಾಗಿ ಅನಂತವಾಗಿ) **'ದಶದಶತಸ್ತಚ್ಛತಂ, ದಶಶತಾನಿ–ತತ್ಸಹಸ್ರಂ, ತತ್ಸರ್ವಂ, ತಾನಿ ದಶದಶೇತಿ ವೈ ಸರ್ವಮೇತಾವತೀ ಹಿ ಸಂಖ್ಯಾ'**–ಎಂಬ ಶ್ರುತಿಯಂತೆ, 'ದಶ' ಎಂದರೆ ಅನಂತಪಾಲು ಮೀರಿಸಿದ್ದಾನೆ. ಆಕೆಗಿಂತಲೂ ತುಂಬಾ ಅತಿಶಯನಾದವನು. ಇದೆಲ್ಲವೂ 'ಪುರುಷನೇ' ಎಂದು ಸ್ವತಂತ್ರವಾಕ್ಯವಾಗಿ ತೆಗೆದುಕೊಂಡರೆ ಅನ್ವಯ ಸರಿಯಾಗುವುದಿಲ್ಲ. ಮುಂದೆ 'ಉತಾಮೃತತ್ವಸ್ಯೇಶಾನಃ' ಎಂದು ಪುರುಷನ ಉತ್ತಮತ್ವವನ್ನು ಹೇಳುವ ವಾಕ್ಯಾಭಿಪ್ರಾಯಕ್ಕೂ ವಿರೋಧವಾಗುತ್ತದೆ. **'ಪುರುಷ ಏವ ಇದಂ ಸರ್ವಂ ವಿಶ್ವತೋ ವೃತ್ವಾ ಅತ್ಯತಿಷ್ಠತ್ ದಶಾಙ್ಗುಲಂ'** ಎಂದು ಒಟ್ಟಿಗೇ ತೆಗೆದುಕೊಂಡು ಅರ್ಥಮಾಡಬೇಕು. ಆತನು ರಮಾದೇವಿಯನ್ನೂ ದೇಶ-ಕಾಲ-ಗುಣಗಳಿಂದ ವ್ಯಾಪಿಸಿ ಆಕೆಗಿಂತಲೂ ಅನಂತಪಾಲು ಅತಿಶಯವಾಗಿದ್ದಾನೆ. ದೇಶ-ಕಾಲವ್ಯಾಪ್ತಿಯು ಪ್ರಕೃತಿಸ್ವರೂಪಿಣಿಯಾದ ರಮಾದೇವಿಗೂ ಉಂಟು. ಆದರೆ ಪರಮಾತ್ಮನು ಆಕೆಗಿಂತಲೂ ಅತ್ಯಂತ ಅತಿಶಯನು. ಆಕೆಗಿಂತಲೂ ಅತಿಶಯನಾದವನು. ಅಂದಬಳಿಕ ಈ ಮಹದಹಂಕಾರಾದಿಗಳಿಗಿಂತಲೂ ಅತಿಶಯನು ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅದು ಕೈಮುತಿಕನ್ಯಾಯದಿಂದಲೇ ಸಿದ್ಧವಾಗುತ್ತದೆ.

**ಸ್ವದಿಷ್ಣ್ಯಂ ಪ್ರತಪನ್ಪ್ರಾಣೋ ಬಹಿಶ್ಚ ಪ್ರತಪತ್ಯಸೌ ।**
**ಏವಂ ವಿರಾಜಂ ಪ್ರತಪಂಸ್ತಪತ್ಯನ್ತರ್ಬಹಿಃ ಪುಮಾನ್ ॥೧೬॥**

**ಪ್ರಾಣವು* ತನ್ನ ಮನೆಯನ್ನೂ ಪ್ರಕಾಶಪಡಿಸುತ್ತಾ ಹೊರಗೂ ಪ್ರಕಾಶವನ್ನು ಹರಡುವಂತೆ–ಪುರುಷನು ಈ ವಿರಾಟ್‌ಪುರುಷನನ್ನು ಪೂರ್ಣವಾಗಿ ಪ್ರಕಾಶಪಡಿಸುತ್ತಾ ಆತನ ಒಳಗೂ-ಹೊರಗೂ-ಎಲ್ಲೆಡೆಗಳಲ್ಲೂ ಪ್ರಕಾಶವನ್ನು ಬೀರುತ್ತಿದ್ದಾನೆ.**

---

ಹೀಗೆಯೇ ವ್ಯಾಖ್ಯಾನಿಸಬೇಕು. ಇಲ್ಲದಿದ್ದರೆ ಅನ್ವಯಾಭಾವ, ಪ್ರಕ್ರಮಭಂಗ ಮತ್ತು ಉತ್ತರವಾಕ್ಯವಿರೋಧ–ಎಂಬ ಮೂರು ದೋಷಗಳಾಗುತ್ತವೆ. '**ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮಿತಿ । ಪುರುಷೇಣೈವೇದಂ ವ್ಯಾಪ್ತಂ ಯದ್ಭೂತಂ ಯಚ್ಚ ಭವ್ಯಂ ॥" 'ಆತೃಣಾದಾಕರೀಷಾತ್ಸರ್ವಂ ಭಗವಾನಿತಿ ಮಿಥ್ಯಾದೃಷ್ಟಿರೇಷಾ'** ಎಲ್ಲವೂ ಭಗವಂತನೇ ಎಂದು ಹೇಳುವುದು ಮಿಥ್ಯಾದೃಷ್ಟಿ ಎಂದು ಶ್ರುತಿಯೂ ಹೇಳುತ್ತದೆ–ಎಂದು ಶ್ರೀವಾದಿರಾಜಸ್ವಾಮಿಗಳ ಪುರುಷಸೂಕ್ತಭಾಷ್ಯದಲ್ಲಿ ನೋಡುತ್ತೇವೆ.

ಭೂತ-ಭವಿಷ್ಯ-ವರ್ತಮಾನಕಾಲಗಳಿಗೆ ಸೇರಿದ ಈ ಜಗತ್ತೆಲ್ಲವೂ ಪುರುಷನೇ ಎಂದರೆ ಪುರುಷನಿಗೆ ಅಧೀನವಾದ ಇರುವಿಕೆ ಇತ್ಯಾದಿಗಳನ್ನೇ ಹೊಂದಿದೆ. ಆತನಿಗೆ ಅಧೀನವೇ ಹೊರತು ಆತನೊಡನೆ ಐಕ್ಯಹೊಂದಿಲ್ಲ. 'ಯದಧೀನಾ ಯಸ್ಯ ಸತ್ತಾತತ್ತದಿತ್ಯೇವ ಭಣ್ಯತೇ' ಎಂಬ ನೀತಿಯಂತೆ ಅವನಿಗೆ ಅಧೀನವಾಗಿರುವುದನ್ನು ಅವನೇ ಎಂದು ಕರೆದಿದೆ. ಅಥವಾ ಇದೆಲ್ಲವೂ ಆತನಿಂದಲೇ ವ್ಯಾಪಿಸಲ್ಪಟ್ಟಿದೆ ಎಂದೂ ಹೊಂದಿಸಬಹುದು.

(ವಿಜಯಧ್ವಜೀಯ) (ಶ್ಲೋಕ ೧೩-೧೫)

---

* '**ಸ್ವಧಿಷ್ಣ್ಯಂ ಪ್ರತಪನ್ಪ್ರಾಣೋ ಬಹಿಶ್ಚ ಪ್ರತಪತ್ಯಸೌ**'–ಎಂದು ಮೂಲ. ಇಲ್ಲಿ ಹೇಳಲ್ಪಟ್ಟಿರುವ ಪ್ರಾಣನು ಯಾರು? ಎಂಬುದು ಪ್ರಶ್ನೆ. ಪ್ರಾಣ ಎಂದರೆ ಸೂರ್ಯ. ಏಕೆಂದರೆ: '**ಅಸಾವಾದಿತ್ಯಃ ಪ್ರಾಣಃ**'–ಎಂದು ಶ್ರುತಿಯು ಹೇಳುತ್ತದೆ. ಆದಿತ್ಯನು ತನ್ನ ಮನೆಯನ್ನು ಅಂದರೆ ಮಂಡಲವನ್ನು ಪ್ರಕಾಶಪಡಿಸುತ್ತಾ ಹೊರಗೂ ಪ್ರಕಾಶ ವನ್ನು ಹರಡುವಂತೆ–ಪರಮಾತ್ಮನು ವಿರಾಟ್‌ದೇಹವನ್ನು ಪ್ರಕಾಶಪಡಿಸುತ್ತಾ ಇಡೀ ಬ್ರಹ್ಮಾಂಡವನ್ನೂ ಒಳಗೂ-ಹೊರಗೂ ಪ್ರಕಾಶಪಡಿಸುತ್ತಾನೆ. (ಶ್ರೀಧರೀಯ)

"ಪ್ರಾಣ ಎಂದರೆ ಶರೀರದಲ್ಲಿರುವ ಪ್ರಾಣಾಪಾನಾದಿ ಸಂಜ್ಞೆಗಳುಳ್ಳ ವಾಯು. ಅದು ಮನೆಯಾದ ಶರೀರವನ್ನು ನಿಯಮಿಸುವಂತೆಯೇ ಹೊರಗೂ ಸಂಚರಿಸುತ್ತದೆ. ಹಾಗೆಯೇ ಪರಮಾತ್ಮನು ವಿರಾಜನನ್ನು ಅಂದರೆ ವಿಶೇಷವಾಗಿ ಬೆಳಗುತ್ತಿರುವ ಬ್ರಹ್ಮಾಂಡವನ್ನು ಅಂತರ್ಯಾಮಿಪುರುಷನಾಗಿ ನಿಯಮಿಸುತ್ತಾ ಒಳಗೂ-ಹೊರಗೂ ಸರ್ವತ್ರ ಪ್ರಕಾಶಿಸುತ್ತಿದ್ದಾನೆ." (ಚಂದ್ರಿಕಾ)

**ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ।**
**ಮಹಿಮೈಷ ತತೋ ಬ್ರಹ್ಮನ್ಪುರುಷಸ್ಯ ದುರತ್ಯಯಃ ॥೧೭॥**

ಮಹರ್ಷಿಯೇ! ಆತನು ಅಪಾರಮಹಿಮನು ; ಮರಣಧರ್ಮಕ್ಕೆ ಸಂಬಂಧಪಟ್ಟ ಕರ್ಮಫಲವೆಂಬ ಅನ್ನವನ್ನು ಮೀರಿದವನು. ಕರ್ಮಫಲದ ಸೋಂಕಿಲ್ಲದ ಅಮೃತಸ್ವರೂಪಿಯು. ಆತನು ಅಮೃತವೂ, ಅಭಯಪ್ರದವೂ ಆಗಿರುವ ಮೋಕ್ಷಕ್ಕೆ ಅಧಿಪತಿಯಾಗಿದ್ದಾನೆ. ಆತನ ಮಹಿಮೆಯ ಪಾರವನ್ನು ಯಾರೂ ಹೊಂದಲಾರರು.

**ಪಾದೇಷು ಸರ್ವಭೂತಾನಿ ಪುಂಸಃ ಸ್ಥಿತಿಪದೋ ವಿದುಃ ।**
**ಅಮೃತಂ ಕ್ಷೇಮಮಭಯಂ ತ್ರಿಮೂರ್ಧ್ನೋಽಧಾಯಿ ಮೂರ್ಧಸು ॥***

---

'ಪ್ರಾಣ' ಎಂದರೆ ಪರಮಾತ್ಮ. ಹೃದಯದೊಳಗಿರುವ ಈ ಪರಮಾತ್ಮನು ತನ್ನ ವಾಸಸ್ಥಾನವಾಗಿರುವ ಈ ಶರೀರವನ್ನು ಒಳಗೆ ವ್ಯಾಪಿಸಿ ತನ್ನ ಪ್ರಶಾಸನಕ್ಕೆ ಅಧೀನ ವನ್ನಾಗಿ ಮಾಡಿಕೊಂಡು ತನ್ನ ವಾಸಸ್ಥಾನದ ಹೊರಗಿರುವ ವಸ್ತುಗಳನ್ನೂ ತನ್ನ ಪ್ರಶಾಸನಕ್ಕೆ ಅಧೀನವನ್ನಾಗಿ ಮಾಡಿಕೊಂಡಿರುವಂತೆಯೇ ವಿರಾಜನನ್ನೂ ಅಂದರೆ ವಿರಾಟ್‌ಶಬ್ದದಿಂದ ಕರೆಯಲ್ಪಡುವ ಕಾರ್ಯಪ್ರಪಂಚವನ್ನೂ ತನ್ನ ಪ್ರಕಾಶನಕ್ಕೆ ಅಧೀನವನ್ನಾಗಿ ಮಾಡಿಕೊಳ್ಳುತ್ತಾನೆ. ಇಲ್ಲಿ ಕಾರ್ಯದಲ್ಲಿ ಕಾರಣವನ್ನು ಉಪಚಾರ ದಿಂದ ಹೇಳಿರುವುದರಿಂದ 'ವಿರಾಟ್' ಶಬ್ದಕ್ಕೆ ಬ್ರಹ್ಮಾಂಡ ಎಂದು ಅರ್ಥ. ಇದರಿಂದ ಪರಮಾತ್ಮನು ಅಪರಿಚ್ಛಿನ್ನನೆಂದು ಪ್ರತಿಪಾದನೆಮಾಡಿರುವ 'ಸ ಭೂಮಿಂ ವಿಶ್ವತೋ ವೃತ್ವಾ' ಎಂಬ ಅರ್ಥ ಋಕ್ಕಿನ ವ್ಯಾಖ್ಯಾನವನ್ನು ಶ್ರೀಮದ್ಭಾಗವತವು ಇಲ್ಲಿ ಮಾಡಿದಂತಾಯಿತು.

(ವೀರರಾಘವೀಯ)

---

* ಶ್ರೀಹರಿಯ ಅಂಶಗಳಲ್ಲಿ ಸ್ವರೂಪಾಂಶ, ಭಿನ್ನಾಂಶ ಎಂದು ಎರಡು ಪ್ರಕಾರಗಳು. ಅವುಗಳಲ್ಲಿ ಸರ್ವಜೀವಗಳೂ ಆತನ ಭಿನ್ನಾಂಶಗಳು ಎಂದು ಎಲ್ಲವನ್ನೂ ಯಥಾವತ್ತಾಗಿ ಬಲ್ಲವರು ಹೇಳುತ್ತಾರೆ. (ಮಿಣುಕುಹುಳುವು ಕಾಲಾಗ್ನಿಯ ಅಂಶವೇ ಆದರೂ ಅದು ಕಾಲಾಗ್ನಿಯ ಮಹಿಮೆಯನ್ನು ಮೀರಲಾರದು. ಹಾಗೆಯೇ ಜೀವಗಳು ಪರಮಾತ್ಮನ ಅಂಶಗಳೇ ಆದರೂ ಪರಮಾತ್ಮನ ಮಹಿಮೆಯನ್ನೂ ಮೀರಿಸಲಾರವು.) ಪರಮಾತ್ಮನ ಸ್ವರೂಪಾಂಶಗಳು ಎಲ್ಲಿವೆ? ಎಂದರೆ **ಅಮೃತಂ ಕ್ಷೇಮಂ ಅಭಯಂ** –**ಅಮೃತಂ** ಎಂದರೆ ಅನಂತಾಸನ, **ಕ್ಷೇಮಂ** ಎಂದರೆ ವೈಕುಂಠ, ಅಭಯಂ ಎಂದರೆ ಶ್ವೇತದ್ವೀಪ–ಈ ಮೂರು ಪುರಗಳೂ ತ್ರಿಮೂರ್ಧನ ಮೂರು ಶಿರಸ್ಸುಗಳಲ್ಲಿ ಧರಿಸಲ್ಪಟ್ಟಿವೆ. ರೂಪಾಂತರದಿಂದ ಧರಿಸಲ್ಪಟ್ಟಿಲ್ಲ. ತ್ರಿವಿಧರಾದ ಮುರರು ಎಂದರೆ ಜೀವರು

ಆತನು ಪರಮಪುರುಷನು ; ಪರಿಪೂರ್ಣನು. ಈ ಜಗತ್ತೆಲ್ಲವೂ ಆತನ ಕಾಲು ಅಂಶಮಾತ್ರವೇ. ಹಾಗೆ ಆತನ ಪಾದಮಾತ್ರವಾಗಿರುವ ಈ ಜಗತ್ತಿನಲ್ಲಿ ಸಮಸ್ತಭೂತಗಳೂ ವಾಸಮಾಡುತ್ತಿವೆ. ಅಮೃತವೂ, ಕ್ಷೇಮವೂ, ಅಭಯವೂ ಆಗಿರುವ ಆತನ ತ್ರಿಪಾತ್‌ಸ್ವರೂಪವಾದ ಪರಮಪದವು ಭೂಃ,ಭುವಃ,ಸುವಃ –ಎಂಬ ಮೂರು ಲೋಕಗಳಿಗೂ ಮೇಲೆ ತಲೆಯ ಸ್ಥಾನದಲ್ಲಿದೆ.

**ಪಾದಾಸ್ತ್ರಯೋ ಬಹಿಶ್ಚಾಸನ್ನಪ್ರಜಾನಾಂ ಯ ಆಶ್ರಮಾಃ ।**
**ಅನ್ತಸ್ತ್ರಿಲೋಕ್ಯಾಸ್ತ್ವಪರೋ ಗೃಹಮೇಧೋಽಬೃಹದ್ವ್ರತಃ ॥೧೯॥**

ನೈಷ್ಠಿಕಬ್ರಹ್ಮಚರ್ಯ, ವಾನಪ್ರಸ್ಥ ಮತ್ತು ಸಂನ್ಯಾಸ–ಎಂಬ ಸಂತಾನ ಸಂಸಾರಧರ್ಮರಹಿತವಾದ ಮೂರು ಆಶ್ರಮಗಳು ಮೂರು ಲೋಕಗಳ ಹೊರಗಿರುವ ಆ ತ್ರಿಪಾತ್‌ಸ್ವರೂಪದಲ್ಲಿವೆ. ಬ್ರಹ್ಮಚರ್ಯವ್ರತರಹಿತವಾದ ಗೃಹಸ್ಥಾಶ್ರಮವಾದರೋ ಆ ಮೂರು ಲೋಕಗಳೊಳಗೇ ವಾಸಮಾಡುತ್ತದೆ.

---

'ಪ್ರಾಣನಾಮಕನಾದ ಪರಮಾತ್ಮನು ತನ್ನ ಸ್ಥಾನವಾದ ಹೃದಯದಲ್ಲಿದ್ದು ಒಳಗೆ ಎಲ್ಲವನ್ನೂ ನೋಡುತ್ತಾ, ದೇಹದ ಹೊರಗೂ ಹೊರಗಿನ ವಿಷಯಗಳನ್ನೂ ನೋಡುತ್ತಿರುತ್ತಾನೆ. ಹಾಗೆಯೇ 'ವಿರಾಟ್' ಎಂದು ಕರೆಯಲ್ಪಡುವ ಅಂಡವನ್ನೂ ಅದರೊಳಗಿರುವ ಸರ್ವಪದಾರ್ಥಗಳನ್ನೂ ನೋಡುತ್ತಾ ಬ್ರಹ್ಮಾಂಡದ ಹೊರಗಿರುವ ವಿಶೇಷಾದಿ ಮೂಲಪ್ರಕೃತಿ ಪರ್ಯಂತವಾದ ಎಲ್ಲ ಪದಾರ್ಥಗಳನ್ನೂ ಅಶೇಷ-ವಿಶೇಷಾಕಾರದಿಂದ ನೋಡುತ್ತಾನೆ. ಪ್ರಾಣಃ = ಎಂದರೆ ಪ್ರಕೃಷ್ಟಚೇಷ್ಟಾಯುಕ್ತನಾಗಿರುವವನು ; ಪರಮಾತ್ಮನು. 'ತಪ್' ಧಾತುವಿಗೆ ಇಲ್ಲಿ ದರ್ಶನ ಎಂದರ್ಥ. 'ತಪ-ಸಂತಾಪ ದರ್ಶನಯೋಃ ' ಎಂದು ಧಾತ್ವರ್ಥ. ಹೃದಯೋಪಾಧಿಯಲ್ಲಿ ಇರುವ ಪರಮಾತ್ಮನು ಜೀವಕ್ಕಿಂತಲೂ ಹೇಗೆ ವಿಲಕ್ಷಣನಾಗಿದ್ದಾನೆ? ಎಂಬುದನ್ನು ಇಲ್ಲಿ ಹೇಳಿದೆ. ಈ

---

ಗಳು. ಅವರನ್ನು ಧರಿಸಿರುವವನು ತ್ರಿಮೂರ್ಧಾ ಎಂದರೆ ಶ್ರೀಹರಿ. ಅನಂತಾಸನ, ವೈಕುಂಠ, ನಾರಾಯಣ ಎಂಬ ಸ್ವರೂಪಾಂಶಗಳು ಈ ಲೋಕಗಳಲ್ಲಿವೆ. 'ತ್ರಿಮೂರ್ಧಾ ಸನ್ ಹರಿರ್ಧತ್ತೇ ದ್ಯುತ್ರಯೇ ಮೂರ್ಧಭಿಸ್ತ್ರಿಭಿಃ ತ್ರಿಮೂರ್ಧಾ ಎಂದರೆ ಬ್ರಹ್ಮ-ವಿಷ್ಣು-ಮಹೇಶ್ವರಾತ್ಮನಾಗಿ ಮೂರು ಶಿರಸ್ಸುಗಳುಳ್ಳ ಭಗವಂತನು. ಆತನ ಶಿರಸ್ಸುಗಳಲ್ಲಿ ಎಂದರೆ ಸತ್ಯ, ವೈಕುಂಠ ಮತ್ತು ಕೈಲಾಸಗಳೆಂಬ ಸ್ಥಾನಗಳಲ್ಲಿ ಅವುಗಳ ನಾಮಾಂತರಗಳಿಂದಲೇ ಕೂಡಿರುವ, 'ಅಮೃತಂ, ಕ್ಷೇಮಂ, ಅಭಯಂ' ಎಂಬ ರೂಪತ್ರಯವು ಇರಿಸಲ್ಪಟ್ಟಿದೆ ಎಂದು ಕೆಲವರು ವ್ಯಾಖ್ಯಾನಿಸಿರುತ್ತಾರೆ. ಇದು ಸರಿಯಲ್ಲ.

(ವಿಜಯಧ್ವಜೀಯ) (ಶ್ಲೋಕ ೧೮)

**ಸೃತೀ ವಿಚಕ್ರಮೇ ವಿಷ್ವಕ್ ಸಾಶನಾನಶನೇ ಉಭೇ ।**
**ಯದವಿದ್ಯಾ ಚ ವಿದ್ಯಾ ಚ ಪುರುಷಸ್ತೂಭಯಾಶ್ರಯಃ ॥೨೦॥ ***

ಜೀವನು-ಕರ್ಮಫಲವುಳ್ಳ ಮಾರ್ಗ ಮತ್ತು ಕರ್ಮಫಲರಹಿತವಾದ ಮಾರ್ಗ–ಈ ಎರಡರಲ್ಲೂ ಸಂಚರಿಸುತ್ತಾನೆ. ಮೊದಲನೆಯದು ಅವಿದ್ಯಾ ಮಾರ್ಗ ; ದಕ್ಷಿಣಾಯನಮಾರ್ಗ. ಎರಡನೆಯದು ವಿದ್ಯಾಮಾರ್ಗ ; ಉತ್ತರಾಯಣಮಾರ್ಗ. ಪರಮಪುರುಷನಾದರೋ ಈ ಭೋಗಮಾರ್ಗ ಮತ್ತು ಅಪವರ್ಗಮಾರ್ಗಗಳೆರಡಕ್ಕೂ ಆಶ್ರಯನಾಗಿದ್ದಾನೆ.

**ಯಸ್ಮಾದಣ್ಡಂ ವಿರಾಡ್ ಜಜ್ಞೇ ಭೂತೇನ್ದ್ರಿಯಗುಣಾತ್ಮಕಃ ।**
**ತದ್ದ್ರವ್ಯಮತ್ಯಗಾದ್ವಿಶ್ವಂ ಗೋಭಿಃ ಸೂರ್ಯ ಇವಾತಪನ್ ॥೨೧॥**

ಸೂರ್ಯನು ತನ್ನ ಕಿರಣಗಳಿಂದ ಎಲ್ಲವನ್ನೂ ಪ್ರಕಾಶಪಡಿಸುತ್ತಿದ್ದರೂ ಆ ಎಲ್ಲವನ್ನೂ ಮೀರಿ ಪ್ರತ್ಯೇಕವಾಗಿಲ್ಲವೇ? ಹಾಗೆಯೇ ಈ ಅಂಡದ ಮತ್ತು ಪಂಚಭೂತಗಳ, ಹನ್ನೊಂದು ಇಂದ್ರಿಯ ಮತ್ತು ತ್ರಿಗುಣಾತ್ಮಕವಾದ ವಿರಾಟ್‌ಸ್ವರೂಪದ ಉತ್ಪತ್ತಿಗೆ ಕಾರಣನಾದ ಪರಮಾತ್ಮನು ಇವುಗಳೊಳಗೇ ಇದ್ದು ಇವುಗಳನ್ನು ನಿಯಮಿಸುತ್ತಿದ್ದರೂ ತಾನು ಈ ದ್ರವ್ಯಗಳೆಲ್ಲವನ್ನೂ ಮೀರಿ ಸರ್ವಾತೀತನಾಗಿದ್ದಾನೆ.

---

ಶ್ಲೋಕದ ಅರ್ಥವನ್ನೇ ಹೇಳುವ ಮತ್ತೊಂದು ವಚನ : 'ಪಶ್ಯನ್ ಸ್ವಧಿಷ್ಣ್ಯಂ ದೇಹಂ ಸಃ ಬಹಿಸ್ಥಾನ್ವಿಷಯಾನಪಿ । ಏವಮಣ್ಡಾನ್ತರಂ ಪಶ್ಯನ್ ಬಹಿಃ ಸರ್ವತ್ರ ಪಶ್ಯತಿ ॥'
(ವಿಜಯಧ್ವಜೀಯ) (ಶ್ಲೋಕ ೧೬)

* ತ್ರಿಪಾದ್ವಿಭೂತಿಯ ಲೋಕಗಳು ಅನಂತವಾಗಿವೆ. ಅವೆಲ್ಲವೂ ಶುದ್ಧಸತ್ತ್ವ ಮಯವಾಗಿವೆ. ಬ್ರಹ್ಮಾನಂದಸುಖಾತ್ಮಕಗಳಾಗಿವೆ. ಅವು ನಿತ್ಯ, ನಿರ್ವಿಕಾರ, ಸಾಮ ಗಾನಲಹರಿಯಿಂದ ತುಂಬಿವೆ. ಭಕ್ತಿರಸಪೂರ್ಣವಾಗಿವೆ. ಅವು ಈ ಪ್ರಪಂಚಕ್ಕಿಂತಲೂ ಹೊರಗಿನವು. ಶ್ರೀಪಾದ್ವಿಭೂತೇರ್ಲೋಕಾಸ್ತು ಅಸಂಖ್ಯಾಃ ಪರಿಕೀರ್ತಿತಾಃ ।
ಶುದ್ಧಸತ್ತ್ವಮಯಾಃ ಸರ್ವೇ ಬ್ರಹ್ಮಾನಂದಸುಖಾತ್ಮಕಾಃ ॥
ಸರ್ವೇ ನಿತ್ಯಾ ನಿರ್ವಿಕಾರಾ ಹೇಯರಾಗವಿವರ್ಜಿತಾಃ ।
ನಾರಾಯಣಪದಾಂಭೋಜಭಕ್ತ್ಯೈಕರಸಸೇವಿತಾಃ ॥
ನಿರಂತರಂ ಸಾಮಗಾನಪರಿಪೂರ್ಣಸುಖಾಶ್ರಿತಾಃ ।
ಸರ್ವೇ ಪಂಚೋಪನಿಷದಸ್ವರೂಪಾ ದೇವವರ್ಚಸಃ ॥ (ಶ್ಲೋಕ ೨೦)

**ಯದಾಸ್ಯ ನಾಭ್ಯಾನ್ನಲಿನಾದಹಮಾಸಂ ಮಹಾತ್ಮನಃ ।**
**ನಾವಿದಂ ಯಜ್ಞಸಮ್ಭಾರಾನ್ಪುರುಷಾವಯವಾದೃತೇ ॥೨೨॥**

**ತೇಷು ಯಜ್ಞಸ್ಯ ಪಶವಃ ಸವನಸ್ಪತಯಃ ಕುಶಾಃ ।**
**ಇದಂ ಚ ದೇವಯಜನಂ ಕಾಲಶ್ಚೋರುಗುಣಾನ್ವಿತಃ ॥೨೩॥**

**ವಸ್ತೂನ್ಯೋಷಧಯಃ ಸ್ನೇಹಾ ರಸಲೋಹಮೃದೋ ಜಲಮ್ ।**
**ಋಚೋ ಯಜೂಂಷಿ ಸಾಮಾನಿ ಚಾತುರ್ಹೋತ್ರಂ ಚ ಸತ್ತಮ ॥**

**ನಾಮಧೇಯಾನಿ ಮನ್ತ್ರಾಶ್ಚ ದಕ್ಷಿಣಾಶ್ಚ ವ್ರತಾನಿ ಚ ।**
**ದೇವತಾನುಕ್ರಮಃ ಕಲ್ಪಃ ಸಙ್ಕಲ್ಪಸ್ತನ್ತ್ರಮೇವ ಚ ॥೨೫॥**

**ಗತಯೋ ಮತಯಃ ಶ್ರದ್ಧಾ ಪ್ರಾಯಶ್ಚಿತ್ತಂ ಸಮರ್ಪಣಮ್ ।**
**ಪುರುಷಾವಯವೈರೇತೇ ಸಮ್ಭಾರಾಃ ಸಮ್ಭೃತಾ ಮಯಾ ॥೨೬॥**

**ಇತಿ ಸಮ್ಭೃತಸಮ್ಭಾರಃ ಪುರುಷಾವಯವೈರಹಮ್ ।**
**ತಮೇವ ಪುರುಷಂ ಯಜ್ಞಂ ತೇನೈವಾಯಜಮೀಶ್ವರಮ್ ॥೨೭॥**

ಮಹಾತ್ಮನಾದ ಆ ವಿರಾಟ್ಪುರುಷನ ನಾಭಿಕಮಲದಿಂದ ನಾನು ಜನಿಸಿದಾಗ ನನಗೆ ಯಜ್ಞಮಾಡುವುದಕ್ಕೆ ಆ ಪುರುಷನ ಅಂಗಗಳನ್ನು ಬಿಟ್ಟು ಬೇರೆ ಯಾವ ಸಾಮಗ್ರಿಗಳೂ ದೊರೆಯಲಿಲ್ಲ. ಆಗ ನಾನು ಆತನ ಅಂಗಗಳಲ್ಲಿಯೇ ಯಜ್ಞದ ಪಶು, ಯೂಪಸ್ತಂಭ, ಕುಶ, ಯಜ್ಞಭೂಮಿ ಮತ್ತು ಯಜ್ಞಕ್ಕೆ ಯೋಗ್ಯವಾದ ಪ್ರಶಸ್ತವಾದ ಕಾಲ–ಇವುಗಳನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡೆನು. ಯಜ್ಞಕ್ಕೆ ಆವಶ್ಯವಾದ ಪಾತ್ರೆ ಮುಂತಾದ ವಸ್ತುಗಳೂ, ಗೋಧಿ-ಅಕ್ಕಿ ಮುಂತಾದ ಓಷಧಿಗಳು, ತುಪ್ಪವೇ ಮುಂತಾದ ಜಿಡ್ಡಿನ ಪದಾರ್ಥಗಳು, ಆರು ರಸಗಳು, ಕಬ್ಬಿಣ, ಮಣ್ಣು, ನೀರು, ಋಕ್ಕು, ಯಜುಸ್ಸು, ಸಾಮಗಳು, ಚಾತುರ್ಹೋತ್ರ, ಯಜ್ಞಗಳ ನಾಮಧೇಯಗಳು, ಮಂತ್ರಗಳು, ದಕ್ಷಿಣೆ, ವ್ರತ, ದೇವತೆಗಳ ನಾಮಧೇಯಗಳು, ಕಲ್ಪಗ್ರಂಥಗಳು, ಸಂಕಲ್ಪ, ತಂತ್ರ, ಗತಿ, ಮತಿ, ಶ್ರದ್ಧೆ, ಪ್ರಾಯಶ್ಚಿತ್ತ ಮತ್ತು ಸಮರ್ಪಣೆಗಳೆಂಬ–ಈ ಎಲ್ಲ ಯಜ್ಞಸಾಮಗ್ರಿಗಳನ್ನೂ ಆ ಪುರುಷನ ಅಂಗಗಳಿಂದಲೇ ಸಂಗ್ರಹಿಸಿಕೊಂಡೆನು. ಹೀಗೆ ಆ ಪುರುಷನ ಅವಯವಗಳಿಂದ ಸಂಗ್ರಹಿಸಲ್ಪಟ್ಟ ಸಾಮಗ್ರಿಗಳಿಂದಲೇ ನಾನು ಯಜ್ಞಸ್ವರೂಪಿಯಾದ ಆ

ಪರಮಾತ್ಮನಿಗೆ ಯಜ್ಞದ ಮೂಲಕ ಪೂಜಿಸಲ್ಲಿಸಿದೆನು. ಆ ಯಜ್ಞಸ್ವರೂಪನಾದ ಸ್ವಾಮಿಯನ್ನೇ ನಾನು ಆತನಿಂದ ಸಂಗ್ರಹಿಸಲ್ಪಟ್ಟ ಸಾಮಗ್ರಿಗಳಿಂದಲೇ ಯಜಿಸಿದೆನು.

ಅನಂತರ ನಿನ್ನ ಸೋದರರಾದ ಈ ಒಂಬತ್ತು ಮಂದಿ ಪ್ರಜಾಪತಿಗಳೂ ಏಕಾಗ್ರಚಿತ್ತದಿಂದ ವ್ಯಕ್ತ ಮತ್ತು ಅವ್ಯಕ್ತಸ್ವರೂಪನಾದ, ವಿರಾಟ್ ಮತ್ತು ಅಂತರ್ಯಾಮಿಸ್ವರೂಪನಾದ ಪುರುಷನನ್ನು ಕುರಿತು ಯಜ್ಞಮಾಡಿದರು. ಇವರು ಯಜಿಸಿದ ಮೇಲೆ ಮನುಗಳು, ಋಷಿಗಳು, ಪಿತೃಗಳು, ದೇವತೆಗಳು, ದೈತ್ಯರು ಮತ್ತು ಮನುಷ್ಯರು ಕಾಲ-ಕಾಲಗಳಲ್ಲಿ ಆತನನ್ನು ಕುರಿತು ಯಜ್ಞಾರಾಧನೆಮಾಡಿದರು.

ವತ್ಸ! ನಾರದ! ಈ ಇಡೀ ವಿಶ್ವವು ಆ ಭಗವಂತನಾದ ನಾರಾಯಣ ನಲ್ಲಿಯೇ ನೆಲೆಗೊಂಡಿದೆಯಪ್ಪಾ. ಸ್ವಯಂ ಗುಣಾತೀತನಾಗಿದ್ದರೂ ಸೃಷ್ಟಿಯ ಪ್ರಾರಂಭದಲ್ಲಿ ತನ್ನ ಮಾಯಾಶಕ್ತಿಯಿಂದ ತ್ರಿಗುಣಗಳನ್ನು ಸ್ವೇಚ್ಛೆಯಿಂದ ಸ್ವೀಕರಿಸುವ ಆತನೇ ಎಲ್ಲಕ್ಕೂ ನೆಲೆಯು. ಆತನ ವಿನಿಯೋಗಕ್ಕೆ ಒಳಪಟ್ಟೇ ನಾನು ವಿಶ್ವವನ್ನು ಸೃಷ್ಟಿಸುತ್ತೇನೆ. ರುದ್ರದೇವರೂ ಆತನಿಗೆ ವಶರಾಗಿಯೇ ಸಂಹಾರಕಾರ್ಯವನ್ನು ಮಾಡುತ್ತಾರೆ. ತಾನೇ ವಿಷ್ಣುರೂಪದಿಂದ ಆತನು ಇದರ ರಕ್ಷಣೆಯನ್ನು ಮಾಡುತ್ತಾನೆ. ಸತ್ತ್ವ, ರಜಸ್ಸು ಮತ್ತು ತಮಸ್ಸುಗಳೆಂಬ ತ್ರಿಗುಣಶಕ್ತಿಗಳನ್ನು ಸ್ವೀಕರಿಸದ ಆ ಪರಮಾತ್ಮನೇ ಇವೆಲ್ಲಕ್ಕೂ ಕಾರಣ ನಾಗಿದ್ದಾನೆ. ನೀನು ಕೇಳಿದ ಪ್ರಶ್ನೆಗಳಿಗೆ ಹೀಗೆ ಉತ್ತರಕೊಟ್ಟೆನು. ಒಟ್ಟಿನಲ್ಲಿ ಹೇಳುವುದಾದರೆ ಭಗವಂತನನ್ನು ಬಿಟ್ಟು ಸದ್ರೂಪವಾಗಲೀ–ಅಸದ್ರೂಪ ವಾಗಲೀ ಯಾವುದೇ ವಸ್ತುವೂ ಇಲ್ಲ–ಎಂದು ತಿಳಿ. (ಶ್ಲೋಕ 28-32)

**ನ ಭಾರತೀ ಮೇಽಙ್ಗ ಮೃಷೋಪಲಕ್ಷ್ಯತೇ**
**ನ ವೈ ಕ್ವಚಿನ್ಮೇ ಮನಸೋ ಮೃಷಾ ಗತಿಃ ।**
**ನ ಮೇ ಹೃಷೀಕಾಣಿ ಪತನ್ತ್ಯಸತ್ಪಥೇ**
**ಯನ್ಮೇ ಹೃದೌತ್ಕಣ್ಠ್ಯವತಾ ಧೃತೋ ಹರಿಃ ॥೩೩॥**

ಪ್ರೀತಿಯ ನಾರದನೇ! ನಾನು ಪ್ರೇಮಪೂರ್ಣವಾದ ಹೃದಯದಿಂದ

ಆ ಶ್ರೀಹರಿಯನ್ನು ಸದಾ ಧರಿಸಿರುತ್ತೇನೆ. ಆದ್ದರಿಂದಲೇ ನನ್ನ ಮಾತು ಎಂದಿಗೂ ಸುಳ್ಳಾಗುವುದು ಕಂಡುಬರುವುದಿಲ್ಲ. ನನ್ನ ಮನಸ್ಸಿನ ಸಂಕಲ್ಪವೂ ಎಂದಿಗೂ ಅಸತ್ಯವಾಗುವುದಿಲ್ಲ. ನನ್ನ ಇಂದ್ರಿಯಗಳೂ ಎಂದಿಗೂ ಮರ್ಯಾದೆ ಮೀರಿ ದುರ್ಮಾರ್ಗದಲ್ಲಿ ಪ್ರವರ್ತಿಸುವುದಿಲ್ಲ.

ನಾನು ವೇದಮಯನಾಗಿದ್ದೇನೆ ; ತಪೋಮಯನಾಗಿದ್ದೇನೆ ; ದೊಡ್ಡ-ದೊಡ್ಡ ಪ್ರಜಾಪತಿಗಳಿಂದಲೂ ನಮಸ್ಕರಿಸಲ್ಪಡುತ್ತಿರುವ ಪ್ರಜಾಪತಿಸಾರ್ವಭೌಮನಾಗಿದ್ದೇನೆ. ಆದರೆ ಇಂತಹ ನನಗೂ ಕೂಡ ಸಂಪೂರ್ಣಯೋಗನಿಷ್ಠೆಯನ್ನು ಆಚರಿಸಿದಾಗಲೂ ನನ್ನ ಮೂಲಕಾರಣನಾದ ಆ ಪರಮಾತ್ಮನ ಸ್ವರೂಪವನ್ನು ತಿಳಿಯಲು ಮೊದಲು ಸಾಧ್ಯವಾಗಲಿಲ್ಲ. ಆತನು-ಅನನ್ಯಭಕ್ತಿಯಿಂದ ಮಾತ್ರವೇ ದೊರೆಯುವನು. ಆತನಿಗೆ ನಮೋ ನಮಃ. ಶರಣಾಗತರಾಗುವ ಭಕ್ತರ ಭವಬಂಧನವನ್ನು ಧ್ವಂಸಮಾಡುವ ಆತನ ಕ್ಷೇಮಪ್ರದವೂ ಪರಮಮಂಗಳಮಯವೂ ಆದ ಪಾದಾರವಿಂದಗಳಿಗೆ ನಮಸ್ಕಾರಗಳು. ಆತನ ಮಾಯೆಯ ವೈಭವವು ಅಪಾರವಾದುದು ; ಅನಂತವಾದುದು. ಆಕಾಶದ ಪಾರವನ್ನು ಆಕಾಶವೂ ಹೇಗೆ ತಿಳಿಯಲಾರದೋ–ಹಾಗೆಯೇ ತನ್ನ ಮಾಯೆಯ ವಿಸ್ತಾರದ ವೈಭವವನ್ನು ಮಾಯಾಧೀಶನಾದ ಆತನೂ ಅರಿಯಲಾರನು. ಇನ್ನು ಇತರರು ಹೇಗೆ ಅರಿತಾರು?

ಆತನ ಸತ್ಯಸ್ವರೂಪವನ್ನು ನಾನೂ ತಿಳಿಯೆನು. ನೀನೂ ತಿಳಿದಿಲ್ಲ. ದೇವದೇವನಾದ ವಾಮದೇವನೂ ಅರಿಯನು. ಹೀಗಿರುವಾಗ ಇತರ ದೇವತೆಗಳು ಹೇಗೆ ತಿಳಿದಾರು? ಆತನ ಮಾಯೆಯಿಂದ ಮೋಹಿತರಾದ ನಾವು ಆತನನ್ನು ತಿಳಿಯುವುದಿರಲಿ–ಆತನು ನಿರ್ಮಿಸಿದ ಜಗತ್ತಿನ ಸ್ವರೂಪವನ್ನೇ ಸಂಪೂರ್ಣವಾಗಿ ತಿಳಿಯೆವು. ನಮ್ಮ-ನಮ್ಮ ಬುದ್ಧಿಯ ಮಟ್ಟಕ್ಕೆ ತಕ್ಕಂತೆ ಮಾತ್ರ ಅದನ್ನು ವರ್ಣಿಸುತ್ತಿದ್ದೇವೆ. (ಶ್ಲೋಕ 34-36)

ಯಾವನ ದಿವ್ಯವಾದ ಅವತಾರಗಳನ್ನೂ, ಆತನು ಅವುಗಳಲ್ಲಿ ಮಾಡಿದ ಕಾರ್ಯಗಳನ್ನೂ ಕುರಿತು ನಾವು ಗಾನಮಾಡಬಲ್ಲೆವೇ ಹೊರತು ಅವುಗಳ ತತ್ತ್ವಗಳನ್ನು ತಿಳಿಯಲಾರೆವೋ–ಅಂತಹ ಮಹಾಮಹಿಮನಾದ ಭಗವಂತನಿಗೆ ನಮಸ್ಕಾರಗಳು. ಆತನು ಜನ್ಮರಹಿತನಾದ ಆದಿಪುರುಷನು. ಪ್ರತಿಯೊಂದು

ಕಲ್ಪದಲ್ಲಿಯೂ ತನ್ನನ್ನು ತಾನೇ ಸೃಷ್ಟಿಸಿಕೊಂಡು, ರಕ್ಷಿಸಿಕೊಂಡು, ಉಪಸಂಹಾರಮಾಡಿಕೊಳ್ಳುತ್ತಾನೆ. ಮಾಯಾಲೇಶವೂ ಇಲ್ಲದ ಶುದ್ಧಜ್ಞಾನಸ್ವರೂಪನು. ಅಂತರತಮನಾದ ಆತ್ಮನಾಗಿ ಬೆಳಗುತ್ತಿರುವವನೂ ಮತ್ತು ಸತ್ಯವೂ, ಪರಿಪೂರ್ಣವೂ, ಆದ್ಯಂತರಹಿತವೂ, ಗುಣಾತೀತವೂ, ನಿತ್ಯವೂ, ಅದ್ವಿತೀಯವೂ ಆದ ಪರತತ್ತ್ವವೇ ಆತನು. ಮಹರ್ಷಿಯೇ! ಆತನ ಆತ್ಮ ಇಂದ್ರಿಯ ಮತ್ತು ಮನಸ್ಸುಗಳು ಪ್ರಶಾಂತವಾದಾಗ ತಾನೇ ಮುನಿಗಳಿಗೂ ಆತನ ಸಾಕ್ಷಾತ್ಕಾರವು ಸಾಧ್ಯವಾಗುತ್ತದೆ? ಕೆಟ್ಟ ತರ್ಕಗಳ ಮುಸುಕುಹಾಕಿಕೊಂಡಾಗ ಆತನು ಮರೆಯಾಗಿಬಿಡುತ್ತಾನೆ. (ಶ್ಲೋಕ 37-40)

ಆ ವಿರಾಟ್ಪುರುಷನೇ ಪರಮಪುರುಷನ ಮೊದಲನೆಯ ಅವತಾರವು. ಕಾಲ, ಸ್ವಭಾವ, ವ್ಯಕ್ತ-ಅವ್ಯಕ್ತಗಳು, ಮನಸ್ಸು, ದ್ರವ್ಯ, ವಿಕಾರ, ಗುಣಗಳು, ಇಂದ್ರಿಯಗಳು, ಬ್ರಹ್ಮಾಂಡಶರೀರ, ಅದರ ಅಭಿಮಾನಿದೇವತೆ, ಸ್ಥಾವರ-ಜಂಗಮಜೀವಗಳು–ಇವುಗಳೆಲ್ಲಾ ಆತನ ವಿಭೂತಿಗಳು. ನಾನು, ಶಂಕರನು, ಯಜ್ಞಪುರುಷನಾದ ವಿಷ್ಣುವು, ದಕ್ಷನೇ ಮುಂತಾದ ಪ್ರಜಾಪತಿಗಳು, ನೀನು ಮತ್ತು ನಿನ್ನಂತಹ ದಿವ್ಯಮಹರ್ಷಿಗಳು, ಸ್ವರ್ಗಾಧಿಪತಿಗಳು, ದಿವ್ಯಪಕ್ಷಿಗಳ ಅಧಿಪತಿಗಳು, ನರಪತಿಗಳು, ಪಾತಾಳವೇ ಮುಂತಾದ ಕೆಳಗಿನ ಲೋಕಗಳ ಪಾಲಕರು, ಗಂಧರ್ವ-ವಿದ್ಯಾಧರ ಮತ್ತು ಚಾರಣರ ಅಧಿನಾಯಕರುಗಳು, ಯಕ್ಷ-ರಾಕ್ಷಸ-ಸರ್ಪ ಮತ್ತು ನಾಗಜಾತಿಗಳ ನಾಯಕರು, ಅರಸರುಗಳು ಮತ್ತು ಭೂತ-ಪ್ರೇತ-ಪಿಶಾಚ-ಕೂಶ್ಮಾಂಡ-ಜಲಜಂತುಗಳು, ಮೃಗಗಳು ಮತ್ತು ಪಕ್ಷಿಗಳ ಸ್ವಾಮಿಗಳು, ಐಶ್ವರ್ಯ, ತೇಜಸ್ಸು, ಇಂದ್ರಿಯಬಲ, ಮನೋಬಲ, ಶರೀರಬಲ ಅಥವಾ ಕ್ಷಮೆಯಿಂದ ಸಂಪನ್ನವಾಗಿರುವ ಎಲ್ಲ ವಸ್ತುಗಳು ಅಥವಾ ವಿಶೇಷವಾದ ಸೌಂದರ್ಯ, ಲಜ್ಜೆ, ವೈಭವ ಮತ್ತು ವಿಭೂತಿಗಳಿಂದ ಬೆಳಗುತ್ತಿರುವುವೂ, ಅದ್ಭುತವಾದ ವರ್ಣ-ರೂಪ- ಸಂಪತ್ತುಗಳಿಂದ ಹೆಸರುವಾಸಿಯಾದುವೂ ಅಥವಾ ರೂಪರಹಿತವಾಗಿ ಅತಿಶಯವನ್ನು ಪಡೆದಿರುವುವೂ ಆದ ಯಾವ ಯಾವ ವಸ್ತುಗಳುಂಟೋ–ಅವೆಲ್ಲವೂ ಆ ಪರತತ್ತ್ವದ ರೂಪಗಳೇ ಆಗಿವೆಯೆಂದು ತಿಳಿ.

ನಾರದನೇ! ಇವುಗಳಲ್ಲದೇ ಆ ಪರಮಪುರುಷನ ಪರಮಪವಿತ್ರವಾದ ಮತ್ತು ಪ್ರಧಾನವಾದ ಅನೇಕ ಲೀಲಾವತಾರಗಳನ್ನು ಜ್ಞಾನಿಗಳು ಹೇಳು

ತ್ತಾರೆ. ಅವು ಕಿವಿಗಳಿಗೆ ಇಂಪಾಗಿ ಮನಸ್ಸಿನ ಕೊಳೆಯನ್ನು ತೊಳೆದುಹಾಕುವ ದಿವ್ಯಚರಿತ್ರೆಗಳು. ಅವುಗಳನ್ನು ಕ್ರಮವಾಗಿ ವರ್ಣಿಸುತ್ತೇನೆ ; ಸಾವಧಾನವಾಗಿ ಕೇಳು."

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ದ್ವಿತೀಯಸ್ಕಂಧದ ೬ನೆಯ ಅಧ್ಯಾಯವು ಮುಗಿಯಿತು.

ದ್ವಿತೀಯಸ್ಕಂಧ ೭ನೆಯ ಅಧ್ಯಾಯ

## ಭಗವಂತನ ಲೀಲಾವತಾರಗಳ ಕಥೆ

ಶ್ರೀಭಗವಂತನ ಲೀಲಾವತಾರಗಳ ಪ್ರಕರಣವನ್ನು ವರ್ಣಿಸುತ್ತಾ ಬ್ರಹ್ಮದೇವರು ತಮ್ಮ ಸುಪುತ್ರರಾದ ದೇವರ್ಷಿ ನಾರದರಿಗೆ ಹೀಗೆಂದರು :

ವರಾಹಾವತಾರ :

ಯತ್ರೋದ್ಯತಃ ಕ್ಷಿತಿತಲೋದ್ಧರಣಾಯ ಬಿಭ್ರ-
ತ್ ಕ್ರೌಡೀಂ ತನುಂ ಸಕಲಯಜ್ಞಮಯೀಮನನ್ತಃ ।
ಅನ್ತರ್ಮಹಾರ್ಣವ ಉಪಾಗತಮಾದಿದೈತ್ಯಂ
ತಂ ದಂಷ್ಟ್ರಯಾದ್ರಿಮಿವ ವಜ್ರಧರೋ ದದಾರ ॥೧॥

"ಪ್ರಳಯಜಲದಲ್ಲಿ ಮುಳುಗಿಹೋಗಿದ್ದ ಭೂಮಿಯನ್ನು ಉದ್ಧರಿಸುವುದಕ್ಕೋಸ್ಕರ ಅನಂತನಾದ ಶ್ರೀಭಗವಂತನು ಸಮಸ್ತಯಜ್ಞಮಯವಾದ ವರಾಹದೇಹವನ್ನು ಕೈಗೊಂಡನು. ಆ ಅವತಾರದಲ್ಲಿ ಆತನು ಮಹಾ ಸಮುದ್ರದೊಳಗಡೆಯೇ ತನ್ನನ್ನು ಎದುರಿಸಲು ಬಂದ ಆದಿದೈತ್ಯನಾದ ಹಿರಣ್ಯಾಕ್ಷನನ್ನು–ಇಂದ್ರನು ವಜ್ರಾಯುಧದಿಂದ ಪರ್ವತವನ್ನು ಭೇದಿಸಿದಂತೆ–ತನ್ನ ಕೋರೆದಾಡೆಯಿಂದ ಸೀಳಿಹಾಕಿಬಿಟ್ಟನು.

ಸುಯಜ್ಞಾವತಾರ :

ಜಾತೋ ರುಚೇರಜನಯತ್ಸುಯಮಾನ್ಸುಯಜ್ಞ
ಆಕೂತಿಸೂನುರಮರಾನಥ ದಕ್ಷಿಣಾಯಾಮ್ ।
ಲೋಕತ್ರಯಸ್ಯ ಮಹತೀಮಹರದ್ಯದಾರ್ತಿಂ
ಸ್ವಾಯಮ್ಭುವೇನ ಮನುನಾ ಹರಿರಿತ್ಯನೂಕ್ತಃ ॥೨॥

ಅನಂತರ ಆ ಮಹಾಪ್ರಭುವೇ ರುಚಿಯೆಂಬ ಪ್ರಜಾಪತಿಯ ಪತ್ನಿಯಾದ ಆಕೂತಿದೇವಿಯ ಗರ್ಭದಲ್ಲಿ 'ಸುಯಜ್ಞ' ರೂಪದಲ್ಲಿ ಜನಿಸಿದನು. 'ದಕ್ಷಿಣಾ' ಎಂಬ ಹೆಸರಿನ ಧರ್ಮಪತ್ನಿಯಲ್ಲಿ 'ಸುಯಮ'ರೆಂಬ ದೇವತೆ ಗಳನ್ನು ಪುತ್ರರನ್ನಾಗಿ ಪಡೆದನು. ಆ ಅವತಾರದಲ್ಲಿ ಮೂರು ಲೋಕಗಳಿಗೆ ಒದಗಿದ್ದ ಮಹಾಪೀಡೆಗಳನ್ನು ಈತನು ಪರಿಹರಿಸಿದ್ದರಿಂದ ಸ್ವಾಯಂಭುವ ಮನುವು ಈತನನ್ನು 'ಹರಿಃ' ಎಂಬ ನಾಮಧೇಯದಿಂದ ಕರೆದು ಸಂಭಾವಿಸಿದನು.

ಕಪಿಲಾವತಾರ :

**ಜಜ್ಞೇ ಚ ಕರ್ದಮಗೃಹೇ ದ್ವಿಜ ದೇವಹೂತ್ಯಾಂ**
**ಸ್ತ್ರೀಭಿಃ ಸಮಂ ನವಭಿರಾತ್ಮಗತಿಂ ಸ್ವಮಾತ್ರೇ ।**
**ಊಚೇ ಯಯಾತ್ಮಶಮಲಂ ಗುಣಸಙ್ಗಪಙ್ಕ-**
**ಮಸ್ಮಿನ್ವಿಧೂಯ ಕಪಿಲಸ್ಯ ಗತಿಂ ಪ್ರಪೇದೇ ॥೩॥**

ಆ ಸ್ವಾಮಿಯು ಕರ್ದಮಪ್ರಜಾಪತಿಯ ಮನೆಯಲ್ಲಿ ದೇವಹೂತೀ ದೇವಿಯ ಗರ್ಭದಲ್ಲಿ ಒಂಬತ್ತು ಮಂದಿ ಸಹೋದರಿಯರೊಡನೆ 'ಕಪಿಲ' ನೆಂಬ ಹೆಸರಿನಿಂದ ಜನ್ಮತಾಳಿದನು. ತನ್ನ ತಾಯಿ ದೇವಹೂತಿಗೆ ಆತ್ಮಜ್ಞಾನ ವನ್ನು ಉಪದೇಶಮಾಡಿದನು. ಅದರಿಂದ ಆಕೆಯು ತನಗೆ ತ್ರಿಗುಣಗಳ ಸಂಗದೋಷದಿಂದ ಉಂಟಾಗಿದ್ದ ಹೃದಯದ ಎಲ್ಲ ಕೊಳಕು-ಕೆಸರುಗಳನ್ನೂ ಅದೇ ಜನ್ಮದಲ್ಲೇ ತೊಳೆದುಕೊಂಡು ಕಪಿಲನ ನಿಜಸ್ವರೂಪವಾದ ಮುಕ್ತಿಯನ್ನು ಪಡೆದುಕೊಂಡಳು.

ದತ್ತಾತ್ರೇಯಾವತಾರ :

**ಅತ್ರೇರಪತ್ಯಮಭಿಕಾಙ್ಕ್ಷತ ಆಹ ತುಷ್ಟೋ**
**ದತ್ತೋ ಮಯಾಹಮಿತಿ ಯದ್ಭಗವಾನ್ಸ ದತ್ತಃ ।**
**ಯತ್ಪಾದಪಙ್ಕಜಪರಾಗಪವಿತ್ರದೇಹಾ**
**ಯೋಗರ್ದ್ಧಿಮಾಪುರುಭಯೀಂ ಯದುಹೈಹಯಾದ್ಯಾಃ ॥**

ಅತ್ರಿಮಹರ್ಷಿಯು ಪುತ್ರಾರ್ಥಿಯಾಗಿ ತಪಸ್ಸುಮಾಡಿದಾಗ ಆತನಲ್ಲಿ ಪ್ರಸನ್ನನಾದ ಆ ಭಗವಂತನು 'ನಾನು ನನ್ನನ್ನೇ ನಿನಗೆ ಪುತ್ರನನ್ನಾಗಿ

ಕೊಟ್ಟುಕೊಂಡಿದ್ದೇನೆ ; ನಿನಗೆ ಪುತ್ರರೂಪದಲ್ಲಿ ದತ್ತನಾಗಿದ್ದೇನೆ'–ಎಂದು ಆತನಿಗೆ ಮಾತುಕೊಟ್ಟಿದ್ದರಿಂದ 'ದತ್ತ' ಎಂಬ ದಿವ್ಯನಾಮದಿಂದಲೇ ಪ್ರಸಿದ್ಧನಾದನು. ಆತನ ಚರಣಕಮಲಗಳ ಧೂಳನ್ನು ದೇಹದಲ್ಲಿ ಧರಿಸಿ ಪವಿತ್ರತೆಯನ್ನು ಪಡೆದಿದ್ದರಿಂದಲೇ ಯದುಮಹಾರಾಜ ಮತ್ತು ಹೈಹಯ ಕಾರ್ತವೀರ್ಯಾರ್ಜುನಮಹಾರಾಜರೇ ಮುಂತಾದ ಶಿಷ್ಯೋತ್ತಮರು ಭೋಗ ಮತ್ತು ಮೋಕ್ಷಗಳೆಂಬ ಎರಡೂ ಬಗೆಯ ಯೋಗಸಿದ್ಧಿಗಳನ್ನೂ ಪಡೆದು ಕೃತಾರ್ಥರಾದರು.

ಮುನಿಕುಮಾರಾವತಾರ :

**ತಪ್ತಂ ತಪೋ ವಿವಿಧಲೋಕಸಿಸೃಕ್ಷಯಾ ಮೇ**
**ಆದೌ ಸನಾತ್ಸ್ವತಪಸಃ ಸ ಚತುಃಸನೋಽಭೂತ್ ।**
**ಪ್ರಾಕ್ಕಲ್ಪಸಂಪ್ಲವವಿನಷ್ಟಮಿಹಾತ್ಮತತ್ತ್ವಂ**
**ಸಮ್ಯಗ್ಜಗಾದ ಮುನಯೋ ಯದಚಕ್ಷತಾತ್ಮನ್ ॥೫॥**

ನಾರದನೇ! ಸೃಷ್ಟಿಯ ಪ್ರಾರಂಭದಲ್ಲಿ ನಾನು ಬಗೆ-ಬಗೆಯ ಲೋಕಗಳನ್ನು ಸೃಷ್ಟಿಸಬೇಕೆಂಬ ಬಯಕೆಯಿಂದ ತಪಸ್ಸುಮಾಡಿದೆನು. ಆ ತಪಸ್ಸಿನಿಂದ ಸಂತುಷ್ಟನಾದ ಸ್ವಾಮಿಯು 'ತಪಸ್ಸು' ಎಂಬ ಅರ್ಥವನ್ನು ಹೇಳುವ 'ಸನ' ಎಂಬ ಹೆಸರಿನಿಂದ ಕೂಡಿದ ಸನಕ, ಸನಂದನ, ಸನಾತನ ಮತ್ತು ಸನತ್ಕುಮಾರ–ಎಂಬ ನಾಲ್ಕು ರೂಪಗಳಲ್ಲಿ ಅವತರಿಸಿದನು. ಮುನಿಗಳಿಗೆ ಹಿಂದಿನ ಕಲ್ಪಪ್ರಳಯದಲ್ಲಿ ಮರೆತುಹೋಗಿದ್ದ ಆತ್ಮತತ್ತ್ವವನ್ನು ಚೆನ್ನಾಗಿ ಉಪದೇಶಮಾಡಿ ಅವರಿಗೆ ಒಡನೆಯೇ ಹೃದಯದಲ್ಲಿ ಆತ್ಮಸಾಕ್ಷಾತ್ಕಾರವಾಗುವಂತೆ ಮಾಡಿದನು.

ನರ-ನಾರಾಯಣಾವತಾರ :

**ಧರ್ಮಸ್ಯ ದಕ್ಷದುಹಿತರ್ಯಜನಿಷ್ಟ ಮೂರ್ತ್ಯಾಂ**
**ನಾರಾಯಣೋ ನರ ಇತಿ ಸ್ವತಪಃಪ್ರಭಾವಃ ।**
**ದೃಷ್ಟ್ವಾತ್ಮನೋ ಭಗವತೋ ನಿಯಮಾವಲೋಪಂ**
**ದೇವ್ಯಸ್ತ್ವನಙ್ಗಪೃತನಾ ಘಟಿತುಂ ನ ಶೇಕುಃ ॥೬॥**

'ಧರ್ಮ' ಎಂಬ ಸುಕೃತಿಗೆ ದಕ್ಷಪುತ್ರಿಯಾಗಿದ್ದ 'ಮೂರ್ತಿ'

ಎಂಬಾಕೆಯ ಗರ್ಭದಲ್ಲಿ ಆತನು ನರ-ನಾರಾಯಣರ ರೂಪದಲ್ಲಿ ಅವತರಿಸಿದನು. ಪರಮಾದ್ಭುತವಾದ ತಪಃಪ್ರಭಾವವನ್ನು ಪ್ರಕಟಿಸಿದ ಅವತಾರವಿದು. ಇಂದ್ರನ ಪ್ರೇರಣೆಯಿಂದ ಆತನ ತಪೋಭಂಗಮಾಡಬೇಕೆಂದು ಬಂದ ಮನ್ಮಥನ ಸೈನಿಕರಾದ ಅಪ್ಸರಸ್ತ್ರೀಯರು ತಾವೇ ಆಶಾಭಂಗಹೊಂದಿದರು. ಅವರ ಉದ್ದೇಶ ಸ್ವಲ್ಪವೂ ಈಡೇರಲಿಲ್ಲ.

**ಕಾಮಂ ದಹನ್ತಿ ಕೃತಿನೋ ನನು ರೋಷದೃಷ್ಟ್ಯಾ**
**ರೋಷಂ ದಹನ್ತಮುತ ತೇ ನ ದಹನ್ತ್ಯಸಹ್ಯಮ್ ।**
**ಸೋಽಯಂ ಯದನ್ತರಮಲಂ ಪ್ರವಿಶನ್ಬಿಭೇತಿ**
**ಕಾಮಃ ಕಥಂ ನು ಪುನರಸ್ಯ ಮನಃ ಶ್ರಯೇತ ॥೭॥**

ಕೆಲವು ತಪಸ್ವಿದ್ಧರು, ಮನ್ಮಥನು ತಮ್ಮ ತಪಸ್ಸನ್ನು ಕೆಡಿಸಲು ಬಂದಾಗ, ರೋಷದೃಷ್ಟಿಯಿಂದ ಆತನನ್ನು ದಹಿಸಿಬಿಡುತ್ತಾರೆ. ಆದರೆ ಅವರು ತಮ್ಮನ್ನೇ ಸುಟ್ಟುಹಾಕುತ್ತಿರುವ, ಸಹಿಸಲು ಅಸಾಧ್ಯವಾದ ಕ್ರೋಧವನ್ನು ಸುಟ್ಟುಹಾಕಲು ಅಶಕ್ತರಾಗುತ್ತಾರೆ. ಕಾಮವನ್ನು ಗೆದ್ದರೂ ಕ್ರೋಧವನ್ನು ಜಯಿಸಲು ಅಸಮರ್ಥರಾಗುತ್ತಾರೆ. ಆದರೆ ಅದೇ ಕ್ರೋಧವು ನರ-ನಾರಾಯಣರ ನಿರ್ಮಲವಾದ ಮನಸ್ಸನ್ನು ಪ್ರವೇಶಮಾಡುವುದಕ್ಕೂ ಅಂಜುತ್ತದೆ. ಹೀಗಿರುವಾಗ ಕಾಮವು ಅಲ್ಲಿಗೆ ಹೇಗೆ ತಾನೇ ಪ್ರವೇಶ ಮಾಡೀತು?

ಧ್ರುವವರಪ್ರದಾವತಾರ :

**ವಿದ್ಧಃ ಸಪತ್ನ್ಯುದಿತಪತ್ರಿಭಿರನ್ತಿ ರಾಜ್ಞೋ**
**ಬಾಲೋಽಪಿ ಸನ್ನುಪಗತಸ್ತಪಸೇ ವನಾನಿ ।**
**ತಸ್ಮಾ ಅದಾದ್ಧ್ರುವಗತಿಂ ಗೃಣತೇ ಪ್ರಸನ್ನೋ**
**ದಿವ್ಯಾಃ ಸ್ತುವನ್ತಿ ಮುನಯೋ ಯದುಪರ್ಯಧಸ್ತಾತ್ ॥**

ತಂದೆಯಾದ ಉತ್ತಾನಪಾದರಾಜನ ಬಳಿ ಕುಳಿತಿದ್ದ ಆತನ ಸುಪುತ್ರನಾದ ಬಾಲಕ ಧ್ರುವನನ್ನು ಆತನ ಮಲತಾಯಿ ಸುರುಚಿಯು ಮಾತಿನ ಬಾಣಗಳಿಂದ ಘಾಸಿಪಡಿಸಿದಳು. ಅದನ್ನು ಸಹಿಸದೇ ಆ ಕುಮಾರನು ಐದು ವರ್ಷದ ಬಾಲಕನಾಗಿದ್ದರೂ ಅರಮನೆಯನ್ನು ಬಿಟ್ಟು ತಪಸ್ಸನ್ನಾಚರಿಸಲು

ಅರಣ್ಯಕ್ಕೆ ಹೋದನು. ದೃಢಭಕ್ತಿಯಿಂದ ತನ್ನನ್ನು ಪ್ರಾರ್ಥಿಸಿದ ಆತನಲ್ಲಿ ಪ್ರಸನ್ನನಾಗಿ ಭಗವಂತನು ಆ ಧ್ರುವನಿಗೆ-ದಿವ್ಯಸಪ್ತರ್ಷಿಗಳು ಮೇಲೂ-ಕೆಳಗೂ ಪ್ರದಕ್ಷಿಣೆಮಾಡುತ್ತಾ ಸ್ತುತಿಸುತ್ತಿರುವ, ಅತ್ಯುನ್ನತಸ್ಥಾನದಲ್ಲಿರುವ-ಧ್ರುವಪದವನ್ನೇ ಕರುಣಿಸಿದನು.

ಪೃಥುಸಾರ್ವಭೌಮಾವತಾರ :

**ಯದ್ವೇನಮುತ್ಪಥಗತಂ ದ್ವಿಜವಾಕ್ಯವಜ್ರ-**
**ವಿಪ್ಲುಷ್ಟಪೌರುಷಭಗಂ ನಿರಯೇ ಪತನ್ತಮ್ ।**
**ತ್ರಾತ್ವಾರ್ಥಿತೋ ಜಗತಿ ಪುತ್ರಪದಂ ಚ ಲೇಭೇ**
**ದುಗ್ಧಾ ವಸೂನಿ ವಸುಧಾ ಸಕಲಾನಿ ಯೇನ ॥೯॥**

ವೇನಭೂಪತಿಯು ಅತ್ಯಂತ ದುರ್ಮಾರ್ಗವನ್ನು ಹಿಡಿದಾಗ ಮಹರ್ಷಿಗಳು ತಮ್ಮ ವಜ್ರಸದೃಶವಾದ ಹುಂಕಾರದಿಂದ ಆತನ ಐಶ್ವರ್ಯ ಮತ್ತು ಪೌರುಷಗಳನ್ನು ಸುಟ್ಟುಹಾಕಿಬಿಟ್ಟರು. ಆತನು ನರಕಕ್ಕೆ ಬೀಳತೊಡಗಿದಾಗ ಆ ಮಹಾತ್ಮರು ಶ್ರೀಭಗವಂತನನ್ನು ಪ್ರಾರ್ಥನೆಮಾಡಿ ಆತನ ದೇಹವನ್ನು ಕಡೆದರು. ಆಗ ಅಲ್ಲಿ ಪೃಥುಮಹಾರಾಜನ ರೂಪದಲ್ಲಿ ಆತನಿಗೆ ಪುತ್ರನಾಗಿ ಶ್ರೀಭಗವಂತನು ಅವತರಿಸಿ ಆ ವೇನನನ್ನು ಉದ್ಧರಿಸಿದನು. ಅವನನ್ನು ಪುತ್ ಎಂಬ ನರಕದಿಂದ ಸಂರಕ್ಷಿಸಿದ್ದರಿಂದ ಪುತ್ರನೆಂಬ ಆ ಪದವು ಆತನಲ್ಲಿ ಚರಿತಾರ್ಥವಾಯಿತು. ಪೃಥುವೆಂಬ ಆ ಅವತಾರದಲ್ಲೇ ಪರಮಾತ್ಮನು ಪೃಥಿವಿಯು ಹಸುವಿನ ರೂಪತಾಳುವಂತೆ ಮಾಡಿ, ಆಕೆಯಿಂದ ಜಗತ್ತಿನ ಎಲ್ಲ ಜಾತಿಯ ಪ್ರಾಣಿಗಳೂ ತಮ್ಮ-ತಮ್ಮ ಆಹಾರಸಂಪತ್ತನ್ನು ಕರೆದುಕೊಳ್ಳುವಂತೆ ಮಾಡಿದುದು ಪ್ರಸಿದ್ಧವಾಗಿದೆ. ಎಲ್ಲ ವಸುಸಂಪತ್ತನ್ನೂ ಧರಿಸಿದ್ದರಿಂದ 'ವಸುಂಧರಾ' ಎಂಬ ಹೆಸರೂ ಭೂಮಿಗೆ ಆಗ ಅನ್ವರ್ಥವಾಯಿತು.

ಋಷಭಾವತಾರ :

**ನಾಭೇರಸಾವೃಷಭ ಆಸ ಸುದೇವಿಸೂನು-**
**ರ್ಯೋ ವೈ ಚಚಾರ ಸಮದೃಗ್ಜಡಯೋಗಚರ್ಯಾಮ್ ।**
**ಯತ್ಪಾರಮಹಂಸ್ಯಮೃಷಯಃ ಪದಮಾಮನನ್ತಿ**
**ಸ್ವಸ್ಥಃ ಪ್ರಶಾನ್ತಕರಣಃ ಪರಿಮುಕ್ತಸಙ್ಗಃ ॥೧೦॥**

ನಾಭಿರಾಜನ ಪತ್ನಿಯಾದ ಸುದೇವಿಯ ಗರ್ಭದಲ್ಲಿ ಭಗವಂತನು ಋಷಭದೇವನ ರೂಪದಲ್ಲಿ ಅವತಾರಮಾಡಿದನು. ಆ ಋಷಭಾವತಾರದಲ್ಲೇ ಸ್ವಾಮಿಯು ಸರ್ವಸಂಗಪರಿತ್ಯಾಗಮಾಡಿ ಇಂದ್ರಿಯ-ಮನಸ್ಸುಗಳನ್ನು ಪ್ರಶಾಂತಗೊಳಿಸಿಕೊಂಡು, ಸ್ವಸ್ವರೂಪದಲ್ಲಿ ನೆಲೆಗೊಂಡು ಸಮದರ್ಶಿಯಾಗಿ ಯೋಗದ ಪರಾಕಾಷ್ಠೆಯಲ್ಲಿದ್ದು ಜಡನಂತೆ ಲೋಕಕ್ಕೆ ಕಾಣಿಸಿಕೊಂಡನು. ಈ ಸ್ಥಿತಿ ಮತ್ತು ಆಚರಣೆಗಳನ್ನೇ ಮಹರ್ಷಿಗಳು ಪರಮಹಂಸಪದ, ಅವಧೂತಚರ್ಯೆ ಎಂದು ಕರೆದಿದ್ದಾರೆ.

ಹಯಗ್ರೀವಾವತಾರ :

**ಸತ್ರೇ ಮಮಾಸ ಭಗವಾನ್ಹಯಶೀರ್ಷ ಏಷಃ**
**ಸಾಕ್ಷಾತ್ಸ ಯಜ್ಞಪುರುಷಸ್ತಪನೀಯವರ್ಣಃ ।**
**ಛನ್ದೋಮಯೋ ಮಖಮಯೋಽಖಿಲದೇವತಾತ್ಮಾ**
**ವಾಚೋ ಬಭೂವುರುಶತೀಃ ಶ್ವಸತೋಽಸ್ಯ ನಸ್ತಃ ॥೧೧॥**

ಆ ಯಜ್ಞಪುರುಷನಾದ ವಿಷ್ಣುವೇ ನಾನು ಮಾಡಿದ ಯಜ್ಞದಲ್ಲಿ ಚಿನ್ನದಂತೆ ಹೊಳೆಯುವ ದೇಹಕಾಂತಿಯಿಂದ ಬೆಳಗುತ್ತಿದ್ದ ಕುದುರೆಯ ಮುಖವುಳ್ಳ 'ಹಯಗ್ರೀವ' ಎಂಬ ರೂಪದಲ್ಲಿ ಅವತಾರಮಾಡಿದನು. ಭಗವಂತನ ಆ ದಿವ್ಯಮಂಗಳವಿಗ್ರಹವು ವೇದಮಯ, ಯಜ್ಞಮಯ ಮತ್ತು ಸರ್ವದೇವಮಯವಾದುದು. ಆತನ ನಿಃಶ್ವಾಸವಾಯುವಿನ ರೂಪದಲ್ಲಿ ಸಮಸ್ತ ವೇದವಾಣಿಯೂ ಪ್ರಕಟಗೊಂಡಿತು :

ಮತ್ಸ್ಯಾವತಾರ :

**ಮತ್ಸ್ಯೋ ಯುಗಾನ್ತಸಮಯೇ ಮನುನೋಪಲಬ್ಧಃ**
**ಕ್ಷೋಣೀಮಯೋ ನಿಖಿಲಜೀವನಿಕಾಯಕೇತಃ ।**
**ವಿಸ್ರಂಸಿತಾನುರುಭಯೇ ಸಲಿಲೇ ಮುಖಾನ್ಮೇ**
**ಆದಾಯ ತತ್ರ ವಿಜಹಾರ ಹ ವೇದಮಾರ್ಗಾನ್ ॥೧೨॥**

'ಚಾಕ್ಷುಷ' ಎಂಬ ಮನ್ವಂತರದ ಕೊನೆಯ ಪ್ರಳಯಕಾಲದಲ್ಲಿ ಭಗವಂತನು ಮತ್ಸ್ಯರೂಪದಲ್ಲಿ ಮನುವಿಗೆ ಪ್ರತ್ಯಕ್ಷನಾದನು. ಮುಂದೆ ಮನುಪದವಿಯನ್ನು ಪಡೆದ ಸತ್ಯವ್ರತನೆಂಬ ರಾಜನು ಈ ರೂಪದಲ್ಲಿ ದೇಹ

ವನ್ನು ಪಡೆದುಕೊಂಡನು. ಆ ಸಮಯದಲ್ಲಿ ಪೃಥಿವಿಯ ರೂಪವಾದ ನೌಕೆಗೆ ಈತನ ದೇಹವು ಆಶ್ರಯವಾಗಲು ಆ ಮೂಲಕ ಈತನು ಸಮಸ್ತಜೀವಿಗಳಿಗೂ ಆಶ್ರಯನಾದನು. ಪ್ರಳಯದ ಆ ಸಾಗರಜಲದಲ್ಲಿ ನನ್ನ ಬಾಯಿಂದ ಜಾರಿಕೊಂಡ ವೇದಗಳನ್ನು ಎತ್ತಿಕೊಂಡು ಅವುಗಳಲ್ಲಿ ವಿಹರಿಸುತ್ತಿದ್ದವನೇ ಈ ಮತ್ಸ್ಯಮೂರ್ತಿಯಾದ ಮಹಾವಿಷ್ಣುವು.

ಕೂರ್ಮಾವತಾರ :

**ಕ್ಷೀರೋದಧಾವಮರದಾನವಯೂಥಪಾನಾ-**
**ಮುನ್ಮಥ್ನತಾಮಮೃತಲಬ್ಧಯ ಆದಿದೇವಃ ।**
**ಪೃಷ್ಠೇನ ಕಚ್ಛಪವಪುರ್ವಿದಧಾರ ಗೋತ್ರಂ**
**ನಿದ್ರಾಕ್ಷಣೋऽದ್ರಿಪರಿವರ್ತಕಷಾಣಕಣ್ಡೂಃ ॥೧೩॥**

ದೇವಮುಖ್ಯರೂ ಮತ್ತು ದಾನವಮುಖ್ಯರೂ ಸೇರಿಕೊಂಡು ಅಮೃತ ವನ್ನು ಪಡೆಯುವುದಕ್ಕೋಸ್ಕರ ಕ್ಷೀರಸಮುದ್ರವನ್ನು ಕಡೆಯುತ್ತಿದ್ದಾಗ–ಈ ಆದಿದೇವನು ಆಮೆಯ ದೇಹವನ್ನು ತಾಳಿ ತನ್ನ ಬೆನ್ನಿನ ಮೇಲೆ ಮಂದರ ಗಿರಿಯನ್ನು ಹೊತ್ತುಕೊಂಡನು. ಆಗ ಸುತ್ತುತ್ತಿದ್ದ ಪರ್ವತದ ಉಜ್ಜುವಿಕೆ ಯಿಂದ ಮೈನವೆಯು ಸ್ವಲ್ಪ ಕಡಿಮೆಯಾದಂತಾಗಿ ಸ್ವಾಮಿಗೆ ಕ್ಷಣಕಾಲ ಸುಖನಿದ್ರೆಯನ್ನು ಮಾಡಲು ಸಾಧ್ಯವಾಯಿತು.

ನೃಸಿಂಹಾವತಾರ :

**ತ್ರೈವಿಷ್ಟಪೋರುಭಯಹಾ ಸ ನೃಸಿಂಹರೂಪಂ**
**ಕೃತ್ವಾ ಭ್ರಮದ್ಭ್ರುಕುಟಿದಂಷ್ಟ್ರಕರಾಲವಕ್ತ್ರಮ್ ।**
**ದೈತ್ಯೇನ್ದ್ರಮಾಶು ಗದಯಾಭಿಪತನ್ತಮಾರಾ-**
**ದೂರೌ ನಿಪಾತ್ಯ ವಿದದಾರ ನಖೈಃ ಸ್ಫುರನ್ತಮ್ ॥೧೪॥**

ದೇವತೆಗಳಿಗೆ ಉಂಟಾಗಿದ್ದ ಮಹಾಭಯವನ್ನು ಧ್ವಂಸಮಾಡುವುದ ಕ್ಕಾಗಿ ಆ ದೇವದೇವನು ಅದುರುತ್ತಿರುವ, ಗಂಟುಹಾಕಿಕೊಂಡ ಮುಖ ಮತ್ತು ತೀಕ್ಷ್ಣವಾದ ಕೋರೆದಾಡೆಗಳಿಂದ ಕೂಡಿ ಕಡುಭಯಂಕರವಾದ ನೃಸಿಂಹರೂಪವನ್ನು ತಾಳಿದನು. ಆಗ ಗದೆಯನ್ನು ಎತ್ತಿಕೊಂಡು ತನ್ನ

ಮೇಲೆ ಬೀಳಲು ಬಂದ ದೈತ್ಯಚಕ್ರವರ್ತಿ ಹಿರಣ್ಯಕಶಿಪುವನ್ನು ದೂರದಿಂದಲೇ ಹಿಡಿದು, ತನ್ನ ತೊಡೆಯ ಮೇಲೆ ಬೀಳಿಸಿಕೊಂಡು ವಿಲ-ವಿಲನೆ ಒದ್ದಾಡುತ್ತಿದ್ದ ಆತನನ್ನು ತನ್ನ ಉಗುರುಗಳಿಂದ ಸೀಳಿಹಾಕಿದನು.

ಗಜೇಂದ್ರವರದಾನಾವತಾರ :

**ಅನ್ತಃಸರಸ್ಯುರುಬಲೇನ ಪದೇ ಗೃಹೀತೋ**
**ಗ್ರಾಹೇಣ ಯೂಥಪತಿರಮ್ಬುಜಹಸ್ತ ಆರ್ತಃ ।**
**ಆಹೇದಮಾದಿಪುರುಷಾಖಿಲಲೋಕನಾಥ**
**ತೀರ್ಥಶ್ರವಃ ಶ್ರವಣಮಙ್ಗಲನಾಮಧೇಯ ॥೧೫॥**

**ಶ್ರುತ್ವಾ ಹರಿಸ್ತಮರಣಾರ್ಥಿನಮಪ್ರಮೇಯ-**
**ಶ್ಚಕ್ರಾಯುಧಃ ಪತಗರಾಜಭುಜಾಧಿರೂಢಃ ।**
**ಚಕ್ರೇಣ ನಕ್ರವದನಂ ವಿನಿಪಾಟ್ಯ ತಸ್ಮಾ-**
**ದ್ಧಸ್ತೇ ಪ್ರಗೃಹ್ಯ ಭಗವಾನ್ಕೃಪಯೋಜ್ಜಹಾರ ॥೧೬॥**

ಸರೋವರದೊಳಗಿದ್ದ ಒಂದು ಮಹಾಬಲಶಾಲಿಯಾದ ಮೊಸಳೆಯು ಧಿಡೀರನೆ ಒಬ್ಬ ಗಜರಾಜನ ಕಾಲನ್ನು ಹಿಡಿದುಕೊಂಡುಬಿಡಲು ಆ ಗಜರಾಜನು ಅದರೊಡನೆ ಹೆಣಗಾಡಿ ಸೋತು ಆಯಾಸಗೊಂಡು ಗಾಬರಿಗೊಂಡನು. ಆಗ ಬೇರೆ ಗತಿಕಾಣದೇ ಆ ಗಜರಾಜನು ಸೊಂಡಿಲಿನಲ್ಲಿ ಕಮಲವೊಂದನ್ನು ಮೇಲೆತ್ತಿ ಹಿಡಿದು 'ಓ ಆದಿಪುರುಷನೇ! ಸಕಲಲೋಕಗಳ ಸ್ವಾಮಿಯೇ! ಪುಣ್ಯಕೀರ್ತಿಯೇ! ಶ್ರವಣಮಂಗಳವಾದ ನಾಮಧೇಯವುಳ್ಳ ನಾರಾಯಣನೇ!' ಎಂದು ಕೂಗಿಡಲು-ಒಡನೆಯೇ ಅನಂತಶಕ್ತಿಯಾದ ಶ್ರೀಹರಿಯು ಅಲ್ಲಿಗೆ ಚಕ್ರಪಾಣಿಯಾಗಿ ಪಕ್ಷಿರಾಜನ ಬೆನ್ನೇರಿ ಬಂದು, ತನ್ನ ಚಕ್ರದಿಂದ ಮೊಸಳೆಯ ಮುಖವನ್ನು ಸೀಳಿಹಾಕಿ ಆ ಗಜೇಂದ್ರನನ್ನು ಕರುಣೆಯಿಂದ ಕೈಹಿಡಿದು ಕಾಪಾಡಿದನು.

ವಾಮನತ್ರಿವಿಕ್ರಮಾವತಾರ :

**ಜ್ಯಾಯಾನ್ಗುಣೈರವರಜೋಽಪ್ಯದಿತೇಃ ಸುತಾನಾಂ**
**ಲೋಕಾನ್ವಿಚಕ್ರಮ ಇಮಾನ್ಯದಥಾಧಿಯಜ್ಞಃ ।**

**ಕ್ಷ್ಮಾಂ ವಾಮನೇನ ಜಗೃಹೇ ತ್ರಿಪದಚ್ಛಲೇನ**
**ಯಾಚ್ಞಾಮೃತೇ ಪಥಿ ಚರನ್ಪ್ರಭುಭಿರ್ನ ಚಾಲ್ಯಃ ॥೧೭॥**

ಅದಿತಿಯ ಪುತ್ರರಲ್ಲಿ ಅತ್ಯಂತ ಚಿಕ್ಕವನಾದರೂ ಗುಣಗಳಲ್ಲಿ ಎಲ್ಲರಿಗಿಂತಲೂ ದೊಡ್ಡವನಾದ ದೇವದೇವನವನು. ವಾಮನಮೂರ್ತಿಯಾಗಿ ಬಲಿಚಕ್ರವರ್ತಿಯಿಂದ ತನ್ನ ಮೂರು ಹೆಜ್ಜೆಗಳ ಅಳತೆಯಷ್ಟು ಭೂಮಿಯನ್ನು ಬೇಡಿ ತೆಗೆದುಕೊಳ್ಳುವ ನೆಪಹೂಡಿ ತ್ರಿವಿಕ್ರಮನಾಗಿ ಬೆಳೆದು ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನೂ ಅಳೆದು ಆಕ್ರಮಿಸಿಬಿಟ್ಟನು. ಭಗವಂತನು ಆತನಿಂದ ಭೂಮಿಯನ್ನು ಬೇಡಿಯೇ ಪಡೆದುಕೊಂಡನೇಕೆ? ಎಂದರೆ : ಬಲಿಯು ಎಂದಿಗೂ ಸನ್ಮಾರ್ಗವನ್ನು ಬಿಟ್ಟವನಲ್ಲ. ಅಂತಹ ಸಜ್ಜನ ಶಿರೋಮಣಿಯನ್ನು ಅವನ ಸ್ಥಾನದಿಂದ, ಐಶ್ವರ್ಯದಿಂದ ಕದಲಿಸಬೇಕಾದರೆ ಎಂತಹ ಸಮರ್ಥರಿಗಾದರೂ ಯಾಚನೆಯೊಂದೇ ಉಪಾಯ. ಬೇರಾವುದೂ ಉಪಾಯವಿಲ್ಲ-ಎಂಬ ತತ್ತ್ವವನ್ನು ಆ ಮೂಲಕ ಸ್ವಾಮಿಯು ಸಾಧಿಸಿ ತೋರಿಸಿದನು.

**ನಾರ್ಥೋ ಬಲೇರಯಮುರುಕ್ರಮಪಾದಶೌಚ-**
**ಮಾಪಃ ಶಿಖಾಧೃತವತೋ ವಿಬುಧಾಧಿಪತ್ಯಮ್ ।**
**ಯೋ ವೈ ಪ್ರತಿಶ್ರುತಮೃತೇ ನ ಚಿಕೀರ್ಷದನ್ಯ-**
**ದಾತ್ಮಾನಮಙ್ಗ ಶಿರಸಾ ಹರಯೇಽಭಿಮೇನೇ ॥೧೮॥**

ವಾಸ್ತವವಾಗಿ ಬಲೀಂದ್ರನಿಗೆ ಇಂದ್ರಪದವಿಯಿಂದ ಯಾವ ಪುರುಷಾರ್ಥವೂ ಆಗಬೇಕಾಗಿರಲಿಲ್ಲ. ಏಕೆಂದರೆ : ಆತನು ಸಾಕ್ಷಾತ್ ತ್ರಿವಿಕ್ರಮ ಸ್ವಾಮಿಯ ಶ್ರೀಪಾದಪದ್ಮತೀರ್ಥವನ್ನೇ ಶಿರಸ್ಸಿನಲ್ಲಿ ಧರಿಸಿ ಧನ್ಯನಾಗಿದ್ದನು. ಇದಲ್ಲದೇ ಎಂತಹ ಸತ್ಯನಿಷ್ಠೆ ಆತನದು! ವಟು ವಾಮನನಿಗೆ ಆತನು ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಕೊಡುವಾಗ ತಾನು ಮಾಡಿದ್ದ ವಾಗ್ದಾನವನ್ನು ಎಂತಹ ಪರಿಸ್ಥಿತಿಯಲ್ಲೂ ಆತನು ಬದಲಿಸಲಿಲ್ಲ. ಗುರು ಶುಕ್ರಾಚಾರ್ಯರೇ ಒತ್ತಾಯಮಾಡಿದರೂ ತನ್ನ ಮಾತಿಗೆ ವಿರುದ್ಧವಾಗಿ ನಡೆದುಕೊಳ್ಳಲಿಲ್ಲ. ಭಗವಂತನಿಗೆ ಮೂರನೆಯ ಹೆಜ್ಜೆಯ ಜಾಗವನ್ನು ಕೊಡುವುದಕ್ಕಾಗಿ ಆತನ ಪಾದಗಳಲ್ಲಿ ತನ್ನ ಶಿರಸ್ಸನ್ನಿರಿಸಿ ತನ್ನನ್ನೇ ಪೂರ್ಣವಾಗಿ ಆತನಿಗೆ ಸಮರ್ಪಣೆಮಾಡಿಕೊಂಡ ಮಹಾತ್ಮನವನು.

ಹಂಸಾವತಾರ :

ತುಭ್ಯಂ ಚ ನಾರದ ಭೃಶಂ ಭಗವಾನ್ವಿವೃದ್ಧ-
ಭಾವೇನ ಸಾಧುಪರಿತುಷ್ಟ ಉವಾಚ ಯೋಗಮ್ ।
ಜ್ಞಾನಂ ಚ ಭಾಗವತಮಾತ್ಮಸತತ್ತ್ವದೀಪಂ
ಯದ್ವಾಸುದೇವಶರಣಾ ವಿದುರಞ್ಜಸೈವ ॥೧೯॥

ಓ ನಾರದನೇ! ನಿನ್ನ ಭಕ್ತಿಭಾವದಿಂದ ಸಂತುಷ್ಟನಾಗಿ ಆ ಭಗವಂತನು ಹಂಸರೂಪಿಯಾಗಿ ನಿನಗೆ ಯೋಗಜ್ಞಾನ ಮತ್ತು ಆತ್ಮತತ್ತ್ವಗಳನ್ನು ಪ್ರಕಾಶ ಪಡಿಸುವ ಭಾಗವತಧರ್ಮವನ್ನು ಉಪದೇಶಮಾಡಿದನಷ್ಟೇ! ಶ್ರೀವಾಸು ದೇವನಲ್ಲಿ ಶರಣಾಗತರಾದ ಭಕ್ತರಿಗೆ ಮಾತ್ರವೇ ಸುಲಭವಾಗಿ ದೊರೆಯುವ ಧರ್ಮವದು.

ಮನ್ವಂತರಗಳಲ್ಲಿನ ಅವತಾರಗಳು :

ಚಕ್ರಂ ಚ ದಿಕ್ಷ್ವವಿಹತಂ ದಶಸು ಸ್ವತೇಜೋ
ಮನ್ವನ್ತರೇಷು ಮನುವಂಶಧರೋ ಬಿಭರ್ತಿ ।
ದುಷ್ಟೇಷು ರಾಜಸು ದಮಂ ವ್ಯದಧಾತ್ಸ್ವಕೀರ್ತಿಂ
ಸತ್ಯೇ ತ್ರಿಪೃಷ್ಠ ಉಶತೀಂ ಪ್ರಥಯಂಶ್ಚರಿತ್ರೈಃ ॥೨೦॥

ಅದೇ ಭಗವಂತನೇ ಸ್ವಾಯಂಭುವವೇ ಮುಂತಾದ ಮನ್ವಂತರಗಳಲ್ಲಿ ಮನುವಿನ ರೂಪದಲ್ಲಿ ಅವತಾರಮಾಡಿ ಹತ್ತು ದಿಕ್ಕುಗಳಲ್ಲೂ ಸುದರ್ಶನ ಚಕ್ರಕ್ಕೆ ಸಮಾನವಾದ ತನ್ನ ತೇಜಸ್ಸಿನಿಂದ ಯಾವ ಅಡೆ-ತಡೆಗಳೂ ಇಲ್ಲದೇ ನಿಷ್ಕಂಟಕವಾಗಿ ರಾಜ್ಯಭಾರಮಾಡುವನು. ಆತನ ಪುಣ್ಯಚರಿತ್ರೆಯ ಕೀರ್ತಿಯು ಮೂರು ಲೋಕಗಳಿಗೂ ಮೇಲೆ ಸತ್ಯಲೋಕದವರೆಗೂ ಹರಡುವುದು. ತನ್ನ ಆ ರೂಪದಲ್ಲಿ ಆತನು ಕಾಲ-ಕಾಲಗಳಲ್ಲಿ ಭೂಮಿಗೆ ಭಾರವಾಗುವ ದುಷ್ಟರಾದ ರಾಜರ ನಿಗ್ರಹವನ್ನೂ ಮಾಡುವನು.

ಧನ್ವಂತರಿ ಅವತಾರ :

ಧನ್ವನ್ತರಿಶ್ಚ ಭಗವಾನ್ಸ್ವಯಮೇವ ಕೀರ್ತಿ-
ರ್ನಾಮ್ನಾ ನೃಣಾಂ ಪುರುರುಜಾಂ ರುಜ ಆಶು ಹನ್ತಿ ।
ಯಜ್ಞ ಚ ಭಾಗಮಮೃತಾಯುರವಾವರುನ್ಧ
ಆಯುಶ್ಚ ವೇದಮನುಶಾಸ್ತ್ಯವತೀರ್ಯ ಲೋಕೇ ॥೨೧॥

ಧನ್ಯಕೀರ್ತಿಯಾದ ಭಗವಾನ್ ಧನ್ವಂತರಿಯೂ ಆತನ ಅವತಾರವೇ. ಆತನು ತನ್ನ ನಾಮಧೇಯದಿಂದಲೇ ರೋಗಿಗಳ ದೊಡ್ಡ-ದೊಡ್ಡ ರೋಗಗಳನ್ನು ಶೀಘ್ರದಲ್ಲೇ ನಾಶಪಡಿಸುವನು. ದೇವತೆಗಳಿಗೆ ಅಮೃತವನ್ನು ಪಾನಮಾಡಿಸಿ ಅವರನ್ನು ಅಮರರನ್ನಾಗಿ ಮಾಡಿದವನೂ ಮತ್ತು ದೈತ್ಯರು ಕಸಿದುಕೊಂಡಿದ್ದ ಯಜ್ಞಭಾಗವನ್ನು ಮತ್ತೆ ದೇವತೆಗಳಿಗೆ ದೊರಕಿಸಿಕೊಟ್ಟವನೂ ಆತನೇ. ಈ ಲೋಕದಲ್ಲಿ ಅವತಾರಮಾಡಿ ಆಯುರ್ವೇದವನ್ನು ಪ್ರವರ್ತನೆ ಮಾಡಿದ ಅವತಾರವೇ ಆತನದು.

ಪರಶುರಾಮಾವತಾರ :

**ಕ್ಷತ್ರಂ ಕ್ಷಯಾಯ ವಿಧಿನೋಪಭೃತಂ ಮಹಾತ್ಮಾ**
**ಬ್ರಹ್ಮಧ್ರುಗುಜ್ಝಿತಪಥಂ ನರಕಾರ್ತಿಲಿಪ್ಸು ।**
**ಉದ್ಧನ್ತ್ಯಸಾವವನಿಕಣ್ಟಕಮುಗ್ರವೀರ್ಯ-**
**ಸ್ತ್ರಿಃಸಪ್ತಕೃತ್ವ ಉರುಧಾರಪರಶ್ವಧೇನ ॥೨೨॥**

ಬ್ರಹ್ಮದ್ರೋಹಿಗಳಾಗಿ, ಆರ್ಯಮರ್ಯಾದೆಯನ್ನು ಉಲ್ಲಂಘಿಸುವ, ನರಕಕ್ಕೆ ಯೋಗ್ಯರಾದ ದುಷ್ಟಕ್ಷತ್ರಿಯರು ಹೆಚ್ಚಿಕೊಂಡುಬಿಟ್ಟಾಗ ಈ ಪರಮಪುರುಷನು ಮಹಾಪರಾಕ್ರಮಿಯಾದ ಪರಶುರಾಮನ ರೂಪದಲ್ಲಿ ಅವತಾರಮಾಡಿ ತೀಕ್ಷ್ಣವಾದ ಅಲುಗುಳ್ಳ ತನ್ನ ಗಂಡುಗೊಡಲಿಯಿಂದ ಇಪ್ಪತ್ತೊಂದು ಬಾರಿ ಅವರನ್ನು ಸಂಹರಿಸಿದನು.

ಶ್ರೀರಾಮಾವತಾರ :

**ಅಸ್ಮತ್ಪ್ರಸಾದಸುಮುಖಃ ಕಲಯಾ ಕಲೇಶ**
**ಇಕ್ಷ್ವಾಕುವಂಶ ಅವತೀರ್ಯ ಗುರೋರ್ನಿದೇಶೇ ।**
**ತಿಷ್ಠನ್ವನಂ ಸದಯಿತಾನುಜ ಆವಿವೇಶ**
**ಯಸ್ಮಿನ್ವಿರುಧ್ಯ ದಶಕನ್ಧರ ಆರ್ತಿಮಾರ್ಛತ್ ॥೨೩॥**

**ಯಸ್ಮಾ ಅದಾದುದಧಿರೂಢಭಯಾಙ್ಗವೇಪೋ**
**ಮಾರ್ಗಂ ಸಪದ್ಯರಿಪುರಂ ಹರವದ್ದಿಧಕ್ಷೋಃ ।**
**ದೂರೇಸುಹೃನ್ಮಥಿತರೋಷಸುಶೋಣದೃಷ್ಟ್ಯಾ**
**ತಾತಪ್ಯಮಾನಮಕರೋರಗನಕ್ರಚಕ್ರಃ ॥೨೪॥**

**ವಕ್ಷಃಸ್ಥಲಸ್ಪರ್ಶರುಗ್ಣಮಹೇಂದ್ರವಾಹ-**
**ದನ್ತೈರ್ವಿಡಮ್ಬಿತಕಕುಬ್ಜುಷ ಊಢಹಾಸಮ್ ।**
**ಸದ್ಯೋಽಸುಭಿಃ ಸಹ ವಿನೇಷ್ಯತಿ ದಾರಹರ್ತು-**
**ರ್ವಿಸ್ಫೂರ್ಜಿತೈರ್ಧನುಷ ಉಚ್ಚರತೋಽಧಿಸೈನ್ಯೇ ॥೨೫॥**

ಪರಿಪೂರ್ಣನಾದ ಆ ಭಗವಂತನು ನಮ್ಮನ್ನು ಅನುಗ್ರಹಿಸುವುದಕ್ಕಾಗಿ ತನ್ನ ಅಂಶಕಲೆಗಳಾದ ಲಕ್ಷ್ಮಣ-ಭರತ-ಶತ್ರುಘ್ನರೊಡನೆ ಶ್ರೀರಾಮಚಂದ್ರನ ರೂಪದಲ್ಲಿ ಇಕ್ಷ್ವಾಕುವಿನ ವಂಶದಲ್ಲಿ ಅವತರಿಸುವನು. ಆ ಅವತಾರದಲ್ಲಿ ಆತನು ತನ್ನ ತಂದೆಯ ಆಜ್ಞೆಯನ್ನು ಪಾಲಿಸುವುದಕ್ಕಾಗಿ ತನ್ನ ಪತ್ನೀ ಮತ್ತು ತಮ್ಮನೊಡನೆ ಅರಣ್ಯದಲ್ಲಿ ನಿವಾಸಮಾಡುವನು. ಆ ಸಮಯದಲ್ಲಿ ಆತನಲ್ಲಿ ವಿರೋಧಬೆಳೆಸಿಕೊಂಡ ದುಷ್ಟದಶಾನನನು ಆತನ ಕೈಯಿಂದ ಮರಣಕ್ಕೆ ಒಳಗಾಗುವನು.

ತ್ರಿಪುರಾಸುರರ ವಿಮಾನವನ್ನು ಸುಟ್ಟುಹಾಕಲು ಬಯಸಿದ ರುದ್ರನಂತೆ ಕ್ರುದ್ಧನಾದ ಆ ಶ್ರೀರಾಮನು ಶತ್ರುನಗರಿಯನ್ನು ಧ್ವಂಸಮಾಡುವುದಕ್ಕಾಗಿ ಸಮುದ್ರತೀರಕ್ಕೆ ಬಂದಾಗ ಸೀತಾವಿಯೋಗದಿಂದ ವೃದ್ಧಿಗೊಂಡ ಕ್ರೋಧಾಗ್ನಿಯಿಂದ ಕೆಂಪೇರಿದ ಆತನ ಕಣ್ಣುಗಳ ದೃಷ್ಟಿಮಾತ್ರದಿಂದಲೇ ಸಮುದ್ರದಲ್ಲಿರುವ ಮೀನು, ಮೊಸಳೆ, ಸರ್ಪಗಳೇ ಮುಂತಾದ ಜೀವಿಗಳು ಉರಿದು ಹೋಗತೊಡಗುತ್ತವೆ. ಆಗ ಸಮುದ್ರರಾಜನು ಭಯದಿಂದ ಥರ-ಥರನೆ ನಡುಗುತ್ತಾ ಒಡನೆಯೇ ಆತನಿಗೆ ದಾರಿಯನ್ನು ಕೊಟ್ಟುಬಿಡುವನು. ರಾವಣನು ಅತಿಪರಾಕ್ರಮಿಯಾಗಿ ದುರಹಂಕಾರದಿಂದ ಬೀಗಿ ಮೆರೆಯುತ್ತಿದ್ದನು. ಆತನು ಇಂದ್ರನೊಡನೆ ಯುದ್ಧಮಾಡುತ್ತಿದ್ದಾಗ ಇಂದ್ರನ ವಾಹನವಾದ ಐರಾವತದ ದಂತಗಳು ಆತನ ಕಠೋರವಾದ ಎದೆಗೆ ತಗುಲಿ ಚೂರು-ಚೂರಾಗಿ ನಾಲ್ಕು ದಿಕ್ಕುಗಳಲ್ಲಿಯೂ ಹರಡಿಕೊಂಡು ಅದರಿಂದ ದಿಕ್ಕುಗಳೆಲ್ಲಾ ಬೆಳ್ಳಗಾಗಿ ಬಿಡಲು, ದಿಗ್ವಿಜಯೀ ರಾವಣನು ಅಹಂಕಾರದಿಂದ ಉಬ್ಬಿ ನಗುತ್ತಿದ್ದನು. ಆದರೆ ಅದೇ ರಾವಣನೇ ಶ್ರೀರಾಮದೇವರ ಪತ್ನಿಯಾದ ಸೀತಾದೇವಿಯನ್ನು ಅಪಹರಿಸಿ ಯುದ್ಧರಂಗದಲ್ಲಿ ಗರ್ವದಿಂದ ಅವರನ್ನೆದುರಿಸಲು ಬರುವಾಗ ಆ ಶ್ರೀರಾಮದೇವರ ಧನುಸ್ಸಿನ ಟಂಕಾರದಿಂದಲೇ ಆತನ ಅಹಂಕಾರವು ಆತನ ಪ್ರಾಣಗಳೊಡನೆಯೇ ಲಯಹೊಂದಿಬಿಡುವುದು.

ಬಲರಾಮ ಮತ್ತು ಕೃಷ್ಣಾವತಾರಗಳು :

ಭೂಮೇಃ ಸರೇತರವರೂಥವಿಮರ್ದಿತಾಯಾಃ
ಕ್ಲೇಶವ್ಯಯಾಯ ಕಲಯಾ ಸಿತಕೃಷ್ಣಕೇಶಃ ।
ಜಾತಃ ಕರಿಷ್ಯತಿ ಜನಾನುಪಲಕ್ಷ್ಯಮಾರ್ಗಃ
ಕರ್ಮಾಣಿ ಚಾತ್ಮಮಹಿಮೋಪನಿಬನ್ಧನಾನಿ ॥೨೬॥

ತೋಕೇನ ಜೀವಹರಣಂ ಯದುಲೂಕಿಕಾಯಾ-
ಸ್ತ್ರೈಮಾಸಿಕಸ್ಯ ಚ ಪದಾ ಶಕಟೋಽಪವೃತ್ತಃ ।
ಯದ್ರಿಙ್ಗತಾನ್ತರಗತೇನ ದಿವಿಸ್ಪೃಶೋರ್ವಾ
ಉನ್ಮೂಲನಂ ತ್ವಿತರಥಾರ್ಜುನಯೋರ್ನ ಭಾವ್ಯಮ್ ॥

ದೈತ್ಯರ ದಂಡುಗಳು ಭೂದೇವಿಯನ್ನು ಮೆಟ್ಟಿ ತುಳಿದುಹಾಕತೊಡಗಿದಾಗ ಆಕೆಯ ಕಷ್ಟವನ್ನು ಕಳೆಯುವುದಕ್ಕಾಗಿ ಆ ಭಗವಂತನು ತನ್ನ ಬಿಳಿಯ ಮತ್ತು ಕಪ್ಪುಬಣ್ಣಗಳ ಕೇಶಗಳಿಂದ* ಬಲರಾಮ ಮತ್ತು ಶ್ರೀಕೃಷ್ಣರ ರೂಪಗಳಲ್ಲಿ ಕಲಾವತಾರವನ್ನು ಸ್ವೀಕರಿಸುವನು ಮತ್ತು ಆ ಅವತಾರದಲ್ಲಿ ತನ್ನ ಮಹಿಮೆಯನ್ನು ಪ್ರಕಟಪಡಿಸುವಂತಹ ಅನೇಕ ಅದ್ಭುತವಾದ ಕರ್ಮಗಳನ್ನು ಮಾಡುವನು. ಲೋಕದ ಜನರು ಆ ಲೀಲೆಗಳ ರಹಸ್ಯವನ್ನು ಸ್ವಲ್ಪವೂ ತಿಳಿದುಕೊಳ್ಳಲಾರರು. ಪುಟ್ಟಮಗುವಾಗಿರುವಾಗಲೇ ಪೂತನಾರಾಕ್ಷಸಿಯ ಪ್ರಾಣವನ್ನಪಹರಿಸಿದ್ದು, ಹುಟ್ಟಿದ ಮೂರನೇ ತಿಂಗಳಿನಲ್ಲೇ ತನ್ನ ಕಾಲಿನಿಂದ ದೊಡ್ಡ ಗಾಡಿಯನ್ನು ತಲೆಕೆಳಗುಮಾಡಿದ್ದು,

---

* ಕ್ಲೇಶವ್ಯಯಾಯ ಕಲಯಾ ಸಿತಕೃಷ್ಣಕೇಶಃ = ಇಲ್ಲಿ ಬಲರಾಮ ಮತ್ತು ಶ್ರೀಕೃಷ್ಣ ರನ್ನು ಭಗವಂತನ ಬಿಳಿಯ ಮತ್ತು ಕಪ್ಪುಬಣ್ಣಗಳ ಕೂದಲುಗಳ ಅವತಾರ ಗಳೆಂದು ಕರೆದಿದೆ. ಇವರ ಅಭಿಪ್ರಾಯ : ಭೂಮಿಯ ಭಾರವನ್ನು ಇಳುಹಲು ಭಗವಂತನ ಕೇಶವೇ ಸಾಕು ಎನ್ನುವುದು. ಇದಲ್ಲದೇ ಬಲರಾಮದೇವರ ಮೈಬಣ್ಣ ಬಿಳುಪು ಮತ್ತು ಶ್ರೀಕೃಷ್ಣದೇವರ ಮೈಬಣ್ಣ ಕಪ್ಪು–ಎಂಬ ಅಭಿಪ್ರಾಯವೂ ಇಲ್ಲಿ ಸೇರಿದೆ. ಶ್ರೀಕೃಷ್ಣನು ಸಾಕ್ಷಾತ್ ಭಗವಂತನೇ. ಉಳಿದವರೆಲ್ಲಾ ಅಂದರೆ : ಪ್ರಜಾಪತಿಗಳು ಮುಂತಾದವರೆಲ್ಲಾ ಭಗವಂತನ ಅಂಶಗಳು ಎಂದು ಈ ಹಿಂದೆ ಹೇಳಿರುವುದನ್ನು ಗಮನಿಸಬೇಕು. 'ಏತೇ ಚಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್' (ಶ್ಲೋಕ ೨೬)

ಅಂಬೆಗಾಲು ಹಾಕುತ್ತಿದ್ದಾಗ ಆಕಾಶದವರೆಗೂ ಬೆಳೆದಿದ್ದ ಅರ್ಜುನವೃಕ್ಷಗಳ ಜೋಡಿಯ ನಡುವೆ ಪ್ರವೇಶಿಸಿ ಅವನ್ನು ಬೇರುಸಹಿತ ಕಿತ್ತುಹೋಗುವಂತೆ ಮಾಡಿದ್ದು–ಆತನು ಮಾಡಿದ ಇಂತಹ ಅದ್ಭುತಕಾರ್ಯಶಕ್ತಿಯ ರಹಸ್ಯವನ್ನು ಇತರರಿಗೆ ಚಿಂತಿಸುವುದಕ್ಕಾದರೂ ಸಾಧ್ಯವೇ?

**ಯದ್ವೈ ವ್ರಜೇ ವ್ರಜಪಶೂನ್ವಿಷತೋಯಪೀಥಾ-**
**ನ್ಪಾಲಾಂಸ್ತ್ವಜೀವಯದನುಗ್ರಹದೃಷ್ಟಿವೃಷ್ಟ್ಯಾ ।**
**ತಚ್ಛುದ್ಧಯೇಽತಿವಿಷವೀರ್ಯವಿಲೋಲಜಿಹ್ವ-**
**ಮುಚ್ಚಾಟಯಿಷ್ಯದುರಗಂ ವಿಹರನ್ ಹ್ರದಿನ್ಯಾಮ್ ॥**

ನಂದಗೋಕುಲದಲ್ಲಿ ಕಾಳಿಂಗನಾಗನ ವಿಷದಿಂದ ದೂಷಿತವಾಗಿದ್ದ ಯಮುನಾನದಿಯ ನೀರನ್ನು ಕುಡಿದು ಹಸು-ಕರುಗಳೂ, ಗೋಪಾಲ ಬಾಲಕರೂ ಸತ್ತುಹೋಗುವರು. ಆಗ ಆತನು ತನ್ನ ಅಮೃತಮಯವಾದ ಅನುಗ್ರಹದೃಷ್ಟಿರೂಪದಿಂದಲೇ ಅವರೆಲ್ಲರನ್ನೂ ಬದುಕಿಸುವನು ಮತ್ತು ಯಮುನಾಜಲವನ್ನು ಶುದ್ಧಪಡಿಸುವುದಕ್ಕಾಗಿ ಆ ಮಡುವಿನಲ್ಲಿ ಧುಮುಕಿ ಅಲ್ಲಿ ವಿಹರಿಸಿ, ವಿಷದ ಶಕ್ತಿಯಿಂದ ನಾಲಿಗೆಗಳನ್ನು ಅಳ್ಳಾಡಿಸುತ್ತಿದ್ದ ಕಾಳಿಂಗನಾಗನನ್ನು ಅಲ್ಲಿಂದ ಹೊರಡಿಸಿಬಿಡುವನು.

**ತತ್ಕರ್ಮ ದಿವ್ಯಮಿವ ಯನ್ನಿಶಿ ನಿಃಶಯಾನಂ**
**ದಾವಾಗ್ನಿನಾ ಶುಚಿವನೇ ಪರಿದಹ್ಯಮಾನೇ ।**
**ಉನ್ನೇಷ್ಯತಿ ವ್ರಜಮತೋಽವಸಿತಾನ್ತಕಾಲಂ**
**ನೇತ್ರೇ ಪಿಧಾಯ್ಯ ಸಬಲೋಽನಧಿಗಮ್ಯವೀರ್ಯಃ ॥೨೯॥**

ಅಂದೇ ರಾತ್ರಿ ಎಲ್ಲರೂ ಯಮುನಾನದಿಯ ತೀರದಲ್ಲಿ ಮಲಗಿ ನಿದ್ರಿಸುತ್ತಿರುವಾಗ ಬೇಸಗೆಯ ಕಾಲವಾದ್ದರಿಂದ ಹತ್ತಿರದ ಇಡೀ ಕಾಡು ಕಾಡುಗಿಚ್ಚಿನಿಂದ ಉರಿದುಹೋಗತೊಡಗಲು ಬಲರಾಮದೇವರೊಡನೆ ಈತನು ಅಲ್ಲಿಗೆ ಹೋಗಿ ಪ್ರಾಣಾಪಾಯಕ್ಕೆ ಸಿಕ್ಕಿದ್ದ ಗೋವಳರನ್ನು 'ಎಲ್ಲರೂ ಕಣ್ಣುಮುಚ್ಚಿಕೊಳ್ಳಿ'–ಎಂದು ಹೇಳಿ, ಅವರು ಕಣ್ಣುಮುಚ್ಚಿರುವಾಗ ಒಡನೆಯೇ ಅವರನ್ನು ಕಿಚ್ಚಿನಿಂದ ಪಾರುಮಾಡುವನು. ಎಂತಹ ಅಲೌಕಿಕಲೀಲೆ ಇದು! ಆತನ ಶಕ್ತಿಯನ್ನು ವಾಸ್ತವವಾಗಿ ಚಿಂತಿಸುವುದಕ್ಕಾದರೂ ಸಾಧ್ಯವೇ?

**ಗೃಹ್ಣೀತ ಯದ್ಯದುಪಬನ್ಧಮಮುಷ್ಯ ಮಾತಾ**
**ಶುಲ್ಬಂ ಸುತಸ್ಯ ನ ತು ತತ್ತದಮುಷ್ಯ ಮಾತಿ ।**
**ಯಜ್ಜೃಮ್ಭತೋಽಸ್ಯ ವದನೇ ಭುವನಾನಿ ಗೋಪೀ**
**ಸಂವೀಕ್ಷ್ಯಶಙ್ಕಿತಮನಾಃ ಪ್ರತಿಬೋಧಿತಾಸೀತ್ ॥೩೦॥**

ತಾಯಿ ಯಶೋದೆಯು ಆತನನ್ನು ಕಟ್ಟಿಹಾಕಲು ಯಾವ ಯಾವುದೋ ಹಗ್ಗವನ್ನು ತಂದರೂ ಅದು ಆತನ ಹೊಟ್ಟೆಯನ್ನು ಸುತ್ತಲು ಸಾಕಾಗದೇ ಎರಡು ಅಂಗುಲ ಕಡಿಮೆಯೇ ಆಗುವುದು. ಆತನು ಆಕಳಿಸು ವಾಗ ಆತನ ಬಾಯೊಳಗೆ ಹದಿನಾಲ್ಕು ಲೋಕಗಳನ್ನೂ ಕಂಡು ಆಕೆಯು ಮೊದಲು ಭಯಗ್ರಸ್ತಳಾಗಿ ಮತ್ತೆ ಸಮಾಧಾನತಂದುಕೊಳ್ಳುವಳು.

**ನನ್ದಂ ಚ ಮೋಕ್ಷ್ಯತಿ ಭಯಾದ್ವರುಣಸ್ಯ ಪಾಶಾ-**
**ದ್ಗೋಪಾನ್ಬಿಲೇಷು ಪಿಹಿತಾನ್ಮಯಸೂನುನಾ ಚ ।**
**ಅಹ್ನ್ಯಾಪೃತಂ ನಿಶಿ ಶಯಾನಮತಿಶ್ರಮೇಣ**
**ಲೋಕಂ ವಿಕುಣ್ಠಮುಪನೇಷ್ಯತಿ ಗೋಕುಲಂ ಸ್ಮ ॥೩೧॥**

ಆತನು–ತಂದೆ ನಂದಗೋಪನನ್ನು ಹೆಬ್ಬಾವಿನ ಭಯದಿಂದಲೂ, ವರುಣದೇವರ ಪಾಶದಿಂದಲೂ ಬಿಡಿಸುವನು. ಮಯಾಸುರನ ಪುತ್ರನು ಗೋಪಾಲಬಾಲಕರನ್ನು ಪರ್ವತಗುಹೆಯಲ್ಲಿ ಬಚ್ಚಿಟ್ಟು ಸೆರೆಹಾಕುವಾಗ ಈತನು ಅಲ್ಲಿಂದ ಅವರನ್ನು ಬಿಡುಗಡೆಮಾಡಿ ಕಾಪಾಡುವನು. ಗೋಕುಲದ ಜನರು ಹಗಲು ದುಡಿಮೆಯ ಆಯಾಸದಿಂದ ರಾತ್ರಿ ಮಲಗಿ ನಿದ್ರಿಸುತ್ತಿರುವಾಗ ಅವರು ಯಾವ ಸಾಧನೆಯನ್ನು ಮಾಡದಿದ್ದರೂ ಅವರನ್ನು ವೈಕುಂಠಕ್ಕೆ ಕರೆದೊಯ್ದು ಅಲ್ಲಿನ ದಿವ್ಯದರ್ಶನಮಾಡಿಸಿ ಹಿಂದಕ್ಕೆ ಕರೆದುಕೊಂಡು ಬರುವನು.

**ಗೋಪೈರ್ಮಖೇ ಪ್ರತಿಹತೇ ವ್ರಜವಿಪ್ಲವಾಯ**
**ದೇವೇಽಭಿವರ್ಷತಿ ಪಶೂನ್ಕೃಪಯಾ ರಿರಕ್ಷುಃ ।**
**ಧರ್ತೋಚ್ಛಿಲೀನ್ಧ್ರಮಿವ ಸಪ್ತ ದಿನಾನಿ ಸಪ್ತ-**
**ವರ್ಷೋ ಮಹೀಧ್ರಮನಘೈಕಕರೇ ಸಲೀಲಮ್ ॥೩೨॥**

ಪಾಪರಹಿತನಾದ ವತ್ಸ ನಾರದನೇ! ಆತನ ಸಲಹೆಯಂತೆ ಗೋಪಾಲಕರು

ಇಂದ್ರಯಜ್ಞವನ್ನು ನಿಲ್ಲಿಸುವರು. ಆಗ ಕ್ರುದ್ಧನಾದ ಇಂದ್ರನು ಇಡೀ ಗೋಕುಲವನ್ನು ಧ್ವಂಸಮಾಡುವ ಸಂಕಲ್ಪದಿಂದ ಭಯಂಕರವಾಗಿ ಮಳೆಗರೆಯ ತೊಡಗಲು–ಆ ಗೋವುಗಳನ್ನೂ, ಗೋವಳರನ್ನೂ ಕರುಣೆಯಿಂದ ರಕ್ಷಿಸಲು ಸ್ವಾಮಿಯು ಸಂಕಲ್ಪಮಾಡುವನು. ಇನ್ನೂ ಏಳು ವರ್ಷ ವಯಸ್ಸಿನಲ್ಲಿದ್ದ ಆತನು ಏಳು ದಿವಸಗಳ ಕಾಲ ಗೋವರ್ಧನವೆಂಬ ಪರ್ವತವನ್ನು ನಾಯಿ ಕೊಡೆಯಂತೆ ಲೀಲಾಜಾಲವಾಗಿ ಒಂದೇ ಕೈಯಿಂದ ಎತ್ತಿ ಹಿಡಿದುಕೊಂಡಿದ್ದು ಅದರ ಆಸರೆಯಲ್ಲಿ ಅವರನ್ನೆಲ್ಲಾ ಕಾಪಾಡುವನು.

**ಕ್ರೀಡನ್ವನೇ ನಿಶಿ ನಿಶಾಕರರಶ್ಮಿಗೌರ್ಯಾಂ**
**ರಾಸೋನ್ಮುಖಃ ಕಲಪದಾಯತಮೂರ್ಚ್ಛಿತೇನ ।**
**ಉದ್ದೀಪಿತಸ್ಮರರುಜಾಂ ವ್ರಜಭೃದ್ವಧೂನಾಂ**
**ಹರ್ತುರ್ಹರಿಷ್ಯತಿ ಶಿರೋ ಧನದಾನುಗಸ್ಯ ॥೩೩॥**

ವೃಂದಾವನದಲ್ಲಿ ಸುತ್ತಲೂ ಬೆಳ್ಳಗೆ ಬೆಳದಿಂಗಳು ಹರಡಿರುವ ರಮಣೀಯವಾದ ರಾತ್ರಿಯಲ್ಲಿ ರಾಸಕ್ರೀಡೆಯನ್ನಾಡುವ ಇಚ್ಛೆಯಿಂದ ಸ್ವಾಮಿಯು ಕೊಳಲಿನಿಂದ ಸಂಗೀತಸುಧೆಯನ್ನು ವರ್ಷಿಸತೊಡಗುವಾಗ ಪ್ರೇಮವಶರಾಗಿ ಅಲ್ಲಿಗೆ ಬರುವ ಗೋಪಿಕಾಸ್ತ್ರೀಯರನ್ನು ಕುಬೇರನ ಸೇವಕ ನಾದ ಶಂಖಚೂಡನೆಂಬುವನು ಅಪಹರಿಸುವನು. ಆಗ ಪ್ರಭುವು ಆತನ ಶಿರಚ್ಛೇದನಮಾಡಿ ಅವರನ್ನು ರಕ್ಷಿಸುವನು.

**ಯೇ ಚ ಪ್ರಲಮ್ಬಖರದರ್ದುರಕೇಶ್ಯರಿಷ್ಟ–**
**ಮಲ್ಲೇಭಕಂಸಯವನಾಃ ಕುಜಪೌಣ್ಡ್ರಕಾದ್ಯಾಃ ।**
**ಅನ್ಯೇ ಚ ಶಾಲ್ವಕಪಿಬಲ್ವಲದನ್ತವಕ್ತ್ರ–**
**ಸಪ್ತೋಕ್ಷಶಮ್ಬರವಿದೂರಥರುಕ್ಮಿಮುಖ್ಯಾಃ ॥೩೪॥**

**ಯೇ ವಾ ಮೃಧೇ ಸಮಿತಿಶಾಲಿನ ಆತ್ತಚಾಪಾಃ**
**ಕಾಮ್ಬೋಜಮತ್ಸ್ಯಕುರುಕೈಕಯಸೃಞ್ಜಯಾದ್ಯಾಃ ।**
**ಯಾಸ್ಯನ್ತ್ಯದರ್ಶನಮಲಂ ಬಲಪಾರ್ಥಭೀಮ–**
**ವ್ಯಾಜಾಹ್ವಯೇನ ಹರಿಣಾ ನಿಲಯಂ ತದೀಯಮ್ ॥**

ಆ ಶಂಖಚೂಡನನ್ನು ಮಾತ್ರವಲ್ಲದೇ ಪ್ರಲಂಬಾಸುರ, ಧೇನುಕಾಸುರ,

ಬಕಾಸುರ, ಕೇಶಿ, ಅರಿಷ್ಟಾಸುರನೇ ಮುಂತಾದ ದೈತ್ಯರನ್ನೂ, ಚಾಣೂರ ಮುಂತಾದ ಮಲ್ಲರನ್ನೂ ಕುವಲಯಾಪೀಡವೆಂಬ ಆನೆಯನ್ನೂ, ಕಂಸ, ಕಾಲಯವನ, ನರಕಾಸುರ, ಪೌಂಡ್ರಕದೇಶದ ಮಿಥ್ಯಾವಾಸುದೇವ, ಶಾಲ್ವ, ದ್ವಿವಿದನೆಂಬ ವಾನರ, ಬಲ್ವಲ, ದಂತವಕ್ತ್ರ, ನಗ್ನಜಿತರಾಜನ ಏಳು ಕೊಬ್ಬಿದ ಗೂಳಿಗಳು, ಶಂಬರಾಸುರ, ವಿದೂರಥ, ರುಕ್ಮಿ–ಮುಂತಾದವರನ್ನೂ, ಬಿಲ್ಲು-ಬಾಣಗಳನ್ನು ಹಿಡಿದು ಯುದ್ಧರಂಗಕ್ಕೆ ಬರುವ ಕಾಂಭೋಜ, ಮತ್ಸ್ಯ, ಕುರು, ಕೈಕಯ, ಸೃಂಜಯ ಮೊದಲಾದ ದೇಶಗಳ ರಾಜರನ್ನೂ ಆತನು ಸಂಹಾರಮಾಡುವನು. ಕೆಲವರನ್ನು ತಾನೇ ಸಂಹರಿಸುವನು. ಕೆಲವರನ್ನು ಬಲರಾಮ-ಭೀಮಸೇನ-ಅರ್ಜುನನೇ ಮುಂತಾದವರ ಮೂಲಕ ಸಂಹಾರ ಮಾಡಿಸುವನು. ಭಗವಂತನಿಂದ ಸಂಹರಿಸಲ್ಪಡುವವರು ಅವನ ಧಾಮವನ್ನೇ ಸೇರಿಕೊಳ್ಳುವರು.

ವೇದವ್ಯಾಸಾವತಾರ :

ಕಾಲೇನ ಮೀಲಿತಧಿಯಾಮವಮೃಶ್ಯ ನೄಣಾಂ
ಸ್ತೋಕಾಯುಷಾಂ ಸ್ವನಿಗಮೋ ಬತ ದೂರಪಾರಃ ।
ಆವಿರ್ಹಿತಸ್ತ್ವನುಯುಗಂ ಸ ಹಿ ಸತ್ಯವತ್ಯಾಂ
ವೇದದ್ರುಮಂ ವಿಟಪಶೋ ವಿಭಜಿಷ್ಯತಿ ಸ್ಮ ॥೩೬॥

‘ಕಾಲದ ಪ್ರಭಾವದಿಂದ ಮನುಷ್ಯರ ಬುದ್ಧಿಶಕ್ತಿ ಮತ್ತು ಆಯುಸ್ಸು ಕಡಿಮೆಯಾಗುವುದು. ಆಗ ಇವರಿಗೆ ನನ್ನ ತತ್ತ್ವವನ್ನು ಹೇಳುವ ಇಡೀ ವೇದವಾಣಿಯನ್ನು ತಿಳಿಯುವ ಸಾಮರ್ಥ್ಯ ಇರುವುದಿಲ್ಲವಲ್ಲಾ!’–ಎಂದು ಯೋಚಿಸಿ ಕರುಣಾಳುವಾದ ಪ್ರಭುವು ಪ್ರತಿಯೊಂದು ಕಲ್ಪದಲ್ಲೂ ಸತ್ಯ ವತಿಯ ಗರ್ಭದಲ್ಲಿ ಭಗವಾನ್ ವೇದವ್ಯಾಸರ ರೂಪದಲ್ಲಿ ಪ್ರಕಟಗೊಂಡು ವೇದವೃಕ್ಷವನ್ನು ನಾನಾಶಾಖೆಗಳ ರೂಪದಲ್ಲಿ ವಿಭಾಗಮಾಡುವನು.

ಬುದ್ಧಾವತಾರ :

ದೇವದ್ವಿಷಾಂ ನಿಗಮವರ್ತ್ಮನಿ ನಿಷ್ಠಿತಾನಾಂ
ಪೂರ್ಭಿರ್ಮಯೇನ ವಿಹಿತಾಭಿರದೃಶ್ಯತೂರ್ಭಿಃ ।
ಲೋಕಾನ್ ಘ್ನತಾಂ ಮತಿವಿಮೋಹಮತಿಪ್ರಲೋಭಂ
ವೇಷಂ ವಿಧಾಯ ಬಹು ಭಾಷ್ಯತ ಔಪಧರ್ಮ್ಯಮ್ ॥

ದೇವಶತ್ರುಗಳಾದ ದೈತ್ಯರು ವೇದಮಾರ್ಗದ ಆಸರೆಪಡೆದು ಮಾಯಾಸುರನು ಮಾಡಿಕೊಟ್ಟ ಅದೃಶ್ಯವಾದ ವೇಗವುಳ್ಳ ಪುರಗಳಲ್ಲಿ ವಾಸಿಸುತ್ತಾ ಮನುಷ್ಯರನ್ನು ಹಿಂಸಿಸತೊಡಗುವಾಗ–ಈ ಭಗವಂತನು ಜನರ ಮನಸ್ಸಿನಲ್ಲಿ ಮೋಹವನ್ನೂ, ಪ್ರಲೋಭನೆಯನ್ನೂ ಉಂಟುಮಾಡುವ ವೇಷವನ್ನು ಧರಿಸಿ ಬುದ್ಧದೇವರ ರೂಪದಲ್ಲಿ ಬಹುಪ್ರಕಾರದ ಉಪಧರ್ಮಗಳನ್ನು* ಉಪದೇಶ ಮಾಡುವನು.

ಕಲ್ಕ್ಯವತಾರ :

**ಯರ್ಹ್ಯಾಲಯೇಷ್ವಪಿ ಸತಾಂ ನ ಹರೇಃ ಕಥಾಃ ಸ್ಯುಃ**
**ಪಾಖಣ್ಡಿನೋ ದ್ವಿಜಜನಾ ವೃಷಲಾ ನೃದೇವಾಃ ।**
**ಸ್ವಾಹಾ ಸ್ವಧಾ ವಷಡಿತಿ ಸ್ಮ ಗಿರೋ ನ ಯತ್ರ**
**ಶಾಸ್ತಾ ಭವಿಷ್ಯತಿ ಕಲೇರ್ಭಗವಾನ್ಯುಗಾನ್ತೇ ॥೩೮॥**

ಕಲಿಯುಗದ ಕೊನೆಗಾಲದಲ್ಲಿ ಸತ್ಪುರುಷರ ಮನೆಗಳಲ್ಲೂ ಶ್ರೀಹರಿಯ ಕಥೆಯ ಶ್ರವಣ-ಕೀರ್ತನ-ಉತ್ಸವಾದಿಗಳು ನಡೆಯಲು ಅವಕಾಶವಾಗುವುದಿಲ್ಲ. ಪಾಷಂಡಿಜನರೂ, ಧರ್ಮಘಾತುಕರೂ ರಾಜರಾಗಿಬಿಡುವರು. ದೇವತೆಗಳನ್ನೂ ಮತ್ತು ಪಿತೃಗಳನ್ನೂ ಕುರಿತು ಮಾಡುವ ಯಜ್ಞ ಮತ್ತು ಶ್ರಾದ್ಧಗಳ ಸದ್ದೂ ಇರುವುದಿಲ್ಲ. ಸ್ವಾಹಾ, ಸ್ವಧಾ ಮತ್ತು ವಷಟ್‌ಕಾರಗಳು ಕಿವಿಗೆ ಬೀಳುವುದಿಲ್ಲ. ಇಂತಹ ಸಮಯದಲ್ಲಿ ಕಲಿಯುಗವನ್ನು ಶಿಕ್ಷಿಸಿ ಹತೋಟಿಗೆ ತರುವುದಕ್ಕಾಗಿ ಭಗವಂತನು ಕಲ್ಕಿರೂಪದಲ್ಲಿ ಅವತಾರ ಮಾಡುವನು.

ವಿಭೂತಿರೂಪಾವತಾರಗಳು :

**ಸರ್ಗೇ ತಪೋಽಹಮೃಷಯೋ ನವ ಯೇ ಪ್ರಜೇಶಾಃ**
**ಸ್ಥಾನೇ ಚ ಧರ್ಮಮಖಮನ್ವಮರಾವನೀಶಾಃ ।**
**ಅನ್ತೇ ತ್ವಧರ್ಮಹರಮನ್ಯುವಶಾಸುರಾದ್ಯಾ**
**ಮಾಯಾವಿಭೂತಯ ಇಮಾಃ ಪುರುಶಕ್ತಿಭಾಜಃ ॥೩೯॥**

---

* ಉಪಧರ್ಮಗಳನ್ನು = ಧರ್ಮದಂತೆ ಕಾಣುವ ಅಧರ್ಮವನ್ನು, ಧರ್ಮಾಭಾಸವನ್ನು, ಪಾಷಂಡಧರ್ಮವನ್ನು (ಶ್ರೀಧರೀಯ)

ಪ್ರಪಂಚದ ಸೃಷ್ಟಿಯ ಸಮಯಬಂದಾಗ ತಪಸ್ಸಿನ ರೂಪದಲ್ಲೂ, ನನ್ನ ರೂಪದಲ್ಲೂ, ಮರೀಚಿಯೇ ಮುಂತಾದ ಮಹರ್ಷಿಗಳ ಮತ್ತು ನವಪ್ರಜಾ ಪತಿಗಳ ರೂಪದಲ್ಲೂ, ಹಾಗೆಯೇ ರಕ್ಷಣೆಯ ಸಮಯ ಬಂದಾಗ ಧರ್ಮ, ವಿಷ್ಣು, ಮನು, ದೇವತೆಗಳು ಮತ್ತು ರಾಜರುಗಳು–ಇವರ ರೂಪದಲ್ಲೂ, ವಿನಾಶಕಾಲ ಬಂದಾಗ ಅಧರ್ಮ, ರುದ್ರದೇವರು, ಕ್ರೋಧವಶರೆಂಬ ಹೆಸರಿನ ಸರ್ಪಗಳು ಮತ್ತು ದೈತ್ಯರು–ಇವರೇ ಮುಂತಾದವರ ರೂಪದಲ್ಲೂ ಸರ್ವಶಕ್ತಿಸಂಪನ್ನನಾಗಿರುವ ಶ್ರೀಭಗವಂತನ ವಿಚಿತ್ರವಾದ ಮಾಯಾ ವಿಭೂತಿಗಳು ಪ್ರಕಟಗೊಳ್ಳುವುವು.

**ವಿಷ್ಣೋರ್ನು ವೀರ್ಯಗುಣನಾಂ ಕತಮೋಽರ್ಹತೀಹ**
**ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ ।**
**ಚಸ್ಕಮ್ಭ ಯಃ ಸ್ವರಂಹಸಾಸ್ಖಲತಾ ತ್ರಿಪೃಷ್ಠಂ**
**ಯಸ್ಮಾತ್ತ್ರಿಸಾಮ್ಯಸದನಾದುರುಕಮ್ಪಯಾನಮ್ ॥೪೦॥**

ಭಗವಂತನ ಶಕ್ತಿಗಳು ಅನಂತವಾದುವು. ತನ್ನ ಪ್ರತಿಭೆಯಿಂದ ಭೂಮಿ ಯಲ್ಲಿರುವ ಒಂದೊಂದು ಧೂಳಿನ ಕಣವನ್ನು ಲೆಕ್ಕಿಸಿ ಮುಗಿಸಿದರೂ ಮಹಾ ವಿಷ್ಣುವಿನ ಶಕ್ತಿಗಳನ್ನು ಯಾವನೂ ಲೆಕ್ಕಿಸಿ ಮುಗಿಸಲಾರನು. ಯಾವನಿಗೆ ತಾನೇ ಹಾಗೆ ಮಾಡುವ ಶಕ್ತಿ ಇದ್ದೀತು! ಈ ಅನಂತಶಕ್ತಿಯಾದ ಪ್ರಭುವು ತ್ರಿವಿಕ್ರಮಾವತಾರದಲ್ಲಿ ತ್ರಿಲೋಕಗಳನ್ನೂ ಅಳೆಯುತ್ತಿದ್ದಾಗ ಈತನ ಚರಣ ಗಳ ಅದ್ಭುತವಾದ ವೇಗದಿಂದ, ಪ್ರಕೃತಿಯಿಂದ ಪ್ರಾರಂಭವಾಗಿ ಸತ್ಯಲೋಕದ ವರೆಗಿನ ಇಡೀ ಬ್ರಹ್ಮಾಂಡವೇ ನಡುಗತೊಡಗಿತು. ಆಗ ಈತನು ತನ್ನ ಶಕ್ತಿಯಿಂದ ಅದನ್ನು ಸ್ಥಿರಪಡಿಸಬೇಕಾಯಿತು.

**ನಾನ್ತಂ ವಿದಾಮ್ಯಹಮಮೀ ಮುನಯೋಽಗ್ರಜಾಸ್ತೇ**
**ಮಾಯಾಬಲಸ್ಯ ಪುರುಷಸ್ಯ ಕುತೋಽಪರೇ ಯೇ ।**
**ಗಾಯನ್ಗುಣಾನ್ದಶಶತಾನನ ಆದಿದೇವಃ**
**ಶೇಷೋಽಧುನಾಪಿ ಸಮವಸ್ಯತಿ ನಾಸ್ಯ ಪಾರಮ್ ॥೪೧॥**

ಸಮಸ್ತಸೃಷ್ಟಿಯ ರಚನೆಯನ್ನೂ, ಸಂಹಾರವನ್ನೂ ಮಾಡುವ ಮಾಯೆಯು ಈತನ ಒಂದು ಶಕ್ತಿಯು. ಇಂತಹ ಅನಂತವಾದ ಶಕ್ತಿಗಳಿಗೆ

ಆಶ್ರಯನಾಗಿರುವ ಈತನ ಸ್ವರೂಪವನ್ನು ನಾನು ಅರಿಯೆನು. ನಿನ್ನ ಅಣ್ಣಂದಿರಾದ ಸನಕಾದಿಗಳೂ ಅರಿಯರು. ಇನ್ನು ಇತರರ ವಿಷಯದಲ್ಲಿ ಹೇಳುವುದೇನು? ಆದಿದೇವನಾದ ಆದಿಶೇಷಸ್ವಾಮಿಯು ತನ್ನ ಸಾವಿರ ಬಾಯಿಗಳಿಂದ ಈತನ ಗುಣಗಳನ್ನು ಅತಿಪುರಾತನ ಕಾಲದಿಂದ ಹಾಡುತ್ತಾ ಇದ್ದರೂ ಇಂದಿಗೂ ಅವುಗಳ ದಡವನ್ನು ಕಾಣಲಾಗಿಲ್ಲ.

ಯೇಷಾಂ ಸ ಏವ ಭಗವಾನ್ದಯಯೇದನನ್ತಃ
ಸರ್ವಾತ್ಮನಾಶ್ರಿತಪದೋ ಯದಿ ನಿರ್ವ್ಯಲೀಕಮ್ ।
ತೇ ದುಸ್ತರಾಮತಿತರನ್ತಿ ಚ ದೇವಮಾಯಾಂ
ನೈಷಾಂ ಮಮಾಹಮಿತಿ ಧೀಃ ಶ್ವಶೃಗಾಲಭಕ್ಷ್ಯೇ ॥೪೨॥

ಯಾರ ಮೇಲೆ ಆ ಅನಂತನಾದ ಭಗವಂತನು ದಯೆಯನ್ನು ಹರಿಸುತ್ತಾನೋ, ಯಾರು ನಿಷ್ಕಪಟಭಾವದಿಂದ ತಮ್ಮ ಸರ್ವಸ್ವವನ್ನೂ ಮತ್ತು ತಮ್ಮನ್ನೂ ಆತನ ಚರಣಕಮಲಗಳಲ್ಲಿ ಸಮರ್ಪಿಸಿಕೊಳ್ಳುವರೋ–ಅಂತಹವರು ತಾನೇ ಆತನ ದುಸ್ತರವಾದ ಮಾಯೆಯ ಸ್ವರೂಪವನ್ನರಿತು ಅದನ್ನು ದಾಟಿ ಹೋಗುತ್ತಾರೆ? ಅಂತಹ ಸುಕೃತಿಗಳಿಗೆ ನಾಯಿ-ನರಿಗಳಿಗೆ ಆಹಾರವಾಗುವ ತಮ್ಮ ಅಥವಾ ತಮ್ಮ ಪುತ್ರಾದಿಗಳ ಶರೀರದಲ್ಲಿ 'ನಾನು ನನ್ನವನು' ಎಂಬ ಭಾವನೆ ಇರುವುದಿಲ್ಲ.

ವೇದಾಹಮಙ್ಗ ಪರಮಸ್ಯ ಹಿ ಯೋಗಮಾಯಾಂ
ಯೂಯಂ ಭವಶ್ಚ ಭಗವಾನಥ ದೈತ್ಯವರ್ಯಃ ।
ಪತ್ನೀ ಮನೋಃ ಸ ಚ ಮನುಶ್ಚ ತದಾತ್ಮಜಾಶ್ಚ
ಪ್ರಾಚೀನಬರ್ಹಿರ್ಋಭುರಙ್ಗ ಉತ ಧ್ರುವಶ್ಚ ॥೪೩॥

ಇಕ್ಷ್ವಾಕುರೈಲಮುಚುಕುನ್ದ ವಿದೇಹಗಾಧಿ-
ರಘ್ವಮ್ಬರೀಷಸಗರಾ ಗಯನಾಹುಷಾದ್ಯಾಃ ।
ಮಾನ್ಧಾತ್ರಲರ್ಕಶತಧನ್ವನುರನ್ತಿದೇವಾ
ದೇವವ್ರತೋ ಬಲಿರಮೂರ್ತರಯೋ ದಿಲೀಪಃ ॥೪೪॥

ಸೌಭರ್ಯುತಙ್ಕಶಿಬಿದೇವಲಪಿಪ್ಪಲಾದ
ಸಾರಸ್ವತೋದ್ಧವಪರಾಶರಭೂರಿಷೇಣಾಃ ।

**ಯೇಽನ್ಯೇ ವಿಭೀಷಣಹನೂಮದುಪೇನ್ದ್ರದತ್ತ-**
**ಪಾರ್ಥಾರ್ಷ್ಟಿಷೇಣವಿದುರಶ್ರುತದೇವವರ್ಯಾಃ ॥೪೫॥**

ಪ್ರೀತಿಯ ನಾರದನೇ! ಈ ಪರಮಪುರುಷನ ಯೋಗಮಾಯೆಯನ್ನು ನಾನು ಬಲ್ಲೆನಪ್ಪಾ. ಹಾಗೆಯೇ ನೀನೂ, ನಿನ್ನ ಅಣ್ಣಂದಿರಾದ ಸನಕಾದಿಗಳೂ, ಭಗವಾನ್ ಶಂಕರನೂ, ದೈತ್ಯಕುಲಭೂಷಣನಾದ ಪ್ರಹ್ಲಾದನೂ, ಮನುವೂ, ಆತನ ಪತ್ನಿಯಾದ ಶತರೂಪೆಯೂ, ಮನುಪುತ್ರರಾದ ಪ್ರಿಯವ್ರತ ಮುಂತಾದವರೂ, ಪ್ರಾಚೀನಬರ್ಹಿರಾಜನೂ, ಋಭುವೂ ಮತ್ತು ಧ್ರುವನೂ ಅರಿತಿದ್ದೀರಿ. ಇವರಲ್ಲದೇ ಇಕ್ಷ್ವಾಕು, ಪುರೂರವ, ಮುಚುಕುಂದ, ಜನಕ, ಗಾಧಿ, ರಘು, ಅಂಬರೀಷ, ಸಗರ, ಗಯ, ಯಯಾತಿಯೇ ಮುಂತಾದವರೂ, ಮಾಂಧಾತ, ಅಲರ್ಕ, ಶತಧನ್ವ, ಅನು, ರಂತಿದೇವ, ಭೀಷ್ಮ, ಬಲಿ, ಅಮೂರ್ತರಯಸ, ದಿಲೀಪ, ಸೌಭರಿ, ಉತ್ತಂಕ, ಶಿಬಿ, ದೇವಲ, ಪಿಪ್ಪಲಾದ, ಸಾರಸ್ವತ, ಉದ್ಧವ, ಪರಾಶರ, ಭೂರಿಷೇಣ, ವಿಭೀಷಣ, ಹನುಮಂತ, ಶುಕಮಹಾಮುನಿ, ಅರ್ಜುನ, ಆರ್ಷ್ಟಿಷೇಣ, ವಿದುರ ಮತ್ತು ಶ್ರುತದೇವನೇ ಮುಂತಾದ ಮಹಾತ್ಮರೂ ತಿಳಿದಿದ್ದಾರೆ.

**ತೇ ವೈ ವಿದನ್ತ್ಯತಿತರನ್ತಿ ಚ ದೇವಮಾಯಾಂ**
**ಸ್ತ್ರೀಶೂದ್ರಹೂಣಶಬರಾ ಅಪಿ ಪಾಪಜೀವಾಃ ।**
**ಯದ್ಯದ್ಭುತಕ್ರಮಪರಾಯಣಶೀಲಶಿಕ್ಷಾ**
**ಸ್ತಿರ್ಯಗ್ಜನಾ ಅಪಿ ಕಿಮು ಶ್ರುತಧಾರಣಾ ಯೇ ॥೪೬॥**

ಭಗವಂತನಾದ ತ್ರಿವಿಕ್ರಮನಲ್ಲಿ ಅನನ್ಯಭಕ್ತಿಭಾವದಿಂದ ಶರಣಾಗತಿ ಮಾಡುವ ಶೀಲ-ಶಿಕ್ಷಣಗಳನ್ನು ಹೊಂದಿದ್ದ ಪಕ್ಷದಲ್ಲಿ ಅವರು ಯಾವುದೇ ವರ್ಣ-ಜಾತಿ-ಜನಾಂಗ-ಲಿಂಗಗಳಿಗೆ ಸೇರಿದ್ದರೂ, ಪಾಮರರೂ–ಪಾಪಜೀವಿಗಳೂ ಆಗಿದ್ದರೂ, ಪಶು-ಪಕ್ಷಿಗಳೇ ಆಗಿದ್ದರೂ ಆತನ ಮಾಯೆಯ ರಹಸ್ಯವನ್ನು ತಿಳಿದು ಈ ಅಪಾರವಾದ ಸಂಸಾರಸಾಗರವನ್ನು ದಾಟಿಬಿಡುವರು. ಹೀಗಿರುವಾಗ ವೈದಿಕರೂ, ಸದಾಚಾರಸಂಪನ್ನರೂ ಆಗಿರುವ ಭಕ್ತ ಶರಣಾಗತರ ವಿಷಯದಲ್ಲಿ ಹೇಳತಕ್ಕದ್ದೇನಿದೆ?

**ಶಶ್ವತ್ಪ್ರಶಾನ್ತಮಭಯಂ ಪ್ರತಿಬೋಧಮಾತ್ರಂ**
**ಶುದ್ಧಂ ಸಮಂ ಸದಸತಃ ಪರಮಾತ್ಮತತ್ತ್ವಮ್ ।**

**ಶಬ್ದೋ ನ ಯತ್ರ ಪುರುಕಾರಕವಾನ್ ಕ್ರಿಯಾರ್ಥೋ**
**ಮಾಯಾ ಪರೈತ್ಯಭಿಮುಖೇ ಚ ವಿಲಜ್ಜಮಾನಾ ॥೪೭॥**

**ತದ್ವೈ ಪದಂ ಭಗವತಃ ಪರಮಸ್ಯ ಪುಂಸೋ**
**ಬ್ರಹ್ಮೇತಿ ಯದ್ವಿದುರಜಸ್ರಸುಖಂ ವಿಶೋಕಮ್ ।**
**ಸಧ್ರ್ಯಙ್ನಿಯಮ್ಯ ಯತಯೋ ಯಮಕರ್ತಹೇತಿಂ**
**ಜಹ್ಯುಃ ಸ್ವರಾಡಿವ ನಿಪಾನಖನಿತ್ರಮಿನ್ದ್ರಃ ॥೪೮॥**

ನಾರದನೇ! ಪರಮಾತ್ಮತತ್ತ್ವವು ಶಾಶ್ವತವೂ, ಪ್ರಶಾಂತವೂ, ಅಭಯವೂ ಮತ್ತು ಜ್ಞಾನೈಕಸ್ವರೂಪವೂ ಆದುದು. ಸತ್, ಅಸತ್, ವ್ಯಕ್ತ ಮತ್ತು ಅವ್ಯಕ್ತ–ಈ ಎರಡನ್ನೂ ಮೀರಿರುವುದು. ಲೌಕಿಕ ಮತ್ತು ವೈದಿಕಶಬ್ದಗಳಿಗೂ ದೂರವಾದದ್ದು. ನಾನಾಸಾಧನಗಳಿಂದ ಸಂಪನ್ನವಾಗುವ ಕರ್ಮಗಳ ಫಲಗಳೂ ತಲುಪಲು ಅಸಾಧ್ಯವಾದುದು. ಅಷ್ಟೇಕೆ! ಸ್ವಯಂ ಮಾಯೆಯೇ ಅದರ ಮುಂದೆ ನಿಲ್ಲಲಾರದೇ ನಾಚಿ ಪರಾರಿಯಾಗಿಬಿಡುವುದು. ಅದೇ ಪರಮಪುರುಷನಾದ ಶ್ರೀಭಗವಂತನ ಪರಮಪದವು. ಶೋಕ ರಹಿತವೂ, ಅನವಧಿಕ ಆನಂದಸ್ವರೂಪವೂ ಆದ ಪರಬ್ರಹ್ಮವೆಂದು ಪರಮ ಯೋಗಿಗಳಿಂದ ಸಾಕ್ಷಾತ್ಕರಿಸಲ್ಪಡುವುದು. ಸಂಯಮಿಗಳು ಅದರಲ್ಲಿಯೇ ತಮ್ಮ ಮನಸ್ಸನ್ನು ಸಮಾಧಿಯಲ್ಲಿರಿಸುತ್ತಾರೆ. ಜ್ಞಾನ-ಆನಂದಗಳ ಅಕ್ಷಯ ನಿಧಿಯಾಗಿರುವ ಆತನಲ್ಲೇ ನೆಲೆಸಿರುವ ಅಂತಹವರಿಗೆ ಸುಖಪ್ರಾಪ್ತಿಗಾಗಿ ಬೇರೆ ಜ್ಞಾನಸಾಧನಗಳೇಕೆ? ಜಲಕ್ಕೆ ಆಧಾರವಾಗಿರುವ ಮೇಘದಲ್ಲೇ ಇರುವ ಇಂದ್ರನಿಗೆ ನೀರಿಗೋಸ್ಕರ ಬಾವಿಯನ್ನು ತೋಡುವ ಗುದ್ದಲಿಯ ಆವಶ್ಯಕತೆ ಇಲ್ಲವಷ್ಟೇ!

**ಸ ಶ್ರೇಯಸಾಮಪಿ ವಿಭುರ್ಭಗವಾನ್ಯತೋಽಸ್ಯ**
**ಭಾವಸ್ವಭಾವವಿಹಿತಸ್ಯ ಸತಃ ಪ್ರಸಿದ್ಧಿಃ ।**
**ದೇಹೇ ಸ್ವಧಾತುವಿಗಮೇಽನುವಿಶೀರ್ಯಮಾಣೇ**
**ವ್ಯೋಮೇವ ತತ್ರ ಪುರುಷೋ ನ ವಿಶೀರ್ಯತೇಽಜಃ ॥**

ಎಲ್ಲ ಶ್ರೇಯಸ್ಸುಗಳಿಗೂ ನಿಧಿಯಾಗಿ ಅವುಗಳನ್ನು ಕರುಣಿಸುವ ಪ್ರಭು ಆ ಭಗವಂತನೇ. ಏಕೆಂದರೆ : ಮನುಷ್ಯನು ತನ್ನ ಸ್ವಭಾವಕ್ಕೆ ಅನು

ಗುಣವಾಗಿ ಮಾಡುವ ಶುಭಕರ್ಮಗಳನ್ನು ಆತನೇ ಪ್ರೇರಿಸುವವನು. ಈ ದೇಹದಲ್ಲಿರುವ ಪಂಚಭೂತಗಳು ಬೇರೆ-ಬೇರೆಯಾದ ಬಳಿಕ ಶರೀರವು ನಷ್ಟವಾಗಿಹೋದರೂ ಅದರಲ್ಲಿರುವ ಜನ್ಮರಹಿತನಾಗಿರುವ ಪುರುಷನು ನಾಶ ಹೊಂದುವುದಿಲ್ಲ. ಘಟವು ಒಡೆದುಹೋದರೂ ಅದರಲ್ಲಿರುವ ಆಕಾಶವು ನಾಶಹೊಂದುವುದಿಲ್ಲವಷ್ಟೇ!

**ಸೋಽಯಂ ತೇಽಭಿಹಿತಸ್ತಾತ ಭಗವಾನ್ವಿಶ್ವಭಾವನಃ ।**
**ಸಮಾಸೇನ ಹರೇರ್ನಾನ್ಯದನ್ಯಸ್ಮಾತ್ಸದಸಚ್ಚ ಯತ್ ॥೫೦॥**

**ಇದಂ ಭಾಗವತಂ ನಾಮ ಯನ್ಮೇ ಭಗವತೋದಿತಮ್ ।**
**ಸಂಗ್ರಹೋಽಯಂ ವಿಭೂತೀನಾಂ ತ್ವಮೇತದ್ವಿಪುಲೀಕುರು ॥೫೧॥**

**ಯಥಾ ಹರೌ ಭಗವತಿ ನೃಣಾಂ ಭಕ್ತಿರ್ಭವಿಷ್ಯತಿ ।**
**ಸರ್ವಾತ್ಮನ್ಯಖಿಲಾಧಾರೇ ಇತಿ ಸಂಕಲ್ಪ್ಯ ವರ್ಣಯ ॥೫೨॥**

ಮಗು, ನಾರದನೇ! ಸಂಕಲ್ಪಮಾತ್ರದಿಂದಲೇ ವಿಶ್ವವನ್ನು ರಚಿಸುವ ಭಗವಂತನಾದ ಶ್ರೀಹರಿಯನ್ನು ಕುರಿತು ಹೀಗೆ ಸಂಕ್ಷೇಪವಾಗಿ ವರ್ಣನೆಮಾಡಿ ಯಾಯಿತಪ್ಪಾ. ಒಟ್ಟಿನಲ್ಲಿ ಹೇಳುವುದಾದರೆ ಸತ್ ಆಗಲೀ–ಅಸತ್ ಆಗಲೀ ಯಾವುದೂ ಆತನಿಂದ ಭಿನ್ನವಾದುದಲ್ಲ. ಆದರೂ ಆತನು ಅವುಗಳಿಂದ ಪ್ರತ್ಯೇಕವಾಗಿಯೇ ಇದ್ದಾನೆ. ಶ್ರೀಭಗವಂತನು ನನಗೆ ಯಾವುದನ್ನು ಉಪ ದೇಶಮಾಡಿದನೋ ಆ ಭಾಗವತವು ಇದೇ ಆಗಿದೆ. ಇದು ಆತನ ವಿಭೂತಿ ಗಳ ಸಂಗ್ರಹ. ನೀನು ಇದನ್ನು ವಿಸ್ತಾರಗೊಳಿಸುವವನಾಗು. ಸರ್ವಾತ್ಮಕನೂ, ಸರ್ವಕ್ಕೂ ಆಧಾರವೂ ಆಗಿರುವ ಭಗವಂತನಾದ ಶ್ರೀಹರಿಯಲ್ಲಿ ಮನುಷ್ಯರಿಗೆ ಹೇಗೆ ಭಕ್ತಿಯು ಉಂಟಾಗಬೇಕೋ–ಹಾಗೆ ಸಂಕಲ್ಪಮಾಡಿ ಅದನ್ನು ವರ್ಣನೆ ಮಾಡಪ್ಪಾ.

**ಮಾಯಾಂ ವರ್ಣಯತೋಽಮುಷ್ಯ ಈಶ್ವರಸ್ಯಾನುಮೋದತಃ ।**
**ಶೃಣ್ವತಃ ಶ್ರದ್ಧಯಾ ನಿತ್ಯಂ ಮಾಯಯಾತ್ಮಾ ನ ಮುಹ್ಯತಿ ॥೫೩॥**

ಸರ್ವೇಶ್ವರನಾದ ಆ ಭಗವಂತನ ಅಚಿಂತ್ಯವಾದ ಈ ಮಾಯಾಶಕ್ತಿ ಯನ್ನು ಯಾವನು ವರ್ಣನೆ ಮಾಡುತ್ತಾನೋ ಅಥವಾ ಇತರರು ವರ್ಣನೆ

ಮಾಡಿದಾಗ ಅದನ್ನು ಅನುಮೋದನೆ ಮಾಡುತ್ತಾನೋ ಅಥವಾ ಅದನ್ನು ನಿತ್ಯವೂ ಶ್ರದ್ಧೆಯಿಂದ ಕೇಳುತ್ತಾನೋ–ಅಂತಹವನ ಚಿತ್ತವು ಎಂದಿಗೂ ಮಾಯೆಯಿಂದ ಮೋಹಗೊಳ್ಳುವುದಿಲ್ಲ."

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ದ್ವಿತೀಯಸ್ಕಂಧದ ೭ನೆಯ ಅಧ್ಯಾಯವು ಮುಗಿಯಿತು.

ದ್ವಿತೀಯಸ್ಕಂಧ ೮ನೆಯ ಅಧ್ಯಾಯ

## ಪರೀಕ್ಷಿದ್ರಾಜನು ಮಾಡಿದ ವಿವಿಧಪ್ರಶ್ನೆಗಳು

ಶುಕಮಹರ್ಷಿಗಳು ಹೇಳಿದ ಬ್ರಹ್ಮ-ನಾರದಸಂವಾದವನ್ನು ಕೇಳಿದ ಪರೀಕ್ಷಿದ್ರಾಜನು ಅವರಲ್ಲಿ ಹೀಗೆ ಅರಿಕೆಮಾಡಿಕೊಂಡನು :

**ಬ್ರಹ್ಮಣಾ ಚೋದಿತೋ ಬ್ರಹ್ಮನ್ಗುಣಾಖ್ಯಾನೇಽಗುಣಸ್ಯ ಚ ।***
**ಯಸ್ಮೈ ಯಸ್ಮೈ ಯಥಾ ಪ್ರಾಹ ನಾರದೋ ದೇವದರ್ಶನಃ ॥೧॥**

"ಬ್ರಾಹ್ಮಣೋತ್ತಮರೇ! ದೇವರ್ಷಿ ನಾರದರು ದೇವಸಾಕ್ಷಾತ್ಕಾರ ಸಂಪನ್ನರು. ಅವರ ದರ್ಶನವು ದೇವರ ದರ್ಶನಕ್ಕೆ ಸಮನಾದುದು. ಆ ಮಹಾತ್ಮರಿಗೆ ಬ್ರಹ್ಮದೇವರು "ವತ್ಸ! ನಾರದ! ಗುಣಾತೀತನಾದ ಪರಮಾತ್ಮನ ಕಲ್ಯಾಣಗುಣಗಳನ್ನು ಲೋಕಕ್ಕೆ ವರ್ಣನೆ ಮಾಡು"–ಎಂದು ಪ್ರೇರಣೆಮಾಡಿದುದಾಗಿ ಹೇಳಿದಿರಿ.

**ಏತದ್ವೇದಿತುಮಿಚ್ಛಾಮಿ ತತ್ತ್ವಂ ವೇದವಿದಾಂ ವರ ।**
**ಹರೇರದ್ಭುತವೀರ್ಯಸ್ಯ ಕಥಾ ಲೋಕಸುಮಙ್ಗಲಾಃ ॥೨॥**

**ಕಥಯಸ್ವ ಮಹಾಭಾಗ ಯಥಾಹಮಖಿಲಾತ್ಮನಿ ।**
**ಕೃಷ್ಣೇ ನಿವೇಶ್ಯ ನಿಃಸಙ್ಗಂ ಮನಸ್ತ್ಯಕ್ಷ್ಯೇ ಕಲೇವರಮ್ ॥೩॥**

ಆ ನಾರದರು ಯಾರು - ಯಾರಿಗೆ ಮತ್ತು ಯಾವ ರೂಪದಲ್ಲಿ ಆ ಬಗೆಗೆ ಉಪದೇಶಮಾಡಿದರು? ಎಂಬುದನ್ನು ತಿಳಿಸಿರಿ. ಭಗವಂತನು ಅದ್ಭುತವಾದ ಶಕ್ತಿಗಳಿಗೆ ಆಶ್ರಯನಾಗಿರುವವನು. ಆತನ ಕಥೆಗಳು ಲೋಕಕ್ಕೆ

---

* ಅಗುಣಸ್ಯ = ಪ್ರಾಕೃತಗುಣರಹಿತನಾದ. (ಭಾಗವತಚಂದ್ರಿಕಾ) (ಶ್ಲೋಕ ೧)

ಪರಮಮಂಗಳವನ್ನು ಉಂಟುಮಾಡುವುವು. ಆತನ ವಿಷಯವಾದ ಮಾತುಗಳನ್ನು ಕೇಳಿಸಿರಿ ; ಮಹಾತ್ಮರೇ! ತಾವು ವೇದಜ್ಞರಲ್ಲಿಯೂ ಶ್ರೇಷ್ಠರಾದ ವರು. ಸಂಗರಹಿತವಾದ ನನ್ನ ಮನಸ್ಸನ್ನು ಸರ್ವಾತ್ಮಕನಾದ ಆ ಶ್ರೀಕೃಷ್ಣನಲ್ಲಿ ತನ್ಮಯವಾಗಿಸಿ ಶರೀರವನ್ನು ಬಿಡಬೇಕೆಂದಿದ್ದೇನೆ. ಅದಕ್ಕನುಗುಣವಾಗಿ ಭಗವದ್ವಿಷಯವನ್ನು ವರ್ಣಿಸಿರಿ.

**ಶೃಣ್ವತಃ ಶ್ರದ್ಧಯಾ ನಿತ್ಯಂ ಗೃಣತಶ್ಚ ಸ್ವಚೇಷ್ಟಿತಮ್ ।**
**ಕಾಲೇನ ನಾತಿದೀರ್ಘೇಣ ಭಗವಾನ್ವಿಶತೇ ಹೃದಿ ॥೪॥**
**ಪ್ರವಿಷ್ಟಃ ಕರ್ಣರನ್ಧ್ರೇಣ ಸ್ವಾನಾಂ ಭಾವಸರೋರುಹಮ್ ।**
**ಧುನೋತಿ ಶಮಲಂ ಕೃಷ್ಣಃ ಸಲಿಲಸ್ಯ ಯಥಾ ಶರತ್ ॥೫॥**

**ಧೌತಾತ್ಮಾ ಪುರುಷಃ ಕೃಷ್ಣಪಾದಮೂಲಂ ನ ಮುಞ್ಚತಿ ।**
**ಮುಕ್ತಸರ್ವಪರಿಕ್ಲೇಶಃ ಪಾನ್ಥಃ ಸ್ವಶರಣಂ ಯಥಾ ॥೬॥**

ತನ್ನ ದಿವ್ಯಲೀಲೆಗಳನ್ನು ಯಾರು ನಿತ್ಯವೂ ಶ್ರದ್ಧೆಯಿಂದ ಶ್ರವಣ ಮಾಡುತ್ತಾರೋ ಮತ್ತು ಸಂಕೀರ್ತನೆಮಾಡುತ್ತಾರೋ—ಅಂತಹವರ ಹೃದಯವನ್ನು ಶ್ರೀಭಗವಂತನು ಶೀಘ್ರದಲ್ಲಿಯೇ ಪ್ರವೇಶಿಸಿ ಅಲ್ಲಿ ಪ್ರಕಟವಾಗುತ್ತಾನೆ. ಆ ಕೃಷ್ಣಪರಮಾತ್ಮನು ಕಿವಿಗಳ ರಂಧ್ರಗಳ ಮೂಲಕ ಭಕ್ತರ ಭಾವಮಯವಾದ ಹೃದಯಕಮಲವನ್ನು ಪ್ರವೇಶಿಸಿ ಅಲ್ಲಿ ಬೆಳಗುತ್ತಾ, ಶರದೃತುವು ಬಗ್ಗಡವಾದ ನೀರಿನ ಕೆಸರು-ಕೊಳೆಗಳನ್ನು ಹೋಗಲಾಡಿಸುವಂತೆ—ಭಕ್ತರ ಮನಸ್ಸಿನ ಕಶ್ಮಲವನ್ನು ಹೋಗಲಾಡಿಸುತ್ತಾನೆ. ಮಾರ್ಗದಲ್ಲಿ ಒದಗಿದ ಎಲ್ಲ ಕಷ್ಟ-ಕಾರ್ಪಣ್ಯಗಳನ್ನೂ ದಾಟಿ ಮನೆಗೆ ಹಿಂದಿರುಗಿದ ದಾರಿಹೋಕನು ಹೇಗೆ ತನ್ನ ಮನೆಯನ್ನು ಬಿಟ್ಟುಹೋಗುವುದಿಲ್ಲವೋ—ಹಾಗೆಯೇ ಭಗವಂತನ ಪ್ರವೇಶದಿಂದ ಹೃದಯಶುದ್ಧಿಯನ್ನು ಪಡೆದ ಸುಕೃತಿಯು ಶ್ರೀಕೃಷ್ಣಪರಮಾತ್ಮನ ಚರಣಕಮಲಗಳನ್ನು ಕ್ಷಣಕಾಲವೂ ತೊರೆದು ಹೋಗುವುದಿಲ್ಲ.

ಭಗವಂತರೇ! ಜೀವಕ್ಕೆ ಪಂಚಭೂತಗಳ ಸಂಬಂಧವು ಕಿಂಚಿತ್ತೂ ಇಲ್ಲ. ಆದರೂ ಆತನ ಈ ಶರೀರವು ಪಂಚಭೂತಗಳಿಂದಲೇ ನಿರ್ಮಿತವಾಗುವುದು. ಇದು ಸ್ವಾಭಾವಿಕವಾಗಿಯೇ ಹೀಗೆ ಆಗುವುದೋ ಅಥವಾ ಯಾವುದಾದರೂ ಕಾರಣಕ್ಕೆ ವಶವಾಗಿ ಹೀಗೆ ಆಗುವುದೋ? ಈ ರಹಸ್ಯವು ತಮಗೆ

ತಿಳಿದೇ ಇದೆ. ಭಗವಂತನ ನಾಭಿಯಿಂದ ಒಂದು ಕಮಲವುಂಟಾಯಿತು. ಮತ್ತು ಅದರಿಂದ ಲೋಕವು ಸೃಷ್ಟಿಯಾಯಿತು–ಎಂದೂ ತಾವು ಹೇಳಿದಿರಿ. ಜೀವನಿಗೆ ಇದು ಇಂತಹ ಅವಯವ ಎಂದು ಪರಿಚ್ಛಿನ್ನವಾದ ಅವಯವಗಳು ಇರುವುದು ಸರಿ. ಆದರೆ ಪರಮಾತ್ಮನಿಗೂ ಸೀಮಿತವಾದ ಅವಯವಗಳು ಇರುವುದಾಗಿ ವರ್ಣನೆಮಾಡಿದಿರಲ್ಲಾ! ಇದು ಹೇಗೆ ಹೊಂದುತ್ತದೆ? ಯಾವನ ಅನುಗ್ರಹದಿಂದ ಸರ್ವಭೂತಮಯರಾದ ಬ್ರಹ್ಮದೇವರು ಪ್ರಜೆಗಳನ್ನು ಸೃಷ್ಟಿಮಾಡುತ್ತಾರೆಯೋ, ಯಾವನ ನಾಭಿಕಮಲದಿಂದಲೇ ಹುಟ್ಟಿದ್ದರೂ ಆತನ ಕೃಪೆಯಿಂದಲೇ ಅವರಿಗೆ ಆತನ ರೂಪವನ್ನು ಸಂದರ್ಶಿಸಲು ಸಾಧ್ಯವಾಯಿತೋ–ಅಂತಹ ವಿಶ್ವದ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನೂ, ಸರ್ವಾಂತರ್ಯಾಮಿಯೂ ಮತ್ತು ಮಾಯೆಗೆ ಅಧಿಪತಿಯೂ ಆದ ಮಹಾ ಪ್ರಭು ಪರಮಪುರುಷಪರಮಾತ್ಮನೂ ಕೂಡ ತನ್ನ ಮಾಯೆಯನ್ನು ತ್ಯಜಿಸಿ ಯಾವುದರಲ್ಲಿ–ಯಾವ ರೂಪದಲ್ಲಿ ಶಯನಿಸುತ್ತಾನೆ? ವಿರಾಟ್‌ಪುರುಷನ ಅಂಗಗಳಿಂದ ಲೋಕಗಳೂ ಮತ್ತು ಲೋಕಪಾಲರೂ ಉಂಟಾದರೆಂದು ಮೊದಲು ಹೇಳಿದಿರಿ. ಅನಂತರ ಆತನ ಅಂಗಗಳನ್ನು ಲೋಕಗಳ ಮತ್ತು ಲೋಕಪಾಲರ ರೂಪದಲ್ಲಿ ಕಲ್ಪಿಸಿಕೊಳ್ಳಬೇಕೆಂದೂ ಉಪದೇಶಿಸಿದಿರಿ. ಈ ಎರಡೂ ಮಾತುಗಳ ತಾತ್ಪರ್ಯವೇನು? (ಶ್ಲೋಕ 7-11)

ಮಹಾಕಲ್ಪಗಳು ಮತ್ತು ಅವುಗಳೊಳಗಿನ ಅವಾಂತರಕಲ್ಪಗಳು ಎಷ್ಟು? ಭೂತಕಾಲ-ಭವಿಷ್ಯತ್ಕಾಲ-ವರ್ತಮಾನಕಾಲಗಳ ಅಳತೆಯನ್ನು ಹೇಗೆ ಮಾಡಲಾಗುತ್ತದೆ? ಸ್ಥೂಲದೇಹಾಭಿಮಾನಿಗಳಾದ ಜೀವಗಳ ಆಯುಸ್ಸಿನ ಅಳತೆ ಹೇಗೆ? ಕಾಲದ ಸೂಕ್ಷ್ಮಗ್ರತಿಗಳಾದ ತ್ರುಟಿ ಮುಂತಾದುವು ಗಳನ್ನೂ, ಸ್ಥೂಲಗತಿಗಳಾದ ವರ್ಷವೇ ಮುಂತಾದುವುಗಳನ್ನೂ ತಿಳಿಯು ವುದು ಹೇಗೆ? ಬಗೆ-ಬಗೆಯಾದ ಕರ್ಮಗಳಿಗೆ ತಕ್ಕಂತೆ ಜೀವಗಳಿಗೆ ಎಷ್ಟು ಗತಿಗಳು ಹಾಗೂ ಎಂತಹ ಗತಿಗಳು ಉಂಟಾಗುತ್ತವೆ? ದೇವತೆಗಳು, ಮನುಷ್ಯರು ಮುಂತಾದ ಯೋನಿಗಳು ಸತ್ತ್ವಗುಣ, ರಜೋಗುಣ ಮತ್ತು ತಮೋಗುಣಗಳ ಫಲವಾಗಿಯೇ ಉಂಟಾಗುತ್ತವೆ. ಅವುಗಳನ್ನು ಬಯಸುವ ಜೀವಗಳಲ್ಲಿ ಯಾವ-ಯಾವ ಜೀವಗಳು ಯಾವ-ಯಾವ ಯೋನಿಯನ್ನು ಪಡೆಯಲು ಯಾವ-ಯಾವ ಪ್ರಕಾರದಿಂದ ಯಾವ-ಯಾವ ಕರ್ಮಗಳನ್ನು

ಸ್ವೀಕರಿಸುತ್ತವೆ? ಭೂಮಿ, ಪಾತಾಳ, ದಿಕ್ಕು, ಆಕಾಶ, ಗ್ರಹ, ನಕ್ಷತ್ರ, ಪರ್ವತ, ನದೀ, ಸಮುದ್ರ, ದ್ವೀಪಗಳು ಮತ್ತು ಅವುಗಳಲ್ಲಿ ವಾಸಿಸುವ ಜೀವಗಳ ಉತ್ಪತ್ತಿಯಾಗುವುದು ಹೇಗೆ? ಬ್ರಹ್ಮಾಂಡದ ಪರಿಮಾಣವೇನು? ಅದರ ಒಳಗಿನ-ಹೊರಗಿನ ಪರಿಮಾಣವೇನು?–ಈ ಎರಡನ್ನೂ ತಿಳಿಸಿರಿ. ಇವುಗಳ ಜೊತೆಗೆ ಮಹಾಪುರುಷರ ಚರಿತ್ರೆ, ವರ್ಣಾಶ್ರಮಗಳ ಭೇದ ಮತ್ತು ಅವುಗಳ ಧರ್ಮಗಳನ್ನೂ ನಿರೂಪಿಸಿರಿ. ಯುಗಗಳ ಭೇದಗಳನ್ನೂ, ಅವುಗಳ ಪರಿಮಾಣ ವನ್ನೂ, ಬೇರೆ-ಬೇರೆ ಯುಗಧರ್ಮಗಳನ್ನೂ ಮತ್ತು ಭಗವಂತನ ಬೇರೆ- ಬೇರೆ ಅವತಾರಗಳ ಆಶ್ಚರ್ಯಕರವಾದ ಚರಿತ್ರೆಗಳನ್ನೂ ತಿಳಿಸಿರಿ. ಮನುಷ್ಯರ ಸಾಮಾನ್ಯಧರ್ಮ ಮತ್ತು ವಿಶೇಷಧರ್ಮಗಳು ಯಾವುವು? ಬೇರೆ-ಬೇರೆ ವ್ಯವಸಾಯಗಳುಳ್ಳ ಜನರ ಧರ್ಮಗಳನ್ನೂ, ರಾಜರ್ಷಿಗಳ ಧರ್ಮಗಳನ್ನೂ ಮತ್ತು ಕಷ್ಟದಲ್ಲಿ ಸಿಲುಕಿರುವ ಜನರ ಧರ್ಮಗಳನ್ನೂ ಉಪದೇಶಿಸಿರಿ. ತತ್ತ್ವ ಗಳು ಎಷ್ಟು? ಅವುಗಳ ಸ್ವರೂಪವೇನು? ಲಕ್ಷಣಗಳಾವುವು? ಭಗವಂತನ ಆರಾಧನೆಯ ವಿಧಿಯೇನು? ಅಧ್ಯಾತ್ಮಯೋಗದ ವಿಧಿಯೇನು? ಯೋಗೇ ಶ್ವರರಿಗೆ ಯಾವ-ಯಾವ ಸಿದ್ಧಿಗಳು ದೊರಕುತ್ತವೆ ಮತ್ತು ಅವರಿಗೆ ಕಡೆಯಲ್ಲಿ ಯಾವ ಗತಿ ಸಿಕ್ಕುತ್ತದೆ? ಯೋಗಿಗಳ ಲಿಂಗ ಶರೀರಗಳ ಭಂಗ ಹೇಗೆ ಆಗು ತ್ತದೆ? ವೇದಗಳು, ಉಪವೇದಗಳು ಧರ್ಮಶಾಸ್ತ್ರಗಳು, ಇತಿಹಾಸ ಮತ್ತು ಪುರಾಣ–ಇವುಗಳ ಸ್ವರೂಪ, ತಾತ್ಪರ್ಯಗಳೇನು? ಸಮಸ್ತಪ್ರಾಣಿಗಳ ಸೃಷ್ಟಿ-ಸ್ಥಿತಿ-ಪ್ರಳಯಗಳು ಹೇಗೆ ಆಗುತ್ತವೆ? ಯಜ್ಞ-ಯಾಗಾದಿಗಳೇ ಮುಂತಾದ ಇಷ್ಟಕರ್ಮಗಳು, ಬಾವಿ ತೋಡಿಸುವುದೇ ಮುಂತಾದ ಪೂರ್ತ ಕರ್ಮಗಳು, ಕಾಮ್ಯಕರ್ಮಗಳು ಮತ್ತು ಧರ್ಮ-ಅರ್ಥ-ಕಾಮಗಳೆಂಬ ಮೂರು ಪುರುಷಾರ್ಥಗಳು–ಇವುಗಳನ್ನು ಸಾಧಿಸುವ ವಿಧಿಯೇನು? ಪ್ರಳಯ ಕಾಲದಲ್ಲಿ ಪ್ರಕೃತಿಯಲ್ಲಿ ಲೀನಗೊಂಡಿರುವ ಜೀವಿಗಳು ಹೇಗೆ ಉತ್ಪತ್ತಿಯನ್ನು ಹೊಂದುತ್ತವೆ? ಪಾಷಂಡಧರ್ಮದ ಉತ್ಪತ್ತಿ ಹೇಗೆ ಆಗುವುದು? ಆತ್ಮದ ಬಂಧ ಮತ್ತು ಮೋಕ್ಷಗಳ ಸ್ವರೂಪವೇನು? ಅದು ಸ್ವರೂಪದಲ್ಲಿ ಹೇಗೆ ಇರುತ್ತದೆ? ಪರಮಸ್ವತಂತ್ರನಾದ ಭಗವಂತನು ತನ್ನ ಮಾಯೆಯೊಡನೆ ಹೇಗೆ ಕ್ರೀಡಿಸುತ್ತಾನೆ ಮತ್ತು ಅದನ್ನು ಬಿಟ್ಟು ಹೇಗೆ ಕೇವಲ ಸಾಕ್ಷಿಯಂತೆ ಉದಾಸೀನನಾಗಿಬಿಡುತ್ತಾನೆ? ಭಗವಂತರೇ! ಮಹಾಮುನಿಗಳೇ! ಶರಣಾಗತ

ನಾಗಿರುವ ನಾನು ತಮ್ಮಲ್ಲಿ ಅರಿಕೆಮಾಡಿಕೊಂಡಿರುವ ಈ ಎಲ್ಲ ಪ್ರಶ್ನೆಗಳಿಗೂ ಕ್ರಮವಾಗಿ ಉತ್ತರಗಳನ್ನು ಅಪ್ಪಣೆಕೊಡಿಸಬೇಕು. ತಾತ್ತ್ವಿಕವಾಗಿ ಅವುಗಳನ್ನು ನಿರೂಪಣೆಮಾಡಿರಿ. ಇತರರು ತಮ್ಮ ಪೂರ್ವಪರಂಪರೆಯಿಂದ ಕೇಳಿ ಬಂದಂತೆ ಅನುಷ್ಠಾನಮಾಡುವರು. ತಾವಾದರೋ ಸ್ವಯಂಭುವಾದ ಬ್ರಹ್ಮದೇವರಂತೆ ಈ ವಿಷಯಗಳ ಬಗೆಗೆ ಪರಮಪ್ರಮಾಣರೇ ಆಗಿದ್ದೀರಿ. ಪರಮಪೂಜ್ಯರೇ! ನನ್ನ ಹಸಿವು-ಬಾಯಾರಿಕೆಗಳ ಬಗೆಗೆ ಕಳವಳಪಡ ಬೇಕಾಗಿಲ್ಲ. ಕ್ರುದ್ಧನಾದ ಬ್ರಾಹ್ಮಣನ ಶಾಪದಿಂದಲ್ಲದೇ ಬೇರೆ ಯಾವ ಕಾರಣದಿಂದಲೂ ನನ್ನ ಪ್ರಾಣವು ಹೋಗುವುದಿಲ್ಲ. ಏಕೆಂದರೆ : ನಾನು ತಮ್ಮ ಮುಖಕಮಲದಿಂದ ಹೊರಸೂಸುತ್ತಿರುವ ಭಗವತ್ಕಥಾಮೃತಧಾರೆಯನ್ನು ಪಾನಮಾಡುತ್ತಿದ್ದೇನೆ.” (ಶ್ಲೋಕ 12-26)

ಸೂತಪುರಾಣಿಕರು ಹೇಳುತ್ತಾರೆ :

“ಮಹರ್ಷಿಗಳೇ! ವಿಷ್ಣುರಾತ* ಪರೀಕ್ಷಿದ್ರಾಜನು ಹೀಗೆ ಸತ್ಪುರುಷರ ಸಭೆಯಲ್ಲಿ ಭಗವಂತನ ಲೀಲಾಕಥೆಗಳನ್ನು ಹೇಳಲು ಪ್ರಾರ್ಥಿಸಿದ್ದನ್ನು ಕೇಳಿ ಬ್ರಹ್ಮರಾತ** ಶುಕಮಹಾಮುನಿಗಳಿಗೆ ತುಂಬಾ ಸಂತೋಷವಾಯಿತು. ಅವರು ಬ್ರಾಹ್ಮಕಲ್ಪದ ಪ್ರಾರಂಭದಲ್ಲಿ ಸ್ವಯಂ ಭಗವಂತನೇ ಬ್ರಹ್ಮದೇವರಿಗೆ ಉಪದೇಶಮಾಡಿದ್ದ ವೇದಸದೃಶವಾದ ಶ್ರೀಮದ್ಭಾಗವತ ಮಹಾಪುರಾಣ ವನ್ನು ಆತನಿಗೆ ಹೇಳಿದರು. ಪಾಂಡವಕುಲತಿಲಕನಾದ ಪರೀಕ್ಷಿದ್ರಾಜನು ತಮ್ಮಲ್ಲಿಟ್ಟ ಪ್ರಶ್ನೆಗಳಿಗೆಲ್ಲಾ ಕ್ರಮವಾಗಿ ಉತ್ತರವನ್ನು ದಯಪಾಲಿಸ ತೊಡಗಿದರು.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ
ದಲ್ಲಿ ದ್ವಿತೀಯಸ್ಕಂಧದ ೮ನೆಯ ಅಧ್ಯಾಯವು ಮುಗಿಯಿತು.

---

* ವಿಷ್ಣುರಾತಃ = ವಿಷ್ಣು-ಶ್ರೀಕೃಷ್ಣನಿಂದ ಸಂರಕ್ಷಿಸಲ್ಪಟ್ಟವನು ಪರೀಕ್ಷಿದ್ರಾಜ.

** ಬ್ರಹ್ಮರಾತಃ = ಪರಬ್ರಹ್ಮನಿಂದ ಸಂರಕ್ಷಿತರಾದ ಬ್ರಹ್ಮಿಷ್ಠರಾದ ಶುಕ ಮಹಾಮುನಿಗಳು.

ದ್ವಿತೀಯಸ್ಕಂಧ ೯ನೆಯ ಅಧ್ಯಾಯ

## ಬ್ರಹ್ಮದೇವರು ಭಗವಂತನ ಧಾಮವನ್ನು ನೋಡಿದುದು : ಅವರಿಗೆ ಭಗವಂತನಿಂದ ಚತುಃಶ್ಲೋಕೀ ಭಾಗವತದ ಉಪದೇಶ

ಶ್ರೀಶುಕಮಹರ್ಷಿಗಳು ಹೀಗೆ ಹೇಳಿದರು :

**ಆತ್ಮಮಾಯಾಮೃತೇ ರಾಜನ್ಪರಸ್ಯಾನುಭವಾತ್ಮನಃ ।**
**ನ ಘಟೇತಾರ್ಥಸಮ್ಬನ್ಧಃ ಸ್ವಪ್ನದ್ರಷ್ಟುರಿವಾಞ್ಜಸಾ ॥೧॥**

"ರಾಜೇಂದ್ರನೇ! ಕನಸುಕಾಣುತ್ತಿರುವವನಿಗೆ ಆ ಕನಸಿನ ಪದಾರ್ಥಗಳೊಡನೆ ಹೇಗೆ ಯಾವ ಸಂಬಂಧವೂ ಇರುವುದಿಲ್ಲವೋ–ಹಾಗೆಯೇ ದೇಹಾತೀತನಾಗಿ ಅನುಭವಸ್ವರೂಪನಾಗಿರುವ ಆತ್ಮನಿಗೆ ದೃಶ್ಯಪದಾರ್ಥಗಳೊಡನೆ ಯಾವ ಸಂಬಂಧವೂ ಇರುವುದಿಲ್ಲ ; ಮಾಯೆಯ ಕಾರಣದಿಂದ ಸಂಬಂಧವಿರುವಂತೆ ಅವನಿಗೆ ಅನ್ನಿಸುತ್ತದೆ.

ಮಾಯೆಯು ಬಹುರೂಪವುಳ್ಳದ್ದು. ಆದ ಕಾರಣದಿಂದ ಆತ್ಮನು ವಿವಿಧರೂಪಗಳುಳ್ಳವನಾಗಿರುವಂತೆ ಕಾಣುತ್ತಾನೆ. ಅದರ ಗುಣಗಳಲ್ಲಿ ರಮಿಸತೊಡಗಿದಾಗ 'ಇದು ನಾನು, ಇದು ನನ್ನದು'–ಎಂದು ತಿಳಿಯತೊಡಗುತ್ತಾನೆ. ಆದರೆ ಆತನು ಗುಣಗಳಲ್ಲಿ ಕ್ಷೋಭೆಯನ್ನುಂಟುಮಾಡುವ ಕಾಲ ಮತ್ತು ಮೋಹವನ್ನುಂಟುಮಾಡುವ ಮಾಯೆ–ಇವೆರಡಕ್ಕೂ ಪರವಾಗಿರುವ ಸ್ವಸ್ವರೂಪದಲ್ಲಿ ಮೋಹರಹಿತನಾಗಿ ರಮಿಸತೊಡಗಿದಾಗ ಆತ್ಮಾರಾಮನಾಗಿಬಿಡುತ್ತಾನೆ. ಈ 'ನಾನು, ನನ್ನದು'–ಎಂಬ ಭಾವವನ್ನು ಬಿಟ್ಟು ಗುಣಾತೀತನಾಗಿಬಿಡುತ್ತಾನೆ. ಪೂರ್ಣವಾಗಿ ಉದಾಸೀನನಾಗಿಬಿಡುತ್ತಾನೆ. ಬ್ರಹ್ಮದೇವರು ನಿಷ್ಕಪಟವಾದ ತಪಸ್ಸನ್ನಾಚರಿಸಿದಾಗ ಅದರಿಂದ ಪ್ರಸನ್ನನಾಗಿ ಶ್ರೀಭಗವಂತನು ಆತನಿಗೆ ತನ್ನ ರೂಪವನ್ನು ದರ್ಶನಮಾಡಿಸಿ ಆತ್ಮತತ್ತ್ವದ ಜ್ಞಾನಕ್ಕಾಗಿ ಪರಮಸತ್ಯವನ್ನು ಉಪದೇಶಮಾಡಿದನು. ಅದನ್ನು ನಿನಗೆ ಹೇಳುತ್ತೇನೆ : (ಶ್ಲೋಕ 2-4)

ಮೂರು ಲೋಕಗಳ ಪರಮಗುರುಗಳಾದ ಆದಿದೇವ ಬ್ರಹ್ಮದೇವರು ತಮ್ಮ ಜನ್ಮಸ್ಥಾನವಾದ ಕಮಲದ ಮೇಲೆ ಕುಳಿತು ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ ಮನಸ್ಸಿನಲ್ಲಿ ಸಂಕಲ್ಪಮಾಡಿದರು. ಆದರೆ ಸೃಷ್ಟಿಯನ್ನು

ಮಾಡುವುದಕ್ಕೆ ಬೇಕಾದ ದೃಷ್ಟಿಯೂ ಮತ್ತು ವಿಧಾನವೂ ಅವರಿಗೆ ದೊರಕಲಿಲ್ಲ. ಒಂದು ದಿನ ಅವರು ಈ ವಿಷಯವನ್ನೇ ಕುರಿತು ಚಿಂತೆ ಮಾಡುತ್ತಲಿದ್ದಾಗ ಪ್ರಳಯಸಮುದ್ರದಲ್ಲಿ ಎರಡು ಅಕ್ಷರಗಳ ಒಂದು ಪದವು ಅವರಿಗೆ ಎರಡು ಬಾರಿ ಕೇಳಿಸಿತು. ಅದು ವ್ಯಂಜನಗಳಲ್ಲಿರುವ ಹದಿನಾರನೆಯ ಮತ್ತು ಇಪ್ಪತ್ತೊಂದನೆಯ ವರ್ಣಗಳ ಸೇರುವೆಯಾದ 'ತಪ' ಎಂಬ ಪದ. ಈ ತಪಸ್ಸನ್ನೇ ತ್ಯಾಗಿಗಳ ಧನವೆಂದು ಜ್ಞಾನಿಗಳು ಹೇಳುತ್ತಾರೆ. ಆ ಪದವನ್ನು ಕೇಳಿ ಬ್ರಹ್ಮದೇವರು ಇದನ್ನು ಯಾರು ಹೇಳಿದರು? ಎಂಬುದನ್ನು ತಿಳಿಯಲು ನಾಲ್ಕು ಕಡೆಗಳಲ್ಲಿಯೂ ನೋಡಿದರು. ಆದರೆ ಯಾರೊಬ್ಬರೂ ಕಾಣಿಸಲಿಲ್ಲ. ಆಗ ಅವರು ತಮ್ಮ ಆಸನದ ಮೇಲೆ ಬಂದು ಕುಳಿತು 'ಹೇಗೂ ನನಗೆ ತಪಸ್ಸು ಮಾಡಬೇಕೆಂಬ ಆಜ್ಞೆಯು ನೇರವಾಗಿ ಬಂದಿದೆ. ಅದನ್ನು ಮಾಡುವುದೇ ಹಿತ'–ಎಂದು ನಿಶ್ಚಯಿಸಿದವರಾಗಿ ಮನಸ್ಸನ್ನು ತಪಸ್ಸಿನಲ್ಲಿ ನೆಲೆಗೊಳಿಸಿದರು. ಬ್ರಹ್ಮದೇವರು ತಪಸ್ವಿಗಳಲ್ಲಿ ಎಲ್ಲರಿಗಿಂತಲೂ ಶ್ರೇಷ್ಠರಾದ ತಪಸ್ವಿಗಳು. ಅವರ ಜ್ಞಾನವು ಅಮೋಘವಾದುದು. ಅವರು ಆಗ ಒಂದು ಸಾವಿರ ದಿವ್ಯವರ್ಷಗಳವರೆಗೆ ಏಕಾಗ್ರವಾದ ಚಿತ್ತದಿಂದ ತಮ್ಮ ಪ್ರಾಣ, ಮನಸ್ಸು, ಕರ್ಮೇಂದ್ರಿಯಗಳು ಮತ್ತು ಜ್ಞಾನೇಂದ್ರಿಯಗಳನ್ನೂ ವಶಪಡಿಸಿಕೊಂಡು ಅದ್ಭುತವಾದ ತಪಸ್ಸನ್ನು ಮಾಡಿದರು. ಸಮಸ್ತಲೋಕಗಳನ್ನೂ ಪ್ರಕಾಶಗೊಳಿಸುವ ಸಾಮರ್ಥ್ಯವನ್ನು ಕೊಡುವ ತಪಸ್ಸನ್ನು ಆಚರಿಸಿದರು.
(ಶ್ಲೋಕ 5-8)

ಅವರ ತಪಸ್ಸಿನಿಂದ ಪ್ರಸನ್ನನಾಗಿ ಶ್ರೀಭಗವಂತನು ಅವರಿಗೆ ಯಾವುದಕ್ಕಿಂತಲೂ ಶ್ರೇಷ್ಠವಾದ ಮತ್ತೊಂದು ಲೋಕವಿಲ್ಲವೋ–ಅಂತಹ ಸರ್ವಶ್ರೇಷ್ಠವಾದ ತನ್ನ ಲೋಕವನ್ನು ತೋರಿಸಿದನು. ಆ ಲೋಕಗಳಲ್ಲಿ ಯಾವುದೇ ಬಗೆಯ ಕ್ಲೇಶವಾಗಲೀ, ಮೋಹವಾಗಲೀ, ಭಯವಾಗಲೀ–ಯಾವುದೂ ಇಲ್ಲ. ಅದನ್ನು ದೇವತೆಗಳು ಬಾರಿ-ಬಾರಿಗೂ ಸ್ತುತಿಸುತ್ತಾರೆ. ಅದರಲ್ಲಿ ರಜೋಗುಣವಾಗಲೀ, ತಮೋಗುಣವಾಗಲೀ ಮತ್ತು ಅವುಗಳಿಂದ ಮಿಶ್ರವಾದ ಸತ್ತ್ವಗುಣವಾಗಲೀ ಯಾವುದೂ ಇರುವುದಿಲ್ಲ. ಅಲ್ಲಿ ಕಾಲದ ಬೇಳೆ ಬೇಯುವುದಿಲ್ಲ. ಅಲ್ಲಿಗೆ ಮಾಯೆಯು ಹೆಜ್ಜೆಹಾಕಲಾರಳು. ಹಾಗಿರುವಾಗ

ಮಾಯೆಯ ಸಂತಾನಗಳು ಅದನ್ನು ಹೇಗೆ ಪ್ರವೇಶಿಸಿಯಾವು? ಅಲ್ಲಿ ದೇವತೆಗಳಿಂದಲೂ ಮತ್ತು ದೈತ್ಯರಿಂದಲೂ ಆರಾಧಿಸಲ್ಪಡುವವರಾದ ಭಗವಂತನ ಪಾರ್ಷದರು ವಾಸಿಸುತ್ತಾರೆ. ಅವರ ಶರೀರವು ಉಜ್ಜ್ವಲವಾದ ಕಾಂತಿಯಿಂದ ಕೂಡಿ ಶ್ಯಾಮಲವರ್ಣದಿಂದ ಕಂಗೊಳಿಸುತ್ತಿದೆ. ಅದರಲ್ಲಿ ಕಮಲದಂತೆ ಕೋಮಲವಾದ ಕಣ್ಣುಗಳು ಹೊಳೆಯುತ್ತಿವೆ. ಅದು ಪೀತಾಂಬರದಿಂದ ಶೋಭಾಯಮಾನವಾಗಿದೆ. ಅದರ ಒಂದೊಂದು ಅವಯವದಿಂದಲೂ ಸೌಂದರ್ಯಾಮೃತವು ಸುರಿಯುತ್ತಿದೆ. ಅತ್ಯಂತಕೋಮಲವಾದ ಮೂರ್ತಿ. ಎಲ್ಲರಿಗೂ ನಾಲ್ಕು ಭುಜಗಳು. ಅವರು ಮಹಾತೇಜಸ್ವಿಗಳು. ರತ್ನಘಟಿತ ಚಿನ್ನದ ಪ್ರಭೆಯಿಂದ ಹೊಳೆಯುವ ಭೂಷಣಗಳನ್ನು ಧರಿಸಿದ್ದಾರೆ. ಹವಳ, ವೈಡೂರ್ಯಮಣಿ ಮತ್ತು ಕಮಲದ ಉಜ್ಜ್ವಲವಾದ ತಂತುವಿಗೆ ಸಮಾನವಾದ ಕಾಂತಿಯಿಂದ ಥಳಥಳಿಸುತ್ತಿದ್ದಾರೆ. ಕಿವಿಗಳಲ್ಲಿ ಕುಂಡಲಗಳೂ, ಶಿರಸ್ಸಿನಲ್ಲಿ ಕಿರೀಟವೂ ಮತ್ತು ಕಂಠದಲ್ಲಿ ಮಾಲೆಗಳೂ ರಾರಾಜಿಸುತ್ತಿವೆ. ಆಕಾಶವು ಮಿಂಚಿನಿಂದ ಕೂಡಿದ ಮೋಡಗಳಿಂದ ಶೋಭಿಸುವಂತೆ–ಆ ಲೋಕವು ರಮಣೀಯರಾದ ಕಾಮಿನಿಯರ ಕಾಂತಿಯಿಂದ ಕೂಡಿದ ಮಹಾತ್ಮರ ದಿವ್ಯ ತೇಜೋಮಯವಾದ ವಿಮಾನಗಳಿಂದ ಎಲ್ಲ ಕಡೆಗಳಲ್ಲಿಯೂ ಕಂಗೊಳಿಸುತ್ತಿದೆ. ಆ ವೈಕುಂಠಲೋಕದಲ್ಲಿ ದಿವ್ಯರೂಪ-ಲಾವಣ್ಯ ಸಂಪನ್ನೆಯಾದ ಮಹಾಲಕ್ಷ್ಮಿಯು ತನ್ನ ಬಗೆ-ಬಗೆಯ ವಿಭೂತಿಗಳ ಮೂಲಕ ಭಗವಂತನ ಶ್ರೀಚರಣಕಮಲಗಳನ್ನು ನಾನಾಪ್ರಕಾರಗಳಿಂದ ಸೇವಿಸುತ್ತಿದ್ದಾಳೆ. ಕೆಲವೊಮ್ಮೆ ಅವಳು ಉಯ್ಯಾಲೆಯ ಮೇಲೆ ಕುಳಿತು ತನ್ನ ಪ್ರಿಯತಮನಾದ ಭಗವಂತನ ದಿವ್ಯಲೀಲೆಗಳನ್ನು ಗಾನಮಾಡತೊಡಗಿದಾಗ ಆಕೆಯ ಸೌಂದರ್ಯ ಮತ್ತು ಸುವಾಸನೆಗಳಿಂದ ಹುಚ್ಚೇರಿದ ದುಂಬಿಗಳು ತಾವೂ ಆ ಲಕ್ಷ್ಮೀದೇವಿಯ ಗುಣಗಳನ್ನು ಗಾನಮಾಡತೊಡಗುತ್ತವೆ. (ಶ್ಲೋಕ 9-13)

ಆ ದಿವ್ಯಲೋಕದಲ್ಲಿ ಸಮಸ್ತಭಕ್ತರ ಸಂರಕ್ಷಕನೂ, ಲಕ್ಷ್ಮೀಪತಿಯೂ, ಯಜ್ಞಪತಿಯೂ ಮತ್ತು ವಿಶ್ವಪತಿಯೂ ಆದ ಭಗವಂತನು ವಿರಾಜಿಸುತ್ತಿರುವುದನ್ನು ಬ್ರಹ್ಮದೇವರು ನೋಡಿದರು. ನಂದ, ಸುನಂದ, ಪ್ರಬಲ, ಅರ್ಹಣ ಮುಂತಾದ ಪಾರ್ಷದಗಣಗಳ ಮುಖ್ಯರು ಆ ಪ್ರಭುವನ್ನು ಸೇವಿಸುತ್ತಿದ್ದರು. ಮಹಾಪ್ರಭುವಿನ ಮುಖಕಮಲವು ಭಕ್ತರಲ್ಲಿ ಅನುಗ್ರಹತೋರುವ ಮಧುರ

ವಾದ ಮುಗುಳ್ನಗೆಯಿಂದ ರಮಣೀಯವಾಗಿದೆ. ಕಣ್ಣುಗಳಲ್ಲಿ ಸುಂದರವಾದ ಕೆಂಪುಬಣ್ಣದ ಕಾಂತಿ, ಕಡುಮೋಹಕವಾದ, ಮಧುರವಾದ ಕಡೆಗಣ್ಣಿನ ನೋಟ-ಇವು ಕೂಡಲೇ ತನ್ನ ಪ್ರೇಮಿಗಳಾದ ಭಕ್ತರಿಗೆ ತನ್ನ ಸರ್ವಸ್ವವನ್ನೂ ಕೊಟ್ಟುಬಿಡುತ್ತವೆಯೋ ಎಂಬಂತೆ ಕಾಣಿಸುತ್ತಿವೆ. ತಲೆಯಲ್ಲಿ ಕಿರೀಟವೂ, ಕಿವಿಗಳಲ್ಲಿ ಕುಂಡಲಗಳೂ ಮತ್ತು ಮೈಯಲ್ಲಿ ಪೀತಾಂಬರವೂ ಹೊಳೆ-ಹೊಳೆಯುತ್ತಿವೆ. ವಕ್ಷಃಸ್ಥಳದಲ್ಲಿ ಒಂದು ಸುವರ್ಣರೇಖೆಯಂತೆ ಶ್ರೀಲಕ್ಷ್ಮೀ ದೇವಿಯು ವಿರಾಜಿಸುತ್ತಿದ್ದಾಳೆ. ಭಗವಂತನಿಗೆ ಸುಂದರವಾದ ನಾಲ್ಕು ಭುಜ ಗಳಿವೆ. ಪ್ರಭುವು ಅಮೂಲ್ಯವೂ, ಸರ್ವೋತ್ತಮವೂ ಆದ ಆಸನದಲ್ಲಿ ಬೆಳಗುತ್ತಿದ್ದಾನೆ. ಪುರುಷ, ಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಮನಸ್ಸು, ಹತ್ತು ಇಂದ್ರಿಯಗಳು, ಪಂಚತನ್ಮಾತ್ರೆಗಳು ಮತ್ತು ಪಂಚಭೂತಗಳು–ಎಂಬ ಇಪ್ಪತ್ತೈದು ಶಕ್ತಿಗಳು ಮೂರ್ತಾಕಾರವಾಗಿ ಆತನ ನಾಲ್ಕು ಕಡೆಗಳಲ್ಲೂ ನಿಂತು ಕೊಂಡಿವೆ. ಸಮಗ್ರವಾದ ಐಶ್ವರ್ಯ, ಧರ್ಮ, ಕೀರ್ತಿ, ಶ್ರೀ, ಜ್ಞಾನ ಮತ್ತು ವೈರಾಗ್ಯ–ಎಂಬ ನಿತ್ಯಸಿದ್ಧವಾದ ಸ್ವಾಮಿಯ ಸ್ವರೂಪಶಕ್ತಿಗಳು ಸದಾ ಆತನನ್ನು ಸೇವಿಸುತ್ತಿವೆ. ಅವನನ್ನು ಬಿಟ್ಟು ಬೇರೆ ಯಾರಲ್ಲಿಯೂ ಕೂಡ ಅವು ನಿತ್ಯವಾಗಿರುವುದಿಲ್ಲ. ಸರ್ವೇಶ್ವರನಾದ ಆ ಮಹಾಪ್ರಭುವು ಸದಾ ತನ್ನ ಆನಂದಮಯಸ್ವರೂಪದಲ್ಲೇ ನಿರಂತರವಾಗಿ ಮಗ್ನನಾಗಿರುತ್ತಾನೆ. ಆತನನ್ನು ನೋಡಿದೊಡನೆಯೇ ಬ್ರಹ್ಮದೇವರ ಹೃದಯವು ಉಕ್ಕೇರುವ ಆನಂದದಿಂದ ತುಂಬಿಹೋಯಿತು. ದೇಹವು ರೋಮಾಂಚಿತವಾಯಿತು. ಕಣ್ಣುಗಳಲ್ಲಿ ಆನಂದಾಶ್ರುವು ತುಂಬಿಬಂದಿತು. ಪರಮಹಂಸರಿಗೆ ನಿವೃತ್ತಿಮಾರ್ಗದಿಂದಲೇ ದೊರೆಯುವ ಭಗವಂತನ ಶ್ರೀಪಾದಪದ್ಮಗಳಿಗೆ ಬ್ರಹ್ಮದೇವರು ಮತ್ತೊಮ್ಮೆ ತಲೆಬಾಗಿ ನಮಸ್ಕರಿಸಿದರು. ಬ್ರಹ್ಮನಿಗೆ ಪ್ರಿಯನಾದ ಆ ಭಗವಂತನು ತನ್ನ ಪ್ರಿಯಪುತ್ರನು ಪ್ರಜಾಸೃಷ್ಟಿಮಾಡುವ ವಿಷಯದಲ್ಲಿ ತನ್ನ ಶಾಸನವನ್ನು ಸ್ವೀಕರಿಸುವುದಕ್ಕೆ ಯೋಗ್ಯನಾಗಿರುವುದನ್ನು ಕಂಡು ಅತ್ಯಂತ ಪ್ರಸನ್ನನಾಗಿ ಪ್ರೀತಿತುಂಬಿದ ಮನಸ್ಸಿನಿಂದ ಆತನನ್ನು ಕೈಯಿಂದ ನೇವರಿಸುತ್ತಾ ಮೃದುವಾದ ಮಂದಹಾಸದಿಂದ ಶೋಭಿಸುತ್ತಿರುವ ಮಾತಿನಿಂದ ಹೀಗೆಂದನು :

(ಶ್ಲೋಕ 14-18)

"ಓ ಬ್ರಹ್ಮನೇ! ಸೃಷ್ಟಿಮಾಡುವ ಇಚ್ಛೆಯುಳ್ಳ ನೀನು ಚಿರಕಾಲ

ತಪಸ್ಸುಮಾಡಿ ನನ್ನನ್ನು ಚೆನ್ನಾಗಿ ಸಂತೋಷಪಡಿಸಿದ್ದೀಯೆ. ಮನಸ್ಸಿನಲ್ಲಿ ಕಪಟವನ್ನಿಟ್ಟುಕೊಂಡು ಯೋಗಸಾಧನೆಮಾಡುವವರು ನನ್ನನ್ನು ಎಂದಿಗೂ ಪ್ರಸನ್ನಗೊಳಿಸಲಾರರು. ನಿನಗೆ ಮಂಗಳವಾಗಲಿ. ನಿನಗೆ ಇಷ್ಟವಾದ ವರವನ್ನು ಬೇಡಿಕೋ. ಬೇಡಿದ ವಸ್ತುಗಳನ್ನು ಕೊಡುವ ಸಾಮರ್ಥ್ಯ ನನಗಿದೆ. ಬ್ರಹ್ಮನೇ! ಜೀವಗಳಿಗೆ ಮಂಗಳವನ್ನುಂಟುಮಾಡುವ ಸಾಧನಗಳೆಲ್ಲಕ್ಕೂ ನನ್ನಲ್ಲಿಯೇ ವಿಶ್ರಾಂತಿ ; ನನ್ನ ಸಾಕ್ಷಾತ್ಕಾರದಲ್ಲಿಯೇ ಅವುಗಳ ಪರ್ಯವಸಾನ. ನೀನು ನನ್ನನ್ನು ನೋಡದೆಯೇ ನನ್ನ ವಾಣಿಯನ್ನು ಕೇಳಿಯೇ ಇಷ್ಟು ತೀವ್ರವಾದ ತಪಸ್ಸನ್ನು ಆಚರಿಸಿದೆ. ಆದ್ದರಿಂದಲೇ ನಿನಗೆ ನನ್ನ ಇಚ್ಛೆಯಿಂದ ನನ್ನ ಲೋಕದ ದರ್ಶನವಾಯಿತು. ಆಗ ನೀನು ಸೃಷ್ಟಿಯನ್ನು ಮಾಡುವ ಕ್ರಮದ ವಿಷಯದಲ್ಲಿ ಏನು ಮಾಡಬೇಕೆಂಬುದನ್ನು ತಿಳಿಯದೇ ತೊಂದರೆ ಪಡುತ್ತಲಿದ್ದೆ. ಆದ್ದರಿಂದಲೇ ನಾನು ನಿನಗೆ ತಪಸ್ಸುಮಾಡಲು ಆಜ್ಞೆಯನ್ನು ನೀಡಿದೆನು.

**ತಪೋ ಮೇ ಹೃದಯಂ ಸಾಕ್ಷಾದಾತ್ಮಾಹಂ ತಪಸೋಽನಘ ॥೨೨॥**

**ಸೃಜಾಮಿ ತಪಸೈವೇದಂ ಗ್ರಸಾಮಿ ತಪಸಾ ಪುನಃ ।**
**ಬಿಭರ್ಮಿ ತಪಸಾ ವಿಶ್ವಂ ವೀರ್ಯಂ ಮೇ ದುಶ್ಚರಂ ತಪಃ ॥೨೩॥**

ತಪಸ್ಸು ನನ್ನ ಹೃದಯವು. ತಪಸ್ಸಿನ ಆತ್ಮವು ನಾನೇ ಆಗಿದ್ದೇನೆ. ನಾನು ತಪಸ್ಸಿನಿಂದಲೇ ಈ ಜಗತ್ತನ್ನು ಸೃಷ್ಟಿಮಾಡುತ್ತೇನೆ. ಇದರ ಧಾರಣೆ-ಪೋಷಣೆಗಳನ್ನೂ ಮಾಡುತ್ತಿದ್ದೇನೆ ಮತ್ತು ಇವೆಲ್ಲವನ್ನೂ ನನ್ನಲ್ಲಿ ಲೀನ ಗೊಳಿಸಿಕೊಳ್ಳುವುದೂ ತಪಸ್ಸಿನಿಂದಲೇ. ದುಶ್ಚರವಾದ ತಪಸ್ಸೇ ನನ್ನ ವೀರ್ಯವು."

ಶ್ರೀಭಗವಂತನ ವಾಣಿಯಿಂದ ಸಂತುಷ್ಟರಾದ ಬ್ರಹ್ಮದೇವರು ಭಕ್ತಿ ಗದ್ಗದವಾದ ಕಂಠದಿಂದ ಭಗವಂತನಲ್ಲಿ ಹೀಗೆ ವಿಜ್ಞಾಪಿಸಿದರು : "ಓ ಭಗ ವಂತನೇ! ನೀನು ಎಲ್ಲ ಪ್ರಾಣಿಗಳ ಹೃದಯಗುಹೆಗಳಲ್ಲಿಯೂ ಸಾಕ್ಷಿಯಾಗಿ ಬೆಳಗುತ್ತಿದ್ದೀಯೆ. ನಾನು ಏನು ಮಾಡಲು ಬಯಸುತ್ತೇನೆಂಬುದನ್ನು ನೀನು ನಿನ್ನ ಅಪ್ರತಿಹತವಾದ ಜ್ಞಾನದಿಂದ ತಿಳಿದೇ ಇದ್ದೀಯೆ. ಆದರೂ, ಓ ಮಹಾ ಪ್ರಭೋ! ರೂಪರಹಿತವಾಗಿರುವ ನಿನ್ನ ಪರರೂಪ ಮತ್ತು ಅಪರರೂಪಗಳೆರ

ಡನ್ನೂ ತಿಳಿಯಬೇಕೆಂಬ ನನ್ನ ಬೇಡಿಕೆಯನ್ನು ಈಡೇರಿಸಲು ಪ್ರಾರ್ಥಿಸುತ್ತೇನೆ. ನೀನು ಮಾಯೆಗೆ ಸ್ವಾಮಿಯಾದವನು ; ವ್ಯರ್ಥವಾಗದ ಸಂಕಲ್ಪವುಳ್ಳವನು. ಜೇಡರಹುಳುವು ತನ್ನ ಬಾಯಿಂದ ಬಲೆಯನ್ನು ಹೊರಪಡಿಸಿ ಅದರಲ್ಲಿ ಆಟವಾಡುತ್ತಾ ಕೊನೆಗೆ ಅದನ್ನು ತನ್ನಲ್ಲಿಯೇ ಲಯಗೊಳಿಸಿಕೊಳ್ಳು ವಂತೆ–ನೀನೂ ನಿನ್ನ ಮಾಯಾಶಕ್ತಿಯಿಂದ ನಾನಾಶಕ್ತಿಸಂಪನ್ನವಾದ ಈ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುವುದಕ್ಕೋಸ್ಕರ ನಿನ್ನನ್ನೇ ನಾನಾ ರೂಪಗಳನ್ನಾಗಿ ಮಾಡಿಕೊಂಡು ಆಟವಾಡುತ್ತಿದ್ದೀಯೆ. ಇದನ್ನು ಹೇಗೆ ಮಾಡುತ್ತಿದ್ದೀಯೆ?–ಎಂಬ ಮರ್ಮವನ್ನು ತಿಳಿಯಬಲ್ಲ ಜ್ಞಾನವನ್ನು ನನಗೆ ದಯಪಾಲಿಸು. ನಾನು ಎಚ್ಚರವಾಗಿದ್ದು ಸಾವಧಾನದಿಂದ ನಿನ್ನ ಆಜ್ಞೆಯನ್ನು ಪಾಲನೆಮಾಡುವಂತೆಯೂ ಮತ್ತು ಹಾಗೆಯೇ ಸೃಷ್ಟಿಯನ್ನು ಮಾಡುವಾಗ ನಾನೇ ಸೃಷ್ಟಿಕರ್ತಾ ಎಂಬ ಅಭಿಮಾನಕ್ಕೆ ಸಿಕ್ಕಿಹಾಕಿಕೊಳ್ಳದೇ ಇರುವಂತೆಯೂ ಕೃಪೆಮಾಡು. ಪ್ರಭೋ! ನೀನು ಪರಮಪ್ರೀತಿಯಿಂದ ನನ್ನ ಕೈಯನ್ನು ಹಿಡಿದುಕೊಂಡು ನನ್ನನ್ನು ಮಿತ್ರನಂತೆ ಸ್ವೀಕರಿಸಿದ್ದೀಯೆ. ಆದ್ದರಿಂದ ನಾನು ಈ ಸೃಷ್ಟಿರಚನೆಯೆಂಬ ನಿನ್ನ ಸೇವೆಯನ್ನು ಮಾಡುವಂತೆಯೂ, ಸಾವಧಾನತೆ ಯಿಂದ ಹಿಂದಿನ ಕಲ್ಪದ ಗುಣ-ಕರ್ಮಗಳಿಗೆ ತಕ್ಕಂತೆ ಜೀವಗಳನ್ನು ವಿಭಾಗಮಾಡುವಂತೆಯೂ ಮತ್ತು ಅವುಗಳನ್ನು ಮಾಡುವಾಗ ನನ್ನ ಜನ್ಮ-ಕರ್ಮಗಳು ಸ್ವತಂತ್ರವಾದುವೆಂದು ಅಭಿಮಾನಕ್ಕೆ ಒಳಗಾಗದಂತೆಯೂ ಅನುಗ್ರಹಮಾಡು." (ಶ್ಲೋಕ 19-29)

ಆಗ ಶ್ರೀಭಗವಂತನು ಬ್ರಹ್ಮದೇವರಿಗೆ ಹೀಗೆ ಉಪದೇಶಮಾಡಿದನು:

"ನಾನು ನಿನಗೆ ನನ್ನ ಸ್ವರೂಪಜ್ಞಾನವನ್ನು ಅದರ ವಿಜ್ಞಾನದೊಡ ನೆಯೂ,* ರಹಸ್ಯದೊಡನೆಯೂ, ಅಂಗದೊಡನೆಯೂ ಉಪದೇಶಮಾಡು ತ್ತೇನೆ. ಅದನ್ನು ಗ್ರಹಿಸುವವನಾಗು. ಅದು ಅತ್ಯಂತ ಗೋಪ್ಯವಾದುದು.

---

* ಜ್ಞಾನಂ = ಶಾಸ್ತ್ರಜ್ಞಾನ. ವಿಜ್ಞಾನಂ = ಅನುಭವ. ರಹಸ್ಯಂ = ಭಕ್ತಿ. (ಶ್ರೀಧರೀಯ)

ಮೇ ಜ್ಞಾನಂ = ತನ್ನ ಸ್ವರೂಪವಿಷಯವಾದ ಜ್ಞಾನ. ಮೇ ವಿಜ್ಞಾನಂ = ನಿಯತವಾಗಿ ಮುಕ್ತಿಯನ್ನು ಕೊಡುವ ಸ್ವಬಿಂಬವಿಷಯವಾದ ಜ್ಞಾನ. (ವಿಜಯಧ್ವಜೀಯ)

ಜ್ಞಾನಂ = ಪ್ರಧಾನವಾಗಿ ತಿಳಿಯಲ್ಪಡಬೇಕಾಗಿರುವ ಭಗವತ್ಸ್ವರೂಪವಿಷಯವಾದ ಜ್ಞಾನವನ್ನೂ ಮತ್ತು ತದಙ್ಗಂ = ಅಪ್ರಧಾನವಾಗಿ ತಿಳಿಯಲ್ಪಡಬೇಕಾಗಿರುವ ಜೀವ

ನನ್ನ ವಿಸ್ತಾರವೇನು? ನನ್ನ ಲಕ್ಷಣವೇನು? ನನಗೆ ಯಾವ-ಯಾವ ರೂಪಗಳೂ, ಗುಣಗಳೂ ಮತ್ತು ಕರ್ಮಗಳೂ ಉಂಟು?* ಅವು ಹೇಗಿವೆ?– ಎಂಬ ಎಲ್ಲದರ ತಾತ್ತ್ವಿಕವಾದ ಅರಿವೂ ನಿನಗೆ ನನ್ನ ಅನುಗ್ರಹದಿಂದ ಉಂಟಾಗಲಿ.

**ಚತುಃಶ್ಲೋಕೀ ಭಾಗವತ :**

**ಅಹಮೇವಾಸಮೇವಾಗ್ರೇ ನಾನ್ಯದ್ಯತ್ಸದಸತ್ಪರಮ್ ।**
**ಪಶ್ಚಾದಹಂ ಯದೇತಚ್ಚ ಯೋऽವಶಿಷ್ಯೇತ ಸೋऽಸ್ಮ್ಯಹಮ್ ॥೩೨॥**

ಸೃಷ್ಟಿಗೆ ಮೊದಲು ಇದ್ದವನು ನಾನೇ. ಆಗಲೂ ನಾನು ಇದ್ದೇ ಇದ್ದೆನು. ನನಗಿಂತಲೂ ಪರವಾದ ಚೇತನವಾಗಲೀ, ಜಡವಾಗಲೀ ಯಾವುದೂ ಇರಲಿಲ್ಲ. ಸೃಷ್ಟಿಯ ಅನಂತರ ಇರುವವನೂ ನಾನೇ ; ಇವೆಲ್ಲವೂ ನಾನೇ ; ಕೊನೆಗೆ ಉಳಿಯುವವನೂ ನಾನೇ.

---

ಮತ್ತು ಪ್ರಕೃತಿಗಳ ವಿಷಯವಾದ ಜ್ಞಾನವನ್ನೂ, ಎಂತಹ ಜ್ಞಾನವನ್ನು–ಎಂದರೆ : ವಿಜ್ಞಾನಸಮನ್ವಿತಂ = ಶಾಸ್ತ್ರದಿಂದ ಉಂಟಾದ ಜ್ಞಾನವನ್ನು, ಯೋಗದಿಂದ ಕೂಡಿದ ಜ್ಞಾನವನ್ನು ಮತ್ತು ಸರಹಸ್ಯಂ = ಸಮಂತ್ರಕವಾದ ಜ್ಞಾನವನ್ನು.

(ವೀರರಾಘವೀಯ) (ಶ್ಲೋಕ ೩೦)

* **ಯಾವಾನ್** = ನನ್ನ ಸ್ವರೂಪ ಹೇಗಿದೆ – ಎಂಬುದನ್ನೂ, ಯಥಾಭಾವಃ = ಯಾವ ಪ್ರಕಾರವಾಗಿದ್ದೇನೆ – ಎಂಬುದನ್ನೂ, **ಯದ್ರೂಪಗುಣಕರ್ಮಕಃ** = ಯಾವ ರೂಪ, ಗುಣ ಮತ್ತು ಕರ್ಮಗಳಿಂದ ಕೂಡಿದ್ದೇನೆ–ಎಂಬುದನ್ನೂ. (ಶ್ರೀಧರೀಯ)

**ಯಾವಾನ್** = ಯಾವ ಪರಿಮಾಣವುಳ್ಳವನಾಗಿದ್ದೇನೆ–ಎಂಬುದನ್ನೂ, **ಯಥಾಭಾವಃ** = ನನ್ನ 'ಸತ್ಯಂ ಜ್ಞಾನಮನನ್ತಂ ಬ್ರಹ್ಮ'–ಇತ್ಯಾದಿ ಶ್ರುತಿಗಳಿಂದ ಸಿದ್ಧವಾದ ಸತ್ಯತ್ವ-ಜ್ಞಾನತ್ವ-ಅನಂತತ್ವರೂಪವಾದ ಸ್ವರೂಪವನ್ನು ಹೇಳುವ ಧರ್ಮವೇ ಭಾವ. ಅದು ಹೇಗಿದೆ ಎಂಬುದನ್ನೂ, **ಯದ್ರೂಪಗುಣಕರ್ಮಕಃ** = ಹಿಂದೆ ಹೇಳಿದ ಸ್ವರೂಪ–ನಿರೂಪಕ ಧರ್ಮಗಳಿಂದ ಕೂಡಿದ ಯಾವ ರೂಪ-ಗುಣ-ಕರ್ಮಗಳಿಂದ ಕೂಡಿದ್ದೇನೆ ಎಂಬುದನ್ನೂ, **ರೂಪಂ** = ದಿವ್ಯಮಂಗಳವಿಗ್ರಹ. **ಗುಣಾಃ** = **'ಯಸ್ಸರ್ವಜ್ಞಸ್ಸರ್ವವಿತ್', 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ, ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ'** – ಇತ್ಯಾದಿಯಾಗಿ ಶ್ರುತಿಗಳು ಹೇಳುವ ಸ್ವರೂಪಕ್ಕೆ ವಿಶೇಷಣವಾಗಿರುವ ಜ್ಞಾನಾದಿ ಕಲ್ಯಾಣಗುಣಗಳು. **ಕರ್ಮಾಣಿ** = ದಿವ್ಯಚೇಷ್ಟಿತಗಳು ; ಸೃಷ್ಟಿ-ಸ್ಥಿತಿ-ಸಂಹಾರಾದಿ ಕರ್ಮಗಳು. (ಚಂದ್ರಿಕಾ)

ದೇಶ-ಕಾಲವ್ಯಾಪ್ತಿಯಿಂದ ನನ್ನ ಪರಿಮಾಣವೇನು? ನನ್ನ ಸತ್ತೆ ಯಾವ ರೀತಿ

**ಋತೇಽರ್ಥಂ ಯತ್ಪ್ರತೀಯೇತ ನ ಪ್ರತೀಯೇತ ಚಾತ್ಮನಿ ।**
**ತದ್ವಿದ್ಯಾದಾತ್ಮನೋ ಮಾಯಾಂ ಯಥಾಭಾಸೋ ಯಥಾ ತಮಃ ॥**

ನನ್ನ ಸ್ವರೂಪವನ್ನು ಹೇಳಿಯಾಯಿತು. ಈಗ ನನ್ನ ಮಾಯೆಯ ಸ್ವರೂಪವನ್ನು ಹೇಳುತ್ತೇನೆ ; ಕೇಳು : ಸರ್ವಾತ್ಮನಾಗಿ ಪರಮಾರ್ಥವಾಗಿರುವ ನನ್ನನ್ನು ಬಿಟ್ಟು ಬೇರೆ ಏನು ಕಂಡುಬರುತ್ತಿದೆಯೋ–ಅದನ್ನು ನನ್ನ ಮಾಯೆ ಎಂದು ತಿಳಿಯಬೇಕು. ನಾನು ಪ್ರಕಾಶಕ್ಕೆ ಬರದೇ ಇದ್ದಾಗ ಮಾತ್ರ ಆ ಮಾಯೆಯು ಕಾಣಿಸಿಕೊಳ್ಳುತ್ತದೆ. ಆದರೆ ನನ್ನಲ್ಲಿ ಅದು ತೋರುವುದಿಲ್ಲ. ನಾನು ಮಾಯಾತೀತನು. ಮಾಯಾತೀತನಾದ ನನ್ನ ಪ್ರಕಾಶವು ಅನುಭವಕ್ಕೆ ಬಂದರೆ ಆ ಮಾಯೆಯು ಗೋಚರವಾಗುವುದಿಲ್ಲ. ಆ ಮಾಯೆಯೆಂಬುದು ಸತ್ಯವಾದ ಪ್ರಕಾಶವಲ್ಲ ; ಪ್ರಕಾಶದ ಆಭಾಸದಂತೆ. ಬೆಳಕಲ್ಲ ; ಕತ್ತಲೆಯಂತೆ–ಎಂದು ತಿಳಿಯಬೇಕು.

**ಯಥಾ ಮಹಾನ್ತಿ ಭೂತಾನಿ ಭೂತೇಷೂಚ್ಚಾವಚೇಷ್ವನು ।**
**ಪ್ರವಿಷ್ಟಾನ್ಯಪ್ರವಿಷ್ಟಾನಿ ತಥಾ ತೇಷು ನ ತೇಷ್ವಹಮ್ ॥೩೪॥**

ಚಿಕ್ಕದಾದ ಅಥವಾ ದೊಡ್ಡದಾದ ಅಳತೆಗಳುಳ್ಳ ಎಲ್ಲ ಪ್ರಾಣಿ ದೇಹಗಳೂ ಪಂಚಮಹಾಭೂತಗಳಿಂದಲೇ ನಿರ್ಮಿತವಾಗಿವೆ. ಆ ಆಕಾಶಾದಿ ಪಂಚಮಹಾಭೂತಗಳು ಎಲ್ಲ ಪ್ರಾಣಿಗಳ ದೇಹಗಳನ್ನು ಒಳಹೊಕ್ಕಿದ್ದರೂ ಒಳಹೊಕ್ಕಿಲ್ಲವೆಂದೂ ಹೇಳಬೇಕು. ಏಕೆಂದರೆ : ಹಾಗೆ ಒಳಹೊಗುವುದಕ್ಕೆ ಮೊದಲು ಅವು ಕಾರಣರೂಪದಿಂದ ಅವುಗಳಲ್ಲಿ ಇದ್ದೇ ಇದ್ದುವು. ಇದಲ್ಲದೇ ದೇಹವನ್ನು ಕತ್ತರಿಸಿದರೆ, ಸುಟ್ಟರೆ, ನೆನೆಸಿದರೆ, ಶೋಷಿಸಿದರೆ ಅದರಿಂದ ಆ ಪಂಚಮಹಾಭೂತಗಳಲ್ಲಿ ಆ ವಿಕಾರಗಳು ಉಂಟಾಗುವುದಿಲ್ಲ. ಹಾಗೆಯೇ ನಾನು ಪ್ರಾಣಿಗಳ ದೇಹದೊಳಗೆ ಪ್ರವೇಶಮಾಡುವುದಕ್ಕೆ ಮೊದಲೂ ಅವುಗಳಲ್ಲಿ ಇದ್ದೇ ಇದ್ದೆನು. ಇದಲ್ಲದೇ ಪ್ರಾಣಿಗಳ ಯಾವ ದೋಷಗಳೂ ಅಂತರ್ಯಾಮಿಯಾಗಿರುವ ನನಗೆ ಅಂಟುವುದಿಲ್ಲ.

---

ಯದು ? (ನಿರುಪಾಧಿಕವಾದ ಸತ್ತೆಯುಳ್ಳವನು ನಾನು) ನನ್ನ ಅವತಾರ ಯಾವ ರೀತಿಯದು ? ಗುಣ-ಕರ್ಮಗಳು ಯಾವ ಪ್ರಕಾರವಾಗಿವೆ ? ಇವೆಲ್ಲದರ ತತ್ತ್ವಜ್ಞಾನವು ನನ್ನ ಅನುಗ್ರಹದಿಂದ ನಿನಗೆ ಉಂಟಾಗಲಿ. (ವಿಜಯಧ್ವಜೀಯ) (ಶ್ಲೋಕ ೩೧)

**ಏತಾವದೇವ ಜಿಜ್ಞಾಸ್ಯಂ ತತ್ತ್ವಜಿಜ್ಞಾಸುನಾತ್ಮನಃ ।**
**ಅನ್ವಯವ್ಯತಿರೇಕಾಭ್ಯಾಂ ಯತ್ಸ್ಯಾತ್ಸರ್ವತ್ರ ಸರ್ವದಾ ॥೩೫॥**

"ಪರಮಾತ್ಮನು ಇಡೀ ಜಗತ್ತಿಗೇ ಉಪಾದಾನಕಾರಣನಾಗಿ ಅದರಲ್ಲಿ ಸದಾ ಸರ್ವತ್ರ ಅನ್ವಯಹೊಂದಿದ್ದಾನೆ. ಆದರೆ ಅದರ ದೋಷಗಳು ಎಲ್ಲಿಯೂ, ಯಾವಾಗಲೂ ಆತನನ್ನು ಸೋಂಕದಿರುವುದರಿಂದ ಜಗತ್ತಿನಿಂದ ವ್ಯತಿರಿಕ್ತನೂ ಆಗಿದ್ದಾನೆ. ಹೀಗೆ ಅನ್ವಯ ಮತ್ತು ವ್ಯತಿರೇಕಗಳಿಂದ ಸರ್ವದಾ ಸರ್ವದೇಶಗಳಲ್ಲಿಯೂ ವಿರಾಜಿಸುತ್ತಿರುವ, ಸರ್ವವೂ–ಸರ್ವಾತೀತವೂ ಆಗಿರುವ ಪರತತ್ತ್ವವೇ ಪರಮಾತ್ಮತತ್ತ್ವವು. ಆತ್ಮಸ್ವರೂಪವನ್ನು ತಿಳಿಯಲು ಬಯಸುವವರು ವಿಚಾರಮಾಡಿ ಅರಿತುಕೊಳ್ಳಬೇಕಾದುದು ಇಷ್ಟು ಮಾತ್ರವೇ.'

**ಏತನ್ಮತಂ ಸಮಾತಿಷ್ಠ ಪರಮೇಣ ಸಮಾಧಿನಾ ।**
**ಭವಾನ್ಕಲ್ಪವಿಕಲ್ಪೇಷು ನ ವಿಮುಹ್ಯತಿ ಕರ್ಹಿಚಿತ್ ॥೩೬॥**

ವತ್ಸ! ಚತುರ್ಮುಖ! ಅತ್ಯಂತ ಸಾವಧಾನವಾದ ಮನಸ್ಸಿನಿಂದ ನನ್ನ ಈ ಮತದಂತೆ ನಡೆಯುವವನಾಗು. ಹೀಗೆ ಮಾಡಿದರೆ ನೀನು ಯಾವುದೇ ಕಲ್ಪದಲ್ಲಾಗಲೀ, ಎಂತಹ ವಿವಿಧಸೃಷ್ಟಿಯ ರಚನೆಯಲ್ಲಾಗಲೀ ಮರುಳಾಗುವುದಿಲ್ಲ."

ಶುಕಮುನಿಗಳು ಹೇಳುತ್ತಾರೆ :

"ಪರೀಕ್ಷಿದ್ರಾಜನೇ! ಜನ್ಮರಹಿತನಾದ ಶ್ರೀಮನ್ನಾರಾಯಣನು ಸರ್ವಭೂತಗಳಿಗೂ ಅಧಿಪತಿಯಾಗಿ ಪರಮೋನ್ನತಸ್ಥಾನದಲ್ಲಿರುವ ಬ್ರಹ್ಮದೇವರಿಗೆ ಹೀಗೆ ಉಪದೇಶಮಾಡಿ ಅವರು ನೋಡುತ್ತಿರುವಾಗಲೇ ಅಂತರ್ಧಾನ ಹೊಂದಿದನು. ಬ್ರಹ್ಮದೇವರು ಆತನಿಗೆ ಕೈಜೋಡಿಸಿ ನಮಸ್ಕಾರಮಾಡಿ ಆತನ ಅನುಗ್ರಹದಿಂದ ಹಿಂದಿನ ಕಲ್ಪದಲ್ಲಿ ಹೇಗೆ ಇತ್ತೋ ಹಾಗೆಯೇ ಪುನಃ ಈ ಜಗತ್ತನ್ನು ಸೃಷ್ಟಿಮಾಡಿದರು. (ಶ್ಲೋಕ 37-38)

ಒಂದು ಬಾರಿ ಧರ್ಮಪತಿಗಳಾದ ಆ ಪ್ರಜಾಪತಿ ಬ್ರಹ್ಮದೇವರು ಎಲ್ಲ ಪ್ರಜೆಗಳಿಗೂ ಕಲ್ಯಾಣವುಂಟಾಗಲೆಂಬ ಸ್ವಾರ್ಥವನ್ನು ಸಾಧಿಸಲು ವಿಧಿಪೂರ್ವಕವಾಗಿ ಯಮ-ನಿಯಮಗಳನ್ನು ಆಚರಿಸಿದರು. ಆ ಸಮಯದಲ್ಲಿ

ಅವರ ಪ್ರಿಯಪುತ್ರನಾದ ನಾರದಮುನಿಯು ತತ್ತ್ವವನ್ನು ತಿಳಿಯುವುದಕ್ಕಾಗಿ ಅವರ ಬಳಿಗೆ ಬಂದು ಜಿತೇಂದ್ರಿಯನಾಗಿ, ಸದಾಚಾರಸಂಪನ್ನನಾಗಿ ಅವರ ಸೇವೆಮಾಡುತ್ತಿದ್ದನು. ಭರತಕುಲಮಣಿಯೇ! ಪರಮಭಾಗವತೋತ್ತಮ ನಾದ ನಾರದಮಹರ್ಷಿಯು ಮಾಯೇಶನಾದ ಮಹಾವಿಷ್ಣುವಿನ ಮಾಯೆಯ ಮಹಿಮೆಯನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯಿಂದ ತಂದೆಯನ್ನು ಹೀಗೆ ಬಹುಕಾಲ ಸೇವಿಸುತ್ತಾ ಸಂತೋಷಪಡಿಸಿದನು. ಅದರಿಂದ ಲೋಕಪಿತಾ ಮಹರಾದ ಬ್ರಹ್ಮದೇವರು ಪ್ರಸನ್ನರಾದುದನ್ನು ಗಮನಿಸಿ ನಾರದಮುನಿಯು ನೀನು ಈಗ ನನ್ನನ್ನು ಯಾವ ಪ್ರಶ್ನೆಯನ್ನು ಕೇಳಿದೆಯೋ ಅದೇ ವಿಷಯ ವನ್ನು ಕುರಿತು ಅವರನ್ನು ಪ್ರಶ್ನೆಮಾಡಿದನು. ಸಂತುಷ್ಟರಾದ ಬ್ರಹ್ಮದೇವರು ತಮಗೆ ಶ್ರೀಭಗವಂತನು ಉಪದೇಶಿಸಿದ್ದ ಹತ್ತು ಲಕ್ಷಣಗಳಿಂದ ಕೂಡಿದ ಶ್ರೀಮದ್ಭಾಗವತಪುರಾಣವನ್ನು ತನ್ನ ಆ ಪ್ರಿಯಪುತ್ರನಿಗೆ ಉಪದೇಶ ಮಾಡಿದರು. ಅನಂತರ ನಾರದಮಹರ್ಷಿಯು ಸರಸ್ವತೀನದಿಯ ತೀರದಲ್ಲಿ ಕುಳಿತು ಪರಬ್ರಹ್ಮವನ್ನು ಧ್ಯಾನಿಸುತ್ತಿದ್ದ ಮಹಾತೇಜಸ್ವಿಗಳಾದ ವ್ಯಾಸಮುನಿ ಗಳಿಗೆ ಅದನ್ನು ಹಾಗೆಯೇ ಉಪದೇಶಮಾಡಿದನು. ವ್ಯಾಸಮಹಾಮುನಿಗಳು ಅದನ್ನು ಪುತ್ರನಾದ ನನಗೆ ಉಪದೇಶಿಸಿದರು. ನೀನು ನನ್ನನ್ನು 'ವಿರಾಟ್‌ಪುರುಷನಿಂದ ಈ ಜಗತ್ತಿನ ಉತ್ಪತ್ತಿ ಹೇಗೆ ಆಯಿತು?'–ಎಂದು ಪ್ರಶ್ನಿಸಿದೆಯಲ್ಲವೇ? ಆ ಪ್ರಶ್ನೆಗೂ ಮತ್ತು ನೀನು ಕೇಳಿದ ಇತರ ಪ್ರಶ್ನೆಗಳಿಗೂ ಎಲ್ಲಕ್ಕೂ ಈ ಭಾಗವತಪುರಾಣದ ರೂಪದಲ್ಲಿ ಉತ್ತರಿಸುವೆನು.

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ದ್ವಿತೀಯಸ್ಕಂಧದ ೯ನೆಯ ಅಧ್ಯಾಯವು ಮುಗಿಯಿತು.

## ಚತುಃಶ್ಲೋಕೀ ಭಾಗವತದ ವಿಶ್ಲೇಷಣೆ

**ಅಹಮೇವಾಸಂ.... ಸೋऽಸ್ಮ್ಯಹಮ್ ||೩೨||**

[ಸೃಷ್ಟಿಗೆ ಹಿಂದೆ ಇದ್ದವನು ನಾನೇ. ನನ್ನನ್ನು ಬಿಟ್ಟು ಸ್ಥೂಲವಾಗಲೀ, ಅದಕ್ಕೆ ಕಾರಣವಾಗಿರುವ ಸೂಕ್ಷ್ಮವಾಗಲೀ, ಪ್ರಕೃತಿಯಾಗಲೀ ಯಾವುದೂ ಇರಲಿಲ್ಲ. ಅವುಗಳೂ ನನ್ನಲ್ಲೇ ಲೀನವಾಗಿದ್ದುದರಿಂದ ಕೇವಲನಾದ ನಾನೊ

ಬ್ಬನೇ ಇದ್ದೆನು. ಸೃಷ್ಟಿಯ ಅನಂತರವೂ ನನ್ನನ್ನು ಬಿಟ್ಟು ಬೇರಾವುದನ್ನೂ ನಾನು ಮಾಡಲಿಲ್ಲ. ಈ ವಿಶ್ವವೆಲ್ಲವೂ ನಾನೇ ಆಗಿದ್ದೇನೆ. ಪ್ರಳಯದಲ್ಲಿ ಉಳಿಯುವವನೂ ನಾನೇ. ಅನಾದ್ಯನಂತನೂ, ಅದ್ವಿತೀಯನೂ ಆಗಿರುವುದ ರಿಂದ ಪರಿಪೂರ್ಣನು ನಾನು–ಎಂಬ ಅಭಿಪ್ರಾಯ. (ಶ್ರೀಧರೀಯ)

ಪ್ರಳಯದಶೆಯಲ್ಲಿ ನಾನೊಬ್ಬನೇ ಇದ್ದೆನು. ನನ್ನಿಂದ ಬೇರೆಯಾಗಿ ಯಾವ ಚೇತನಾಚೇತನಾತ್ಮಕವಾದ ವಸ್ತುವು ಈಗ ಕಾಣುತ್ತಿದೆಯೋ–ಅದು ನನ್ನಿಂದ ಬೇರೆಯಾಗಿ ಇರಲೇ ಇಲ್ಲ. ಈಗ ಕಾಣುತ್ತಿರುವ ಚರಾಚರಾತ್ಮಕ ವೆಲ್ಲವೂ ನಾನೇಯೇ ; ನನ್ನಿಂದ ವ್ಯತಿರಿಕ್ತವಲ್ಲ. '**ಸೋಽಕಾಮಯತ । ಬಹು ಸ್ಯಾಂ ಪ್ರಜಾಯೇಯೇತಿ ।**' ಎಂಬ ಶ್ರುತಿಯಂತೆ ಬಹುವಾಗಬೇಕು–ಎಂಬ ಸಂಕಲ್ಪದಿಂದ ನಾನೇ ಬಹುವಿಧವಾದ ಪ್ರಪಂಚವಾದೆನು. ಈಗ ಕಾಣುವ ನಿಖಿಲಪ್ರಪಂಚದಲ್ಲಿ ಪ್ರಳಯದಶೆಯಲ್ಲಿ ಉಳಿಯುವವನೂ ನಾನೇ.

(ಚಂದ್ರಿಕಾ)

ನಾನು ಯಾರು ಎಂಬುದನ್ನು ಸ್ಫುಟಗೊಳಿಸುತ್ತಾ ಪ್ರಧಾನವಾಗಿ ತಿಳಿಯಲ್ಪಡಬೇಕಾದ ತನ್ನ ಸ್ವರೂಪವನ್ನು ಶ್ರೀಭಗವಂತನು ಹೀಗೆ ಉಪ ದೇಶಿಸುತ್ತಿದ್ದಾನೆ. ಸೃಷ್ಟಿಗೆ ಹಿಂದೆ ಚೇತನಾಚೇತನವಿಲಕ್ಷಣವಾದ ವಸ್ತುವು ನಾನೇ ಆಗಿದ್ದೆನು ; ಚಿದಚಿದ್ವಿಲಕ್ಷಣವಸ್ತುವಿರಲಿಲ್ಲ. ಎಲ್ಲವೂ ಚಿದಚಿತ್ತುಗಳ ಲ್ಲಿಯೇ ಅಂತರ್ಗತ. ಅವುಗಳಿಂದ ವಿಲಕ್ಷಣನಾದವನು ನಾನು ಮಾತ್ರವೇ. ಸೃಷ್ಟಿಗೆ ಮೊದಲು ಹೀಗೆ ಇದ್ದವನು ನಾನೇ. ಸೃಷ್ಟಿಕಾಲದಲ್ಲಿ ಹುಟ್ಟಿದ ಈ ಕಾರ್ಯಪ್ರಪಂಚವೂ ನಾನೇ. ಕಾರ್ಯಚಿದಚಿದ್ರೂಪನೂ ನಾನೇ. ಮತ್ತೆ ಸಂಹಾರಸಮಯದಲ್ಲಿ ಉಪಸಂಹರಿಸಲ್ಪಡುವವನೂ ನಾನೇ. ಪ್ರಕೃತಿ-ಪುರುಷವಿಲಕ್ಷಣನಾಗಿ, ಪ್ರಕೃತಿ-ಪುರುಷಶರೀರಕನಾಗಿ, ಸರ್ವಜ್ಞನೂ, ಸರ್ವ ಶಕ್ತನೂ, ಸರ್ವೇಶ್ವರನೂ ಆದ ನಾನೇ ಸೃಷ್ಟಿಗೆ ಮೊದಲು ನಾಮ-ರೂಪ ವಿಭಾಗವಿಲ್ಲದ ಸೂಕ್ಷ್ಮಪ್ರಕೃತಿ-ಪುರುಷಶರೀರಕನಾಗಿದ್ದೆನು. ಸೃಷ್ಟಿಕಾಲ ದಲ್ಲಿ ವಿಭಾಗಗೊಂಡ ನಾಮ-ರೂಪಭಾಗವುಳ್ಳ ಸ್ಥೂಲಪ್ರಕೃತಿ-ಪುರುಷ ಶರೀರಕನಾದವನು ನಾನೇ. ಪರಮಾತ್ಮನು ಕಾರ್ಯಾವಸ್ಥೆಯಲ್ಲಿ ನಾಮ-ರೂಪ ವಿಭಾಗಹೊಂದಿದ ಪ್ರಕೃತಿ-ಪುರುಷಶರೀರವುಳ್ಳವನಾದರೂ ಆತನಿಗೆ

ತನ್ನ ಶರೀರವಾಗಿರುವ ಚೇತನಾಚೇತನಗಳಲ್ಲಿರುವ ಅಜ್ಞತ್ವ, ದುಃಖಿತ್ವ, ಕರ್ಮವಶತ್ವ, ಪರಿಣಾಮಹೊಂದುವಿಕೆ, ಜಡತೆ–ಮುಂತಾದ ವಿಕಾರಗಳ ಸ್ಪರ್ಶವಿಲ್ಲ. ತನ್ನ ಶರೀರಕ್ಕೆ ಸಂಬಂಧಪಟ್ಟ ಬಾಲತ್ವ, ತರುಣತ್ವ, ವೃದ್ಧತ್ವವೇ ಮುಂತಾದ ವಿಕಾರಗಳು ಶರೀರಿಯಾದ ಜೀವನಿಗೆ ಅಂಟುವುದಿಲ್ಲ. ಹಾಗೆಯೇ ಶರೀರಭೂತವಾದ ಚೇತನಾಚೇತನಗಳಲ್ಲಿರುವ ವಿಕಾರಗಳು ಅವುಗಳಿಗೆ ಆತ್ಮನಾಗಿರುವ ಭಗವಂತನಿಗೆ ಅಂಟುವುದಿಲ್ಲ. ಈ ಕಾರ್ಯತ್ವ- ಕಾರಣತ್ವಗಳು ಪರಮಾತ್ಮನಿಗೆ ತನ್ನ ಶರೀರಭೂತವಾಗಿರುವ ಪ್ರಕೃತಿ- ಪುರುಷರ ದ್ವಾರಾ ಹೊಂದಿಕೆಯಾಗುತ್ತವೆ. (ವೀರರಾಘವೀಯ)

ವಿಜಯಧ್ವಜೀಯದಲ್ಲಿ '**ಅಹಮೇವಾಸಮಗ್ರೇ ಚ**'–ಎಂದು ಪಾಠವಿದೆ. ಆ ವ್ಯಾಖ್ಯಾನದ ಅಭಿಪ್ರಾಯ ಹೀಗಿದೆ :

ಸೃಷ್ಟಿಗೆ ಹಿಂದೆ ತಾನೇ ಇದ್ದೆನು ಮತ್ತು ('ಚ' ಎಂಬ ಶಬ್ದವು ಹೇಳುವಂತೆ) ಸದಸತ್ತುಗಳೂ ( ಕಾಲ-ಪ್ರಕೃತಿ ಮುಂತಾದುವೂ ) ಇದ್ದುವು. ಹಾಗೆಯೇ ಪ್ರಳಯದಲ್ಲಿ ಹರಿಗಿಂತಲೂ ಭಿನ್ನವಾದ ಯಾವ ಕಾಲ-ಕರ್ಮಾದಿಗಳುಂಟೋ–ಅವು ಅವನಿಗಿಂತಲೂ ಪರವಾಗಿಲ್ಲ, ಸ್ವತಂತ್ರವಾಗಿಲ್ಲ. ಅವನಿಂದ ಆವರಿಸಲ್ಪಟ್ಟಿರುವುದರಿಂದ ಅವನಿಗೆ ಅಧೀನವೇ ಆಗಿರುತ್ತವೆ. ಸೃಷ್ಟಿಯ ನಂತರದಲ್ಲಿ ನಾನೂ (ಭಗವಂತನೂ), ನೀನೂ (ಬ್ರಹ್ಮದೇವರೂ) ಮತ್ತು ಈ ಜಗತ್ತೂ ಇರುತ್ತವೆ. ಸ್ಥಿತಿಕಾಲದಲ್ಲಿ ನಾನು ಭೋಕ್ತೃವು, ನಾನು ಕರ್ತೃವು–ಇತ್ಯಾದಿಯಾಗಿ ಸ್ವಾತಂತ್ರ್ಯವು ಕಾಣುತ್ತಿರುವುದರಿಂದ ಸೃಷ್ಟಿಗೆ ಹಿಂದೆಯೂ ಮತ್ತು ಲಯದನಂತರವೂ–ಆ ಸ್ವಾತಂತ್ರ್ಯವು ಇರಬೇಕಲ್ಲಾ! ಎಂದರೆ : ಹಾಗಲ್ಲ. ಆ ತೋರಿಕೆಯು ಬುದ್ಧಿಮೋಹದಿಂದುಂಟಾಗುತ್ತದೆ. '**ವಿಷ್ಣೋರಧೀನಂ ಪ್ರಾಕ್‌ಸೃಷ್ಟೇಃ ತಥೈವ ಚ ಲಯಾದನು । ಅಸ್ಯ ಸತ್ತ್ವಪ್ರವೃತ್ತ್ಯಾದಿವಿಶೇಷೇಣಾಧಿಗಮ್ಯತೇ ॥ ಸ್ವಾತಂತ್ರ್ಯಂ ಸ್ಥಿತಿಕಾಲೇ ತು ಕಥಂ ಚಿದ್ಬುದ್ಧಿಮೋಹತಃ । ಪ್ರತೀಯಮಾನಮಪಿ ತು ತಸ್ಮಾನ್ನೈವೇತಿ ಗಮ್ಯತಾಮ್ ॥**' ಎಂಬ ವಚನವು ಇದನ್ನು ಪ್ರಮಾಣಿಸುತ್ತದೆ. ಆದ್ದರಿಂದ 'ಕಾಲತ್ರಯದಲ್ಲೂ ನಾನೇ ಸ್ವತಂತ್ರನು ; ನಿನ್ನನ್ನು ಮೊದಲ್ಗೊಂಡು ಸಮಸ್ತವೂ ನನಗೆ ಅಧೀನ'–ಎಂಬ ಅಭಿಪ್ರಾಯವನ್ನು

ಪರಮಾತ್ಮನು ಬ್ರಹ್ಮದೇವರಿಗೆ ಉಪದೇಶಿಸುತ್ತಿದ್ದಾನೆ. (ವಿಜಯಧ್ವಜೀಯ)

**ಋತೇಽರ್ಥಂ...... ಯಥಾ ತಮಃ** ||೩೩||

ಪರಮಾತ್ಮಪ್ರಕಾಶವು ಕಾಣದೇ ಇರುವಾಗ ಮಾಯೆಯು ಕಾಣುತ್ತದೆ. ಪರಮಾತ್ಮನು ಬೆಳಗುತ್ತಿರುವುದು ಅರಿವಿಗೆ ಬಂದಾಗ ಮಾಯೆಯು ಕಾಣುವುದೇ ಇಲ್ಲ. ಅದು ಬೆಳಕಿನ ಆಭಾಸದಂತೆ ; ಕತ್ತಲೆಯಂತೆ ; ಅದು ಸತ್ಯವಾದ ಪ್ರಕಾಶವಲ್ಲ. ಈ ಅಭಿಪ್ರಾಯಕ್ಕೆ ಹೋಲಿಕೆಯಾಗುವ ಶ್ಲೋಕವು ಯೋಗತಾರಾವಳಿಯಲ್ಲಿದೆ.

**ಪ್ರಕಾಶಮಾನೇ ಪರಮಾತ್ಮಭಾನೌ ನಶ್ಯತ್ಯವಿದ್ಯಾತಿಮಿರೇ ಸಮಸ್ತೇ ।**
**ಅಹೋ ಬುಧಾ ನಿರ್ಮಲದೃಷ್ಟಯೋಽಪಿ ಕಿಂಚಿನ್ನ ಪಶ್ಯನ್ತಿ**
**ಜಗತ್ಸಮಗ್ರಮ್ ॥**

ವಾಸ್ತವವಾಗಿ ಚಂದ್ರನು ಒಬ್ಬನೇ ಇದ್ದರೂ ಮಿಥ್ಯಾಜ್ಞಾನದಿಂದ ಆ ಚಂದ್ರನಲ್ಲಿಯೇ ಇನ್ನೊಬ್ಬ ಚಂದ್ರನು ಕಾಣಿಸುತ್ತಾನೆ. ಹೀಗೆ ಏಕಮಾತ್ರನಾಗಿರುವ ಚಂದ್ರನಲ್ಲಿ ಇಬ್ಬರು ಚಂದ್ರರು ತೋರುವಂತೆ ಏಕಮಾತ್ರನಾಗಿ, ಪರಮಾರ್ಥವಾಗಿ, ಅಧಿಷ್ಠಾನವಾಗಿರುವ ನನ್ನನ್ನು ಬಿಟ್ಟು ಜಗತ್ತು ತೋರುವುದು ನನ್ನ ಮಾಯೆ. ಆಕಾಶಮಂಡಲದ ನಕ್ಷತ್ರಗಳಲ್ಲಿ ರಾಹುವು ವಾಸ್ತವ ವಾಗಿ ಇದ್ದರೂ ಕಾಣಿಸುವುದಿಲ್ಲ. ಹಾಗೆಯೇ ವಾಸ್ತವವಾಗಿ ಇರುವ ನಾನು ಈ ವಿವಿಧದ್ವೈತದ ತೋರಿಕೆಯಲ್ಲಿ ಕಾಣಿಸುವುದಿಲ್ಲ ; ಇದೂ ನನ್ನ ಮಾಯೆ. ಅಧಿಷ್ಠಾನವಾಗಿ ಸತ್ಯರೂಪನಾಗಿರುವ ನನ್ನನ್ನು ಬಿಟ್ಟು ಬೇರೆ ವಸ್ತುಗಳು ಕಾಣಿಸುತ್ತಿರುವುದೂ ಮತ್ತು ಆ ವಸ್ತುಗಳಲ್ಲಿ ನಾನು ಕಾಣದೆ ಇರುವುದೂ ಮಾಯೆ. ಇಲ್ಲದೇ ಇರುವುದು ಇರುವಂತೆ ತೋರುವುದಕ್ಕೆ ದೃಷ್ಟಾಂತವು ದ್ವಿಚಂದ್ರಾದಿಗಳ ಆಭಾಸ. ವಾಸ್ತವವಾಗಿ ಇರುವುದೂ ಕಾಣದೇ ಇರುವುದಕ್ಕೆ ದೃಷ್ಟಾಂತವು ರಾಹು ; '**ತಮಃ**' ಎಂದರೆ ರಾಹು. (ಶ್ರೀಧರೀಯ)

ಆತ್ಮನು ಸ್ವಯಂಪ್ರಕಾಶನಾದ್ದರಿಂದ ತೇಜಸ್ಸಿಗೆ ಸಮಾನನು. ಪ್ರಕೃತಿಯು ಜಡವಾದ್ದರಿಂದ ಕತ್ತಲೆಗೆ ಸಮಾನವಾದುದು. ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳಲ್ಲಿ ಉಪಾದಾನದಂತೆ ತೋರಿಬರುತ್ತಿರುವ ಯಾವ ಪ್ರಕೃತಿತತ್ತ್ವವುಂಟೋ–ಅದನ್ನು ನನ್ನ ಮಾಯೆಯೆಂದು ತಿಳಿಯಬೇಕು.

**'ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್'**– ಎಂದು ಶ್ರುತಿಯು ಮೊಳಗುವಂತೆ ಪ್ರಕೃತಿತತ್ತ್ವವೇ ನನ್ನ ಮಾಯೆ. ಜಗತ್ತಿನ ಉಪಾದಾನಕಾರಣವು ವಾಸ್ತವವಾಗಿ ನಾನೇ ಆಗಿದ್ದರೂ ಆ ಕಾರಣತ್ವವು ನನ್ನಲ್ಲಿ ಇರುವಂತೆ ತೋರುವುದಿಲ್ಲ ; ಪ್ರಕೃತಿಯಲ್ಲಿ ಇರುವಂತೆ ತೋರುತ್ತದೆ. ಈ ಮೋಹಕವಾದ ಪ್ರಕೃತಿತತ್ತ್ವವೇ 'ಮಾಯೆ' ಎಂದು ಕರೆಯಲ್ಪಡುತ್ತದೆ. ಪರಮಾತ್ಮತತ್ತ್ವವಾದ ನಾನು ಸ್ವಯಂಪ್ರಕಾಶನಾದ್ದ ರಿಂದ ತೇಜಸ್ಸಿನಂತೆ ; ಮಾಯಾಪ್ರಕೃತಿಯು ಜಡವಾದ್ದರಿಂದ ಕತ್ತಲೆಯಂತೆ–ಎಂದು ಭಗವಂತನು ಉಪದೇಶಿಸುತ್ತಾನೆ. (ಚಂದ್ರಿಕಾವ್ಯಾಖ್ಯಾನ )

ಪ್ರಧಾನವಾಗಿ ತಿಳಿಯಲ್ಪಡಬೇಕಾದ ಚಿದಚಿದ್ವಿಲಕ್ಷಣನಾದ ಪರ ಮಾತ್ಮನ ಸ್ವರೂಪವನ್ನು ಹಿಂದಿನ ಶ್ಲೋಕದಲ್ಲಿ ಹೇಳಿ ಇಲ್ಲಿ ಚಿದಚಿತ್ತುಗಳ ಸ್ವರೂಪವನ್ನು ನಿರೂಪಿಸಲಾಗುತ್ತದೆ. ನಿರತಿಶಯಪುರುಷಾರ್ಥವಾಗಿರುವ ಚಿತ್ತತ್ತ್ವವನ್ನು ಬಿಟ್ಟು ಅಚಿದ್ವಸ್ತುವು ಕಾಣಿಸುತ್ತದೆ. ( ಪ್ರಕೃತಿಯನ್ನು ಅನುಸಂಧಾನಮಾಡುತ್ತಿರುವಾಗ ಆತ್ಮಸ್ವರೂಪವು ಯಥಾವತ್ತಾಗಿ ಪ್ರಕಾಶಿ ಸುವುದಿಲ್ಲ. ) ಹಾಗೆಯೇ ಚೇತನಸ್ವರೂಪವನ್ನು ನೋಡುತ್ತಿರುವಾಗ ' ಸಾ ನಿಶಾ ಪಶ್ಯತೋ ಮುನೇಃ '–ಎಂಬ ಗೀತಾವಚನದಂತೆ ಅಚಿದ್ವಸ್ತುವು (ಪ್ರಕೃತಿಯು) ಕಾಣಿಸುವುದಿಲ್ಲ. ಇದನ್ನು ಪರಮಾತ್ಮನ ಮಾಯೆಯೆಂದು ತಿಳಿಯಬೇಕು. ಒಂದು ಕಾಣಿಸುತ್ತಿರುವಾಗ ಮತ್ತೊಂದು ಕಾಣಿಸದೇ ಇರುವುದು ವಿಚಿತ್ರ. ಈ ವಿರೋಧವು ಕಾಣುವುದನ್ನು ದೃಷ್ಟಾಂತಗಳಿಂದ ಸ್ಪಷ್ಟಪಡಿಸಿದೆ. ತೇಜಸ್ಸಿನಲ್ಲಿ ತಮಸ್ಸು ಕಾಣಿಸುವುದಿಲ್ಲ. ತಮಸ್ಸಿನಲ್ಲಿ ತೇಜಸ್ಸು ಕಾಣಿಸುವುದಿಲ್ಲ. ಅದರಂತೆ ಈ ಸ್ಥೂಲತ್ವ, ಸೂಕ್ಷ್ಮತ್ವ, ನಿತ್ಯತ್ವ, ಅನಿತ್ಯತ್ವ, ಜಡತ್ವ ಮತ್ತು ಅಜಡತ್ವಗಳೇ–ಮುಂತಾದ ವಿರುದ್ಧಾಕಾರಗಳು ಮಾಯೆಯಿಂದ ಕಂಡುಬರುತ್ತವೆ. (ವೀರರಾಘವೀಯ)

ಅಸ್ವತಂತ್ರವಾಗಿರುವ ಪ್ರಕೃತಿ ಮುಂತಾದುವುಗಳ ಸ್ವರೂಪವನ್ನು ಇಲ್ಲಿ ಉಪದೇಶಿಸಲಾಗಿದೆ. **ಅರ್ಥಃ**= ಪ್ರಯೋಜನ. ನಾನು ಆಪ್ತಕಾಮನು. ನನಗೆ ಜೀವನಿಂದಾಗಲೀ, ಪ್ರಕೃತಿಯಿಂದಾಗಲೀ–ಆಗಬೇಕಾದ ಯಾವ ಪ್ರಯೋ ಜನವೂ ಇಲ್ಲ ; ಬಾಧೆಯೂ ಇಲ್ಲ. ಹೀಗೆ ಯಾವುದೂ ನನಗೆ ಯಾವ ಪ್ರಯೋಜನಕ್ಕೂ ಬರುವುದಿಲ್ಲ ಮತ್ತು ಯಾವ ರೀತಿಯಲ್ಲೂ ಬಾಧಕವೂ

ಆಗಿಲ್ಲ–ಎಂಬುದಾಗಿ ವೇದಾದಿಗಳಲ್ಲಿ ಎಲ್ಲ ಕಡೆಗಳಲ್ಲೂ ಕಾಣಿಸುತ್ತದೆಯೋ–ಅಂತಹ ವಸ್ತುವನ್ನು ಆತ್ಮನ (ಪರಮಾತ್ಮನ) ಮಾಯೆಯೆಂದು ತಿಳಿಯಬೇಕು. ಈ ಮಾಯೆಯೆಂದರೆ ಇಂದ್ರಜಾಲವಲ್ಲ. ಜೀವ ಮತ್ತು ಪ್ರಕೃತಿಗಳು ಯಥಾರ್ಥವಾಗಿಯೇ, ಸತ್ಯವಾಗಿಯೇ ಕಾಣುತ್ತಿರುವ ನನ್ನ ಆಭಾಸ (ಪ್ರತಿಬಿಂಬ) ರೂಪವಾಗಿರುವ ಜೀವನೂ ಮತ್ತು ಸತ್ಯವಾಗಿಯೇ ಅಜ್ಞಾನಕ್ಕೆ ಕಾರಣವಾಗಿರುವ ಮೂಲಪ್ರಕೃತಿಯೂ 'ಮಾಯೆ' ಎನಿಸುತ್ತವೆ.

**ಮುಖ್ಯತೋ ವಿಷ್ಣುಶಕ್ತಿರ್ಹಿ ಮಾಯಾಶಬ್ದೇನ ಗಣ್ಯತೇ ।**
**ಉಪಚಾರತಸ್ತು ಪ್ರಕೃತಿಃ ಜೀವಶ್ಚೈವ ಹಿ ಗಣ್ಯತೇ ॥**

ಛತ್ರಿ ಹಿಡಿದುಕೊಂಡಿರುವವರೇ ಮುಂತಾದ ಸೇವಕರು ರಥದಲ್ಲಿಯೇ ಇದ್ದರೂ ರಥಿಗಳೆಂದು ಕರೆಯಲ್ಪಡುವುದಿಲ್ಲ. ಹಾಗೆಯೇ ಜೀವ-ಪ್ರಕೃತಿ ಮತ್ತು ಕಾಲಗಳು ಸದಾ ನನ್ನಲ್ಲಿಯೇ ಇದ್ದರೂ ನನ್ನಲ್ಲಿವೆ ಎಂದು ಹೇಳಲ್ಪಡುವುದಿಲ್ಲ. **'ಸರ್ವಂ ಪರೇ ಸ್ಥಿತಮಪಿ ನೈವ ತತ್ರೇತಿ ಭಣ್ಯತೇ'**

(ವಿಜಯಧ್ವಜೀಯ)

**ಯಥಾ ಮಹಾನ್ತಿ....... ನ ತೇಷ್ವಹಮ್ ॥೩೪॥**

ಮಹಾಭೂತಗಳು ಭೌತಿಕಪದಾರ್ಥಗಳಲ್ಲಿ ಅನುಸೃಷ್ಟಿಯನಂತರ ಅವುಗಳೊಳಗೆ ಪ್ರವೇಶಮಾಡಿರುವಂತೆ ಅನಿಸುತ್ತದೆ. ಏಕೆಂದರೆ : ಅವುಗಳಲ್ಲಿ ಮಹಾಭೂತಗಳು ಇರುವುದು ಕಂಡುಬರುತ್ತದೆ. ಆದರೆ ವಾಸ್ತವವಾಗಿ ಅವು ಕಾರಣರೂಪದಲ್ಲಿ ಈ ಮೊದಲೂ ಅವುಗಳಲ್ಲಿ ಇದ್ದೇ ಇದ್ದುವು. ಆದ್ದರಿಂದ ಅವು ಅವುಗಳಲ್ಲಿ ಪ್ರವೇಶಮಾಡಿಲ್ಲ. ಹಾಗೆಯೇ ಆ ಭೂತ-ಭೌತಿಕಗಳಲ್ಲಿ ಪರಮಾತ್ಮನ ಸತ್ತೆಯು ಇದ್ದೇ ಇರುತ್ತದೆ–ಎಂದು ತಿಳಿಯಬೇಕು. **ಅಪ್ರವಿಷ್ಟಾನಿ–ಪ್ರಾಗೇವ ಕಾರಣತಯಾ ತೇಷು ವಿದ್ಯಮಾನತ್ವಾತ್ ತಥಾ ತೇಷು ಭೂತ-ಭೌತಿಕೇಷು ಅಹಂ ಏವಂಭೂತಾ ಮಮ ಸತ್ತಾ ಇತ್ಯರ್ಥಃ'** (ಶ್ರೀಧರೀಯ)

ಪಂಚಮಹಾಭೂತಗಳು ಭೌತಿಕದೇಹಗಳಲ್ಲಿ ಪ್ರವೇಶಮಾಡಿದ್ದರೂ, ಹೇಗೆ ಪ್ರವೇಶಮಾಡಿಲ್ಲಾ? ಎಂದರೆ : ದೇಹಕ್ಕೆ ಒದಗುವ ಕತ್ತರಿಸುವಿಕೆ, ಸುಡುವಿಕೆ, ನೆನೆಸುವಿಕೆ, ಒಣಗಿಸುವಿಕೆ–ಮುಂತಾದುವುಗಳು ಆ ಭೂತಗಳಿಗೆ

ಅನ್ವಯಿಸುವುದಿಲ್ಲ. ಹಾಗೆಯೇ ಪರಮಾತ್ಮನು ಎಲ್ಲ ಭೂತಗಳಲ್ಲಿಯೂ ಒಳಹೊಕ್ಕಿದ್ದರೂ ಅವುಗಳ ವಿಕಾರವು ಅವನಿಗೆ ಉಂಟಾಗುವುದಿಲ್ಲವಾದ್ದರಿಂದ ಅವನು ಪ್ರವೇಶಮಾಡಿಲ್ಲವೆಂದು ಹೇಳಬಹುದು. (ಚಂದ್ರಿಕಾ)

ಆಕಾಶ-ವಾಯು-ತೇಜಸ್ಸುಗಳು ನಾನಾವಿಧವಾದ ಮಡಕೆ ಮುಂತಾದ ಪದಾರ್ಥಗಳಲ್ಲಿ ಒಳಹೊಕ್ಕಿದ್ದರೂ—ಒಳಹೊಕ್ಕಿಲ್ಲವೆಂದು ಹೇಳಬಹುದು. ಏಕೆಂದರೆ : ಮಡಕೆಯನ್ನು ಒಡೆದರೆ ಅದರಿಂದ ಆ ಭೂತಗಳು ಒಡೆದು ಹೋಗುವುದಿಲ್ಲ. ಹಾಗೆಯೇ ನಾನು ಎಲ್ಲ ಚೇತನಾಚೇತನಗಳಲ್ಲಿಯೂ ಆತ್ಮರೂಪದಿಂದ ಅನುಪ್ರವಿಷ್ಟನಾಗಿದ್ದರೂ ಅವುಗಳ ದೋಷಗಳು ನನ್ನನ್ನು ಮುಟ್ಟುವುದಿಲ್ಲ. ಅಥವಾ ಪರಿಚ್ಛಿನ್ನವಾಗಿರುವ ಚೇತನಾಚೇತನಗಳಲ್ಲಿ ಒಳಹೊಕ್ಕಿದ್ದರೂ ಪರಮಾತ್ಮನು ಅಪರಿಚ್ಛಿನ್ನನಾಗಿರುತ್ತಾನೆ. ಒಳಹೋಗದೇ ಇರುವ ಪದಾರ್ಥಗಳು ಹೊರಗೂ ಇರುತ್ತವೆ. ಹಾಗೆಯೇ ಪರಮಾತ್ಮನು ಅವುಗಳ ಒಳಹೊಕ್ಕಿದ್ದರೂ ಅವುಗಳನ್ನು ಹೊರಗಡೆಯಿಂದಲೂ ವ್ಯಾಪಿಸಿಕೊಂಡಿದ್ದಾನೆ. 'ಅಂತರ್ಬಹಿಶ್ಚ ತತ್‌ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ'
(ವೀರರಾಘವೀಯ)

ಇಲ್ಲಿ ಭಗವಂತನು ತಮ್ಮ ವ್ಯಾಪ್ತಿಯನ್ನು ಉದಾಹರಣಸಹಿತ ಉಪದೇಶಿಸುತ್ತಾನೆ. ಪಂಚಮಹಾಭೂತಗಳು ತಮ್ಮ ಕಾರ್ಯಶರೀರಗಳಾಗಿರುವ ಚಿಕ್ಕ-ದೊಡ್ಡ ಭೌತಿಕದೇಹಗಳಲ್ಲಿ ಪ್ರವೇಶಮಾಡಿವೆ. ಆದರೆ ಅವುಗಳಿಗಿಂತಲೂ ಅಧಿಕವಾದ ವ್ಯಾಪ್ತಿಯನ್ನು ಹೊಂದಿರುವುದರಿಂದ ಅವುಗಳಲ್ಲಿ ಪ್ರವೇಶಮಾಡಿಲ್ಲವೆಂದೂ ಭಾವಿಸಬಹುದು. ಹಾಗೆಯೇ ನಾನೂ ಕೂಡ ಅನಂತ ದೇಶ-ಕಾಲಗಳಲ್ಲಿ ವ್ಯಾಪಿಸಿರುವುದರಿಂದ ಆ ಭೂತಗಳಲ್ಲಿ ಒಳಹೊಕ್ಕಿದ್ದೇನೆ ಮತ್ತು ಅವುಗಳಿಂದ ಹೊರಗೂ ಇರುವುದರಿಂದ ಅವುಗಳಲ್ಲಿ ಪ್ರವೇಶಮಾಡಿಯೂ ಇಲ್ಲ—ಎಂದು ಭಾವಿಸಬೇಕು. 'ಯಥಾಮಹಾನ್ತಿ ಭೂತಾನಿ ಶರೀರೇಷು ಬಹಿಸ್ತಥಾ' (ವಿಜಯಧ್ವಜೀಯ)

**ಏತಾವದೇವ.... ಸರ್ವದಾ ||೩೪||**

' ಅನ್ವಯ ' ಎನ್ನುವುದು ' ಉಂಟು ' ಎನ್ನುವ ರೂಪದಲ್ಲಿದೆ. 'ವ್ಯತಿರೇಕ ' ಎನ್ನುವುದು 'ಇಲ್ಲ' ಎಂಬ ನಿಷೇಧರೂಪದಲ್ಲಿರುತ್ತದೆ. ಈ

ಅನ್ವಯ-ವ್ಯತಿರೇಕಗಳಿಂದ ಸದಾ ಸರ್ವತ್ರ ಇರುವುದೇ ಪರಮಾತ್ಮತತ್ತ್ವ–ಎಂಬುದು ತಾತ್ಪರ್ಯ. ಈ ಅನ್ವಯ-ವ್ಯತಿರೇಕಗಳನ್ನು ನಾನಾರೀತಿಗಳಲ್ಲಿ ನಿರ್ವಹಿಸಬಹುದು : 'ಇದು ಬ್ರಹ್ಮವು ; ಇದು ಬ್ರಹ್ಮವು'–ಎಂಬ ರೀತಿಯದು ಅನ್ವಯ. 'ಇದು ಬ್ರಹ್ಮವಲ್ಲ ; ಇದು ಬ್ರಹ್ಮವಲ್ಲ' ಎಂಬ ರೀತಿಯದು ವ್ಯತಿರೇಕ. ಕಾರ್ಯಗಳಲ್ಲಿ ಕಾರಣರೂಪದಿಂದ ಅನುವರ್ತಿಸುವುದೇ ಅನ್ವಯವ್ಯಾಪ್ತಿಯು. ಉದಾಹರಣೆಗೆ–ಜೇಡಿಯ ಮಣ್ಣು ತನ್ನ ಕಾರ್ಯ ಗಳಾದ ನಾನಾ ಗಡಿಗೆ, ಮಡಕೆ, ತಟ್ಟೆ, ಬಟ್ಟಲು–ಇತ್ಯಾದಿಗಳಲ್ಲಿ ಉಪಾದಾನ ಕಾರಣವಾಗಿ ಅನುವರ್ತಿಸುತ್ತದೆ. ಕಾರಣಾವಸ್ಥೆಯಲ್ಲಿ ಅವುಗಳಿಂದ ವ್ಯತಿರಿಕ್ತವಾಗಿರುವುದೇ ವ್ಯತಿರೇಕವು. ಉದಾಹರಣೆಗೆ–ಕಾರ್ಯಪ್ರಪಂಚ ವಿಲ್ಲದಿರುವಾಗ ಪರಮಾತ್ಮನು ಅವಿಕೃತನಾಗಿ ಮೂಲಸುವರ್ಣದಂತೆ ಸ್ವರೂಪದಲ್ಲಿರುತ್ತಾನೆ. ಪರಮಾತ್ಮನು ಜಾಗ್ರತ್–ಸ್ವಪ್ನ ಮುಂತಾದ ಅವಸ್ಥೆಗಳಲ್ಲಿ ಅವುಗಳಿಗೆ ಸಾಕ್ಷಿಯಾಗಿ ಅನುವರ್ತಿಸುವುದು ಅನ್ವಯ. ಸಮಾಧಿಯಲ್ಲಿ ಎಲ್ಲರಿಂದಲೂ ವಿವಿಕ್ತನಾಗಿರುವುದು ವ್ಯತಿರೇಕ. (ಶ್ರೀಧರೀಯ)

ಪರಮಾತ್ಮನು ಕಾರಣರೂಪದಲ್ಲಿ ಜಗತ್ತಿನೊಡನೆ ಅನ್ವಯಸಂಬಂಧ ಹೊಂದಿದ್ದಾನೆ. ಅಖಿಲಹೇಯಪ್ರತ್ಯನೀಕಕಲ್ಯಾಣಗುಣೈಕಪರಿಪೂರ್ಣನಾಗಿರುವುದರಿಂದ ಉಳಿದ ಎಲ್ಲಕ್ಕಿಂತಲೂ ಆತನು ಭಿನ್ನನಾಗಿರುವುದು ವ್ಯತಿರೇಕ.
(ಚಂದ್ರಿಕಾ)

ಪರಸ್ಪರ ವಿಲಕ್ಷಣಸ್ವಭಾವವುಳ್ಳ ಚಿತ್-ಅಚಿತ್ ಎಲ್ಲಕ್ಕೂ ಅಂತರಾತ್ಮವಾಗಿರುವ ಭಗವತ್ಸ್ವರೂಪವನ್ನು ಅನ್ವಯ-ವ್ಯತಿರೇಕಗಳಿಂದ ತಿಳಿಯಬೇಕು ; ಅಯೋಗ ಮತ್ತು ಅನ್ಯಯೋಗವ್ಯವಚ್ಛೇದಗಳಿಂದ ತಿಳಿಯಬೇಕು. ಅಥವಾ ಅನ್ವಯ ಎಂದರೆ ಇರುವಿಕೆ ; ಚಿದಚಿಚ್ಛರೀರಕನಾದ ಪರಮಾತ್ಮನೇ ಕಾರಣರೂಪ ಮತ್ತು ಕಾರ್ಯರೂಪಗಳೆರಡರಲ್ಲೂ ಇರುತ್ತಾನೆ ಎಂಬುದು. ವ್ಯತಿರೇಕ ಎಂದರೆ ಇಲ್ಲದಿರುವಿಕೆ ; ಚಿದಚಿಚ್ಛರೀರಕನಾದ ಪರಮಾತ್ಮನನ್ನು ಬಿಟ್ಟು ಬೇರೇನೂ ಇಲ್ಲ–ಎಂಬುದು.

ಹೀಗೆ ಪರಮಾತ್ಮನನ್ನು ಅರಿತರೆ ಎಲ್ಲವನ್ನೂ ಅರಿತಂತೆ. 'ಏಕ ವಿಜ್ಞಾನೇನ ಸರ್ವವಿಜ್ಞಾನಂ'–ಎಂಬ ನ್ಯಾಯದಿಂದ ಅವನನ್ನು ತಿಳಿದ ಬಳಿಕ ತಿಳಿಯಲು ಬೇರೇನೂ ಉಳಿಯುವುದಿಲ್ಲ. ಪ್ರಧಾನವಾಗಿ ತಿಳಿಯಲ್ಪಡ

ಬೇಕಾದುದು ಭಗವತ್ಸ್ವರೂಪ. ಚೇತನಾಚೇತನಗಳು ಆತನ ವಿಭೂತಿಗಳೇ ಆಗಿವೆ. ಅವುಗಳ ಜ್ಞಾನವು ಭಗವದ್‌ಜ್ಞಾನದಲ್ಲೇ ಅಂತರ್ಗತವಾಗುವುದ ರಿಂದ '**ಆತ್ಮತತ್ತ್ವಂ**'–ಎಂಬ ಪದವನ್ನು ಬಳಸಿದೆ. (ವೀರರಾಘವೀಯ)

ಸರ್ವಜ್ಞವೆನಿಸಿದ ಯಾವ ಪರತತ್ತ್ವವು ಸರ್ವದೇಶ-ಸರ್ವಕಾಲ ಗಳಲ್ಲೂ ಏಕಪ್ರಕಾರವಾಗಿ ತನ್ನ ಗುಣಗಳಿಂದಲೂ, ಕ್ರಿಯೆಗಳಿಂದಲೂ ವ್ಯಾಪಕವಾಗಿದೆಯೋ–ಅದೇ ಪರಮಾತ್ಮತತ್ತ್ವವು. '**ಸರ್ವದೇಶ–ಸರ್ವ ಕಾಲಯೋರೇಕಪ್ರಕಾರೇಣ ಗುಣಕ್ರಿಯಾಭಿಃ ವ್ಯಾಪ್ತಮಿತಿವಿಚಾರ್ಯ**' (ಅನ್ವಯ–ಬೇರೆ ವಸ್ತು ಇರುವಿಕೆ ; ವ್ಯತಿರೇಕ–ಬೇರೆ ವಸ್ತು ಇಲ್ಲದಿರುವಿಕೆ.) (ವಿಜಯಧ್ವಜೀಯ)

ಈ ಚತುಃಶ್ಲೋಕೀಭಾಗವತವನ್ನು ಮೂಲಭಾಗವತವೆಂದೂ ಕರೆಯು ತ್ತಾರೆ. 'ಪರಮಕಲ್ಯಾಣವನ್ನು ಬಯಸುವವರು ಯಾವುದು ಸ್ವಯಂ ಪ್ರಕಾಶವಾಗಿ, ಜಗತ್ಕಾರಣವಾಗಿ, ನಿತ್ಯಸಿದ್ಧವಾಗಿದೆಯೋ–ಅಂತಹ ಪರತತ್ತ್ವ ವನ್ನು ತಿಳಿಯಬೇಕು'–ಎಂಬುದು ಇದರ ಸಾರಾಂಶ. ಈ ನಾಲ್ಕು ಶ್ಲೋಕ ಗಳಲ್ಲಿ ಇಡೀ ಭಾಗವತದ ಅಭಿಪ್ರಾಯವು ಅಡಕವಾಗಿದೆ. ಹೇಗೆಂದರೆ : '**ಅಹಮೇವಾಸಮೇವಾಗ್ರೇ**' (ಶ್ಲೋಕ ೩೨) – ಎಂಬುದು ಶ್ರೀಮದ್ಭಾಗ ವತದ ಪ್ರತಿಪಾದ್ಯವಸ್ತುವು. ಇದು ಸರ್ವಕಾರಣ, ಸರ್ವಸ್ವರೂಪ ಮತ್ತು ಸರ್ವಶರೀರಗಳೆಂಬ ಆಶಯವನ್ನೂ ಮತ್ತು ೧೨ನೆಯ ಸ್ಕಂಧದ ಸಾರವನ್ನೂ ಸೂಚಿಸುತ್ತದೆ. '**ಪಶ್ಚಾದಹಂ**'–ಎಂಬುದು ೭ನೆಯ ಮತ್ತು ೩ನೆಯ ಸ್ಕಂಧಗಳಲ್ಲಿ ನಿರೂಪಿತವಾಗುವ ಪುರುಷ-ಪ್ರಕೃತಿ ಇತ್ಯಾದಿಗಳನ್ನು ಸೂಚಿಸು ತ್ತದೆ. '**ಯದೇತಚ್ಚ**'–ಎಂಬ ಶ್ಲೋಕಭಾಗವು ೪, ೫, ೭, ೮, ೯ನೆಯ ಸ್ಕಂಧಗಳಲ್ಲಿ ಹೇಳುವ ಸೃಷ್ಟಿ-ಸ್ಥಿತಿ-ಲೀಲೆ-ಮನ್ವಂತರಾದಿ ಕಥೆಗಳನ್ನು ನಿರ್ದೇಶಿಸುತ್ತದೆ. '**ಯೋಽವಶಿಷ್ಯೇತ ಸೋಽಸ್ಮ್ಯಹಮ್**'–ಎಂಬುದು ೧೦ನೆಯ ಸ್ಕಂಧದಲ್ಲಿ ಬರುವ 'ನಿರೋಧ'ವನ್ನು ಸೂಚಿಸುತ್ತದೆ. '**ಋತೇಽರ್ಥಂ ಯತ್ಪ್ರತೀಯೇತ**'–ಎಂಬುದು ಪ್ರಥಮಸ್ಕಂಧದಲ್ಲಿಯೂ, ಇತರ ನಾನಾಸಂದರ್ಭಗಳಲ್ಲಿಯೂ ಬರುವ ಮಾಯೆ, ಸೃಷ್ಟಿ, ಸಂಸಾರ ಪ್ರಾಪ್ತಿ, ಜೀವ-ಪರಮಾತ್ಮರ ವಿಭಾಗ–ಇತ್ಯಾದಿ ವಿಷಯಗಳನ್ನು ಸಂಗ್ರಹಿಸು ತ್ತದೆ. '**ಯಥಾ ಮಹಾನ್ತಿ ಭೂತಾನಿ**'–ಎಂಬುದು ೬ನೆಯ ಸ್ಕಂಧದಲ್ಲಿ

ಹೇಳುವ ಪೋಷಣವನ್ನು ಸೂಚಿಸುತ್ತದೆ. 'ಏತಾವದೇವ ಜಿಜ್ಞಾಸ್ಯಂ' ಎಂಬುದು ೧೧ನೆಯ ಸ್ಕಂಧದಲ್ಲಿ ನಿರೂಪಿತವಾಗಿರುವ ಮುಕ್ತಿಯನ್ನು ಸೂಚಿಸುವುದು. (ಶ್ರೀಮೋಟಗಾನಹಳ್ಳಿ ಸಂಸ್ಕರಣ)

ದ್ವಿತೀಯಸ್ಕಂಧ ೧೦ನೆಯ ಅಧ್ಯಾಯ

## ಶ್ರೀಮದ್ಭಾಗವತದ ಹತ್ತು ಲಕ್ಷಣಗಳು

ಶ್ರೀಶುಕಮಹರ್ಷಿಗಳು ಹೇಳುತ್ತಾರೆ :

**ಅತ್ರ ಸರ್ಗೋ ವಿಸರ್ಗಶ್ಚ ಸ್ಥಾನಂ ಪೋಷಣಮೂತಯಃ ।**
**ಮನ್ವನ್ತರೇಶಾನುಕಥಾ ನಿರೋಧೋ ಮುಕ್ತಿರಾಶ್ರಯಃ ॥೧॥**

"ರಾಜೇಂದ್ರನೇ! ಈ ಶ್ರೀಮದ್ಭಾಗವತದಲ್ಲಿ ಸರ್ಗ, ವಿಸರ್ಗ, ಸ್ಥಾನ, ಪೋಷಣ, ಊತಿ, ಮನ್ವಂತರ, ಈಶಾನುಕಥೆ, ನಿರೋಧ, ಮುಕ್ತಿ ಮತ್ತು ಆಶ್ರಯ–ಎಂಬ ಈ ಹತ್ತು ವಿಷಯಗಳ ವರ್ಣನೆಯಿದೆ.

ಇದರಲ್ಲಿ ಹತ್ತನೆಯದಾದ ಯಾವ 'ಆಶ್ರಯತತ್ತ್ವ' ವುಂಟೋ ಅದನ್ನು ಪಡೆಯುವುದಕ್ಕಾಗಿಯೇ ಉಳಿದ ಒಂಬತ್ತು ತತ್ತ್ವಗಳ ಸ್ವರೂಪವನ್ನು ಶ್ರುತಿಯಿಂದಲೂ, ತಾತ್ಪರ್ಯದಿಂದಲೂ, ಅವೆರಡಕ್ಕೂ ಅನುಕೂಲ ವಾಗಿರುವ ಅನುಭವದಿಂದಲೂ–ಮಹಾತ್ಮರು ವರ್ಣನೆಮಾಡಿದ್ದಾರೆ. ಇವು ಗಳಲ್ಲಿ ಗುಣಗಳ ಕ್ಷೋಭೆಯಿಂದ ರೂಪಾಂತರಹೊಂದಿದ ಆಕಾಶಾದಿ ಪಂಚಮಹಾಭೂತಗಳು, ಶಬ್ದವೇ ಮುಂತಾದ ಪಂಚತನ್ಮಾತ್ರೆಗಳು, ಇಂದ್ರಿಯಗಳು, ಅಹಂಕಾರ ಮತ್ತು ಮಹತ್ತತ್ತ್ವ–ಇವುಗಳ ಯಾವ ಉತ್ಪತ್ತಿ ಯುಂಟೋ–ಅದನ್ನು 'ಸರ್ಗ' ಎಂದು ಕರೆಯುತ್ತಾರೆ. ಆ ಬ್ರಹ್ಮದೇವರು ನಿರ್ಮಿಸಿದ ಚರಾಚರಗಳ ಸೃಷ್ಟಿಗೆ 'ವಿಸರ್ಗ' ಎಂದು ಹೆಸರು. ವಿರಾಟ್ ಪುರುಷನಿಂದ ಉತ್ಪನ್ನವಾದ ಸೃಷ್ಟಿಯನ್ನು ವೈಕುಂಠಪತಿಯಾದ ಮಹಾ ವಿಷ್ಣುವು ಒಂದು ಮರ್ಯಾದೆಯಲ್ಲಿ ಕಾಪಾಡುವುದೇ 'ಸ್ಥಾನ' ಎನಿಸು ವುದು. ಭಗವಂತನು ಭಕ್ತರನ್ನು ಅನುಗ್ರಹಿಸುವುದನ್ನು 'ಪೋಷಣ' ಎನ್ನುತ್ತಾರೆ. ಮನ್ವಂತರಾಧಿಪತಿಗಳ ಶುದ್ಧಧರ್ಮಮಯವಾದ ಚರಿತ್ರೆಯು 'ಮನ್ವಂತರ' ಎನಿಸುತ್ತದೆ. ಜೀವಗಳನ್ನು ಕರ್ಮಗಳ ಮೂಲಕ ಬಂಧನಕ್ಕೆ ಸಿಕ್ಕಿಸುವ ಕರ್ಮವಾಸನೆಗಳಿಗೆ 'ಊತಿ' ಎಂದು ಹೆಸರು. ಬಗೆ-ಬಗೆಯ

ಉಪಾಖ್ಯಾನಗಳಿಂದ ಕೂಡಿದ ಶ್ರೀಭಗವಂತನ ಅವತಾರಕಥೆಗಳನ್ನೂ ಮತ್ತು ಆತನ ಭಕ್ತರ ಚರಿತ್ರೆಗಳನ್ನೂ 'ಈಶಾನುಕಥೆ'ಯೆಂದು ಕರೆಯುತ್ತಾರೆ. ಭಗವಂತನು ಯೋಗನಿದ್ರೆಯನ್ನು ಮಾಡುತ್ತಿರುವಾಗ ಜೀವನು ತನ್ನ ಉಪಾಧಿಗಳೊಡನೆ ಆತನಲ್ಲಿ ಲಯವನ್ನು ಪಡೆಯುವುದೇ 'ನಿರೋಧ'* ಎನಿಸುತ್ತದೆ. ಜೀವನು ರೂಪಾಂತರವನ್ನು ಬಿಟ್ಟು ಸ್ವಸ್ವರೂಪದಲ್ಲಿ ನೆಲೆಗೊಳ್ಳುವುದನ್ನು 'ಮುಕ್ತಿ' ಎನ್ನುತ್ತಾರೆ. ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳು ಯಾವ ತತ್ತ್ವದಿಂದ ಹೊರಹೊಮ್ಮುತ್ತವೆಯೋ–ಆ ಪರಬ್ರಹ್ಮವೇ 'ಆಶ್ರಯ' ಎನಿಸುತ್ತದೆ. ಅದನ್ನೇ ಪರಮಾತ್ಮನೆಂದೂ ಶಾಸ್ತ್ರಗಳು ಕರೆಯುತ್ತವೆ. ಕಣ್ಣು ಮುಂತಾದ ಇಂದ್ರಿಯಗಳಿಗೆ ಅಭಿಮಾನಿಯಾಗಿ ಅವುಗಳಿಂದ ನೋಡುವ ಜೀವನೇ 'ಆಧ್ಯಾತ್ಮಿಕಪುರುಷ'ನು. ಆ ಇಂದ್ರಿಯದಲ್ಲಿ ನೆಲೆಸಿರುವ ಸೂರ್ಯನೇ ಮುಂತಾದ ಅಧಿಷ್ಠಾತೃದೇವತೆಗಳು 'ಆಧಿದೈವಿಕ' ಎನಿಸು ತ್ತಾರೆ. ಇವೆರಡಕ್ಕೂ ಆಶ್ರಯವಾದ ಕಣ್ಣಿನ ಗೋಳಕ ಮುಂತಾದುವುಗಳಿಂದ ಕೂಡಿ ಜೀವನಿಗೆ ಉಪಾಧಿಯಾಗಿರುವ ದೃಶ್ಯಶರೀರವೇ 'ಆಧಿಭೌತಿಕ'ವೆಂದೆನಿಸುತ್ತದೆ. ಇವು ಮೂರೂ ಒಂದನ್ನೊಂದು ಆಶ್ರಯಿಸಿರುವುದರಿಂದ ಇವು ಯಾವುವೂ ಸರ್ವಾಶ್ರಯವಲ್ಲ. ಈ ಮೂರನ್ನೂ

---

* ನಿರೋಧಃ = ಜೀವಸಮುದಾಯವು ಪ್ರಕಾಶಿತವಾದ ತನ್ನ ಸ್ವರೂಪ, ಇಚ್ಛೆ ಮುಂತಾದ ಶಕ್ತಿಗಳೊಡನೆ ಶಯನಿಸುತ್ತಿರುವ ಶ್ರೀಮಹಾವಿಷ್ಣುವಿನಲ್ಲಿ ಸೇರಿ ನಿದ್ರಿಸುವುದು. '**ಅನುಪ್ರವಿಶ್ಯ ಪರಮಂ ಜೀವಸ್ಯ ಶಯನಂ ತು ಯತ್ । ಸಹೈವ ಶಕ್ತಿಭಿಃ ಸ್ವೀಯೈಃ ಇಚ್ಛಾದ್ಯೈವರಪ್ರಕಾಶಿತೈಃ॥**' (ವಿಜಯಧ್ವಜೀಯ)

ಜೀವವು ತನ್ನ ಕರ್ಮಸಂಸ್ಕಾರಗಳೊಡನೆ ಸೂಕ್ಷ್ಮಾವಸ್ಥೆಯಲ್ಲಿರುವ ಪ್ರಕೃತಿಯಲ್ಲಿ ಸೇರುವುದೇ ನಿರೋಧ. (ವೀರರಾಘವೀಯ)

**ಮುಕ್ತಿಃ**– ಅನ್ಯಥಾಭಾವವನ್ನು ಬಿಟ್ಟು ಸ್ವಸ್ವರೂಪದಲ್ಲಿ ನೆಲೆಸುವಿಕೆ. ಹೋಲಿಕೆ : '**ತದಾ ದ್ರಷ್ಟುಃ ಸ್ವರೂಪೇಽವಸ್ಥಾನಂ**' ( ಯೋಗಸೂತ್ರ )

"ಅವಿದ್ಯೆಯಿಂದ ತನ್ನಲ್ಲಿ ಆರೋಪಿತವಾಗಿರುವ ಕರ್ತೃತ್ವ-ಭೋಕ್ತೃತ್ವ ಮುಂತಾದುವುಗಳನ್ನು ತೊರೆದು ಸ್ವಸ್ವರೂಪವಾದ ಬ್ರಾಹ್ಮೀಭಾವವನ್ನು ಪಡೆಯುವುದೇ ಮುಕ್ತಿಯು. (ಶ್ರೀಧರೀಯ)

ನಿತ್ಯನೂ, ಜ್ಞಾನಾನಂದಮಯಸ್ವರೂಪನೂ ಆದ ಜೀವನು ಕರ್ಮಕಲ್ಪಿತವಾದ

ತಿಳಿಯುವ ಪರಮಾತ್ಮನೇ ಸರ್ವಾಶ್ರಯನು.* ತನಗೆ ತಾನೇ ಆಶ್ರಯನಾಗಿ ಉಳಿದ ಎಲ್ಲಕ್ಕೂ ಆಶ್ರಯವಾಗಿರುವ 'ಆಶ್ರಯ' ಆತನೇ. (ಶ್ಲೋಕ 2-9)

ಸರ್ವಾಶ್ರಯನಾಗಿರುವ ಆ ಪರಮಾತ್ಮನ ಸ್ವರೂಪವನ್ನು ತಿಳಿಯುವುದಕ್ಕಾಗಿ ಉಳಿದ ಸರ್ಗವೇ ಮುಂತಾದ ಒಂಬತ್ತು ಲಕ್ಷಣಗಳನ್ನು ಹೇಳಿದೆ.

ವಿರಾಟ್‌ಪುರುಷನಿಂದ ಈ ಜಗತ್ತು ಹೇಗೆ ಉಂಟಾಯಿತು?– ಎಂದು ಕೇಳಿದೆಯಲ್ಲವೇ? ಅದಕ್ಕೆ ಉತ್ತರವನ್ನು ಹೇಳುವೆನು, ಕೇಳು :

ಸೃಷ್ಟಿಯ ಪ್ರಾರಂಭದಲ್ಲಿ ಭಗವಂತನು ತಾನು ಸೃಷ್ಟಿಸಿದ ಅಂಡವನ್ನು ಭೇದಿಸಿಕೊಂಡು ಹೊರಗೆ ಬಂದು ತಾನು ನೆಲೆಸುವುದಕ್ಕೆ ಸ್ಥಾನ ಯಾವುದು? ಎಂಬುದನ್ನು ಹುಡುಕತೊಡಗಿದನು. ಅದಕ್ಕಾಗಿ ಶುದ್ಧಸಂಕಲ್ಪನಾದ ಆ ಪುರುಷನು ಪರಿಶುದ್ಧವಾದ 'ಜಲ'ವನ್ನು ಸೃಷ್ಟಿಸಿದನು. ವಿರಾಟ್ ಪುರುಷರೂಪನಾದ 'ನರ'ನಿಂದ ಉತ್ಪನ್ನವಾದ್ದರಿಂದ ಜಲಕ್ಕೆ 'ನಾರಾ' ಎಂದು ಹೆಸರಾಯಿತು. ತಾನು ನಿರ್ಮಿಸಿದ ಆ ನಾರವನ್ನು ನೆಲೆಯ ಜಾಗವನ್ನಾಗಿ ಮಾಡಿಕೊಂಡು ಅದರಲ್ಲಿ ಆತನು ಸಾವಿರಾರು ವರ್ಷಗಳವರೆಗೂ

---

ದೇವ-ಮನುಷ್ಯಾದಿರೂಪಗಳನ್ನು ಬಿಟ್ಟು ಮತ್ತೆ ಸ್ವಸ್ವರೂಪವಾದ ಜ್ಞಾನ, ಆನಂದ, ಅಮಲತ್ವಾದಿ ರೂಪಗಳಲ್ಲಿ ನಿಲ್ಲುವುದು ಮುಕ್ತಿ. (ಚಂದ್ರಿಕಾ)

ಪ್ರಾಕೃತಸೂಕ್ಷ್ಮ-ಸ್ಥೂಲೇಂದ್ರಿಯಾದಿಗಳನ್ನು ಬಿಟ್ಟು ತನ್ನ ಕೇವಲ ಚಿದಾನಂದ ಸ್ವರೂಪದಲ್ಲಿ ವಿಶೇಷವಾಗಿ ಇರುವಿಕೆಯೇ ಮುಕ್ತಿಯು. (ವಿಜಯಧ್ವಜೀಯ) (ಶ್ಲೋಕ ೬)

* ಪರಮಾತ್ಮನೇ ಸರ್ವಾಶ್ರಯನು. ಆಧ್ಯಾತ್ಮಿಕ-ಆಧಿಭೌತಿಕ-ಆಧಿದೈವಿಕಗಳು ಒಂದನ್ನೊಂದು ಆಶ್ರಯಿಸಿವೆ. ಉದಾ. : ಘಟ, ಪಟ, ಗೋಡೆ–ಮುಂತಾದ ದೃಶ್ಯವಾದ ಭೌತಿಕವಸ್ತುಗಳೇ ಇಲ್ಲದಿದ್ದರೆ ಅವುಗಳನ್ನು ಗ್ರಹಿಸುವ ಇಂದ್ರಿಯಗಳಾಗಲೀ, ದರ್ಶಿಸುವ ಆತ್ಮನಾಗಲೀ ಸಿದ್ಧಿಸುವುದಿಲ್ಲ. ಆ ಇಂದ್ರಿಯಗಳಿಲ್ಲದಿದ್ದರೆ ಅವುಗಳ ಅಧಿಷ್ಠಾತೃಗಳಾದ ಸೂರ್ಯಾದಿ ದೇವತೆಗಳು ಇರುವರೆಂದು ಹೇಳಲಿಕ್ಕಾಗುವುದಿಲ್ಲ. ಆ ಅಧಿಷ್ಠಾತೃಗಳಾದ ಇಂದ್ರಿಯಗಳು ತಮ್ಮ-ತಮ್ಮ ಕಾರ್ಯಗಳನ್ನು ಮಾಡಲಾರವು. ಆ ಇಂದ್ರಿಯಗಳಿಲ್ಲದೇ ಪದಾರ್ಥಗಳು ಗೋಚರವಾಗುವುದಿಲ್ಲ. ಇವುಗಳಲ್ಲಿ ಒಂದಿಲ್ಲದೇ ಮತ್ತೊಂದನ್ನು ತಿಳಿಯಲಾಗುವುದಿಲ್ಲ. ಆದ್ದರಿಂದ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆನಿಸಿದ ಈ ಮೂರೂ ಆತ್ಮನಿಂದ ಭಿನ್ನವೇ ಆಗಿವೆ. ಈ ಮೂರನ್ನೂ ಜ್ಞಾನವಿಶೇಷದಿಂದ ಸಾಕ್ಷಿಯಾಗಿ ತಿಳಿಯುವವನು ಜೀವ. ಅವನು ಇವುಗಳಿಗೆಲ್ಲಾ ಆಶ್ರಯನು. ಆ ಜೀವಕ್ಕೂ ಆಶ್ರಯನು ಪರಮಾತ್ಮ. ಹೀಗೆ ಸ್ವಾಶ್ರಯ

ಪವಡಿಸಿದ್ದರಿಂದ ಆತನು 'ನಾರಾಯಣ'* ಎನಿಸಿದನು. ಭಗವಂತನಾದ ಆ ನಾರಾಯಣನ ಅನುಗ್ರಹದಿಂದಲೇ ದ್ರವ್ಯ, ಕರ್ಮ, ಕಾಲ, ಸ್ವಭಾವ ಮತ್ತು ಜೀವ–ಮುಂತಾದುವುಗಳು ತಮ್ಮ-ತಮ್ಮ ಕಾರ್ಯಗಳನ್ನು ನಡೆಸುತ್ತಿವೆ. ಆತನು ಉಪೇಕ್ಷೆಮಾಡಿದರೆ ಅವುಗಳಿಗೆ ಅಸ್ತಿತ್ವವೇ ಇಲ್ಲ. ಮಹತ್ತಿನಿಂದ ಪೃಥಿವಿಯವರೆಗಿನ ದ್ರವ್ಯಗಳು, ಪ್ರಾಣಿಗಳ ಜನ್ಮಾದಿಗಳಿಗೆ ಕಾರಣವಾದ ಕರ್ಮ, ಸತ್ತ್ವಾದಿಗುಣಗಳ ಬದಲಾವಣೆಗೆ ಕಾರಣವಾದ ಕರ್ಮ, ಪ್ರಕೃತಿಯ ಪರಿಣಾಮಹೊಂದುವಿಕೆಯೇ ಮುಂತಾದ ಸ್ವಭಾವ, ಸುಖ-ದುಃಖಾದಿಗಳನ್ನು ಅನುಭವಿಸುವ ಜೀವ–ಇವೆಲ್ಲದರ ಅಸ್ತಿತ್ವವೂ ಆ ನಾರಾಯಣನಿಂದಲೇ. ಹೀಗೆ ಸರ್ವಾಶ್ರಯನಾದ ಆ ನಾರಾಯಣನು ಯೋಗನಿದ್ರೆಯಿಂದ ಎಚ್ಚೆತ್ತು ತಾನು ಬಹುವಾಗಬೇಕು ಎಂದು ಸಂಕಲ್ಪಮಾಡಿದನು. ಆಗ ತನ್ನ ಮಾಯೆ ಯಿಂದ ಅಖಿಲಬ್ರಹ್ಮಾಂಡದ ಬೀಜಸ್ವರೂಪವಾದ ತನ್ನ ಸುವರ್ಣಮಯ ವಾದ ವೀರ್ಯವನ್ನು ಅಧಿದೈವ, ಅಧ್ಯಾತ್ಮ ಮತ್ತು ಅಧಿಭೂತ–ಎಂದು ಮೂರು ಭಾಗಗಳನ್ನಾಗಿ ವಿಭಾಗಿಸಿದನು. ಅವುಗಳಲ್ಲಿ ದಿಕ್ಕು ಮುಂತಾದ ಅಭಿಮಾನಿದೇವತೆಗಳಿಂದ ಕೂಡಿದ ಹನ್ನೊಂದು ಇಂದ್ರಿಯಗಳು ಅಧಿದೇವ ವೆಂದೂ, ಜೀವನು ಅಧ್ಯಾತ್ಮನೆಂದೂ, ಪೃಥಿವಿಯೇ ಮುಂತಾದುವುಗಳಲ್ಲಿ ರುವ ಗಂಧವೇ ಮುಂತಾದ ಗುಣಗಳು ಅಧಿಭೂತವೆಂದೂ ಕರೆಯಲ್ಪಡುವುವು.

---

ನಾಗಿ, ಸರ್ವಕ್ಕೂ ಆಶ್ರಯನಾಗಿರುವವನು ಪರಮಾತ್ಮನೇ. ಇಂದ್ರಿಯಗಳಾಗಲೀ, ಪ್ರಕಾಶವಾಗಲೀ, ಅವುಗಳಿಗೆ ವಿಷಯಗಳಾದ ಗಡಿಗೆಯೇ ಮುಂತಾದ ಪದಾರ್ಥಗಳಾ ಗಲೀ–ಈ ಮೂರರಲ್ಲಿ ಯಾವುದಾದರೂ ಒಂದು ಇಲ್ಲದಿದ್ದರೂ ನಮಗೆ ಗಡಿಗೆಯೇ ಮುಂತಾದುವುಗಳ ಅರಿವು ಉಂಟಾಗುವುದಿಲ್ಲ. ಆದುದರಿಂದ ನಾವೆಲ್ಲರೂ ಅಸ್ವತಂತ್ರರೇ. ಈ ಮೂರನ್ನೂ ತಿಳಿಯಬಲ್ಲ ಪರಮಾತ್ಮನೇ ಸರ್ವಾಶ್ರಯನು. ಸುಷುಪ್ತಿ ಮುಂತಾದು ವುಗಳಲ್ಲೂ ಇಂದ್ರಿಯಪ್ರಕಾಶ ವಿಷಯಗಳ ಅಪೇಕ್ಷೆಯೇ ಇಲ್ಲದೇ ಜೀವರಿಗೆ ಸಂಬಂಧಿಸಿದ ಎಲ್ಲವನ್ನೂ ಸ್ವರೂಪಜ್ಞಾನದಿಂದಲೇ ತಿಳಿಯುವವನು ಆತನೇ.

(ವಿಜಯಧ್ವಜೀಯ) (ಶ್ಲೋಕ ೯)

* ನರೋತ್ಪನ್ನಾ ನಾರಾಃ, ನಾರಾಃ ಅಯನಂ ಯಸ್ಯ ಸಃ = ನಾರಾಯಣಃ ।
ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ಅಯನಂ ತಸ್ಯ ತಾಃ ಪ್ರೋಕ್ತಾಃ ತೇನ ನಾರಾಯಣಃ ಸ್ಮೃತಃ ॥

(ಮನುಸ್ಮೃತಿಃ) (ಶ್ಲೋಕ ೧೧)

ವಿರಾಟ್‌ಪುರುಷನ ಒಂದೇ ವೀರ್ಯವೇ ಹೇಗೆ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿತು ಎಂಬುದನ್ನು ಹೇಳುತ್ತೇನೆ ; ಕೇಳು : (ಶ್ಲೋಕ 10-14)

ಆ ವಿರಾಟ್‌ಪುರುಷನು ಕ್ರಿಯಾಶಕ್ತಿಯಿಂದ ದೇಹವನ್ನು ಅಲ್ಲಾಡಿಸಿದಾಗ ಆ ದೇಹದಲ್ಲಿದ್ದ ಆಕಾಶದಿಂದ ಇಂದ್ರಿಯಶಕ್ತಿ, ಮನಶ್ಶಕ್ತಿ ಮತ್ತು ಶರೀರಶಕ್ತಿಗಳು ಉಂಟಾದುವು. ಅವುಗಳಿಂದ ಅವೆಲ್ಲದರ ಪ್ರಭುವಾದ, ಸೂತ್ರಾತ್ಮಕನಾದ ಮಹಾಪ್ರಾಣನು ಹುಟ್ಟಿದನು.

**ಅನು ಪ್ರಾಣನ್ತಿ ಯಂ ಪ್ರಾಣಾಃ ಪ್ರಾಣನ್ತಂ ಸರ್ವಜನ್ತುಷು ।**
**ಅಪಾನನ್ತಮಪಾನನ್ತಿ ನರದೇವಮಿವಾನುಗಾಃ ॥೧೬॥**

ಸೇವಕರು ತಮ್ಮ ಪ್ರಭುವಿನ ಹಿಂದೆ-ಹಿಂದೆ ನಡೆಯುವಂತೆ–ಶರೀರ ದಲ್ಲಿ ಎಲ್ಲ ಇಂದ್ರಿಯಗಳೂ ಪ್ರಾಣದ ಹಿಂದೆ-ಹಿಂದೆ ನಡೆಯುತ್ತವೆ. ಪ್ರಾಣವು ಪ್ರಾಣಿಸಿದರೆ–ಬಲಯುಕ್ತವಾಗಿದ್ದರೆ, ಇಂದ್ರಿಯಗಳಿಗೆ ಬಲ. ಅದು ಅಪಾನಿಸಿ ದರೆ–ಬಲಹೀನವಾದರೆ, ಇಂದ್ರಿಯಗಳೂ ಬಲಹೀನವಾಗಿಬಿಡುತ್ತವೆ.

ಎಲ್ಲ ಇಂದ್ರಿಯಗಳೂ ಪ್ರಾಣದ ವ್ಯಾಪಾರವನ್ನನುಸರಿಸಿ ತಮ್ಮ-ತಮ್ಮ ಕಾರ್ಯಗಳನ್ನು ಮಾಡುವುವು. ಪ್ರಾಣದ ವ್ಯಾಪಾರವು ನಿಂತಿತೆಂದರೆ ಇಂದ್ರಿಯ ವ್ಯಾಪಾರಗಳೂ ನಿಂತುಹೋಗುವುವು. ಪ್ರಾಣವಾಯುವು ವೇಗ- ವೇಗವಾಗಿ ಕೆಲಸಮಾಡತೊಡಗಿದಾಗ ವಿರಾಟ್‌ಪುರುಷನಿಗೆ ಹಸಿವು-ಬಾಯಾ ರಿಕೆಗಳುಂಟಾದುವು. ಅವುಗಳನ್ನು ಶಮನಗೊಳಿಸಲು ಆಹಾರ-ಪಾನೀಯ ಗಳನ್ನು ಸೇವಿಸಬೇಕೆಂಬ ಆಸೆ ಅವನಿಗೆ ಉಂಟಾಗಲು–ಒಡನೆಯೇ ಅವನ ದೇಹದಲ್ಲಿ ಎಲ್ಲಕ್ಕಿಂತಲೂ ಮೊದಲು ಬಾಯಿ ಪ್ರಕಟವಾಯಿತು. ಅದರಿಂದ ಅಣ್ಣಾಲಿಗೆಯೂ (ದವಡೆಯೂ) ನಂತರ ರಸಗಳನ್ನು ಗ್ರಹಿಸುವ ಇಂದ್ರಿಯ ವಾದ ನಾಲಿಗೆಯೂ ಕಾಣಿಸಿಕೊಂಡುವು. ಬಳಿಕ ಉಪ್ಪು-ಹುಳಿ ಮುಂತಾದ ಬಗೆ-ಬಗೆಯ ರಸಗಳೂ, ರಸಾಭಿಮಾನಿಯಾದ ವರುಣದೇವರೂ ಉಂಟಾ ದರು. ಆ ಪುರುಷನಿಗೆ ಮಾತನಾಡಬೇಕೆಂಬ ಇಚ್ಛೆಯುಂಟಾಗಲು–ಆಗ ವಾಗಿಂದ್ರಿಯವೂ, ಅದರ ಅಧಿಷ್ಠಾತೃದೇವತೆಯಾದ ಅಗ್ನಿಯೂ ಮತ್ತು ಅವು ಗಳ ವಿಷಯವಾದ 'ಮಾತು' ಎಂಬ ವ್ಯಾಪಾರವೂ ಉಂಟಾದುವು.* ಇದಾದ

---

* ಮಾತು ಎಂಬ ವ್ಯಾಪಾರವು ಉಂಟಾದನಂತರ ಅವೆಲ್ಲಕ್ಕೂ ಆಶ್ರಯವಾದ ಕಂಠವು ಉಂಟಾಯಿತು. ಪ್ರಾಣವಾಯುವಿಗೆ ಕಂಠದಲ್ಲಿಯೇ ಬಹಳ ಕಾಲ ತಡೆಯುಂಟಾ

ಬಳಿಕ ಬಹಳ ದಿವಸಗಳವರೆಗೆ ಜಲದಲ್ಲಿಯೇ ಆತನು ತನ್ನನ್ನು ತಡೆದು ಕೊಂಡಿದ್ದನು. ಆಗ ಶ್ವಾಸದ ವೇಗದಿಂದ ಅದರ ಓಡಾಟದ ಮಾರ್ಗವಾಗಿ ಮೂಗಿನ ಹೊಳ್ಳೆಗಳು ಉಂಟಾದುವು. ಅವುಗಳ ಮೂಲಕ ವಾಸನೆ ನೋಡುವ ಆಸೆಯು ಆತನಿಗೆ ಉಂಟಾಗಲು–ಅಲ್ಲಿ ಘ್ರಾಣೇಂದ್ರಿಯವೂ, ಅದಕ್ಕೆ ಅಭಿಮಾನಿಯಾದ ವಾಯುದೇವರೂ, ಗಂಧವೆಂಬ ವಿಷಯವೂ ಉಂಟಾದುವು. ಮೊದಲು ಆತನ ದೇಹದಲ್ಲಿ ಪ್ರಕಾಶವೆಂಬುದು ಇರಲಿಲ್ಲ. ಆಗ ಆತನಿಗೆ ನೋಡಬೇಕೆಂಬ ಅಭಿಲಾಷೆಯುಂಟಾದಾಗ ಕಣ್ಣುಗುಡ್ಡೆಗಳು ಹುಟ್ಟಿದುವು. ಅದರಿಂದ ನೋಡುವ ಇಂದ್ರಿಯವೂ, ಅದರ ಅಭಿಮಾನಿ ದೇವತೆಯಾದ ಸೂರ್ಯನೂ ಹುಟ್ಟಿದರು. ಅನಂತರ ವೇದರೂಪರಾದ ಋಷಿಗಳು ಆತನನ್ನು ಸ್ತೋತ್ರಗಳಿಂದ ಎಚ್ಚರಿಸತೊಡಗಿದರು. ಆಗ ಆತನಿಗೆ ಕೇಳಬೇಕೆಂಬ ಅಭಿಲಾಷೆಯುಂಟಾಗಲು ಒಡನೆಯೇ ಕಿವಿಗಳೂ, ಅವುಗಳ ಅಧಿಷ್ಠಾತೃದೇವತೆಗಳಾದ ದಿಕ್ಕುಗಳೂ, ಶ್ರವಣೇಂದ್ರಿಯವೂ ಪ್ರಕಟವಾದುವು ಮತ್ತು ಅವುಗಳಿಗೆ ಅಧೀನವಾದ ಶಬ್ದವೆಂಬ ವಿಷಯವೂ ಉಂಟಾಯಿತು. ಬಳಿಕ ಆತನಿಗೆ ಪದಾರ್ಥಗಳಲ್ಲಿ ರುವ ಮೃದುತ್ವ, ಕಾಠಿಣ್ಯ, ಲಘುತ್ವ,ಗುರುತ್ವ, ಉಷ್ಣತ್ವ ಮತ್ತು ಶೈತ್ಯ–ಮುಂತಾದುವುಗಳನ್ನು ತಿಳಿಯಬೇಕೆಂಬ ಅಭಿಲಾಷೆ ಯುಂಟಾಯಿತು. ಆಗ ಆ ವಿರಾಟ್‌ಪುರುಷನಿಗೆ ದೇಹದಲ್ಲಿ ಚರ್ಮವು ಕಾಣಿ ಸಿತು. ಆ ಚರ್ಮದಲ್ಲಿ* ರೋಮಗಳೂ ಮತ್ತು ಅದರ ಒಳಗೂ-ಹೊರಗೂ ವ್ಯಾಪಿಸಿರುವ ವಾಯುದೇವರೂ ಪ್ರಕಟಗೊಂಡರು. ಸ್ಪರ್ಶವನ್ನು ಗ್ರಹಿಸುವ 'ತ್ವಕ್' ಎಂಬ ಇಂದ್ರಿಯವೂ, ಜೊತೆ-ಜೊತೆಯಲ್ಲೇ ಶರೀರದಲ್ಲಿ ಎಲ್ಲ ಕಡೆ ಗಳಲ್ಲೂ ಬಂದು ಸುತ್ತಿಕೊಂಡಿತು. ಅದರಿಂದ ಆತನಿಗೆ ಸ್ಪರ್ಶದ ಅನುಭವ

---

ಯಿತು. ಕಂಠದಲ್ಲಿ ತಡೆಹಿಡಿಯಲ್ಪಟ್ಟ ಪ್ರಾಣವಾಯುವು ಬಹಳವಾಗಿ ಕ್ಷೋಭೆ ಗೊಂಡಿತು–ಎಂಬ ಅಭಿಪ್ರಾಯವನ್ನು ಇಲ್ಲಿ ಸೇರಿಸಿಕೊಳ್ಳುವುದುಂಟು. (ಶ್ಲೋಕ ೧೯)

* ಚರ್ಮದಲ್ಲಿ ರೋಮಗಳೆಂಬ ಇಂದ್ರಿಯವೂ ವನಸ್ಪತಿಗಳೆಂಬ ದೇವತೆಗಳೂ ಕಾಣಿಸಿಕೊಂಡರು–ಎಂದು ಈ ನಡುವೆ ಸೇರಿಸುವುದುಂಟು.

ಚರ್ಮದ ಮೇಲಿನ ತೆಳುವಾದ ಪೊರೆ, ಒಳಗಿನ ದಪ್ಪವಾದ ಚರ್ಮ ಇವೆರಡೂ ತ್ವಕ್ ಎಂಬ ಇಂದ್ರಿಯಕ್ಕೆ ಸ್ಥಾನಗಳು. ಈ ಭೇದವಿರುವುದರಿಂದ ಮೇಲುಗಡೆಯ ಪೊರೆಗೆ ನವೆ (ತುರಿಕೆ) ಎಂಬುದು ವಿಷಯ ಮತ್ತು ಓಷಧಿಗಳು ದೇವತೆಗಳು. ಒಳಗಿನ ಚರ್ಮಕ್ಕೆ ಸ್ಪರ್ಶವು ವಿಷಯ ; ವಾಯುವು ದೇವತೆ. ಆದುದರಿಂದ ತ್ವಕ್ ಎಂಬ

ವಾಗತೊಡಗಿತು. ಆಗ ಆ ಪುರುಷನಿಗೆ ನಾನಾಕರ್ಮಗಳನ್ನು ಮಾಡಬೇಕೆಂಬ ಅಭಿಲಾಷೆಯುಂಟಾಯಿತು. ಆಗ ಆತನ ದೇಹದಲ್ಲಿ ಕೈಗಳು ಪ್ರಕಟ ಗೊಂಡವು.* ಆ ಕೈಗಳಲ್ಲಿ ಪದಾರ್ಥಗಳನ್ನು ಗ್ರಹಣಮಾಡುವ ಶಕ್ತಿಯಾದ ಹಸ್ತೇಂದ್ರಿಯವೂ, ಅದರ ಅಭಿಮಾನಿದೇವತೆಯಾದ ಇಂದ್ರನೂ ಪ್ರಕಟ ವಾದರು. ಆ ಇಬ್ಬರ ಆಶ್ರಯದಿಂದ ಆಗುವ ತೆಗೆದುಕೊಳ್ಳುವಿಕೆ ಮತ್ತು ಹಿಡಿದುಕೊಳ್ಳುವಿಕೆ ಎಂಬ ಕಾರ್ಯವು ಪ್ರಕಟವಾಯಿತು. ಆತನಿಗೆ ನಡೆಯ ಬೇಕು–ಎಂಬ ಇಚ್ಛೆಯುಂಟಾದಾಗ ಆತನ ಶರೀರದಲ್ಲಿ ಕಾಲುಗಳು ಪ್ರಕಟ ಗೊಂಡುವು. ಅವುಗಳ ಜೊತೆಯಲ್ಲೇ ಪಾದಾಭಿಮಾನಿಯಾದ, ಯಜ್ಞ ಪುರುಷನಾದ, ಸ್ವಾಮಿಯಾದ ಉಪೇಂದ್ರನು ಕಾಣಿಸಿಕೊಂಡನು. ಕಾಲು ಎಂಬುದು ಇಂದ್ರಿಯಸ್ಥಾನ. ಇಂದ್ರಿಯದ ಅಭಿಮಾನಿಯು ಸ್ವಾಮಿಯಾದ ಉಪೇಂದ್ರನು. ನಡಿಗೆಯ ಸಾಮರ್ಥ್ಯವು ಇಂದ್ರಿಯ. ಆ ಇಂದ್ರಿಯದ ವಿಷಯವು ನಡಿಗೆ. ಚರಣೇಂದ್ರಿಯದಲ್ಲಿ ಆ ನಡಿಗೆಯೆಂಬ ಕರ್ಮವು ಪ್ರಕಟಗೊಂಡಾಗ ಪುರುಷನು ಯಜ್ಞಸಾಮಗ್ರಿಗಳನ್ನು ಸಂಗ್ರಹಿಸತೊಡಗಿ ದನು. ಅನಂತರ ಆ ವಿರಾಟ್‌ಪುರುಷನಿಗೆ ಸಂತತಿಯನ್ನು ಪಡೆಯಬೇಕು ; ರತಿಸುಖವನ್ನು ಅನುಭವಿಸಬೇಕು ; ಸಂತಾನದ ಮೂಲಕ ಅಮೃತನಾಗ ಬೇಕು ; ಸಂತತಿಯಿಂದುಂಟಾಗುವ ಸ್ವರ್ಗಾದಿಭೋಗಗಳನ್ನನುಭವಿಸಬೇಕು– ಎಂಬ ಅಭಿಲಾಷೆಯುಂಟಾಗಲು ಆತನ ಶರೀರದಲ್ಲಿ ಶಿಶ್ನವೆಂಬ ಇಂದ್ರಿಯ ಸ್ಥಾನವು ಉತ್ಪನ್ನವಾಯಿತು. ಉಪಸ್ಥೇಂದ್ರಿಯವೂ, ಅದರ ಅಭಿಮಾನಿ ದೇವತೆಯಾದ ಪ್ರಜಾಪತಿಯೂ, ಇವೆರಡನ್ನೂ ಆಶ್ರಯಿಸಿರುವ ಕಾಮ

---

ಇಂದ್ರಿಯವೊಂದೇ ಮೇಲಿನ ಪೊರೆಯಲ್ಲಿದ್ದು ರೋಮಗಳಲ್ಲಿ ವ್ಯಾಪಿಸಿಕೊಂಡು ವನ ಸ್ಪತಿದೇವತಾಕವಾಗಿದೆ. ತಿನಿಸನ್ನು ಗ್ರಹಿಸುತ್ತದೆ. ಅದೇ ಇಂದ್ರಿಯವೇ ವಾಯುದೇವ ತಾಕವಾಗಿ ಒಳಗೂ-ಹೊರಗೂ ಸ್ಪರ್ಶವನ್ನು ಗ್ರಹಿಸುವುದು. (ವೀರರಾಘವೀಯ)

ಹೊರಗಿನ ತಿನಿಸಿನಿಂದ ಕೂಡಿದ ಸ್ಪರ್ಶವನ್ನು ಗ್ರಹಿಸುವ ತ್ವಗಿಂದ್ರಿಯಕ್ಕೆ ರೋಮವೆಂದು ಹೆಸರು. (ಶ್ರೀಧರೀಯ)

* ಕೈಗಳು ಉಂಟಾದುವು ಎಂಬುದರ ನಂತರ ಬಲವೆಂಬ ಇಂದ್ರಿಯವು ಉಂಟಾ ಯಿತು–ಎಂದು ಸೇರಿಸಿ ಹೇಳುವುದೂ ಉಂಟು. 'ಬಲವಾನಿನ್ದ್ರ ಆದಾನಂ'–ಎಂಬ ಪಾಠಾಂತರದಂತೆ 'ಬಲಶಾಲಿಯೂ, ಬಲಾಭಿಮಾನಿಯೂ ಆದ ಇಂದ್ರನು'–ಎಂದು ಭಾಷಾಂತರಿಸಬೇಕಾಗುತ್ತದೆ. (ಶ್ಲೋಕ ೨೪)

ಸುಖವೂ ಉಂಟಾದುವು. ಆತನಿಗೆ ಮಲವಿಸರ್ಜನೆಮಾಡುವ ಬಯಕೆ ಉಂಟಾದಾಗ ಗುದದ್ವಾರವು ಪ್ರಕಟವಾಯಿತು. ಪಾಯುವೆಂಬ ಇಂದ್ರಿಯವೂ, ಮಿತ್ರದೇವತೆಯೂ ಉತ್ಪನ್ನರಾದರು. ಇವರಿಗೆ ಅಧೀನವಾಗಿ ಮಲವಿಸರ್ಜನೆಯೆಂಬ ವಿಷಯವುಂಟಾಯಿತು. ಅನಂತರ ಆ ವಿರಾಜನಿಗೆ ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಹೋಗಬೇಕೆಂಬ ಅಭಿಲಾಷೆಯುಂಟಾಗಲು ಆಗ ಹೊಕ್ಕಳಿನ ದ್ವಾರವು ಪ್ರಕಟವಾಯಿತು. ಅದರಿಂದ ಅಪಾನವೂ, ಮೃತ್ಯುದೇವತೆಯೂ ಪ್ರಕಟಗೊಂಡರು. ಅವರಿಬ್ಬರ ಆಸರೆಯಿಂದಲೇ ಪ್ರಾಣಾಪಾನಗಳ ಅಗಲಿಕೆ ಅಂದರೆ ಮೃತ್ಯುವುಂಟಾಗುವುದು. (ಶ್ಲೋಕ 15-28)

ಆ ವಿರಾಜನಿಗೆ ಅನ್ನ-ಪಾನೀಯಗಳನ್ನು ಸ್ವೀಕರಿಸುವ ಇಚ್ಛೆಯುಂಟಾಗಲು ಹೊಟ್ಟೆಯೆಂಬ ಇಂದ್ರಿಯಸ್ಥಾನವೂ, ಕರುಳು-ನರಗಳೆಂಬ ಇಂದ್ರಿಯಗಳೂ ಉಂಟಾದುವು. ಜೊತೆಯಲ್ಲಿ ಹೊಟ್ಟೆಯ ಅಭಿಮಾನಿದೇವತೆಯಾದ ಸಮುದ್ರವೂ, ನಾಡಿಗಳ ಅಭಿಮಾನಿದೇವತೆಗಳಾದ ನದಿಗಳೂ ಅವುಗಳಿಗೆ ಅಧೀನವಾದ ತೃಪ್ತಿ ಮತ್ತು ಶರೀರಪುಷ್ಟಿಗಳೆಂಬ ವಿಷಯಗಳೂ ಉಂಟಾದುವು. ಬಳಿಕ ಆ ವಿರಾಟ್‌ಪುರುಷನು ತನ್ನ ಮಾಯಾಶಕ್ತಿಯನ್ನು ಕುರಿತು ವಿಚಾರ ಮಾಡಲು ಬಯಸಿದಾಗ ಹೃದಯವೆಂಬ ಇಂದ್ರಿಯಸ್ಥಾನವುಂಟಾಯಿತು. ಮನಸ್ಸೆಂಬ ಇಂದ್ರಿಯವೂ ಅದರ ದೇವತೆಯಾದ ಚಂದ್ರನೂ ಮತ್ತು ವಿಷಯಕಾಮನೆ–ಸಂಕಲ್ಪಗಳೆಂಬ ವಿಷಯಗಳೂ ಉತ್ಪನ್ನವಾದುವು. ಹೀಗೆ ಸಮಷ್ಟಿರೂಪನಾದ ವಿರಾಟ್‌ಪುರುಷನಿಂದ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆಂಬ ಭೇದಾನುಸಾರ ವ್ಯಷ್ಟಿರೂಪವಾಗಿ ಅವಯವಗಳು ಉಂಟಾದುವು. ಇನ್ನು ಅವುಗಳ ಅಂಶಗಳ ಉತ್ಪತ್ತಿಯನ್ನು ಹೇಳುವೆನು ; ಕೇಳು: ಆ ವಿರಾಜನ ದೇಹದಲ್ಲಿ ಪೃಥಿವೀ, ಜಲ ಮತ್ತು ತೇಜಸ್ಸುಗಳಿಂದ ತ್ವಕ್ಕು, ಚರ್ಮ, ಮಾಂಸ, ರಕ್ತ, ಮೇದಸ್ಸು, ಮಜ್ಜೆ ಮತ್ತು ಅಸ್ಥಿಗಳೆಂಬ ಏಳು ಧಾತುಗಳು ಪ್ರಕಟಗೊಂಡುವು. ಹಾಗೆಯೇ ಆಕಾಶ-ಜಲ-ವಾಯುಗಳಿಂದ ಪ್ರಾಣಗಳ ಉತ್ಪತ್ತಿಯೂ ಆಯಿತು. ಕಿವಿಗಳೇ ಮುಂತಾದ ಇಂದ್ರಿಯಗಳು ಶಬ್ದವೇ ಮುಂತಾದ ವಿಷಯಗಳನ್ನು ಗ್ರಹಣಮಾಡುವುವು. ಈ ವಿಷಯಗಳು ಭೂತಾದಿಯಾದ ಅಹಂಕಾರದಿಂದ ಉತ್ಪನ್ನವಾಗಿವೆ. ಮನಸ್ಸು, ಕಾಮ, ಸಂಕಲ್ಪ ಮುಂತಾದ ಎಲ್ಲ ವಿಕಾರಗಳ ಉತ್ಪತ್ತಿಸ್ಥಾನವು

ಮತ್ತು ಬುದ್ಧಿಯು ಪದಾರ್ಥಗಳ ಅರಿವನ್ನು ಉಂಟುಮಾಡುವುದು. ಹೀಗೆ ಭಗವಂತನ ಸ್ಥೂಲರೂಪವನ್ನು ನಿನಗೆ ವರ್ಣನೆಮಾಡಿದ್ದೇನೆ. ಇದು ಹೊರಗಡೆಯಿಂದ ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ, ಅಹಂಕಾರ ಮಹತ್ತತ್ತ್ವ ಮತ್ತು ಪ್ರಕೃತಿ–ಎಂಬ ಎಂಟು ಆವರಣಗಳಿಂದ ಸುತ್ತುವರಿಯಲ್ಪಟ್ಟಿದೆ. ಈ ಸ್ಥೂಲದೇಹಕ್ಕೆ ಪರವಾಗಿರುವುದು ಇದಕ್ಕಿಂತಲೂ ಉತ್ತಮವಾಗಿರುವ ಸೂಕ್ಷ್ಮರೂಪ. ಇದು ಅವ್ಯಕ್ತ, ನಿರ್ವಿಶೇಷ, ಆದಿಮಧ್ಯಾಂತರಹಿತ ಮತ್ತು ನಿತ್ಯವಾದುದು. ಮಾತು-ಮನಸ್ಸುಗಳಿಗೆ ಅಗೋಚರವಾದುದು.*

(ಶ್ಲೋಕ 29-34)

ನಾನು ನಿನಗೆ ಈವರೆಗೆ ವರ್ಣಿಸಿದ ಭಗವಂತನ ಸ್ಥೂಲ-ಸೂಕ್ಷ್ಮಗಳೆರಡೂ ಮಾಯೆಯಿಂದ ಸೃಷ್ಟಿಸಲ್ಪಟ್ಟುವುಗಳು. ವಿದ್ವಾಂಸರಾದವರು ಇವೆರಡನ್ನೂ ಸ್ವೀಕರಿಸುವುದಿಲ್ಲ.**

---

* **ಅತಃ ಪರಂ ಸೂಕ್ಷ್ಮತಮಂ.... ಪರಮ್ =** ವೀರರಾಘವೀಯದ ಪ್ರಕಾರ ಈ ಶ್ಲೋಕವು ಜೀವಪರವಾದುದು. ಪರಮಾತ್ಮನಿಗೆ ಈ ಜಗತ್ತಿನ ರೂಪವಾದ ಸ್ಥೂಲ ದೇಹದಂತೆಯೇ ಅತಿಸೂಕ್ಷ್ಮವಾದ, ಅದಕ್ಕಿಂತಲೂ ಉತ್ತಮವಾದ, ಮುಕ್ತಾತ್ಮ ಜೀವರೂಪವಾದ ದೇಹವೂ ಉಂಟು. ಆ ಜೀವರೂಪವು 'ವಾಲಾಗ್ರಶತಭಾಗಸ್ಯ' ಎಂದು ಶ್ರುತಿಯು ಹೇಳುವಂತೆ ಅಣುವಾಗಿ ಸೂಕ್ಷ್ಮತಮವಾಗಿದೆ. ಇಂದ್ರಿಯಗಳಿಗೆ ಗೋಚರವಾಗುವುದಿಲ್ಲವಾದ್ದರಿಂದ ಅದು ಅವ್ಯಕ್ತ. ಶಬ್ದ-ಸ್ಪರ್ಶ-ರೂಪಾದಿ ಗುಣಗಳಿಲ್ಲವಾದ್ದರಿಂದ ಅದು ನಿರ್ವಿಶೇಷವೂ ಆಗಿದೆ. ಕಾಲಾಪರಿಚ್ಛಿನ್ನವಾದ್ದರಿಂದ ಅದು ಆದಿ-ಮಧ್ಯಾಂತರಹಿತವಾಗಿ ನಿತ್ಯವಾಗಿದೆ.

ವಿಜಯಧ್ವಜೀಯದ ಪ್ರಕಾರ–ಇಲ್ಲಿಯವರೆಗೂ ಹೇಳಿದ ವಿರಾಡ್ರೂಪವು ಭಗವಂತನಿಗೆ ಪ್ರತಿಮಾಸ್ಥಾನದಲ್ಲಿದೆ. ಭಗವಂತನ ನಿಜಸ್ವರೂಪವು ಈ ಶ್ಲೋಕದಲ್ಲಿ ಹೇಳಲ್ಪಟ್ಟಿದೆ. ಅದು ಮೇಲ್ಕಂಡ ವಿರಾಡ್ರೂಪಕ್ಕಿಂತಲೂ ವಿಲಕ್ಷಣವಾದುದು. 'ಅಣೋರಣೀಯಾನ್' ಎಂಬ ಶ್ರುತಿಯಂತೆ ಸೂಕ್ಷ್ಮತಮವಾದುದು. ಮಹತ್ಪರಿಮಾಣವಾಗಿದ್ದರೂ ಆತನ ಅನುಗ್ರಹವಿಲ್ಲದೇ ಕಣ್ಣಿಗೆ ಕಾಣುವುದಿಲ್ಲ. 'ಯಮೇವೈಷ ವೃಣುತೇ ತೇನ ಲಭ್ಯಃ' ಅದಕ್ಕಿಂತಲೂ ಅತಿಶಯವಿಲ್ಲದ್ದರಿಂದ ಅದು ನಿರ್ವಿಶೇಷ. ಆದಿ - ಮಧ್ಯಾಂತರಹಿತವಾದುದು. ಇದು ಔಪಚಾರಿಕವಾದ ಹೇಳಿಕೆಯಲ್ಲ. ಏಕೆಂದರೆ :

---

** ಸಂಸಾರಿಗಳಾದ ಜೀವಿಗಳು ಅವಿದ್ಯಾವೇಷ್ಟಿತರಾಗಿರುವುದರಿಂದ ಅವರು ಉಪಾ

**ಅಮುನೀ ಭಗವದ್ರೂಪೇ ಮಯಾ ತೇ ಅನುವರ್ಣಿತೇ ।**
**ಉಭೇ ಅಪಿ ನ ಗೃಹ್ಣನ್ತಿ ಮಾಯಾಸೃಷ್ಟೇ ವಿಪಶ್ಚಿತಃ ॥೩೫॥**
**ಸ ವಾಚ್ಯವಾಚಕತಯಾ ಭಗವಾನ್ಬ್ರಹ್ಮರೂಪಧೃಕ್ ।**
**ನಾಮರೂಪಕ್ರಿಯಾ ಧತ್ತೇ ಸಕರ್ಮಾಕರ್ಮಕಃ ಪರಃ *॥೩೬॥**

---

ಅದು ನಿತ್ಯ ಅಂದರೆ ಅವಿನಾಶಿಯೂ ಆಗಿದೆ. 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ' (ಶ್ಲೋಕ ೩೪)

---

ಸನೆಗೆ ಯೋಗ್ಯರಲ್ಲ. ಮುಕ್ತಸ್ವರೂಪವೂ ಸ್ವತಃ ಶುದ್ಧವಾಗಿಲ್ಲವಾದ್ದರಿಂದ ಉಪಾಸನೆಗೆ ಯೋಗ್ಯವಲ್ಲ. 'ಆದಿತ್ಯವರ್ಣಂ ತಮಸಃ ಪರಸ್ತಾತ್' ಇತ್ಯಾದಿ ವರ್ಣನೆಯಲ್ಲಿರುವ ವೇದಾಂತಸಿದ್ಧವಾದ ಶ್ರೀಭಗವನ್ಮೂರ್ತಿಯನ್ನೇ ಧ್ಯಾನಿಸಬೇಕು.

> **ಯತಸ್ತತೋ ನ ತೇ ಧ್ಯಾನೇ ಪ್ರಾಣಿನಾಮುಪಕಾರಕಾಃ ।**
> **ನೈಸರ್ಗಿಕೋ ನೈವ ಬೋಧಸ್ತೇಷಾಮುಪ್ಯನ್ಯತೋ ಯತಃ ।**
> **ತಸ್ಮಾತ್ತದಮಲಂ ಬ್ರಹ್ಮ ನಿಸರ್ಗಾದೇವ ಬೋಧನಮ್ ॥**

'ವಿಪಶ್ಚಿತ'–ಎಂದರೆ ಸರ್ವಜ್ಞನಾದ ಭಗವಂತನ ಎಂದರ್ಥ. **ಮಾಯಾಸೃಷ್ಟೇಃ** = ಸಂಕಲ್ಪಸೃಷ್ಟಿಯಾಗಿರುವುದರಿಂದ. ನಾನು ವರ್ಣನೆಮಾಡಿದ ಈ ಸ್ಥೂಲ-ಸೂಕ್ಷ್ಮರೂಪಗಳನ್ನು ಉಪಾಸಕನು ಸ್ವೀಕರಿಸುವುದಿಲ್ಲ. ಏಕೆಂದರೆ : ಅವು ಶುಭಾಶ್ರಯಗಳಲ್ಲ. ಬಂಧ-ಮೋಕ್ಷಗಳು ಸರ್ವಜ್ಞನಾದ ಭಗವಂತನ ಮಾಯೆಗೆ ( ಸಂಕಲ್ಪಕ್ಕೆ ) ಅಧೀನವಾಗಿವೆ. ಸ್ಥೂಲರೂಪವು ಜ್ಞಾನಿಗಳ ಉಪಾಸನೆಗೆ ಯೋಗ್ಯವಲ್ಲ. ಏಕೆಂದರೆ : ಅದು ಅವಿದ್ಯೆಯಿಂದ ಆವರಿಸಲ್ಪಟ್ಟಿದೆ. ಸೂಕ್ಷ್ಮವಾದ ಮುಕ್ತಾತ್ಮರೂಪವೂ ಉಪಾಸನೆಗೆ ಯೋಗ್ಯವಲ್ಲ. ಏಕೆಂದರೆ: ಅದೂ ಸ್ವತಃ ಶುದ್ಧವಲ್ಲ. ಮೊದಲು ಬದ್ಧರಾಗಿದ್ದು ಯೋಗದಿಂದ ಜ್ಞಾನವನ್ನು ಪಡೆದು ಸ್ವಸ್ವರೂಪವನ್ನು ಪಡೆದವರು ಸ್ವತಃ ಶುದ್ಧರಾಗುವುದಿಲ್ಲ. ಆದುದರಿಂದ **'ತಸ್ಮಾತ್ತದಮಲಂ ಬ್ರಹ್ಮ ನಿಸರ್ಗಾದೇವ ಬೋಧನಮ್'** ಎಂಬಂತೆ ಸ್ವಾಭಾವಿಕವಾಗಿಯೇ ಹೇಯರಹಿತವೂ ಕಲ್ಯಾಣಪರಿಪೂರ್ಣವೂ ಆದ ಶ್ರೀಭಗವದ್ರೂಪವೊಂದೇ ಧ್ಯಾನಕ್ಕೆ, ಉಪಾಸನೆಗೆ ಶುಭಾಲಂಬನವಾಗಬಲ್ಲುದು. **'ಆದಿತ್ಯವರ್ಣಂ ತಮಸಃ ಪರಸ್ತಾತ್'** ಇತ್ಯಾದಿ ಶ್ರುತಿಗಳು ವರ್ಣಿಸುವ ಆ ದಿವ್ಯಮಂಗಳವಿಗ್ರಹವನ್ನೇ ಉಪಾಸನೆ ಮಾಡಬೇಕು. ಪ್ರಧಾನವಾಗಿ ಉಪಾಸನೆ ಮಾಡಬೇಕಾದುದು ಅದನ್ನೇ. ಭಗವದ್ವಿಭೂತಿಗಳೆಂದು ಮುಕ್ತಾತ್ಮರನ್ನು ಉಪಾಸನೆ ಮಾಡುವುದು ಇಷ್ಟವೇ ಆಗಿದೆ. (ವೀರರಾಘವೀಯ)

ಸ್ಥೂಲ ಮತ್ತು ಸೂಕ್ಷ್ಮಗಳಾದ ಈ ಭಗವದ್ರೂಪಗಳನ್ನು ನಾನು ನಿನಗೆ ವರ್ಣ

---

* ಭಗವಂತನು ವಾಸ್ತವಿಕವಾಗಿ ಮಾಯಾತೀತನಾದ್ದರಿಂದ ಸ್ವತಃ ನಿಷಿಯನೇ ಆಗಿದ್ದರೂ ಮಾಯೆಯಿಂದ ಸ್ಥೂಲ-ಸೂಕ್ಷ್ಮರೂಪಗಳನ್ನು ಧರಿಸಿ ಬ್ರಹ್ಮನೆಂಬ ಹೆಸ

ಇನ್ನು ಭಗವಂತನ ಗುಣ-ಕರ್ಮಗಳನ್ನು ಹೇಳುತ್ತೇನೆ, ಕೇಳು : ಆ ಭಗವಂತನು ಕರ್ಮರಹಿತನಾಗಿದ್ದರೂ ತನ್ನ ಸಂಕಲ್ಪದಿಂದ ಸೃಷ್ಟ್ಯಾದಿ ಕರ್ಮಗಳನ್ನು ಲೀಲೆಯಿಂದ ಕೈಗೊಂಡು ಬ್ರಹ್ಮರೂಪಿಯಾಗಿ ಜಗತ್ತಿನ ನಾನಾ-ರೂಪ-ಕ್ರಿಯೆಗಳ ವ್ಯಾಕರಣವನ್ನು ಮಾಡುತ್ತಾನೆ. ವಾಚ್ಯವಾದ

---

ಸಿದ್ದೇನೆ. ಅವು ಭಗವಂತನ ಇಚ್ಛೆಯಿಂದಲೂ ಪ್ರಕೃತಿಯಿಂದಲೂ ವಿರಚಿತವಾದುವು. ಜಗತ್ತಿನಲ್ಲಿ ಜ್ಞಾನದುರ್ಬಲರಾದ ಆ ಪಂಡಿತರು ಈ ಎರಡು ರೂಪಗಳನ್ನೂ ಅರಿಯಲಾರರು. ಅವಿಪಶ್ಚಿತಃ –ಎಂದು ಪದವಿಭಾಗ. ೩೪ನೆಯ ಶ್ಲೋಕದಲ್ಲಿ ಶ್ರೀಹರಿಯ ನಿಜಸ್ವರೂಪಕ್ಕೆ 'ವಾಙ್ಮನಸೋಃ ಪರಂ' ಎಂಬ ವಿಶೇಷಣವನ್ನು ಹೇಳಿದೆ. ಇದಕ್ಕೆ ಮಾತು ಮತ್ತು ಮನಸ್ಸುಗಳನ್ನು ಮೀರಿದ್ದು–ಎಂದು ಅರ್ಥೈಸಬಹುದು ಅಥವಾ ಶ್ರೀಸರಸ್ವತೀ ಮತ್ತು ರುದ್ರದೇವರಿಗಿಂತಲೂ ಉತ್ತಮವಾದುದು–ಎಂದು ಅರ್ಥಮಾಡಬಹುದು. ಮೇಲೆ ಹೇಳಿದ ಸ್ಥೂಲ ಶರೀರ ಮತ್ತು ಸೂಕ್ಷ್ಮವಾದ ಸಮಷ್ಟಿ ಲಿಂಗ ಶರೀರ–ಇವೆರಡೂ ಉಪಾಸನೆ ಗಾಗಿ ಭಗವಂತನಲ್ಲಿ ಆರೋಪಿತವಾಗಿವೆ. ಮಾಯೆಯಿಂದ ರಚಿತವಾಗಿವೆ. ಆದ್ದರಿಂದ ಜ್ಞಾನಿಗಳು ಇವನ್ನು ವಾಸ್ತವವಾಗಿ ಅಂಗೀಕರಿಸುವುದಿಲ್ಲ. (ವಿಜಯಧ್ವಜೀಯ) (ಶ್ಲೋಕ ೩೫)

---

ರನ್ನು ಪಡೆದು ಪೃಥಿವ್ಯಾದಿ ವಾಚ್ಯವಸ್ತುಗಳನ್ನೂ, ಅವುಗಳ ಹೆಸರುಗಳೆಂಬ 'ವಾಚಕ'ಗಳನ್ನೂ, ಆಯಾ ಕಾರ್ಯಗಳನ್ನೂ ಸೃಜಿಸುವನು. (ಶ್ರೀಧರೀಯ)

ವಾಚ್ಯವಾಗಿ ಪರಬ್ರಹ್ಮಸ್ವರೂಪಿಯೂ, ವಾಚಕವಾಗಿ ವೇದಸ್ವರೂಪನೂ ಆದ ಆ ಭಗವಂತನು ಪುಣ್ಯ-ಪಾಪರೂಪಕರ್ಮರಹಿತನು. ಆದರೂ ಲೀಲೆಯಿಂದ ಸೃಷ್ಟ್ಯಾದಿ ಕರ್ಮಗಳನ್ನು ಕೈಗೊಂಡು ಪ್ರಪಂಚರೂಪಿಯಾಗಿ ಬ್ರಹ್ಮಾದಿ ಸ್ತಂಬಪರ್ಯಂತವಾದ ನಾಮಗಳನ್ನೂ, ಅವುಗಳ ಆಯಾರೂಪಗಳನ್ನೂ ಧರಿಸುತ್ತಾನೆ. (ಚಂದ್ರಿಕಾ)

**'ನಾಮರೂಪಂ ಚ ಭೂತಾನಾಂ ಕೃತ್ಯಾನಾಂ ಚ ಪ್ರಪಂಚನಮ್ । ವೇದಶಬ್ದೇಭ್ಯ ಏವಾದೌ ದೇವಾದೀನಾಂ ಚಕಾರ ಸಃ ॥'** ಎಂಬಂತೆ ವೇದಶಬ್ದಗಳಿಂದಲೇ ದೇವಾದಿನಾಮಗಳನ್ನೂ, ಅವರ ರೂಪಗಳನ್ನೂ, ಅವರವರ ಕೃತ್ಯಗಳನ್ನೂ ವಾಚ್ಯವಾಚಕ ಶರೀರಿಯಾದ ಆ ಭಗವಂತನು ತನ್ನ ಸಂಕಲ್ಪದಿಂದಲೇ ಮಾಡುತ್ತಾನೆ. ಆತನು ಅಕರ್ಮ ಎಂದರೆ ಕರ್ಮವಶ್ಯನಲ್ಲದವನು. ಆದರೂ ಸಂಕಲ್ಪಮಾತ್ರದಿಂದ ಸೃಷ್ಟ್ಯಾದಿಕಾರ್ಯ ಗಳನ್ನೂ ನಾಮ-ರೂಪವಿಧಾನವನ್ನೂ ಚತುರ್ಮುಖಶರೀರಧಾರಿಯಾಗಿ ಆ ಭಗವಂತನು ನಿರ್ವಹಿಸುತ್ತಾನೆ. (ವೀರರಾಘವೀಯ)

'ಭಗವಂತನು ಆಪ್ತಕಾಮನು. ಆತನಿಗೆ ಕರ್ಮದಿಂದ ಯಾವ ಫಲವೂ ಆಗ ಬೇಕಾಗಿಲ್ಲವಾದ್ದರಿಂದ ಆತನು ಅಕರ್ಮಕನು. ಆದರೆ ಸೃಷ್ಟ್ಯಾದಿಗಳನ್ನು ತನ್ನ ಸಂಕಲ್ಪ ದಿಂದ ಮಾಡುವುದರಿಂದ ಸಕರ್ಮಕನಾಗುತ್ತಾನೆ. ವಾಚಕತ್ವದಿಂದ ನಾಮಗಳನ್ನೂ,

ರೂಪಗಳನ್ನೂ, ವಾಚಕವಾದ ನಾಮಗಳನ್ನೂ, ಆಯಾ ಕಾರ್ಯಗಳನ್ನೂ ಸೃಷ್ಟಿಸುತ್ತಾನೆ.

ಹೇಗೆಂದರೆ : ಮರೀಚಿಯೇ ಮುಂತಾದ ನವಬ್ರಹ್ಮರನ್ನೂ, ಸ್ವಯಂಭುವನೇ ಮುಂತಾದ ಚತುರ್ದಶಮನುಗಳನ್ನೂ, ಇಂದ್ರಾದಿ ದೇವತೆಗಳನ್ನೂ, ಋಷಿಗಳನ್ನೂ, ಪಿತೃಗಣಗಳನ್ನೂ, ಸಿದ್ಧರನ್ನೂ, ಚಾರಣರನ್ನೂ, ಗಂಧರ್ವರನ್ನೂ, ವಿದ್ಯಾಧರರರನ್ನೂ, ಅಸುರರನ್ನೂ, ಯಕ್ಷರನ್ನೂ, ಕಿನ್ನರರನ್ನೂ, ಅಪ್ಸರಸ್ಸುಗಳನ್ನೂ, ನಾಗರನ್ನೂ, ಸರ್ಪಗಳನ್ನೂ, ಕಿಂಪುರುಷರನ್ನೂ, ಉರಗರನ್ನೂ, ರಾಕ್ಷಸರನ್ನೂ, ಪಿಶಾಚಗಳನ್ನೂ, ಪ್ರೇತಗಳನ್ನೂ, ಭೂತಗಳನ್ನೂ, ವಿಘ್ನದೇವತೆಗಳನ್ನೂ, ರುಕ್ಮಾಂಡುವೇ ಮುಂತಾದ ಕೂಶ್ಮಾಂಡ ದೇವತೆಗಳನ್ನೂ, ಕಾಲಕರ್ಣನೇ ಮುಂತಾದ ಉನ್ಮಾದದೇವತೆಗಳನ್ನೂ, ಬೇತಾಳಗಳನ್ನೂ, ಯಾತುಧಾನರನ್ನೂ, ನವಗ್ರಹಗಳನ್ನೂ, ಪಕ್ಷಿಗಳನ್ನೂ, ಮೃಗಗಳನ್ನೂ, ಪಶುಗಳನ್ನೂ, ವೃಕ್ಷಗಳನ್ನೂ, ಪರ್ವತಗಳನ್ನೂ, ತೆವಳುವ ಜಾತಿಯ ಪ್ರಾಣಿಗಳನ್ನೂ ಮತ್ತು ಸ್ಥಾವರ-ಜಂಗಮಗಳೆಂದು ಇಬ್ಬಗೆಯಾಗಿಯೂ, ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ–ಎಂದು ನಾಲ್ಕು ಬಗೆಯಾಗಿಯೂ, ಜಲವಾಸಿಗಳು, ಸ್ಥಳವಾಸಿಗಳು, ಆಕಾಶವಾಸಿಗಳು–ಎಂದು ಮೂರು ಬಗೆಯಾಗಿಯೂ ಇರುವ ಎಲ್ಲ ಭೂತಗಳನ್ನೂ–ಆತನು ಸೃಷ್ಟಿಸುತ್ತಾನೆ. ಆ ವಸ್ತುಗಳೆಂಬ ರೂಪಗಳನ್ನೂ, ಅವುಗಳ ಹೆಸರುಗಳೆಂಬ ನಾಮಗಳನ್ನೂ, ಅವುಗಳ ಕರ್ಮಗಳನ್ನೂ ನಿರ್ಮಾಣಮಾಡುತ್ತಾನೆ. ಇನ್ನು ಕರ್ಮಗಳ ವಿಷಯ : ಪುಣ್ಯಕರ್ಮ, ಅಪುಣ್ಯಕರ್ಮ ಮತ್ತು ಮಿಶ್ರಕರ್ಮಗಳಿಗೆ ಅನುಗುಣವಾಗಿ ಉತ್ತಮಗತಿ, ಅಧಮಗತಿ ಮತ್ತು ಮಧ್ಯಮವಾದ

---

ವಾಚ್ಯತ್ವದಿಂದ ನಾಮ-ರೂಪ-ಕ್ರಿಯೆಗಳನ್ನೂ ಆ ಸರ್ವಪ್ರಭುವು ನಿಯಮಿಸುತ್ತಾನೆ. "ನಾಮ್ನೈವ ವಾಚಕತ್ವೇನ ನಾಮರೂಪಕ್ರಿಯಾ ಅಪಿ । ವಾಚ್ಯತ್ವೇನ ಹರಿರ್ದೇವೋ ನಿಯಾಮಯತಿ ಚೈಕರಾಟ್'. ಒಬ್ಬನೇ ನಾನಾನಾಮ-ರೂಪ-ಕ್ರಿಯೆಗಳನ್ನು ಧರಿಸುವುದು ಹೇಗೆ ಸಾಧ್ಯ? ಎಂದರೆ : ಆತನು ಬ್ರಹ್ಮರೂಪಧಾರಿ. ಒಳಗೂ-ಹೊರಗೂ ಎಲ್ಲವನ್ನೂ ವ್ಯಾಪಿಸಿರುವ ಬ್ರಹ್ಮಶಬ್ದವಾಚ್ಯವಾದ ರೂಪವನ್ನು ಧರಿಸಿರುವವನು. ಅಥವಾ ವೇದಾದಿ ಶಬ್ದರಾಶಿಯನ್ನು ಧರಿಸಿರುವವನು. ಪ್ರಪಂಚವು ವೇದಾದಿ ಪ್ರಮಾಣ ಸಿದ್ಧವಾದುದರಿಂದ ಸತ್ಯವೇ ಹೊರತು ಮಾಯಾಮಯವಾಗುವುದಿಲ್ಲ.

(ವಿಜಯಧ್ವಜೀಯ) (ಶ್ಲೋಕ ೩೬)

ಮಿಶ್ರಗತಿ–ಎಂದು ಮೂರು ಬಗೆಯ ಗತಿಗಳುಂಟು. ಅವುಗಳಲ್ಲಿ ಸತ್ತ್ವಗುಣವು ಪ್ರಧಾನವಾಗಿದ್ದರೆ ದೇವತಾಯೋನಿಯೂ, ರಜೋಗುಣವು ಪ್ರಧಾನವಾಗಿದ್ದರೆ ಮನುಷ್ಯಯೋನಿಯೂ, ತಮೋಗುಣವು ಪ್ರಧಾನವಾಗಿದ್ದರೆ ನಾರಕೀಯಯೋನಿಯೂ ಉಂಟಾಗುತ್ತವೆ. ಸ್ವಭಾವಗಳ ವ್ಯತ್ಯಾಸದಿಂದ ಪ್ರತಿಯೊಂದರಲ್ಲಿಯೂ ಮೂರು-ಮೂರು ಭೇದಗಳುಂಟು. ಒಂದು ಗುಣವು ಉಳಿದ ಎರಡು ಗುಣಗಳಿಂದ ಆಕ್ರಮಿಸಲ್ಪಟ್ಟಾಗ ಹೀಗೆ ಪ್ರತಿಯೊಂದು ಗತಿಯಲ್ಲೂ ಮೂರು-ಮೂರು ಭೇದಗಳಾಗುವುವು.

ಹೀಗೆ ಅವುಗಳನ್ನು ಸೃಷ್ಟಿಮಾಡಿದ ಭಗವಂತನೇ ಧರ್ಮಮಯವಾದ ವಿಷ್ಣುರೂಪವನ್ನು ಕೈಗೊಂಡು ದೇವತೆ, ಮನುಷ್ಯ, ಪಶು, ಪಕ್ಷಿ–ಮುಂತಾದ ನಾನಾರೂಪಗಳಲ್ಲಿ ಅವತಾರಮಾಡಿ ವಿಶ್ವದ ಪಾಲನೆ-ಪೋಷಣೆಗಳನ್ನು ಮಾಡುತ್ತಾನೆ. ಹಾಗೆಯೇ ಪ್ರಳಯಸಮಯವು ಬಂದಾಗ ಕಾಲಾಗ್ನಿ-ರುದ್ರ ಸ್ವರೂಪಗಳನ್ನು ಸ್ವೀಕರಿಸಿ–ವಾಯುವು ಮೇಘಮಾಲೆಯನ್ನು ತನ್ನಲ್ಲಿ ಲಯಗೊಳಿಸಿಕೊಳ್ಳುವಂತೆ–ತಾನು ಸೃಷ್ಟಿಸಿದ ಈ ವಿಶ್ವವನ್ನು ತನ್ನಲ್ಲಿ ಉಪಸಂಹಾರ ಮಾಡಿಕೊಂಡುಬಿಡುತ್ತಾನೆ. (ಶ್ಲೋಕ 37-43)

ಭಗವಂತನಲ್ಲಿ ಅತ್ಯಂತನಿಷ್ಠೆಯುಳ್ಳ ಭಾಗವತೋತ್ತಮರು ಭಗವಂತನನ್ನು ಈ ಪ್ರಕಾರದಲ್ಲಿ ವರ್ಣಿಸಿದ್ದಾರೆ. ಆದರೆ ತತ್ತ್ವಜ್ಞಾನಿಗಳು ಇಷ್ಟು ಪ್ರಕಾರದಿಂದಲೇ ಆತನನ್ನು ಸಂದರ್ಶಿಸುವುದಿಲ್ಲ. ವರ್ಣನಾತೀತವಾದ ರೀತಿಯಲ್ಲಿ ಅವರು ಆತನನ್ನು ಸಂದರ್ಶಿಸುತ್ತಾರೆ. ಆ ಪರಮಾತ್ಮನು ಅವತಾರಗಳನ್ನು ಮಾಡಿದಾಗಲೂ ಆತನಿಗೆ ಕರ್ಮಗಳು ಅಂಟುವುದಿಲ್ಲ. ಆಗಲೂ ತನಗೆ ಕರ್ತೃತ್ವದ ದೋಷವಿಲ್ಲವೆಂಬುದನ್ನು ತೋರಿಸಲು ಭಗವಂತನು ತನ್ನ ಸಂಕಲ್ಪದಿಂದ ಆ ಅವತಾರಗಳನ್ನು ಕೈಗೊಳ್ಳುತ್ತಾನೆ.*

---

* ಇವುಗಳಿಗೆ ನಾನಾರೀತಿಗಳಲ್ಲಿ ವ್ಯಾಖ್ಯಾನಮಾಡಲಾಗಿದೆ : ೧) ಹೀಗೆ ಸೃಷ್ಟ್ಯಾದಿ ಕರ್ತಾ ಎಂದು ಮೊದಲಾಗಿ ಶ್ರುತಿಗಳು ಭಗವಂತನನ್ನು ವರ್ಣಿಸುತ್ತವೆ. ಆದರೆ ಜ್ಞಾನಿಗಳು ಕೇವಲ ಇಷ್ಟೇ ರೀತಿಯಲ್ಲಿ ಆತನನ್ನು ನೋಡುವುದಿಲ್ಲ. ಏಕೆಂದರೆ : ಕರ್ತೃತ್ವ ಮುಂತಾದುವುಗಳಿಂದ ಭಗವಂತನ ಲಕ್ಷಣವನ್ನು ಹೇಳುವುದರಲ್ಲಿ ಶ್ರುತಿಗಳಿಗೆ ತಾತ್ಪರ್ಯವಿಲ್ಲ. ಈ ತಟಸ್ಥಲಕ್ಷಣದಿಂದ ಮಾತ್ರವೇ ಅವರು ಆತನನ್ನು ನೋಡದೇ ಆತನ ಸ್ವರೂಪಲಕ್ಷಣದಿಂದಲೂ ಆತನನ್ನು ಅವರು ಸಾಕ್ಷಾತ್ಕರಿಸುತ್ತಾರೆ. ಆತನಲ್ಲಿ ನಿಜವಾಗಿಯೂ ಕರ್ತೃತ್ವವೇ ಮುಂತಾದುವು ಇಲ್ಲ ಎಂದು ನಿಷೇಧಿಸಲು ಮೇಲ್ಕಂಡಂತೆ

ಈಗ ನಾನು ನಿನಗೆ ಬ್ರಹ್ಮದೇವರ ಮಹಾಕಲ್ಪವನ್ನು ಅವಾಂತರ ಕಲ್ಪಗಳೊಡನೆ ವರ್ಣನೆಮಾಡಿದ್ದೇನೆ. ಸೃಷ್ಟಿಕ್ರಮವು ಎಲ್ಲ ಕಲ್ಪಗಳಲ್ಲೂ* ಒಂದೇ ರೀತಿಯಲ್ಲೇ ಇರುತ್ತದೆ. ಆದರೆ ಇಷ್ಟು ಭಾಗದಲ್ಲಿ ಮಾತ್ರ ವ್ಯತ್ಯಾಸ ವಿರುತ್ತದೆ : ಮಹಾಕಲ್ಪದ ಪ್ರಾರಂಭದಲ್ಲಿ ಪ್ರಕೃತಿಯಿಂದ ಕ್ರಮವಾಗಿ ಮಹತ್ತತ್ತ್ವ ಮುಂತಾದುವುಗಳ ಉತ್ಪತ್ತಿಯಾಗುತ್ತದೆ. ಕಲ್ಪಗಳ ಪ್ರಾರಂಭ

---

ಆತನಿಗೆ ಸೃಷ್ಟಿಕರ್ತೃತ್ವ ಮುಂತಾದುವುಗಳನ್ನು ಅನುವಿಧಾನಮಾಡಿದೆ. ಏಕೆಂದರೆ : ಆ ಕರ್ತೃತ್ವ ಮುಂತಾದುದು ಆತನಲ್ಲಿ ಮಾಯೆಯಿಂದ ಆರೋಪಿತವಾಗಿದೆಯಷ್ಟೇ!

(ಶ್ರೀಧರೀಯ)

೨) ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನು ಸಾಮಾನ್ಯವಾಗಿ ಈ ರೀತಿಯಲ್ಲಿ ಇದ್ದಾನೆ ಎಂದು ವರ್ಣಿಸಿದೆನಪ್ಪಾ. ಆದರೆ ಆ ಸರ್ವೋತ್ಕೃಷ್ಟವಾದ ಬ್ರಹ್ಮಸ್ವರೂಪವನ್ನು ಇದು ವಿಶೇಷವಾಗಿ ಹೀಗೆಯೇ ಇದೆ–ಎಂದು ಪೂರ್ಣವಾಗಿ ನೋಡಲು ನಿತ್ಯಸೂರಿಗಳಿಗೂ ಸಾಧ್ಯವಿಲ್ಲ. 'ಜನ್ಮಾವತಾರಗಳಲ್ಲೂ ನಿಜವಾಗಿಯೂ ತಾನು ಪುಣ್ಯ-ಪಾಪರೂಪವಾದ ಕರ್ಮಗಳನ್ನು ಮಾಡುವುದಿಲ್ಲ. ತನಗೆ ಅವುಗಳಿಂದ ಪ್ರಯೋಜನವಿಲ್ಲ. ತನಗೆ ಕರ್ಮಗಳ ಸ್ಪರ್ಶವೇ ಇರುವುದಿಲ್ಲ'–ಎಂದು ತೋರಿಸಲು ಆತನು ಅನುಸರಣೆಮಾಡಿ ಕರ್ಮಗಳನ್ನು ಮಾಡುತ್ತಾನೆ. ಶ್ರೀರಾಮಾದ್ಯವತಾರಗಳಲ್ಲಿ ಪಿತೃವಾಕ್ಯ ಪರಿಪಾಲನೆ ಮುಂತಾದುವುಗಳನ್ನು ಆತನು ಮಾಡುವುದು–ಇತರ ಜನರಿಂದ ಧರ್ಮಾನುಷ್ಠಾನಮಾಡಿಸುವುದಕ್ಕಾಗಿ. ಅದು ಆತನ ಮಾಯೆಯಿಂದ (ಸಂಕಲ್ಪದಿಂದ) ಆರೋಪಿತವಾದುದೇ ಹೊರತು ವಾಸ್ತವಿಕವಲ್ಲ.

(ಚಂದ್ರಿಕಾ)

೩) ಜೀವರ ಜನ್ಮಾದಿಗಳಂತೆ ತನ್ನ ಜನ್ಮಾದಿಗಳು ಕರ್ಮಾಧೀನಗಳಲ್ಲವೆಂಬುದನ್ನು ನಿಷೇಧಿಸಿ ತೋರಿಸುವುದಕ್ಕೋಸ್ಕರವೇ ತನ್ನ ಸಂಕಲ್ಪದಿಂದ ದೈವ-ಮಾನುಷಾದಿ ಜನ್ಮಗಳನ್ನು ಅಂಗೀಕರಿಸುತ್ತಾನೆ. ( '**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ । ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥** ' – ಎಂದು ಗೀತೆಯಲ್ಲಿ ಸಾರಿರುವಂತೆ ). (ವೀರರಾಘವೀಯ)

---

* ಕಲ್ಪವೆಂದರೆ ಏನು? ಕಲ್ಪಗಳು ಯಾವುವು? ಎಂದರೆ: ಬ್ರಹ್ಮದೇವರ ಒಂದು ದಿನಕ್ಕೆ ಕಲ್ಪವೆಂದು ಹೆಸರು. ಕಲ್ಪಗಳ ಸಂಖ್ಯೆ ಮೂವತ್ತು. ಅವುಗಳನ್ನು ಹೀಗೆ ನಮೂದಿಸ ಬಹುದು.

೧) ಶ್ವೇತ ೨) ನೀಲಲೋಹಿತ ೩) ವಾಸುದೇವ ೪) ರಥಂತರ ೫) ರೌರವ ೬) ಪ್ರಾಣ ೭) ಬೃಹತ್ ೮) ಕಂದರ್ಪ ೯) ಸದ್ಯ ೧೦) ಈಶಾನ ೧೧) ವ್ಯಾನ ೧೨) ಸಾರಸ್ವತ ೧೩) ಉದಾನ ೧೪) ಗಾರುಡ ೧೫) ಕೌರ್ಮ ೧೬) ನಾರಸಿಂಹ ೧೭) ಸಮಾನ ೧೮) ಆಗ್ನೇಯ ೧೯) ಸೋಮ ೨೦) ಮಾನವ ೨೧) ತತ್ಪುರುಷ

ದಲ್ಲಾದರೋ ಪ್ರಾಕೃತಸೃಷ್ಟಿಯು ಹಾಗೆಯೇ ಇರುತ್ತದೆ. ಆದರೆ ಚರಾಚರ ಪ್ರಾಣಿಗಳ ವೈಕೃತಸೃಷ್ಟಿಯಲ್ಲಿ ಮಾತ್ರ ಹೊಸತನವನ್ನು ನೋಡುತ್ತೇವೆ. ವೈಕೃತಸೃಷ್ಟಿಯು ಹಿಂದಿನದಕ್ಕಿಂತಲೂ ಹೊಸ ರೀತಿಯಲ್ಲಿ ಆಗುತ್ತದೆ. ಕಾಲದ ಪರಿಮಾಣವಾದ ಕಲ್ಪಗಳ ಮತ್ತು ಅದರಲ್ಲಿ ಅಂತರ್ಗತವಾದ ಮನ್ವಂತರಗಳ ವರ್ಣನೆಯನ್ನು ಮುಂದೆ ಮಾಡುವೆನು. ಈಗ ಪಾದ್ಮಕಲ್ಪದ ವರ್ಣನೆಯನ್ನು ಮಾಡುತ್ತೇನೆ. ಸಾವಧಾನವಾಗಿ ಕೇಳು, ರಾಜೇಂದ್ರ!"

ಪುರಾಣಿಕರ ಈ ಹೇಳಿಕೆಯನ್ನು ಕೇಳಿ ಶೌನಕರು ಅವರಿಗೆ ಹೀಗೆ ಪ್ರಶ್ನೆಹಾಕಿದರು :

"ಸೂತಪುರಾಣಿಕರೇ! ಭಾಗವತೋತ್ತಮನಾದ ವಿದುರನು ತೊರೆಯಲು ಕಷ್ಟಸಾಧ್ಯರಾದ ಬಂಧುಗಳನ್ನೂ ತೊರೆದು ತೀರ್ಥಯಾತ್ರೆ ಮಾಡು

---

೪] ಜೀವರುಗಳ ಅಜ್ಞಾನವನ್ನು ಹೋಗಲಾಡಿಸುವುದಕ್ಕಾಗಿ ತನ್ನ ಮಾಯೆಯಿಂದಲೇ (ಸಂಕಲ್ಪದಿಂದಲೇ) ಭಗವಂತನು ಚಿತ್ಸ್ವರೂಪವಾದ ಜಗತ್ಕರ್ತೃತ್ವ ಮುಂತಾದುವುಗಳನ್ನು ಪಡೆದಿದ್ದಾನೆ. 'ಪ್ರತಿಷೇಧಾಯ ಬಂಧಸ್ಯ ಜೀವಾನಾಂ ಪರಮೇಶಿತುಃ । ಸ್ವೇಚ್ಛಯೈವ ಹಿ ಕರ್ತೃತ್ವಂ ನಿತ್ಯಾರೂಢಂ ಚಿದಾತ್ಮಕಮ್ ॥'

(ವಿಜಯಧ್ವಜೀಯ) (ಶ್ಲೋಕ ೪೪-೪೫)

---

೨೨) ವೈಕುಂಠ, ೨೩) ಲಕ್ಷ್ಮಿ ೨೪) ಸಾವಿತ್ರಿ ೨೫) ಘೋರ ೨೬) ವಾರಾಹ (ಈಗಿನ ಶ್ವೇತವರಾಹ ಕಲ್ಪ) ೨೭) ವೈರಾಜ ೨೮) ಗೌರಿ ೨೯) ಮಾಹೇಶ್ವರ ಮತ್ತು ೩೦) ಪಿತೃ.

ಈ ಮೂವತ್ತು ಕಲ್ಪಗಳು ಬ್ರಹ್ಮದೇವರಿಗೆ ಮೂವತ್ತು ದಿನಗಳು. ಅವುಗಳಲ್ಲಿ ಕೌರ್ಮಕಲ್ಪವು ಅವರಿಗೆ ಪೂರ್ಣಿಮೆಯ ದಿವಸ ಮತ್ತು ಪಿತೃಕಲ್ಪವು ಅಮಾವಾಸ್ಯೆ. ಈಗ ನಡೆಯುತ್ತಿರುವ ಶ್ವೇತವರಾಹಕಲ್ಪವು ಬ್ರಹ್ಮದೇವರಿಗೆ ಪ್ರತಿಪತ್ತಿಥಿಯು. ಇದರಲ್ಲೂ ಈಗ ಎರಡನೇ ಭಾಗವು ನಡೆಯುತ್ತಿದೆ. (ಶ್ಲೋಕ ೪೬)

'ದಶಾಂಗುಲಂ' – ವಿಶೇಷ ವಿವರಣೆ : ಪುರುಷಸೂಕ್ತದಲ್ಲಿ ಬಂದಿರುವ ದಶಾಂಗುಲ ಶಬ್ದದಿಂದ ದಶಾಂಗುಲನ್ಯಾಯ – ಎಂಬ ವೈದಿಕನ್ಯಾಯವು ಬಂದಿದೆ. ಅದರ ಅಭಿಪ್ರಾಯ ಹೀಗಿದೆ : ಪೃಥ್ವಿಗೆ ಹತ್ತರಷ್ಟು ಜಲವಿದೆ. ಜಲಕ್ಕೆ ಹತ್ತರಷ್ಟು ಅಗ್ನಿಯಿದೆ. ಅಗ್ನಿಗೆ ಹತ್ತರಷ್ಟು ವಾಯು. ವಾಯುವಿಗೆ ಹತ್ತರಷ್ಟು ಆಕಾಶ. ಆಕಾಶಕ್ಕೆ ಹತ್ತರಷ್ಟು ಅಹಂಕಾರ. ಅಹಂಕಾರಕ್ಕೆ ಹತ್ತರಷ್ಟು ಮಹತ್ತತ್ತ್ವ. ಮಹತ್ತತ್ತ್ವಕ್ಕೆ ಹತ್ತರಷ್ಟು ಮೂಲಪ್ರಕೃತಿ–ಇಂತಹ ದೊಡ್ಡ ಪ್ರಕೃತಿಯು ಭಗವಂತನ ಕಾಲು ಭಾಗ ಮಾತ್ರವಿದೆ.

ತ್ತಿದ್ದನು–ಎಂದು ಈ ಹಿಂದೆ ಹೇಳಿದ್ದಿರಿ. ಆ ತೀರ್ಥಯಾತ್ರೆಯ ಸಂದರ್ಭ ದಲ್ಲಿ ಆತನಿಗೆ ಮೈತ್ರೇಯಮಹರ್ಷಿಗಳೊಡನೆ ಆಧ್ಯಾತ್ಮಿಕವಿಷಯವಾಗಿ ಸಂಭಾಷಣೆ ಎಲ್ಲಿ ನಡೆಯಿತು? ವಿದುರನು ತಮ್ಮನ್ನು ಪ್ರಶ್ನೆಮಾಡಿದಾಗ ಮೈತ್ರೇಯಮಹರ್ಷಿಗಳು ಯಾವ ತತ್ತ್ವವನ್ನು ಆತನಿಗೆ ಉಪದೇಶ ಮಾಡಿದರು?–ಎಂಬುದನ್ನು ತಿಳಿಸಿರಿ. ಮಹಾತ್ಮನಾದ ವಿದುರನ ಈ ವೃತ್ತಾಂತವನ್ನು ಕೇಳಬಯಸುತ್ತೇವೆ. ಆತನು ತನ್ನ ಬಂಧು-ಮಿತ್ರರನ್ನು ಬಿಟ್ಟುಹೋದದ್ದು ಏಕೆ? ಮತ್ತೆ ಬಂಧು-ಮಿತ್ರರ ಬಳಿಗೆ ಏತಕ್ಕೆ ಹಿಂದಿರುಗಿ ಬಂದನು? ಎಂಬುದನ್ನೂ ನಮಗೆ ವಿವರಿಸಿರಿ, ಸೌಮ್ಯರೇ!"

ಶೌನಕರ ಪ್ರಾರ್ಥನೆಗೆ ಸೂತಪುರಾಣಿಕರು ಹೀಗೆ ಉತ್ತರ ಹೇಳಿದರು:

"ಮಹರ್ಷಿಗಳೇ! ಪರೀಕ್ಷಿದ್ರಾಜನೂ ಶುಕಮುನಿಗಳನ್ನು ಕುರಿತು ಇದೇ ಪ್ರಶ್ನೆಯನ್ನೇ ಕೇಳಿದನು. ಶುಕಮಹಾಮುನಿಗಳು ಆತನ ಪ್ರಶ್ನೆಗೆ ಏನು ಉತ್ತರ ಅಪ್ಪಣೆಕೊಡಿಸಿದರೆಂಬುದನ್ನು ಹೇಳುತ್ತೇನೆ. ಸಾವಧಾನವಾಗಿ ಕೇಳಿರಿ.

(ಶ್ಲೋಕ 44-51)

ಮಹಾಪುರಾಣವೂ ಪರಮಹಂಸಸಂಹಿತೆಯೂ ಆಗಿರುವ ಶ್ರೀಮದ್ಭಾಗವತ ದಲ್ಲಿ ದ್ವಿತೀಯಸ್ಕಂಧದ ೧೦ನೆಯ ಅಧ್ಯಾಯವು ಮುಗಿಯಿತು.

ದ್ವಿತೀಯಸ್ಕಂಧವು ಸಂಪೂರ್ಣವಾಯಿತು.

**ಒಂದನೆಯ ಸಂಪುಟವು ಮುಗಿಯಿತು.**

ಶ್ರೀಕೃಷ್ಣಾರ್ಪಣಮಸ್ತು, ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್



ತೃತೀಯಸ್ಕಂಧ ೧ನೆಯ ಅಧ್ಯಾಯ

**ಏವಮೇತತ್ಪುರಾ ಪೃಷ್ಟೋ ಮೈತ್ರೇಯೋ ಭಗವಾನ್ಕಿಲ ।**
**ಕ್ಷತ್ತ್ರಾ ವನಂ ಪ್ರವಿಷ್ಟೇನ ತ್ಯಕ್ತ್ವಾ ಸ್ವಗೃಹಮೃದ್ಧಿಮತ್ ॥೧॥**

